ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೨.

ಶ್ರೀಃ.

ಶ್ರೀವ್ಯಾಸಮಹರ್ಷಿಪ್ರಣೀತ

# ಶ್ರೀಮದ್ಭಾಗವತವು

ಕರ್ಣಾಟಕವಚನವು

ಏಕಾದಶ ದ್ವಾದಶ ಸ್ಕಂಧಗಳು.

---

ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯವಿರಚಿತವು.

---

ಮದ್ರಾಸು

ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ,

ಆರ್. ವೇಂಕಟೇಶ್ವರಕಂಪೆನಿಯವರಿಂದ

ಪ್ರಕಟಿಸಲ್ಪಟ್ಟಿದೆ.

---

1919

# ಏಕಾದಶಸ್ಕಂಧದ ವಿಷಯಾನುಕ್ರಮಣಿಕೆ.

---

# ದ್ವಾದಶಸ್ಕಂಧದ ವಿಷಯಾನುಕ್ರಮಣಿಕೆ.

---

# ವಿ ಜ್ಞಾ ಪ ನೆ.

ಮಹನೀಯರೆ !

ಭಗವದನುಗ್ರಹದಿಂದ ನಾನು ಆರಂಭಿಸಿದ ರಾಮಾಯಣ ಭಾಗವತ ಗ್ರಂಥಗಳೆರಡೂ ನಿರ್ವಿಘ್ನವಾಗಿ ಪೂರ್ತಿಹೊಂದಿದುವು. ಈ ಗ್ರಂಥ ವನ್ನು ಬರೆಯುವುದಕ್ಕೆ ಆರಂಭಿಸಿ, ಈಗ ಏಳುವರ್ಷಗಳಾದುವು. ನಮ್ಮ ರಾಮಾಯಣವು ಸರ್ವಜನಾನಂದಕರವೆಂಬುದನ್ನು ಸೂಚಿಸುವಂತೆ, ಅದು, ಕಳೆದ ಆನಂದಸಂವತ್ಸರದಲ್ಲಿ ಪೂರ್ತಿಹೊಂದಿತು. ನಮ್ಮ ಭಾಗವತವು ಸರ್ವಾ ರ್ಥಸಿದ್ಧಿಪ್ರದವೆಂಬುದನ್ನು ಸೂಚಿಸುವಂತೆ ಈ ಸಿದ್ಧಾರ್ಥಿವರ್ಷದಲ್ಲಿ ಸಂಪೂ ರ್ಣವಾಯಿತು. ಈ ಕಾರ್ಯವನ್ನಾರಂಭಿಸಿದುದುಮೊದಲು, ಈ ಏಳು ವರ್ಷಗಳಲ್ಲಿ ಈ ಗ್ರಂಥಪ್ರಚಾರದಿಂದ ನನಗೆ ತಿಳಿದುಬಂದ ಅನುಭವ ವನ್ನೂ, ಇದರ ಪುರೋವೃದ್ಧಿಯನ್ನೂ ತಿಳಿಸುವುದು ನನಗೆ ಬಹಳ ಸಂತೋ ಷಕರವಾಗಿದೆ. ಮುಖ್ಯವಾಗಿ ಈ ನಮ್ಮ ಪ್ರಯತ್ನವು ಕೊನೆಮುಟ್ಟುವು ದಕ್ಕೆ, ಚಂದಾದಾರರ ಪ್ರೋತ್ಸಾಹವೇ ಮುಖ್ಯಸಾಧನವಾಯಿತೆಂಬುದರಲ್ಲಿ ಸಂದೇಹವಿಲ್ಲ. ನಾನು ರಾಮಾಯಣವನ್ನಾರಂಭಿಸಿದಾಗ, ಮೊದಲು ಅದ ರಲ್ಲಿ ಬಾಲಕಾಂಡವನ್ನುಮಾತ್ರ ಒಂದು ಸಂಚಿಕೆಯಾಗಿ ಪ್ರಕಟಿಸಿ, ಅದಕ್ಕೆ ತಕ್ಕಷ್ಟು ಚಂದಾದಾರರ ಪ್ರೋತ್ಸಾಹವು ಲಭಿಸದಿದ್ದರೆ, ಅಷ್ಟ ರಲ್ಲಿಯೇ ಆ ಪ್ರಯತ್ನವನ್ನು ನಿಲ್ಲಿಸಿಬಿಡುವುದಾಗಿ ಉದ್ದೇಶಸಿದ್ದೆನು. ಕೊನೆಕೊನೆಗೆ, ಚಂದಾದಾರರ ಸಂಖ್ಯೆಯು ಹೆಚ್ಚುತ್ತಬಂದು, ಕೇಳಿದ ವರಿಗೆ ಸಕಾಲಕ್ಕೆ ಪುಸ್ತಕಗಳನ್ನೊದಗಿಸುವುದೇ ಅಸಾಧ್ಯವಾಗುತ್ತಬಂ ದಿತು. ಇದುವರೆಗೆ ರಾಮಾಯಣದಲ್ಲಿ ಅನೇಕಮುದ್ರಣಗಳಾಗಿ, ಸಾವಿ ರಾರು ಪುಸ್ತಕಗಳು ಪ್ರಚಾರದಲ್ಲಿವೆ. ಈ ನಮ್ಮ ಭರತಖಂಡದಲ್ಲಿ, ಕರ್ಣಾ ಟಭಾಷೆಯ ಸಂಪರ್ಕವುಳ್ಳ ಪ್ರದೇಶಗಳಲ್ಲಿ, ಮೂಲೆಮೂಲೆಯಲ್ಲಿರುವ ಒಂದೊಂದುಗ್ರಾಮಕ್ಕೂ, ನಮ್ಮ ಪುಸ್ತಕವು ಮುಟ್ಟಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮೈಸೂರುದೇಶದಲ್ಲಿ ಮಾತ್ರವಲ್ಲವು, ಕೊ ಡಗು, ಹೈದರಾಬಾದು, ದಕ್ಷಿಣೋತ್ತರಕನ್ನಡದೇಶಗಳು, ಬೆಳಗಾಂ,

ಬಿಜಾಪುರ, ಮೊದಲಾದ ಎಲ್ಲಾ ಪ್ರಾಂತ್ಯಗಳಲ್ಲಿಯೂ ಇವು ಪ್ರಚಾರಗೊಂಡಿವೆ. ಅಷ್ಟೇಕೆ? ಮನೆಯಲ್ಲಿ ಇತರಭಾಷೆಗಳನ್ನಾಡುವವರೂಕೂಡ, ಸ್ವಲ್ಪಮಾತ್ರ ಕನ್ನಡವನ್ನು ತಿಳಿದವರಾಗಿದ್ದರೆ, ಈ ನಮ್ಮ ಪುಸ್ತಕದ ಶೈಲಿಯನ್ನೇ ಹೆಚ್ಚಾಗಿ ಆದರಿಸಿ, ಇವುಗಳನ್ನೇ ಓದುತ್ತಿರುವರು. ಇದಲ್ಲದೆ ಅಲ್ಲಲ್ಲಿನ ಕೆಲವು ಗ್ರಾಮವಾಸಿಗಳು, ತಮ್ಮ ಗ್ರಾಮ ದೇವಾಲಯಗಳಲ್ಲಿ ಅಕ್ಷರಜ್ಞರಿಂದ ಈ ಪುಸ್ತಕವನ್ನೋದಿಸಿ, ಆಗಾಗ ಮಂಗಳಗಳನ್ನೂ ಮಹೋತ್ಸವಗಳನ್ನೂ ಮಾಡಿಸುತ್ತಿರುವರೆಂದೂ ನಮಗೆ ತಿಳಿದುಬಂದಿದೆ. ಈ ಕಾರಣಗಳಿಂದ, ನಾನು ಕೈಕೊಂಡ ಈ ಪ್ರಯತ್ನದಲ್ಲಿ, ನಮ್ಮ ಮಾತೃಭಾಷೆಯು ಪ್ರಚಾರಗೊಳ್ಳುತ್ತಿರುವುದೊಂದು, ಹೆಂಗಸರು, ಮಕ್ಕಳು ಮೊದಲಾಗಿ ನಮ್ಮ ಕರ್ಣಾಟದೇಶದ ಜನರಲ್ಲಿ ಇಂತಹ ಸತ್ಕಥಾಶ್ರವಣದಲ್ಲಿ ಆಸಕ್ತಿಯನ್ನು ಹೆಚ್ಚಿಸುವುದೊಂದು ; ಈ ಎರಡು ದೊಡ್ಡ ಕಾರ್ಯಗಳು ಕೈಗೂಡಿ ಬಂದಿವೆ. ಇದಲ್ಲದೆ ನಾನು ಈ ಗ್ರಂಥಗಳನ್ನು ಬರೆಯುವುದಕ್ಕೆ ತೊಡಗಿದಂದಿನಿಂದ, ಒಂದುದಿನದಲ್ಲಿ ಕ್ಷಣಮಾತ್ರವಾದರೂ ಆ ಭಗವಚ್ಚರಿತ್ರವನ್ನು ಮನಸ್ಸಿನಲ್ಲಿ ಮನನಮಾಡಬೇಕಾಗಿದ್ದುದರಿಂದ ಈ ಕಾರ್ಯಕ್ಕಾಗಿ ಕಳೆದ ಈ ಏಳುವರ್ಷಗಳ ಕಾಲವೇ ನನ್ನ ಜೀವಮಾನದಲ್ಲಿ ಸಾರ್ಥಕ್ಯವನ್ನು ಹೊಂದಿದಂತೆ ಭಾವಿಸುವೆನು. ನಮ್ಮ ಸ್ವದೇಶಭಾಷೆಗಳಿಗೆ ರಾಜರಿಂದ ವಿಶೇಷವಾಗಿ ಪ್ರೋತ್ಸಾಹವು ದೊರೆಯುತಿದ್ದ ಪೂರ್ವಕಾಲಗಳಲ್ಲಿ, ಇಂತಹ ಗ್ರಂಥಲೇಖಕರಿಗೆ, ರಾಜಾಸ್ಥಾನಗಳಲ್ಲಿ ವಿಶೇಷವಾದ ಗೌರವ ಸನ್ಮಾನಗಳೂ, ಪ್ರೋತ್ಸಾಹವೂ ದೊರೆಯುತಿತ್ತು. ಈಗ ಅಂತಹ ಗೌರವಗಳಿಗೆ ನಾನು ಪಾತ್ರನಾಗದಿದ್ದರೂ,

"ಅರಸರ್ ಕುಡುವಾ ಕಾರ್ತ |
ಸ್ವರಕಂಕಣಮಿರ್ಕ್ಕೆ! ಸರಸರಾಸ್ವಾದಿಸಿ ಕಾ |
ವ್ಯರಸವ ಸೂಸುವ ಸುಖಭಾ |
ಸ್ವರಾತ್ಮ ಕಂಕಣಮೆ ಕವಿಗೆ ಕಂಕಣಮಲ್ತೆ."

ಎಂಬ ಕವಿವಾಕ್ಯದಂತೆ ಜನಾಭಿನಂದನವೇ ನನಗೆ ಸರ್ವೋತ್ತಮವಾದ ಸಂತೋಷವನ್ನುಂಟುಮಾಡುತ್ತಿದೆ.

ಮುಖ್ಯವಾಗಿ ಆನಂದ ಮುದ್ರಾಲಯಾಧ್ಯಕ್ಷರಾದ ಶ್ರೀವೇಮೂರು ರಂಗನಾಥಂ ಶೆಟ್ಟಿಯಾರ್ರವರು, ನಮ್ಮ ಕನ್ನಡದೇಶದಲ್ಲಿ ಯಾಗಲಿ,ಕನ್ನಡ ಭಾಷೆಯಲ್ಲಿಯಾಗಲಿ ಸಂಬಂಧವಿಲ್ಲದವರಾಗಿದ್ದರೂ, ಈ ಪ್ರಯತ್ನದಲ್ಲಿ ಮುಂದೆ ಬರಬಹುದಾದ ಆದಾಯನಷ್ಟಗಳನ್ನೂ ಗಮನಿಸದೆ, ಕೇವಲ ಆಸ್ತಿಕ್ಯಬುದ್ಧಿಯಿಂದಲೇ ಈ ಕಾರ್ಯವನ್ನು ಮುಂದುವರಿಸಿದುದಕ್ಕಾಗಿ ನಾವೆಲ್ಲರೂ ಕೃತಜ್ಞರಾಗಿರಬೇಕು. ಮುಂದೆ ಮಹಾಭಾರತವನ್ನೂ ಹೀಗೆಯೇ ಪ್ರಕಟಿಸಬೇಕೆಂದೂ ನಿಶ್ಚಯಿಸಿದೆ.

ತಮ್ಮ. ವಿಶ್ವಾಸಪಾತ್ರನಾದ,

ದೇವಶಿಖಾಮಣಿ ಅಳಸಿಂಗರಾಚಾರ್,

ಗ್ರಂಥಕರ್ತ.



ಶ್ರೀಃ.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

# ಶ್ರೀಮದ್ಭಾಗವತವು

## ಏ ಕಾ ದ ಶ ಸ್ಕಂ ಧ ವು.

---

### ಮುಸಲೋತ್ಪತ್ತಿ ವೃತ್ತಾಂತವು.

ತಿರುಗಿ ಶುಕಮುನಿಯು ಪರೀಕ್ಷಿದ್ರಾಜನನ್ನು ಕುರಿತು ''ಓ ರಾಜಾ! ಹೀಗೆ ಶ್ರೀಕೃಷ್ಣನು ಬಲರಾಮನನ್ನೂ, ಇತರ ಯಾದವಕುಮಾರರನ್ನೂ ತನಗೆ ಸಹಾಯಕರನ್ನಾಗಿಟ್ಟುಕೊಂಡು, ಪೂತನೆ ಮೊದಲಾದ ದೈತ್ಯಕುಲದವರನ್ನು ವಧಿಸಿದುದಲ್ಲದೆ, ಕೌರವಪಾಂಡವರಲ್ಲಿ ದೊಡ್ಡ ಕಲಹವನ್ನೆಬ್ಬಿಸಿ, ಆಮೂಲಕವಾಗಿ ಭೂಭಾರವನ್ನೂ ಬಹಳಮಟ್ಟಿಗೆ ತಗ್ಗಿಸಿದನು. ದುಷ್ಟರಾದ ಕೌರವರು ಪಾಂಡವರಿಗೆ ಮಾಡಿದ ಹಿಂಸೆಯೋ ಅಷ್ಟಿಷ್ಟಲ್ಲ! ಕಪಟದ್ಯೂತದಿಂದ ಅವರನ್ನು ಸೋಲಿಸಿ ನಾನಾವಿಧದಿಂದ ಅವಮಾನಗೊಳಿಸಿದರು. ದುಶ್ಶಾಸನನು ಅವರ ಪತ್ನಿಯಾದ ದ್ರೌಪದಿಯ ತುರುಬನ್ನು ಹಿಡಿದು, ರಾಜಸಭೆಗೆ ಎಳೆತಂದು ಅವಳನ್ನು ಬಹಳವಾಗಿ ಅವಮಾನಪಡಿಸಿದನು. ವಿಷವಿಕ್ಕುವುದು, ಅರಗಿನ ಮನೆಯಲ್ಲಿ ಸೇರಿಸಿ ಬೆಂಕಿಯಿಡುವುದು, ಇವೇ ಮೊದಲಾದ ಎಷ್ಟೋ ಹಿಂಸೆಗಳನ್ನು ಮಾಡಿದರು. ಈ ಹಿಂಸೆಗಳನ್ನು ತಡೆಯಲಾರದೆ, ಬಹಳ ಶಾಂತಸ್ವಭಾವವುಳ್ಳ ಪಾಂಡವರಿಗೂ ಕೊನೆಗೆ ವೀರಾವೇಶವು ಹುಟ್ಟಿತು. ಇದರಿಂದ ಪಾಂಡವರು ಕೌರವರೊಡನೆ ಯುದ್ಧಕ್ಕೂ ನಿಲ್ಲಬೇಕಾಯಿತು ಇದೇಸಮಯದಲ್ಲಿ ಶ್ರೀಕೃಷ್ಣನು, ಆ ಪಾಂಡವರನ್ನೇ ನಿಮಿತ್ತವಾಗಿಟ್ಟು

ಕೊಂಡು, ಆ ಯುದ್ಧಕ್ಕಾಗಿ ಬಂದು ಸೇರಿದ ಕ್ಷತ್ರಿಯರಲ್ಲಿ, ಒಬ್ಬರಿಂದೊಬ್ಬರನ್ನು ಕೊಲ್ಲಿಸಿ, ತಾನು ತಟಸ್ಥನಾಗಿದ್ದಂತೆಯೇ ಭೂಭಾರವನ್ನು ಪರಿಹರಿಸಿದನು. ಮತ್ತು ಆ ಕೃಷ್ಣನು ತನ್ನ ಬಾಹುಬಲದಿಂದ ರಕ್ಷಿತರಾದ ಯಾದವರ ಮೂಲಕವಾಗಿಯೂ ಅಲ್ಲಿ ಅನೇಕರಾಜರನ್ನು ಕೊಲ್ಲಿಸಿದನು. ಓ ಪರೀಕ್ಷಿದ್ರಾಜಾ! ಆ ಭಗವಂತನ ಮಾಯಾಪ್ರಭಾವವನ್ನು ಹೀಗೆಂದು ನಿಶ್ಚಯಿಸುವುದಕ್ಕೆ ಯಾರಿಗೆ ತಾನೇ ಸಾಧ್ಯವು? ಭಾರತಯುದ್ಧದ ನೆವದಿಂದ ಇಷ್ಟೆಲ್ಲವನ್ನೂ ಮಾಡಿದ್ದರೂ, ತನ್ನ ಮನಸ್ಸಿಗೆ ತೃಪ್ತಿಯಿಲ್ಲದೆ, ಆ ಶ್ರೀಕೃಷ್ಣನು, ಒಮ್ಮೊಮ್ಮೆ ತನ್ನೊಳಗೆ ತಾನು ಹೀಗೆಂದು ಯೋಚಿಸುತಿದ್ದನು. “ಇದುವರೆಗೆ ಅನೇಕದುಷ್ಟರಾಜರು ಹತರಾದುದರಿಂದ, ಬಹಳ ಮಟ್ಟಿಗೆ ಭೂಮಿಯ ಭಾರವು ತಗ್ಗಿದ್ದರೂ, ಇನ್ನೂ ಭೂಭಾರವು ಹೆಚ್ಚಾಗಿರುವಂತೆಯೇ ನನಗೆ ತೋರುವುದು. ಏಕೆಂದರೆ, ನಮ್ಮ ಯಾದವರಿಗೆ ಮೇಲೆಮೇಲೆ ಗರ್ವವು ಹೆಚ್ಚುತ್ತಿರುವುದು. ಇವರ ಗರ್ವವು ಇತರರಿಗೆ ಸಹಿಸಲಸಾಧ್ಯವಾಗಿರುವುದು. ಇವರನ್ನುಳಿಸಿದರೆ, ನನ್ನ ಅವತಾರಕ್ಕೆ ಮುಖ್ಯೋದ್ದೇಶವಾದ ಭೂಭಾರಪರಿಹಾರವು ಪೂರ್ಣವಾಗಿ ನೆರವೇರಿದಂತಾಗುವುದಿಲ್ಲ. ಹೀಗೆ ಅರೆಗೆಲಸದಲ್ಲಿ ಬಿಟ್ಟುಹೋಗುವುದು ಉಚಿತವಲ್ಲ! ಈ ಯಾದವಕುಲಕ್ಕೆ ನಾಶವಾಗಲಿ, ಅಪಜಯವಾಗಲಿ ಬೇರೊಬ್ಬರಿಂದ ಸಾಧ್ಯವಾದ ಕಾರ್ಯವಲ್ಲ. ಏಕೆಂದರೆ, ಇವರೆಲ್ಲರೂ ಗರ್ವಾಂಧರಾಗಿದ್ದರೂ, ನನ್ನ ಆಶ್ರಯದಲ್ಲಿರತಕ್ಕವರು. ನನ್ನನ್ನು ನಂಬಿದವರಿಗೆ ಯಾರಿಂದಲೂ ಯಾವ ವಿಧದಲ್ಲಿಯೂ ಅಶುಭವುಂಟಾಗುವ ಸಂಭವವಿಲ್ಲ. ಈ ನನ್ನ ಆಶ್ರಯಬಲದಿಂದಲೇ ಯಾದವರಿಗೆ ದಿನದಿನಕ್ಕೂ ವೀರ್ಯಶೌರ್ಯಾದಿವಿಭವಗಳು ಹೆಚ್ಚಿಬರುತ್ತಿರುವುವು. ಇದನ್ನಡಗಿಸುವುದಕ್ಕೆ ನಾನೇ ಏನಾದರೂ ಉಪಾಯವನ್ನು ಮಾಡಬೇಕು. ಏನುಪಾಯವನ್ನು ಮಾಡಲಿ! ಇರಲಿ! ಇದಕ್ಕೊಂದು ಮಾರ್ಗವುಂಟು. ಇವರಲ್ಲಿಯೇ ಒಬ್ಬರಿಗೊಬ್ಬರಿಗೆ ಕಲಹವನ್ನೆಬ್ಬಿಸುವೆನು. ಬಿದಿರುಮೆಳೆಯಲ್ಲಿ ಹುಟ್ಟಿದ ಬೆಂಕಿಯು, ಮೊತ್ತಕ್ಕೆ ಆ ಪೊದೆಯನ್ನೇ ದಹಿಸಿಬಿಡುವಂತೆ, ಅವರಲ್ಲಿ ಹುಟ್ಟಿದ ಕಲಹವೇ ಅವರಿಗೆ ನಾಶಹೇತುವಾಗುವುದು. ಆಗ ನನ್ನ ಉದ್ದೇಶವು ಪೂರ್ಣವಾಗುವುದರಿಂದ, ನಾನು

ನಿಶ್ಚಿಂತನಾಗಿ, ನನ್ನ ನಿಜಲೋಕಕ್ಕೆ ತೆರಳಬಹುದು" ಎಂದು ಸಂಕಲ್ಪಿಸಿ ಕೊಂಡನು. ಓ ರಾಜಾ ! ಆ ಭಗವಂತನಾದರೋ ಸಮಸ್ತಪ್ರಾಣಿಗಳ ಹೃದಯದಲ್ಲಿಯೂ ತಾನೇ ಅಡಗಿದ್ದು, ಅವುಗಳನ್ನು ಆಯಾಕಾರ್ಯದಲ್ಲಿ ನಿಯಮಿಸತಕ್ಕ ಸರ್ವೇಶ್ವರನು. ಮತ್ತು ಸತ್ಯಸಂಕಲ್ಪನಾದುದರಿಂದ, ಅವನು ಮನಸ್ಸಿನಲ್ಲಿ ಉದ್ದೇಶಿಸಿದೊಡನೆಯೇ ಆಯಾ ಕಾರ್ಯಗಳು ಹಾಗೆಯೇ ನಡೆದುಹೋಗುವುವು. ಇಂತಹ ಮಹಾಮಹಿಮೆಯುಳ್ಳ ಶ್ರೀಕೃಷ್ಣನು, ಹಿಂದೆ ನಡೆದ ಒಂದಾನೊಂದು ಬ್ರಾಹ್ಮಣಶಾಪವನ್ನು ವ್ಯಾಜವಾಗಿಟ್ಟು ಕೊಂಡು, ಅದರಮೂಲಕವಾಗಿ ಸಮಸ್ತಯಾದವರನ್ನೂ ನಿರ್ಮೂಲ ಮಾಡಿ ತನ್ನ ಲೋಕಕ್ಕೆ ತೆರಳಿದನು. ಆ ಭಗವಂತನು ಕೃಷ್ಣಾವತಾರದಲ್ಲಿ ತೋರಿಸಿದ ಲೋಕಾದ್ಭುತಗಳಾದ ಶೀಲಸೌಂದರ್ಯಾದಿಗಳನ್ನು ಎಷ್ಟೆಷ್ಟು ವರ್ಣಿಸಿದರೂ ಸಾಲದು. ಆತನ ರೂಪಸಂಪತ್ತಿಯ ಮುಂದೆ ಲೋಕದಲ್ಲಿ ಎಂತಹ ದಿವ್ಯರೂಪವೂ ಕಣ್ಗೊಳಿಸಲಾರದು. ಆತನ ಕಟಾಕ್ಷಸೌಂದರ್ಯಕ್ಕೆ ಎಂತಹ ದೃಷ್ಟಿಚಾಕಚಕ್ಯವೂ ಎಣೆಯಾಗಲಾರದು. ಅವನ ಮಧುರವಾಕ್ಯಗಳು ಸ್ಮರಣೆಗೆ ಬಂದಾಗಲೆಲ್ಲಾ ಮನಸ್ಸನ್ನು ಮೋಹಗೊಳಿಸುವುವು. ಅವನ ಗಮನಸೌಂದರ್ಯವು ನೋಡಿದವರ ಮನಸ್ಸನ್ನು ಸ್ತಬ್ಧವಾಗಿ ಮಾಡುವುದು. ಹೀಗೆ ಕೃಷ್ಣನು, ತನ್ನ ನಿರತಿಶಯ ಸೌಂದರ್ಯವಿಲಾಸಗಳಿಂದ. ಸಮಸ್ತಲೋಕದ ಮನಸ್ಸನ್ನೂ, ದೃಷ್ಟಿಯನ್ನೂ, ತನ್ನಲ್ಲಿಗೆ ಆಕರ್ಷಿಸುತಿದ್ದನು. ಹೀಗೆ ಅತಿಮನೋಹರಗಳಾದ ರೂಪಚೇಷ್ಟಾದಿಗಳಿಂದ ಅವನ ಕೀರ್ತಿಯು ಸರ್ವಲೋಕವ್ಯಾಪಿಯಾಗಿ ಕಂಗೊಳಿಸಿತು. ಹೀಗೆ ಕೃಷ್ಣನು, ತನ್ನ ನಿರತಿಶಯಸೌಂದರ್ಯವಿಲಾಸಗಳಿಂದ, ಸಮಸ್ತಲೋಕದ ಮನಸ್ಸನ್ನೂ, ದೃಷ್ಟಿಯನ್ನೂ, ತನ್ನಲ್ಲಿಗೆ ಆಕರ್ಷಿಸುತಿದ್ದುದಲ್ಲದೆ, ತನ್ನ ಯಶಸ್ಸನ್ನು ಲೋಕದಲ್ಲಿ ವಿಸ್ತರಿಸಿ, ಆ ಕೀರ್ತಿಯೇ ಮನುಷ್ಯರಿಗೆ ಸಂಸಾರೋತ್ತಾರಕವಾಗಲೆಂದು ಸಂಕಲ್ಪಿಸಿ, ಆಮೇಲೆ ತನ್ನ ನಿಜಸ್ಥಾನಕ್ಕೆ ಹೋಗಿ ಸೇರಿದನು" ಎಂದನು.

ಆಗ ಪರೀಕ್ಷಿದ್ರಾಜನು ಶುಕಮುನಿಯನ್ನು ಕುರಿತು "ಓ ಮಹರ್ಷೀ ! ಯಾದವರೆಲ್ಲರೂ ವಿಶೇಷವಾಗಿ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವರು. ಮತ್ತು

ದಾನಶೀಲರು. ಗುರುಹಿರಿಯರನ್ನು ಸೇವಿಸತಕ್ಕವರು. ಅವರ ಮನಸ್ಸು ಯಾ ವಾಗಲೂ ಕೃಷ್ಣನಲ್ಲಿಯೇ ನೆಲೆಗೊಂಡಿರುವುದು. ಇಂತವರು ಬ್ರಾಹ್ಮಣ ಶಾಪಕ್ಕೆ ಗುರಿಯಾದರೆಂದು ಹೇಳಿದೆಯಲ್ಲವೆ? ಅದು ಹೇಗೆ? ಶಾಪಕಾ ರಣವೇನು? ಆ ಶಾಪವೆಂತದು? ಅನ್ಯೋನ್ಯಸ್ನೇಹದಿಂದ ಏಕಮನಸ್ಕ ರಾಗಿದ್ದ ಯಾದವರಲ್ಲಿ, ಒಬ್ಬರನ್ನೊಬ್ಬರು ಕೊಲ್ಲುವಷ್ಟು ವೈರಬುದ್ಧಿಯು ಹೇಗೆ ಹುಟ್ಟಿತು? ಇವೆಲ್ಲವನ್ನೂ ನನಗೆ ವಿವರಿಸಿ ತಿಳಿಸಬೇಕು?" ಎಂದನು. ಅದಕ್ಕಾ ಶುಕಮುನಿಯು "ರಾಜಾ ಕೇಳು! ಭಗವಂತನು ಶ್ರೀಕೃಷ್ಣರೂ ಪದಿಂದ ಸರ್ವಾಂಗಸುಂದರವಾದ ಮೂರ್ತಿಯನ್ನು ಧರಿಸಿ, ಲೋಕಕ್ಷೇಮ ಕರಗಳಾದ ಕಾರ್ಯಗಳಿಂದ ತನ್ನ ಉದಾರಕೀರ್ತಿಯನ್ನು ಹರಡುತ್ತ, ವಸು ದೇವನ ಗೃಹದಲ್ಲಿ ವಾಸಿಸುತಿದ್ದನಷ್ಟೆ? ಆತನು ಪೂರ್ಣಕಾಮನಾಗಿದ್ದರೂ, ತನ್ನ ಅವತಾರಕ್ಕೆ ಮುಖ್ಯಪ್ರಯೋಜನವೆನಿಸಿದ ಭೂಭಾರಪರಿಹಾರರೂ ಪವಾದ ಕಾರ್ಯದಲ್ಲಿ ಇನ್ನೂ ಸ್ವಲ್ಪಭಾಗವು ಉಳಿದಿದ್ದುದರಿಂದ, ಶೀಘ್ರ ದಲ್ಲಿಯೇ ಅದನ್ನು ಪೂರೈಸಿಬಿಡಬೇಕೆಂಬ ಉದ್ದೇಶವು ಅವನ ಮನಸ್ಸಿಗೆ ಹುಟ್ಟಿತು. ಇದಕ್ಕಾಗಿ ಯಾದವಕುಲವನ್ನು ನಿರ್ಮೂಲಮಾಡಬೇಕೆಂದು ಸಂಕಲ್ಪಿಸಿದನು. ಕೃಷ್ಣನು ವಸುದೇವನ ಮನೆಯಲ್ಲಿರುವಾಗ, ಪುಣ್ಯಕರಗ ಳಾಗಿಯೂ, ಕೀರ್ತಿಸತಕ್ಕವರ ಪಾಪಗಳನ್ನು ನೀಗಿಸತಕ್ಕವುಗಳಾಗಿಯೂ, ಜಗನ್ಮಂಗಳಕರಗಳಾಗಿಯೂ ಇರುವ ಎಷ್ಟೋ ಕಾರ್ಯಗಳನ್ನು ನಡೆಸಿ ದನು. ತಾನೇ ಕಾಲಸ್ವರೂಪನಾಗಿ ಸಮಸ್ತಜಗತ್ತನ್ನೂ ಸಂಹರಿಸತಕ್ಕ ಆ ಭಗವಂತನಿಗೆ, ಯಾದವಕುಲವನ್ನು ನಾಶಮಾಡಬೇಕೆಂಬ ಸಂಕಲ್ಪವು ಹುಟ್ಟಿದೊಡನೆ, ಕೆಲವು ಮಹರ್ಷಿಗಳು ಆ ಭಗವತ್ಸಂಕಲ್ಪದಿಂದ ಪ್ರೇ ರಿತರಾಗಿ, ದ್ವಾರಕೆಗೆ ಸಮೀಪದಲ್ಲಿರುವ ಪಿಂಡಾರಕವೆಂಬ ಪುಣ್ಯತೀರ್ಥಕ್ಕೆ ಯಾತ್ರಾರ್ಥಿಗಳಾಗಿ ಬಂದು ಸೇರಿದರು. ಈ ಋಷಿಸಮುದಾಯದಲ್ಲಿ, ವಿಶ್ವಾಮಿತ್ರ, ಅಸಿತ, ಕಣ್ವ, ದೂರ್ವಾಸ, ಭೃಗು, ಅಂಗಿರಸ್ಸು, ಕಶ್ಯಪ, ವಾಮದೇವ, ಅತ್ರಿ, ವಸಿಷ್ಠ, ವಾಮದೇವರೇ ಮೊದಲಾದ ಅನೇಕಮಹ ರ್ಷಿಗಳು ಸೇರಿದ್ದರು. ಇದೇಸಮಯದಲ್ಲಿ ಆ ತೀರ್ಥಸಮೀಪದಲ್ಲಿ ವಿನೋ ದದಿಂದ ಆಟವಾಡುತಿದ್ದ ಮದಾಂಧರಾದ ಕೆಲವು ಯಾದವಕುಮಾರರು,

ಆ ಮಹರ್ಷಿಗಳನ್ನು ಕಂಡೊಡನೆ ಮುಂದೆ ಬಂದು,ಕಪಟವಿನಯವನ್ನು ತೋ ರಿಸುತ್ತ, ಅವರ ಪಾದಗಳನ್ನು ಹಿಡಿದು ನಮಸ್ಕರಿಸಿದರು. ಮತ್ತು ಆ ಋಷಿ ಗಳನ್ನು ಮೋಸಗೊಳಿಸಿ ಹಾಸ್ಯಮಾಡಬೇಕೆಂಬ ಉದ್ದೇಶದಿಂದ, ತಮ್ಮ ಗುಂಪಿನಲ್ಲಿ ಜಾಂಬವತೀಪುತ್ರನಾದ ಸಾಂಬನಿಗೆ, ಗರ್ಭಿಣಿಯಂತೆ ವೇಷ ವನ್ನು ಹಾಕಿ, ಅವನನ್ನು ಆ ಋಷಿಗಳಮುಂದೆ ನಿಲ್ಲಿಸಿ, ಹೀಗೆಂದು ಹೇಳು ವರು. ‘‘ಓ ಮಹಾತ್ಮರೆ! ಇದೋ! ಈಕೆಯು ಗರ್ಭಿಣಿ! ಇವಳು ತನಗೆ ಗಂಡುಮಗುವೇ ಹುಟ್ಟಬೇಕೆಂದು ಬಹಳವಾಗಿ ಆಸೆಪಡುತ್ತಿರುವಳು. ಇವಳಿಗೆ ಪ್ರಸವಕಾಲವು ಸಮೀಪಿಸಿರುವುದು. ಮುಂದೆ ತನಗೆ ಯಾವ ಮಗುವು ಹುಟ್ಟಬಹುದೆಂಬುದನ್ನು ನಿಮ್ಮಿಂದ ತಿಳಿಯಬೇಕೆಂದಿರು ವಳು. ಈ ವಿಚಾರವನ್ನು ತಾನಾಗಿ ಬಾಯಿಬಿಟ್ಟು ಕೇಳುವುದಕ್ಕೆ ನಾಚಿಕೆ ಪಟ್ಟು, ನಮ್ಮೊಡನೆ ಹೇಳಿರುವಳು. ಓ ಮಹರ್ಷಿಗಳೆ! ನಿಮ್ಮ ಜ್ಞಾನ ದೃಷ್ಟಿಯೋ ಅಮೋಘವಾದುದು. ಆದುದರಿಂದ ಇವಳ ಉದ್ದೇಶವು ಸಫಲವಾಗಬಹುದೇ ಇಲ್ಲವೇ! ಮುಂದೆ ಇವಳಿಗೆ ಹುಟ್ಟಬಹುದಾದ ಮಗುವು ಗಂಡೇ ಅಥವಾ ಹೆಣ್ಣೇ ಎಂಬುದನ್ನು ನೀವು ಹೇಳಬೇಕು” ಎಂದರು.

ತಮ್ಮ ಧ್ಯಾನದೃಷ್ಟಿಯಿಂದಲೇ ಸಮಸ್ತವನ್ನೂ ತಿಳಿಯಬಲ್ಲ ಆ ಮಹರ್ಷಿಗಳಿಗೆ, ಈ ಯಾದವಕುಮಾರರ ಮೋಸವು ತಿಳಿದುಹೋಯಿತು. ಆಗ ಅವರೆಲ್ಲರೂ ಅತ್ಯಾಕ್ರೋಶದಿಂದ ಆ ಯಾದವರನ್ನು ಕುರಿತು. ‘‘ಎಲೈ ಮೂರ್ಖರೆ! ಈ ವ್ಯಕ್ತಿಯ ಗರ್ಭದಲ್ಲಿ ನಿಮ್ಮ ಕುಲವೆಲ್ಲವನ್ನೂ ನಿರ್ಮೂಲ ಮಾಡತಕ್ಕ ಒಂದಾನೊಂದು ಮುಸಲವು (ಒನಕೆಯು) ಹುಟ್ಟುವುದು. ಹೋಗಿರಿ!” ಎಂದರು. ಒಡನೆಯೇ ಆ ಯಾದವರೆಲ್ಲರೂ ಭಯಗ್ರಸ್ತರಾಗಿ, ಆ ಸಾಂಬನ ಹೊಟ್ಟೆಯನ್ನು ಬಿಚ್ಚಿ ನೋಡಿದಾಗ, ಅಲ್ಲಿ ಉಕ್ಕಿನ ಮುಳ್ಳುಗ ಳುಳ್ಳ ಒಂದಾನೊಂದು ಒನಕೆಯು ಕಾಣಿಸಿತು. ಅದನ್ನು ನೋಡಿ ಅವರ ಭಯವು ಮತ್ತಷ್ಟು ಹೆಚ್ಚಿತು. ‘‘ಅಯ್ಯೋ! ದುರ್ಭಾಗ್ಯರಾದ ನಾವು ಎಂತಹ ದುಷ್ಕಾರ್ಯಕ್ಕೆ ಯತ್ನಿಸಿದೆವು. ನಮ್ಮ ಬಂಧುಮಿತ್ರರು ಇದನ್ನು ಕೇಳಿದರೆ ನಮ್ಮನ್ನು ಸುಮ್ಮನೆ ಬಿಡುವರೆ? ಮುಂದೇನು ಗತಿ” ಎಂದು ಭಯದಿಂದ ನಡುಗುತ್ತ, ಆ ಒನಕೆಯನ್ನೂ ತೆಗೆದುಕೊಂಡು ಹಿಂತಿರುಗಿ

ದರು. ಕಂಪಿದ ಮುಖದೊಡನೆ ರಾಜಸಭೆಗೆ ಬಂದು ಸಮಸ್ತಯಾ
ದವರಿಗೂ ಆ ಒನಕೆಯನ್ನು ತೋರಿಸಿ, ನಡೆದ ಸಂಗತಿಗಳನ್ನೆಲ್ಲಾ ಯಥಾ
ವತ್ತಾಗಿ ವಿವರಿಸಿ ಹೇಳಿದರು. ಕ್ರೂರವಾದ ಆ ಬ್ರಾಹ್ಮಣಶಾಪವನ್ನು ಕೇ
ಳಿ ದ್ವಾರಕಾವಾಸಿಗಳೆಲ್ಲರೂ ಭಯಾಶ್ಚರ್ಯಗಳಿಂದ ಹಿಂದುಮುಂದುತೋ
ರದೆ ಕಳವಳಿಸುತಿದ್ದರು. ಆಗ ಯದುರಾಜನಾದ ಆಹುಕನು, ಆ ಒನ
ಕೆಯನ್ನು ಪುಡಿಪುಡಿಮಾಡಿಸಿ, ಆ ಪುಡಿಯನ್ನೂ, ಅದರ ಮೊಳೆಗಳನ್ನೂ
ಸಮುದ್ರಮಧ್ಯಕ್ಕೆ ಬಿಸಾಡಿಸಿದನು. ಅವುಗಳಲ್ಲಿದ್ದ ಒಂದಾನೊಂದು ಉಕ್ಕಿನ
ಮೊಳೆಯನ್ನು ಸಮುದ್ರದಲ್ಲಿದ್ದ ಒಂದು ಮೀನು ನುಂಗಿತು. ಆ ಒನಕೆಯ
ಸಣ್ಣಸಣ್ಣಪುಡಿಗಳೂಕೂಡ, ಅಲೆಯ ವೇಗದಿಂದ ತೀರದ ಕಡೆಗೆ ಒತ್ತರಿ
ಸಲ್ಪಟ್ಟು, ಅಲ್ಲಿ ಮೂರು ಕವಲುಗಳುಳ್ಳ ಐರಕವೆಂಬ ಹೊಡಕೆಗಳಾಗಿ ಬೆಳೆ
ದುವು. ಬೆಸ್ತರು ಸಮುದ್ರದಲ್ಲಿ ಮೀನುಹಿಡಿಯುತ್ತಿರುವಾಗ, ಆ ಉ
ಕ್ಕಿನ ಮೊಳೆಯನ್ನು ನುಂಗಿದ ಮೀನು, ಇತರ ಮೀನುಗಳೊಡನೆ ಒಬ್ಬಾ
ನೊಬ್ಬ ಅಂಬಿಗನ ಬಲೆಗೆ ಸಿಕ್ಕಿಬಿದ್ದಿತು. ಆ ಬೆಸ್ತನು ಆ ಮೀನನ್ನು ಕುಯ್ಯು
ತ್ತ,ಅದರ ಹೊಟ್ಟೆಯಲ್ಲಿದ್ದ ಮೊಳೆಯನ್ನು ತೆಗೆದು,ಅದನ್ನು ತನ್ನ ಬಾಣಕ್ಕೆ ಅ
ಲಗನ್ನಾಗಿ ಮಾಡಿಟ್ಟನು. ಓ ಪರೀಕ್ಷಿದ್ರಾಜಾ! ಇವೆಲ್ಲವೂ ಆ ಕೃಷ್ಣನ ಸಂ
ಕಲ್ಪದಿಂದಲೇ ನಡೆದ ಕಾರ್ಯಗಳೆಂದು ತಿಳಿ! ಆ ಶ್ರೀಕೃಷ್ಣನು ತ್ರಿಕಾಲಜ್ಞ
ನಾಗಿದ್ದು, ಮುಂದೆ ಅದರಿಂದ ನಡೆಯಬಹುದಾದ ಅನರ್ಥವನ್ನು ತಿಳಿದಿ
ದ್ದರೂ, ಆ ಬ್ರಾಹ್ಮಣಶಾಪವನ್ನು ವಿಫಲವಾಗಿ ಮಾಡುವುದಕ್ಕೂ, ತಾನು
ಸಮರ್ಥನಾಗಿದ್ದರೂ, ಯಾದವಕುಲವನ್ನು ಸಂಹರಿಸಬೇಕೆಂಬುದೇ ಆತನ
ಸಂಕಲ್ಪವಾಗಿದ್ದುದರಿಂದ, ಅವೆಲ್ಲವನ್ನೂ ನೋಡುತ್ತ ತಟಸ್ಥನಾಗಿರುತಿದ್ದ
ನು. ಇದು ಮೊದಲನೆಯ ಅಧ್ಯಾಯವು.

---

**{ ನಾರದನು ವಸುದೇವನಿಗೆ ವಿದೇಹಾರ್ಷಭಸಂವಾದ ವನ್ನು ತಿಳಿಸಿದುದು. }**

ಓ ಪರೀಕ್ಷಿದ್ರಾಜಾ ! ಶ್ರೀಕೃಷ್ಣನು ದ್ವಾರಕೆಯಲ್ಲಿರುವಾಗ,
ನಾರದನು ಅವನಲ್ಲಿ ಪರಮಭಕ್ತಿಯುಳ್ಳವನಾದುದರಿಂದ ಆಗಾಗ ಅಲ್ಲಿಗೆ

ಬಂದು ಕೆಲವುದಿನವಿದ್ದು ಹೋಗುತಿದ್ದನು. ರಾಜಾ! ಆ ಮುಕುಂದನ ಪಾದಾರವಿಂದವನ್ನು ಸೇವಿಸತಕ್ಕವರಿಗೆ ಮೃತ್ಯುಭಯವಿಲ್ಲ! ಇದಕ್ಕಾಗಿಯೇ ದೇವಶ್ರೇಷ್ಠರಾದ ಬ್ರಹ್ಮಾದಿಗಳೂ ಅವನ ಸೇವೆಯನ್ನು ನಿಯತವಾಗಿ ಬಯಸುವರು. ಅಂತಹ ಭಗವಂತನ ಪಾದಾರವಿಂದಗಳನ್ನು ಸೇವಿಸುವುದರಲ್ಲಿ ಯಾವನು ತಾನೇ ವಿಮುಖನಾಗುವನು. ವಿವೇಕವನ್ನು ಬಲ್ಲವನಾಗಿದ್ದರೂ, ಏನೂ ತಿಳಿಯದ ಮೂಢನಾಗಿದ್ದರೂ, ಕಣ್ಣು, ಕಿವಿ, ಮುಂತಾದ ಇಂದ್ರಿಯ ಗಳುಳ್ಳವನೊಬ್ಬನೂ ಒಂದಾವರ್ತಿ ಅದನ್ನು ರುಚಿನೋಡಿದಮೇಲೆ ಎಂದೆಂ ದಿಗೂ ಬಿಡಲಾರನು. ಇನ್ನು ದೇವರ್ಷಿಯಾದ ನಾರದನ ವಿಷಯವನ್ನು ಹೇಳ ಬೇಕಾದುದೇನು? ಆ ನಾರದಮುನಿಯು, ಎಂದಿನಂತೆ ಒಮ್ಮೆ ವಸುದೇವನ ಮ ನೆಗೆ ಬಂದನು. ಆಗ ವಸುದೇವನು ಆ ಮಹರ್ಷಿಯನ್ನು ಯಥೋಚಿತವಾಗಿ ಸತ್ಕರಿಸಿ, ಸುಖಾಸನವನ್ನು ಕೊಟ್ಟು ಕುಳ್ಳಿರಿಸಿ, ನಮಸ್ಕಾರಮಾಡಿ, ಹೀ ಗೆಂದು ವಿಜ್ಞಾಪಿಸುವನು. "ಓ ಮಹಾತ್ಮಾ! *ಪುಣ್ಯಶ್ಲೋಕನಾದ ಭಗ ವಂತನ ಸಾನ್ನಿಧ್ಯವನ್ನು ಪಡೆಯುವುದಕ್ಕೆ ನೀವೇ ಮಾರ್ಗಭೂತರು. ತಂದೆಯ ಆಗಮನವು ಮಕ್ಕಳಿಗೆ ಹೇಗೋ ಹಾಗೆ, ನಿಮ್ಮಂತವರು ನಮ್ಮಲ್ಲಿಗೆ ಬರುವುದು, ತಾಪತ್ರಯಪೀಡಿತರಾದ ನಮ್ಮ ಕ್ಷೇಮಕ್ಕಾಗಿಯೇಹೊರತು ಬೇರೆಯಲ್ಲ. (ಪರ್ಜನ್ಯಾದಿ) ದೇವತೆಗಳು ನಡೆಸತಕ್ಕ ಕಾರ್ಯವು, ಪ್ರಾಣಿಗಳ ಸುಖಕ್ಕೆ ಕಾರಣವೆನಿಸಿದ್ದರೂ, ಒಂದೊಂದುಸಮಯದಲ್ಲಿ (ಅತಿವೃಷ್ಟಿ ಮೊದಲಾದುವುಗಳಿಂದ) ಅದೇ ದುಃಖಕಾರಣವಾಗಿಯೂ ಪರಿಣಮಿಸುವು ದುಂಟು. ಭಗವದ್ಭಕ್ತರಾದ ನಿಮ್ಮಂತವರ ವ್ಯಾಪಾರವು ಯಾವಾಗಲೂ ಸುಖಕರವಾಗಿಯೇ ಪರಿಣಮಿಸುವುದು. ಇದಲ್ಲದೆ ದೇವತೆಗಳು, ತಮ್ಮನ್ನು ಯಾರುಯಾರು ಯಾವಯಾವ ವಿಧದಿಂದ ಭಜಿಸುವರೋ, ಆಯಾ ಉಪಾ ಸನೆಗೆ ತಕ್ಕಂತೆಯೇ ಫಲವನ್ನು ತೋರಿಸುವರು. ಆ ದೇವತೆಗಳು ತೋರಿಸ ತಕ್ಕ ಅನುಗ್ರಹವು, ಛಾಯೆಯು ಬಿಂಬವನ್ನು ಅನುಸರಿಸಿರುವಂತೆ, ಪ್ರಾಣಿ ಗಳ ಕರ್ಮಗಳಿಗೆ ತಕ್ಕಂತಿರುವುದು. ನಿಮ್ಮಂತಹ ಸಾಧುಗಳಾದರೋ ದೀನ ಜನರಲ್ಲಿ ನಿಷ್ಕಾರಣವಾದ ವಾತ್ಸಲ್ಯವನ್ನು ತೋರಿಸತಕ್ಕವರು. ಸಹಜದ ಯಾಳುವಾದ ನೀನು, ಈಗ ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ಬಂದವ

ನಾಗಿದ್ದರೂ, ನಿನ್ನ ದರ್ಶನಮಾತ್ರದಿಂದಲೇ ನಾವು ಕೃತಾರ್ಥರಾಗಿದ್ದರೂ, ಒಂದು ವಿಷಯವನ್ನು ನಿನ್ನಿಂದ ಕೇಳಿ ತಿಳಿಯಬೇಕೆಂದಿರುವೆನು. ಓ ಬ್ರಾಹ್ಮಣೋತ್ತಮಾ! ನೀನು ಭಗವಂತನನ್ನು ನಿನ್ನಲ್ಲಿ ಪ್ರಸನ್ನನನ್ನಾಗಿ ಮಾಡಿಕೊಳ್ಳುವುದಕ್ಕಾಗಿ ನಡೆಸಿದ ಧರ್ಮಗಳಾವುವು? ನೀನು ನಡೆಸತಕ್ಕ ಆ ಧರ್ಮಗಳನ್ನು ಕಿವಿಯಿಂದ ಕೇಳಿದಮಾತ್ರದಲ್ಲಿಯೇ ಮನುಷ್ಯನಿಗೆ ಸಾಂಸಾರಿಕವಾದ ಭಯವೆಲ್ಲವೂ ನೀಗುವುದು. ಆದರೆ "ಸಾಕ್ಷಾದ್ಭಗವಂತನೇ ನಿನಗೆ ಪುತ್ರನಾಗಿ ಅವತರಿಸಿರುವಾಗಲೂ, ನೀನು ಹೀಗೆ ಸಾಮಾನ್ಯಜನದಂತೆ ಸಂಸಾರಭಯದಿಂದ ಕೊರಗುವುದೇಕೆ?" ಎಂದು ನೀನು ನನ್ನನ್ನು ಆಕ್ಷೇಪಿಸಬಹುದು. ಆ ಭಗವಂತನು ನನ್ನ ಗರ್ಭದಲ್ಲಿ ಪುತ್ರರೂಪದಿಂದ ಜನಿಸಿರುವುದೇನೋ ವಾಸ್ತವವೇ! ಆದರೇನು? ಹಿಂದೆ ನಾನು ಆ ಭಗವಂತನನ್ನು ಆರಾಧಿಸುವಾಗ, ಆ ಭಗವಂತನ ಮಾಯೆಯಿಂದಲೇ ಮೋಹಿತನಾಗಿ, ನಾನು ಅವನನ್ನು ಪುತ್ರಾರ್ಥಿಯಾಗಿ ಭಜಿಸಿದೆನೇಹೊರತು, ಮೋಕ್ಷಾರ್ಥಿಯಾಗಿ ಭಜಿಸಲಿಲ್ಲ. ನನ್ನ ಅಜ್ಞಾನಕ್ಕೆ ತಕ್ಕಂತೆಯೇ ಅವನೂ ನನ್ನಲ್ಲಿ ಅನುಗ್ರಹವನ್ನು ತೋರಿಸಿಬಿಟ್ಟನು. ಇಷ್ಟುಮಾತ್ರಕ್ಕೆ ನಾನು ಕೃತಾರ್ಥನಾಗಲಿಲ್ಲ! ಆದುದರಿಂದ ದುಃಖಪ್ರಚುರವಾದ ಈ ಸಂಸಾರದಿಂದ, ನನಗೆ ಶೀಘ್ರದಲ್ಲಿ ಮುಕ್ತಿಯುಂಟಾಗುವ ಉಪಾಯವಾವುದೋ ಅದನ್ನು ತೋರಿಸಿಕೊಡಬೇಕು" ಎಂದು ಪ್ರಾರ್ಥಿಸಿದನು. ವಸುದೇವನು ಹೀಗೆ ಪ್ರಶ್ನೆಮಾಡಿದೊಡನೆ, ನಾರದನಿಗೆ ಭಗವಂತನ ಗುಣಗಳ ಸ್ಮರಣೆಯುಂಟಾಗಿ, ಅವನ ಮನಸ್ಸಿಗೆ ಬಹಳ ಸಂತೋಷವು ಹುಟ್ಟಿತು. ಆಗ ನಾರದನು ವಸುದೇವನನ್ನು ಕುರಿತು "ಓ ಯದೂತ್ತಮಾ! ಈಗ ನಿನಗೆ ಹುಟ್ಟಿದ ಈ ಉದ್ದೇಶವು ಅತ್ಯುತ್ತಮವಾದುದು. ಭಾಗವತಧರ್ಮವಿಷಯವಾಗಿ ಈಗ ನೀನು ಕೇಳಿದ ಪ್ರಶ್ನವು, ನಿನಗೆ ಮಾತ್ರವಲ್ಲದೆ, ಇತರಲೋಕಕ್ಕೂ ಅಭ್ಯುದಯಕಾರಣವೆನಿಸಿರುವುದು. ಆ ಭಾಗವತಧರ್ಮಗಳನ್ನು ನಿಯಮದಿಂದ ಅನುಷ್ಠಿಸುವುದು ಹಾಗಿರಲಿ! ಇವುಗಳನ್ನು ಒಂದಾವರ್ತಿ ಕಿವಿಯಿಂದ ಕೇಳಿದರೂ, ಬಾಯಿಂದ ಹೇಳಿದರೂ, ಮನಸ್ಸಿನಿಂದ ಸ್ಮರಿಸಿದರೂ, ಆದರಿಸಿದರೂ, ಅನುಮೋದಿಸಿದರೂ, ಭೂತದ್ರೋಹಿಗಳಾದ ಪಾಪಿಗಳೂ

ಪಾವನರಾಗುವರು. ಇದಲ್ಲದೆ ಈಗ ನೀನು ಆ ಭಗವಂತನ ಗುಣಗಳನ್ನು ಹೇಳುವಂತೆ ನನ್ನನ್ನು ಪ್ರೇರಿಸಿ, ನನಗೆ ಆ ಭಗವದ್ಗುಣಾನುಭವದಲ್ಲಿ ಸ್ಮರಣೆಯನ್ನುಂಟುಮಾಡಿದುದರಿಂದ, ನಾನೂ ಕೃತಾರ್ಥನಾದೆನು. ಇದೇ ಭಾಗವತಧರ್ಮವಿಚಾರವಾಗಿ, ಹಿಂದೆ ವಿದೇಹರಾಜನಾದ ಜನಕನಿಗೂ, ಆರ್ಷಭರೆಂಬವರಿಗೂ, ನಡೆದ ಸಂವಾದರೂಪವಾದ ಇತಿಹಾಸವೊಂದುಂಟು.ಅದನ್ನೇ ನಿನಗೆ ತಿಳಿಸುವೆನು ಕೇಳು.ಪೂರ್ವದಲ್ಲಿ ಸ್ವಾಯಂಭುವನೆಂಬ ಮನುವಿಗೆ ಪ್ರಿಯವ್ರತನೆಂಬ ಮಗನಾದನು. ಅವನಿಂದ ಆಗ್ನೀಧ್ರನೂ, ಆಗ್ನೀಧ್ರನಿಂದ ನಾಭಿಯೆಂಬವನೂ, ಆ ನಾಭಿಯಿಂದ ಋಷಭನೆಂಬವನೂ ಜನಿಸಿದರು. ಲೋಕದಲ್ಲಿ ಮೋಕ್ಷಧರ್ಮಗಳನ್ನು ಪ್ರಚಾರಗೊಳಿಸುವುದಕ್ಕಾಗಿ, ಭಗವಂತನೇ ತನ್ನ ಅಂಶದಿಂದ, ಈ ಋಷಭರೂಪದಿಂದ ಅವತರಿಸಿದ್ದಾಗಿ ಹಿರಿಯರು ಹೇಳುವರು. ಈ ಋಷಭನಿಗೆ ನೂರುಮಂದಿ ಪುತ್ರರಾದರು. ಇವರೆಲ್ಲರೂ, ವೇದಾಧ್ಯಯನದಲ್ಲಿಯೂ, ಬ್ರಹ್ಮಜ್ಞಾನದಲ್ಲಿಯೂ ಪಾರಂಗತರೆನಿಸಿದರು. ಇವರಲ್ಲಿ ಭರತನೆಂಬವನೇ ಜ್ಯೇಷ್ಠನು. ಆತನು ಪರಮಭಾಗವತೋತ್ತಮನು. ಈ ದೇಶಕ್ಕೆ ಭರತವರ್ಷವೆಂಬ ಪ್ರಸಿದ್ಧವಾದ ಹೆಸರು ಬಂದುದೂ ಆತನ ಧರ್ಮಪರಿಪಾಲನದಿಂದಲೇ ! ಈ ಭರತನು ಬಹುಕಾಲದವರೆಗೆ ಈ ಭೂಮಿಯನ್ನು ಪಾಲಿಸುತಿದ್ದು, ಆಮೇಲೆ ವಿರಕ್ತನಾಗಿ ತಪೋವನದಲ್ಲಿದ್ದು, ತನ್ನ ವರ್ಣಾಶ್ರಮಧರ್ಮಗಳಿಂದ ಭಗವಂತನನ್ನಾರಾಧಿಸುತ್ತ, ಹಾಗೆಯೇ ಮೂರುಜನ್ಮಗಳನ್ನು ಕಳೆದು, ಕೊನೆಗೆ ತನ್ನ ಪುಣ್ಯಫಲದಿಂದ ವಿಷ್ಣುಸ್ಥಾನವನ್ನು ಸೇರಿದನು. ಆ ಭರತನ ತೊಂಬತ್ತೊಂಬತ್ತು ಮಂದಿ ತಮ್ಮಂದಿರಲ್ಲಿ, ಇಳಾವರ್ತನೇ ಮೊದಲಾದ ಒಂಬತ್ತುಮಂದಿ, ಈ ಭಾರತವರ್ಷದಸುತ್ತಲೂ, ಬೇರೆಬೇರೆ ಒಂಬತ್ತುದ್ವೀಪಗಳಿಗೆ ಅಧಿಪತಿಗಳಾಗಿ ಧರ್ಮದಿಂದ ಪಾಲಿಸುತ್ತಿದ್ದರು. ಆ ದ್ವೀಪಗಳು ಈಗಲೂ ಅವರ ಹೆಸರಿನಿಂದಲೇ ಪ್ರಸಿದ್ಧಗಳಾಗಿರುವುವು. ಉಳಿದ ತೊಂಬತ್ತುಮಂದಿ ಕುಮಾರರಲ್ಲಿ ಎಂಬತ್ತೊಂದುಮಂದಿ ದ್ವಿಜರಾಗಿ, ಕರ್ಮತಂತ್ರಗಳಿಗೆ ಪ್ರವರ್ತಕರಾದರು.ಉಳಿದ ಒಂಬತ್ತುಮಂದಿ ಕುಮಾರರು,ಮುನಿಗಳೆನಿಸಿಕೊಂಡು, ಜ್ಞಾನವೈರಾಗ್ಯಸಂಪನ್ನರಾಗಿ, ಪರಮಾರ್ಥತತ್ವವನ್ನು ಉಪದೇಶಿಸತಕ್ಕವ

ರಾದರು. ಮತ್ತು ಅವರು ಅಧ್ಯಾತ್ಮವಿದ್ಯೆಯನ್ನು ಚೆನ್ನಾಗಿ ಪರಿಶೀಲಿಸಿದವ ರಾಗಿಯೂ, ದಿಗಂಬರರಾಗಿಯೂ ಇದ್ದರು. ಅವರಿಗೆ ಕ್ರಮವಾಗಿ, ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಳ, ಚಮಸ, ಕರಭಾಜನರೆಂದು ಹೆಸರು. ಅವರು ಸ್ಥಾವರಜಂಗಮರೂಪವಾದ ಸಮಸ್ತಪ್ರಪಂಚವನ್ನೂ ಭಗವಂತನ ರೂಪದಿಂದಲೇ ಭಾವಿಸುತ್ತ, ಲೋಕಸಂಚಾರವನ್ನು ಮಾಡುತಿದ್ದರು. ಅವರಿಗೆ ಯಾವಲೋಕಕ್ಕೆ ಹೋಗು ವುದಕ್ಕೂ ಸ್ವಲ್ಪವಾದರೂ ತಡೆಯಿಲ್ಲ ! ಇಂತಹ ನಿರಂಕುಶವಾದ ಗಮನ ಶಕ್ತಿಯಿಂದ, ಈಗಲೂ ಅವರು, ದೇವ, ದಾನವ, ಸಿದ್ಧ, ಸಾಧ್ಯ, ಗಂಧರ್ವ, ಯಕ್ಷ, ಕಿನ್ನರ, ನಾಗ, ಪನ್ನಗ, ವಿದ್ಯಾಧರ, ಚಾರಣ, ಭೂತನಾಥರೇ ಮೊದಲಾದವರ ಲೋಕಗಳೊಳಗೆಲ್ಲಾ ನಿಷ್ಕಾಮರಾಗಿ ಸಂಚರಿಸುತ್ತಿರು ವರು. ಇವರು ಹೀಗೆ ಲೋಕಸಂಚಾರವನ್ನು ಮಾಡುತ್ತಿರುವಾಗ, ಒಮ್ಮೆ ಭಾರತವರ್ಷದಲ್ಲಿ, ಮಹಾತ್ಮನಾದ ಜನಕವಂಶದ ನಿಮಿಯು, ಮಹರ್ಷಿಗಳ ಮೂಲಕವಾಗಿ ಸತ್ರಯಾಗವನ್ನು ಮಾಡಿಸುತಿದ್ದ ಸ್ಥಳಕ್ಕೆ ಅಕಸ್ಮಾತ್ತಾಗಿ ಬಂದು ಸೇರಿದರು. ಸೂರ್ಯವರ್ಚಸ್ಸಿನಿಂದ ಪ್ರಕಾಶಿಸುತ್ತಿರುವ ಈ ಭಾಗವ ತೋತ್ತಮರನ್ನು ಕಂಡೊಡನೆ, ಯಜ್ಞದೀಕ್ಷಿತನಾದ ನಿಮಿಯೂ, ಯಾಗ ನಿರ್ವಾಹಕರಾದ ಋಷಿಗಳೂ, ಅಲ್ಲಿ ಪುರುಷಾಕಾರದಿಂದಿದ್ದ ಆಹವನೀಯವೇ ಮೊದಲಾದ ಅಗ್ನಿತ್ರಯವೂ, ಎಲ್ಲರೂ ಥಿಗ್ಗನೆ ಇದಿರೆದ್ದುಬಂದು, ಆ ಮಹರ್ಷಿಗಳನ್ನು ಗೌರವಿಸಿ ಬರಮಾಡಿಕೊಂಡರು. ಜನಕನು, ಸಂತೋಷ ದಿಂದ ಅವರಿಗೆ ಉಚಿತಾಸನಗಳನ್ನು ಕೊಟ್ಟು ಸತ್ಕರಿಸಿದನು. ಭೃಗು ಮೊದ ಲಾದ ಬ್ರಹ್ಮಪುತ್ರರಿಗೆ ಸಮಾನರಾಗಿ, ದಿವ್ಯತೇಜಸ್ವಿಗಳಾದ ಆ ಋಷಿಗ ಳನ್ನು ಸತ್ಕರಿಸಿದಮೇಲೆ, ಜನಕನು ಅವರ ಮುಂದೆ ಭಕ್ತಿವಿನಮ್ರನಾಗಿ ಹೀಗೆಂದು ವಿಜ್ಞಾಪಿಸುವನು. “ಓ ಮಹಾತ್ಮರೆ ! ನಿಮ್ಮ ಅದ್ಭುತತೇಜ ಸ್ಸನ್ನು ನೋಡಿದರೆ, ನೀವು ಆ ಸಾಕ್ಷಾತ್ಪರಮಪುರುಷನೊಡನೆ ನಿತ್ಯಸಾನ್ನಿಧ್ಯ ದಲ್ಲಿರುವ ಪಾರ್ಷದರಲ್ಲಿ ಸೇರಿದಂತೆಯೇ ತೋರುವುದು. “ಹಾಗಿದ್ದರೆ ನಾವು ಈ ಪ್ರಾಕೃತಲೋಕದಲ್ಲಿ ಸುತ್ತುತಿದ್ದೇವೆ ?” ಎಂದು ನೀವು ಕೇಳ ಬಹುದು. ವಿಷ್ಣುಭಕ್ತರಾದ ನಿಮ್ಮಂತವರು, ಇತರಲೋಕಗಳನ್ನು ಪಾವನ

ಮಾಡುವುದಕ್ಕಾಗಿ, ಅಲ್ಲಲ್ಲಿ ಸಂಚರಿಸುತ್ತಿರುವುದು ಸಹಜವೇ ! ಅದು ಹಾಗಿರಲಿ ! ಜೀವಕೋಟಿಗೆ ನಾನಾಬಗೆಯ ದೇಹಸಂಬಂಧವುಂಟು. ಅವುಗಳಲ್ಲಿ ಮನುಷ್ಯದೇಹವುಮಾತ್ರ ಸುಲಭವಾಗಿ ಸಿಕ್ಕುವುದಲ್ಲ ! ಅನೇಕಜನ್ಮಗಳ ಸುಕೃತದಿಂದ ಇದನ್ನು ಪಡೆಯುವರು. ಅಷ್ಟು ಪುಣ್ಯವನ್ನುಮಾಡಿ ಇದನ್ನು ಪಡೆದರೂ, ಇದು ಬಹಳದಿನಗಳವರೆಗೆ ನಿಲ್ಲತಕ್ಕುದಲ್ಲ. ಇಂತಹ ಮನುಷ್ಯಜನ್ಮವನ್ನೆತ್ತಿರುವಾಗಲೂ, ವೈಕುಂಠಪ್ರಿಯರಾದ ನಿಮ್ಮಂತವರ ದರ್ಶನವು ಎಲ್ಲರಿಗೂ ಸುಲಭವಲ್ಲ ! ಈ ಸಂಸಾರದಲ್ಲಿ ಅರ್ಧಕ್ಷಣವಾದರೂ ನಿಮ್ಮಂತಹ ಸಜ್ಜನರೊಡನೆ ಸಹವಾಸವು ಲಭಿಸಿದರೆ, ಅದೇ ಮನುಷ್ಯರಿಗೆ ದೊಡ್ಡ ಪುರುಷಾರ್ಥವೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ಈಗ ನಿಮ್ಮ ದರ್ಶನಕ್ಕೆ ಪಾತ್ರನಾಗಿ ನಾನು ಕೃತಾರ್ಥನಾದೆನು. ಓ ಮಹಾತ್ಮರೆ! ಲೋಕದಲ್ಲಿ ಮನುಷ್ಯನಿಗೆ ನಿರತಿಶಯವಾದ ಮತ್ತು ನಿರ್ಭಯವಾದ ಶ್ರೇಯಸ್ಸು ಯಾತರಿಂದುಂಟಾಗುವುದೋ,ಅದಕ್ಕೆ ಸಾಧನಗಳೇನೋ, ಅದನ್ನು ನನಗೆ ತಿಳಿಸಬೇಕು! ಭಗವತ್ಪ್ರಾಪ್ತಿಯೇ ಉತ್ತಮಪುರುಷಾರ್ಥವೆಂದೂ, ಭಾಗವತಧರ್ಮಗಳೇ ಅದಕ್ಕೆ ಸಾಧನಗಳೆಂದೂ ನಾನು ಕೇಳಿರುವೆನು. ಆ ಭಾಗವತಧರ್ಮಗಳಾವುವು? ನಾನು ಕೇಳಬಹುದಾಗಿದ್ದರೆ, ತಾವು ಅವುಗಳನ್ನು ನನಗೆ ವಿವರಿಸಿ ತಿಳಿಸಬೇಕು." ಎಂದನು.

{ಮನುಷ್ಯನಿಗೆ ಉತ್ತಮವಾದ ಶ್ರೇಯಸ್ಸು, ಮತ್ತು ಅದಕ್ಕೆ ಸಾಧನಗಳು.}

ಮೊದಲು ಆ ಮಹರ್ಷಿಗಳಲ್ಲಿ ಮೊದಲನೆಯವನಾದ ಕವಿಯು ವಿದೇಹನನ್ನು ಕುರಿತು. "ರಾಜೇಂದ್ರಾ ಕೇಳು! ಚೇತನರಿಗೆ ಸರ್ವೋತ್ತಮವಾದ ಶ್ರೇಯಸ್ಸಾವುದೆಂದೂ, ಅದಕ್ಕೆ ಸಾಧನವೇನೆಂದೂ ಕೇಳಿದೆಯಲ್ಲವೆ" ಚೇತನನಿಗೆ ಸಂಸಾರವಿಮುಕ್ತಿಯೇ ಉತ್ತಮವಾದ ಶ್ರೇಯಸ್ಸು! ಮುಕ್ತಿಯೆಂಬುದು ಬೇರೆಯಲ್ಲ ! ಲೋಕದಲ್ಲಿ ಯಾವುದರಿಂದಲೂ ಭಯವಿಲ್ಲದೆ ನಿಶ್ಚಿಂತನಾಗಿರುವುದೇ ಮುಕ್ತಿ ! ಈ ಜೀವದಶೆಯಲ್ಲಿ ನಿತ್ಯವೂ ಭಗವಂತನ ಪಾದಾರವಿಂದವನ್ನು ಉಪಾಸಿಸುತ್ತಿರುವುದೊಂದೇ ನಿರ್ಭಯವಾದ ಮಾರ್ಗವು. ಅದೇ ಸರ್ವೋತ್ತಮವಾದ ಶ್ರೇಯಸ್ಸಿಗೆ ಸಾಧನವು.

ಪ್ರಕೃತಿಪರಿಣಾಮರೂಪವಾದ ದೇಹವನ್ನು ಆತ್ಮವೆಂದು ಭ್ರಮಿಸುವುದ ರಿಂದಲೇ, ಮನುಷ್ಯನ ಬುದ್ಧಿಗೆ ನಾನಾವಿಧವಾದ ಭಯವು ತಲೆದೋರು ವುದು. ಅಂತವನು ಆ ಭಗವಂತನ ಪಾದಾರವಿಂದಗಳನ್ನು ದೃಢವಾಗಿ ಉಪಾಸಿಸುತ್ತಿದ್ದರೆ, ಬೇರೆಯಾವ ಭಯಕ್ಕೂ ಕಾರಣವಿಲ್ಲ! ಕೊನೆಗೆ ಆ ಉಪಾಸನೆಯೇ ಮೋಕ್ಷಸಾಧಕವಾಗುವುದು. ಆತ್ಮ ಪರಮಾತ್ಮ ಸ್ವರೂಪ ವನ್ನು ತಿಳಿಯಲಾರದ ಅಜ್ಞರಿಗಾಗಿಯೇ, ಭಗವಂತನು ಪಾಂಚರಾತ್ರಾದಿ ಗಳ ಮೂಲಕವಾಗಿ, ತನ್ನ ಕಥಾಶ್ರವಣ, ಕೀರ್ತನ, ಸ್ಮರಣಗಳೇ ಮೊದ ಲಾದ ಕೆಲವು ಉಪಾಯಗಳನ್ನು ತಾನೇ ತೋರಿಸಿರುವನು. ಇವುಗಳೇ ಭಾಗವತಧರ್ಮಗಳೆನಿಸುವುವು. ಮನುಷ್ಯನು ಈ ಉಪಾಯಗಳನ್ನು ಚೆ ನ್ನಾಗಿ ಅನುಸರಿಸುತಿದ್ದಪಕ್ಷದಲ್ಲಿ, ಅವನಿಗೆ ಯಾವಾಗಲೂ ಯಾವ ಭಯವೂ ಇರದು. ಬೇರೆ ಉಪಾಯಾಂತರಗಳಲ್ಲಿ ಪ್ರಮಾದವು ಸಂಭ ವಿಸಬಹುದು. ಅವುಗಳಿಗೆ ನಾನಾತರದ ವಿಘ್ನಗಳೂ ಪ್ರಾಪ್ತವಾ ಗುವುದುಂಟು. ಈ ಭಾಗವತಧರ್ಮವೆಂಬ ಸನ್ಮಾರ್ಗದಲ್ಲಿ, ಕಣ್ಣುಮುಚ್ಚಿ ಕೊಂಡು ಓಡಿದರೂ ಕಾಲೆಡವಿ ಬೀಳಲಾರನು. ಬೇರೆ ಉಪಾಯಗಳಲ್ಲಿ ಸ್ವ ಲ್ಪವಾಗಿ ತಪ್ಪಿ ನಡೆದರೂ ಪ್ರಮಾದವುಂಟು. ಮನುಷ್ಯನು ತನ್ನ ಪ್ರಾಕೃತ ಸ್ವಭಾವಕ್ಕೆ ಕಟ್ಟುಬಿದ್ದು, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಾ ಗಲಿ, ಬೇರೆ ಇಂದ್ರಿಯಗಳಿಂದಾಗಲಿ, ಬುದ್ಧಿಯಿಂದಾಗಲಿ, ಶಾಸ್ತ್ರನಿಷಿದ್ಧ ವಲ್ಲದ ಯಾವಯಾವ ಲೌಕಿಕವೈದಿಕಕರ್ಮಗಳನ್ನು ನಡೆಸುವನೋ, ಅವೆಲ್ಲವನ್ನೂ ಪರಾತ್ಪರನಾದ ಶ್ರೀಮನ್ನಾರಾಯಣನಿಗೇ ಅರ್ಪಿತವೆಂಬ ಬುದ್ಧಿಯಿಂದ ನಡೆಸಬೇಕು. ಕೆಲವು ಮಂದಬುದ್ಧಿಯುಳ್ಳವರು, ಈ ಜಗತ್ತಿ ನಲ್ಲಿರುವ ವಸ್ತುಗಳನ್ನು ಬ್ರಹ್ಮಾತ್ಮಕವಲ್ಲವೆಂದೂ, ಅವು ಸ್ವತಂತ್ರಗಳೆಂದೂ ಭ್ರಮಿಸುವರು. ಈ ತಪ್ಪುತಿಳುವಳಿಕೆಯುಳ್ಳವನೇ ಭಗವಂತನಲ್ಲಿ ವಿಮುಖ ನೆನಿಸುವನು. ಸ್ವತಂತ್ರಾಭಿಮಾನವೇ ಮನುಷ್ಯನಿಗೆ ಭಯಕಾರಣವು. ಈ ಅಜ್ಞಾನದಿಂದ ಮನುಷ್ಯನ ಬುದ್ಧಿಯು ತಲೆಕೆಳಗಾಗಿ, ದೇಹವೇ ಆ ತ್ಮವೆಂಬ ಭ್ರಮವೂ ಹುಟ್ಟುವುದು. ಇವೆಲ್ಲವೂ ಭಗವಂತನ ಮಾಯೆಯಾದ ಪ್ರಕೃತಿಯಿಂದಲೇ ಜನಿಸುವುವು. ಆದುದರಿಂದ ಮನುಷ್ಯನು ಆ ಮಾಯೆ

ಯನ್ನು ತಪ್ಪಿಸಿಕೊಳ್ಳಬೇಕಾದರೆ, ಗುರುವನ್ನೇ ದೈವವೆಂದೆಣಿಸಿ, ಅವನಿಂದ ವೇದಾಂತಜ್ಞಾನವನ್ನು ಸಂಪಾದಿಸಿ, ಅನನ್ಯಪ್ರಯೋಜನವಾದ ಭಕ್ತಿಯಿಂದ ಭಗವಂತನೇ ಸರ್ವಾತ್ಮಕನೆಂಬುದನ್ನು ತಿಳಿದು ಭಜಿಸಬೇಕು.ರಾಜಾ! ದೇಹವು ಆತ್ಮವಲ್ಲ! ಆತ್ಮವೂ ಸ್ವತಂತ್ರವಲ್ಲ! ಹಾಗಿದ್ದರೂ ಸ್ವಪ್ನಮನೋರಥಗಳೆಲ್ಲವೂ ಸ್ಥಿರವಾಗಿ ತೋರುವಂತೆ, ದೇಹವೇ ಆತ್ಮವೆಂದೂ, ಆತ್ಮವು ಸ್ವತಂತ್ರವೆಂದೂ ಮನಸ್ಸಿಗೆ ತೋರುವುದುಂಟು. ಹೀಗೆ ಆಯಾ ಚೇತನನ ಮನಸ್ಸನ್ನೂ, ಅನಾದಿಕರ್ಮವಾಸನೆಯನ್ನೂ ಅನುಸರಿಸಿ ಹುಟ್ಟುವ ಈ ದೇಹಾತ್ಮಭ್ರಮಗಳೆಲ್ಲವನ್ನೂ ನೀಗಿಸುವಂತೆ, ವಿವೇಕಿಯಾದವನು,ತನ್ನ ಮನಸ್ಸನ್ನು ಸ್ವಾಧೀನದಲ್ಲಿರಿಸಬೇಕು. ಈ ಮನೋನಿಗ್ರಹದಿಂದಲೇ ನಿರ್ಭಯವಾದ ಮೋಕ್ಷವು ಲಭಿಸುವುದು. ಹಾಗೆ ಮನಸ್ಸನ್ನು ನಿಗ್ರಹಿಸುವುದಕ್ಕೆ ಉಪಾಯವನ್ನೂ ತಿಳಿಸುವೆನು ಕೇಳು. ಆ ಪರಮಪುರುಷನು ಈ ಲೋಕದಲ್ಲಿ ಕೈಕೊಂಡ ಬಗೆಬಗೆಯ ಅವತಾರಗಳನ್ನೂ, ಆಯಾ ಅವತಾರಗಳಲ್ಲಿ ನಡೆಸಿದ ಅದ್ಭುತಕರ್ಮಗಳನ್ನೂ, ಯಾವಾಗಲೂ ಕಿವಿಯಿಂದ ಕೇಳುತ್ತಲೂ, ಬಾಯಿಂದ ಹಾಡುತ್ತಲೂ ಇರಬೇಕು. ಅವನ ನಾಮಗಳು ಸಮಸ್ತಲೋಕಕ್ಕೂ ಮಂಗಳಕರಗಳು. ದೇಹಾಭಿಮಾನವನ್ನೂ, ಲಜ್ಜೆಯನ್ನೂ, ಭಯವನ್ನೂ ಬಿಟ್ಟು, ಆ ಭಗವಂತನ ನಾಮಗಳನ್ನೂ, ಚರಿತ್ರಗಳನ್ನೂ, ಕೊಂಡಾಡುತ್ತ ಕಾಲವನ್ನು ಕಳೆಯಬೇಕು. ಹೀಗೆ ಮಾಡುತ್ತ ಬಂದರೆ, ಮನಸ್ಸು ಆ ಭಗವಂತನಲ್ಲಿ ಸುಸ್ಥಿರವಾಗಿ ನಿಲ್ಲುವುದು. ಆತನಲ್ಲಿ ಭಕ್ತಿರೂಪವಾದ ಅನುರಾಗವೂ ಹೆಚ್ಚುತ್ತ ಬರುವುದು. ಈ ಹರಿನಾಮಕೀರ್ತನವೆಂಬ ವ್ರತದಿಂದ ಭಗವಂತನು ಬಹುಸುಲಭವಾಗಿ ಪ್ರಸನ್ನನಾಗುವನು. ಹಿಂದೆ ಹೇಳಿದಂತೆ ಭಗವತ್ಕೀರ್ತನಪರನಾದವನಿಗೆ, ದೇಹದಮೇಲೆಯೇ ಸ್ಮೃತಿ ತಪ್ಪುವುದು.ಯಾವಾಗಲೂ ಭಗವಂತನ ಲೀಲೆಗಳನ್ನು ನೆನೆಸಿಕೊಂಡು ಒಮ್ಮೆ ನಗುವನು! ಒಮ್ಮೆ ಅಳುವನು! ಮತ್ತೊಮ್ಮೆ ಕೂಗಿಕೊಳ್ಳುವನು. ಒಮ್ಮೆ ಹಾಡುವನು! ಹುಚ್ಚನಂತೆ ಕುಣಿಯುವನು! ಭೂತಾವಿಷ್ಟನಾದಂತೆ ಲೋಕವಿಲಕ್ಷಣವಾದ ವ್ಯಾಪಾರಗಳನ್ನು ನಡೆಸುವನು. ಓ ರಾಜಾ! ಹೀಗೆ ಶ್ರೇಯಸ್ಸಾಧನೆಗೆ ನಿತ್ಯವೂ ಹರಿಕಥಾಶ್ರವಣಕೀರ್ತನವೊಂದಲ್ಲದೆ ಬೇರೊಂ

ದುಮಾರ್ಗವೂ ಉಂಟು. ಏನೆಂದರೆ, ಆಕಾಶ,ವಾಯು, ಅಗ್ನಿ, ಜಲ, ಭೂಮಿ, ಜ್ಯೋತಿಸ್ಸುಗಳು, ಜಂತುಗಳು, ದಿಕ್ಕುಗಳು, ವೃಕ್ಷವರ್ಗಗಳು, ನದಿಗಳು, ಸಮುದ್ರಗಳು, ಮುಂತಾಗಿ ಯಾವ ಭೂತಗಳನ್ನು ಕಂಡರೂ, ಅವೆಲ್ಲವನ್ನೂ ಆ ಭಗವಂತನ ಸ್ವರೂಪವೆಂದೇ ಭಾವಿಸಿ ನಮಸ್ಕರಿಸಬೇಕು. ಕೊನೆಗೆ ತನ್ನನ್ನೂ ಅದೇಭಾವದಿಂದ ತಿಳಿದು ತನಗೆತಾನೇ ನಮಸ್ಕರಿಸ ಬೇಕು ! ಆದರೆ ‹‹ಹೀಗೆ ಮನಸ್ಸನ್ನು ಸ್ವಾಧೀನಕ್ಕೆ ತರುವಪ್ರಯತ್ನದಲ್ಲಿ ಯೇ ಅತ್ಯಲ್ಪವಾದ ಮನುಷ್ಯನ ಆಯುಸ್ಸು ಕಳೆದುಹೋಗುವಂತಿರು ವಾಗ, ಸಂಪೂರ್ಣವಾಗಿ ಮನಸ್ಸನ್ನು ನಿರೋಧಿಸಿ,ಭಕ್ತಿಯನ್ನು ಸಂಪಾದಿಸು ವುದಕ್ಕೆ ಅವಕಾಶವೆಲ್ಲಿ ?" ಎಂದು ನೀನು ಶಂಕಿಸಬೇಡ ! ಆಹಾರವನ್ನು ತೆಗೆದುಕೊಳ್ಳುವಾಗ, ಒಂದೊಂದು ತುತ್ತನ್ನು ಭುಜಿಸುವುದರಿಂದಲೂ, ಮನಸ್ಸಿಗೆ ತುಷ್ಟಿ, ದೇಹಕ್ಕೆ ಪುಷ್ಟಿ, ಹಸಿವಡಗುವುದು, ಈ ಮೂರುಕಾರ್ಯ ಗಳೂ ಏಕಕಾಲದಲ್ಲಿ ನಡೆಯುವಂತೆ, ಭಗವದ್ಧ್ಯಾನಪರನಾದವನಿಗೆ, ಆ ಭ ಗವಂತನ ಸ್ವರೂಪಗುಣಾದಿಗಳನ್ನು ಕುರಿತ ತತ್ವಜ್ಞಾನವೂ, ಆತನಲ್ಲಿ ಭಕ್ತಿಯೂ, ಇತರ ಶಬ್ದಾದಿವಿಷಯಗಳಲ್ಲಿ ವಿರಕ್ತಿಯೂ ಏಕಕಾಲದಲ್ಲಿಯೇ ಹುಟ್ಟುವುವು. ಹೀಗೆ ತತ್ವಜ್ಞಾನ, ಭಕ್ತಿ, ವಿರಕ್ತಿಗಳು ಹುಟ್ಟುವುದರಿಂದ ತಾನಾಗಿ ಶಾಂತಿಯೂ (ಮೋಕ್ಷವೂ) ಲಭಿಸುವುದು. ಭೂತದ್ರೋಹವನ್ನು ಬಿಟ್ಟು, ಸಮಸ್ತಪ್ರಾಣಿಗಳಲ್ಲಿಯೂ ಮೈತ್ರಿಯುಳ್ಳವನಾಗಿ, ಭಗವಂತನಲ್ಲಿ ಯೇ ಮನಸ್ಸಿಟ್ಟು, ಅದರಿಂದ ಪರಿಶುದ್ಧಸ್ವಭಾವವುಳ್ಳವರು, ಸೂರ್ಯನು ತನ್ನ ಕಿರಣಗಳಿಂದ ಹೇಗೋ ಹಾಗೆ, ತಮ್ಮ ಪಾದರೇಣುಗಳಿಂದ ಲೋಕ ವನ್ನೆಲ್ಲಾ ಪಾವನಮಾಡಬಲ್ಲರು." ಎಂದನು. ಆಗ ವಿದೇಹನು ತಿರುಗಿ ಆ ಮ ಹರ್ಷಿಗಳನ್ನು ಕುರಿತು. ‹‹ಓ ಮಹಾತ್ಮರೆ! ಭಾಗವತರೆಂದರೆ ಎಂತವರು ? ಅವರ ಧರ್ಮಗಳಾವುವು ? ಮನುಷ್ಯರಲ್ಲಿ ಅವರ ವೈಲಕ್ಷಣ್ಯವೇನು? ಅವರ ಆಚಾರವೆಂತದು? ಅವರು ಹೇಳತಕ್ಕ ವಿಷಯಗಳೇನು ? ಭಗವತ್ಪ್ರಿಯ ನೆಂಬುದನ್ನು ಪ್ರತ್ಯೇಕಿಸಿ ತಿಳಿಸುವ ಚಿಹ್ನಗಳಾವುವು?" ಈ ವಿಚಾರಗಳನ್ನು ನನಗೆ ತಿಳಿಸಬೇಕು." ಎಂದನು.

## ಭಗವದ್ಭಕ್ತರ ಲಕ್ಷಣಗಳು.

ಈ ಪ್ರಶ್ನೆಗೆ ಆ ಮುನಿಗಳಲ್ಲಿ ಎರಡನೆಯವನಾದ ಹರಿಯೆಂಬವನು ಉತ್ತರವನ್ನು ಹೇಳತೊಡಗಿ “ ಓ ನಿಮಿರಾಜೇಂದ್ರಾ! ಯಾವನು ಸಮಸ್ತ ಭೂತಗಳನ್ನೂ, ತನ್ನನ್ನೂ, ಪರಮಾತ್ಮಬುದ್ಧಿಯಿಂದಲೇ ನೋಡುವನೋ, ಮತ್ತು ಸಮಸ್ತಭೂತಗಳಿಗೂ ಆ ಪರಮಾತ್ಮನೇ ಆಧಾರನೆಂಬುದನ್ನು ತಿಳಿದಿರುವನೋ ಅವನು ಭಾಗವತರಲ್ಲಿ ಉತ್ತಮನು. ಹಾಗೆ ಆ ಭಗವಂತನನ್ನು ಸರ್ವಶರೀರಕನೆಂದು ತಿಳಿಯದೆ, ಸಾಮಾನ್ಯದೈವವೆಂದು ಭಾವಿಸಿ, ಆ ದೇವತಾಬುದ್ಧಿಯಿಂದ ಅವನಲ್ಲಿ ಪ್ರೇಮವನ್ನೂ, ಅವನ ಆಶ್ರಿತರಾದ ಭಾಗವತರಲ್ಲಿ ಸ್ನೇಹಬುದ್ಧಿಯನ್ನೂ, ಅಜ್ಞರಲ್ಲಿ ಕನಿಕರವನ್ನೂ, ಶತ್ರುಗಳಲ್ಲಿ ಔದಾಸೀನ್ಯವನ್ನೂ ತೋರಿಸುವನೋ, ಅಂತವನು ಭಾಗವತರಲ್ಲಿ ಮಧ್ಯಮನು. ಯಾವನು ಭಗವಂತನ ಅರ್ಚಾರೂಪದಲ್ಲಿಮಾತ್ರ ದೇವತಾಬುದ್ಧಿಯನ್ನಿಟ್ಟು, ಅದಕ್ಕೆ ಶ್ರದ್ಧೆಯಿಂದ ಪೂಜಾದಿಗಳನ್ನೊಪ್ಪಿಸುತ್ತ, ಭಗವದ್ಭಕ್ತರಲ್ಲಿಯೂ, ಗೋವು ಮೊದಲಾದ ಇತರಪ್ರಾಣಿಗಳಲ್ಲಿಯೂ ಅಂತಹಗೌರವಬುದ್ಧಿಯಿಡದಿರುವನೋ, ಅಂತವನು ಮೂಢಭಕ್ತನೆನಿಸುವನು. ಹೀಗಿಲ್ಲದೆ ಯಾವನು, ತನ್ನ ಇಂದ್ರಿಯಗಳಿಂದ ಇಷ್ಟವಿಷಯಗಳನ್ನಾಗಲಿ, ಅನಿಷ್ಟವಿಷಯಗಳನ್ನಾಗಲಿ ಅನುಭವಿಸುವಾಗಲೂ, ಅವುಗಳಲ್ಲಿ ಆಶೆಯನ್ನಾಗಲಿ, ಜಿಹಾಸೆಯನ್ನಾಗಲಿ ತೋರಿಸದೆ, ಅವೆಲ್ಲವೂ ವಿಷ್ಣುಮಾಯೆಯೆಂಬ ಭಾವದಿಂದ, ನಿರ್ವಿಕಾರನಾಗಿರುವನೋ ಅವನು ಭಾಗವತರಲ್ಲಿ ಉತ್ತಮನು. ರಾಜೇಂದ್ರಾ ! ದೇಹಕ್ಕೆ ಉತ್ಪತ್ತಿವಿನಾಶಗಳೂ, ಪ್ರಾಣಕ್ಕೆ ಹಸಿವೂ, ಮನಸ್ಸಿಗೆ ಭಯವೂ, ಬುದ್ಧಿಗೆ ತೃಷ್ಣೆಯೂ, ಇಂದ್ರಿಯಗಳಿಗೆ ಶ್ರಮವೂ, ಸಹಜಧರ್ಮಗಳಾಗಿರುವುವು. ಯಾವ ಮನುಷ್ಯನು ಈ ಪ್ರಾಕೃತಧರ್ಮಗಳಿಂದ ಮೋಹಗೊಳ್ಳದೆ, ಹರಿಧ್ಯಾನಪರನಾಗಿರುವನೋ ಅವನು ಉತ್ತಮಭಕ್ತನು. ಯಾವನು ಮನಸ್ಸಿನಲ್ಲಿ ಕಾಮಕ್ಕೆ ಮೂಲಭೂತಗಳೆನಿಸಿದ ಕರ್ಮಬೀಜಗಳಿಗೆ ಅವಕಾಶವನ್ನು ಕೊಡದೆ, ಆ ಭಗವಂತನನ್ನೇ ಗತಿಯೆಂದು ನಂಬಿರುವನೋ ಅವನು ಉತ್ತಮಭಕ್ತನು. ಯಾವನಿಗೆ ತನ್ನ ಕುಲದಿಂದಾಗಲಿ, ಕರ್ಮಗಳಿಂದಾಗಲಿ, ವರ್ಣಾಶ್ರಮಧರ್ಮಗಳಿಂದಾಗಲಿ, ಜಾತಿಯಿಂದಾಗಲಿ,

ದೇಹದಲ್ಲಿ ಅಹಂಭಾವವು ಹುಟ್ಟದಿರುವುದೋ ಅಂತವನು ಭಗವಂತನಿಗೆ ವಿಶೇಷಪ್ರೇಮಪಾತ್ರನು. ಯಾವನಿಗೆ ತಾನೆಂದೂ, ಇತರರೆಂದೂ ತನ್ನದೆಂದೂ, ಇತರರದೆಂದೂ, ಅಹಂಕಾರಮಮಕಾರದಿಂದುಂಟಾದ ಭೇದಬುದ್ಧಿಯಿಲ್ಲದೆ, ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯೂ, ಮನಶ್ಶಾಂತಿಯೂ ನೆಲೆಗೊಂಡಿರುವುದೋ, ಅಂತವನು ಭಾಗವತೋತ್ತಮನು! ಅನವರತವೂ ಆ ಶ್ರೀಹರಿಯನ್ನೇ ಸ್ಮರಿಸುತ್ತಿರುವ ಬ್ರಹ್ಮಾದಿದೇವತೆಗಳಿಗೂ ಕೂಡ ಯಾವನ ಪಾದಾರವಿಂದವು ದುರ್ಲಭವೆನಿಸಿರುವುದೋ. ಅಂತಹ ಪಾದಾರವಿಂದವೇ ತನಗೆ ಪರಮಪ್ರಾಪ್ಯವೆಂದೂ, ಲೋಕದಲ್ಲಿ ಅದಕ್ಕಿಂತಲೂ ಸಾರವಾದುದು ಬೇರೊಂದಿಲ್ಲವೆಂದೂ ತಿಳಿದು ಯಾವನು ತ್ರೈಲೋಕ್ಯಾಧಿಪತ್ಯವೇ ತನಗೆ ಲಭಿಸುವುದಾದರೂ ಲಕ್ಷ್ಯಮಾಡದೆ, ಆ ಪಾದಾರವಿಂದವನ್ನೇ ನಿರಂತರವೂ ಭಜಿಸುತ್ತ, ನಿಮಿಷಾರ್ಧವೂ ಅದನ್ನು ಬಿಟ್ಟು ಚಲಿಸದಿರುವನೋ, ಅಂತವನು ವೈಷ್ಣವಾಗ್ರಣಿಯೆನಿಸುವನು. ಓ ರಾಜೇಂದ್ರಾ! ಚಂದ್ರೋದಯವಾದಮೇಲೆ ಬಿಸಿಲಿನ ತಾಪದ ಪ್ರಸಕ್ತಿಯೇ ಬಿಟ್ಟುಹೋಗುವಂತೆ, ತ್ರಿವಿಕ್ರಮಮೂರ್ತಿಯಾದ ಭಗವಂತನ ಪಾದನಖಕಾಂತಿಯೆಂಬ ಚಂದ್ರಿಕೆಯು ಯಾವನ ಹೃದಯದಲ್ಲಿ ತಲೆದೋರುವುದೋ, ಅಂತವನ ಮನಸ್ಸಿನಲ್ಲಿ ತಿರುಗಿ ಕಾಮತಾಪದ ಪ್ರಸಕ್ತಿಯೇ ಹುಟ್ಟಲಾರದು. ಅಷ್ಟೇಕೆ? ಮನಃಪೂರ್ವಕವಾಗಿಲ್ಲದಿದ್ದರೂ, ಬಾಯಿತಪ್ಪಿ ಒಂದಾವರ್ತಿ ಆ ಶ್ರೀಹರಿಯ ನಾಮೋಚ್ಚಾರಣವನ್ನು ಮಾಡಿದರೂಕೂಡ, ಸಮಸ್ತ ಪಾಪಗಳೂ ನಾಶಹೊಂದುವುವು. ಅಂತಹ ಶ್ರೀಮನ್ನಾರಾಯಣನ ಪಾದಾರವಿಂದಗಳನ್ನು ಯಾವನು ಭಕ್ತಿಪಾಶದಿಂದ ತನ್ನ ಹೃದಯದಲ್ಲಿ ದೃಢವಾಗಿ ಕಟ್ಟಿ ಹಿಡಿದು ನಿಲ್ಲಿಸುವನೋ, ಅಂತವನು ಭಕ್ತೋತ್ತಮನೆನಿಸುವನು. ಇಲ್ಲಿಗೆ ಎರಡನೆಯ ಅಧ್ಯಾಯವು.

---

ಜನಕಾರ್ಷಭಸಂವಾದವು. ಭಗವನ್ಮಾಯಾಪ್ರಭಾವವು.

ತಿರುಗಿ ಜನಕರಾಜನು ಆ ಮಹರ್ಷಿಗಳನ್ನು ಕುರಿತು “ಓ ಮಹಾತ್ಮರೆ! ಸರ್ವೇಶ್ವರನಾದ ವಿಷ್ಣುವಿನ ಮಾಯೆಯೆಂಬುದು, ಎಂತಹ ಮಾಯಾವಿಗಳ

ನ್ನೂ ಮರುಳುಗೊಳಿಸುವುದು. ಆ ಮಾಯೆಯ ಸ್ವರೂಪವೆಂತದೆಂಬುದನ್ನು ನನಗೆ ತಿಳಿಸಬೇಕು. ಮರಣಶೀಲನಾಗಿ ಸಂಸಾರತಾಪದಲ್ಲಿ ಸಿಕ್ಕಿ ಸಂಕಟ ಪಡುವ ನನಗೆ, ಆ ತಾಪನಿವಾರಣೆಗೆ ಮಹೌಷಧಪ್ರಾಯವಾಗಿ ತಮ್ಮ ಬಾಯಿಂದ ಹೊರಡುತ್ತಿರುವ ಹರಿಕಥಾಮೃತವನ್ನು ಎಷ್ಟುಷ್ಟು ಪಾನಮಾಡಿದರೂ ತೃಪ್ತಿಯಿಲ್ಲದಿರುವುದು. ಆದುದರಿಂದ ನನ್ನಲ್ಲಿ ಕೃಪೆಯಿಟ್ಟು ಆಭಗವನ್ಮಾಯೆಯ ಮಹಿಮೆಯನ್ನು ತಿಳಿಸಬೇಕು." ಎಂದನು. ಆದಕ್ಕೆ ಆ ಮಹರ್ಷಿಗಳಲ್ಲಿ ಮೂರನೆಯವನಾದ ಅಂತರಿಕ್ಷನೆಂಬವನು ಹೀಗೆಂದು ಉತ್ತರವನ್ನು ಹೇಳುವನು. "ರಾಜಾ! ಕೇಳು! ಆತ್ಮನು ಸಹಜವಾಗಿ ಸತ್ವಾದಿಗುಣಗಳಿಲ್ಲದವನು. ಸ್ವಯಂಪ್ರಕಾಶನು. ಶರೀರಸಂಬಂಧವೂ ಇಲ್ಲದೆ ಶುದ್ಧನಾಗಿರತಕ್ಕವನು. ಅಂತಹ ಜೀವಾತ್ಮನು ಸತ್ವಾದಿಗುಣಗಳಿಗೆ ವಶನಾಗುವುದೂ, ಶರೀರಸಂಬಂಧವನ್ನು ಹೊಂದುವುದೂ, ಆ ದೇಹವನ್ನೇ ಆತ್ಮವೆಂದು ಭ್ರಮಿಸುವುದೂ, ಇವೆಲ್ಲವೂ ಭಗವಂತನ ಮಾಯೆಯ ಕಾರ್ಯವೆಂದೇ ತಿಳಿ! ಸರ್ವಸ್ವತಂತ್ರನಾದ ಭಗವಂತನು ಆ ಮಾಯೆಯಿಂದಲೇ ಈ ವಿವಿಧಪ್ರಪಂಚವನ್ನೂ ನಿರ್ಮಿಸುವನು. ಆ ಭಗವನ್ಮಾಯೆಯಿಂದಲೇ ಮನುಷ್ಯನು ಎಚ್ಚರ, ಕನಸು, ನಿದ್ರೆಯೆಂಬ (ಜಾಗರ, ಸ್ವಪ್ನ, ಸುಷುಪ್ತಿಗಳೆಂಬ) ಮೂರವಸ್ಥೆಗಳನ್ನು ಹೊಂದಿರುವನು. ಜಾಗರಾವಸ್ಥೆಯಲ್ಲಿ ಪಂಚೇಂದ್ರಿಯಗಳೂ, ಮನಸ್ಸೂ, ಆತ್ಮಕ್ಕಿಂತಲೂ ಬೇರೆಯಾದ ದೇಹಾದಿಗಳನ್ನು ಆತ್ಮವೆಂದೂ, ಅಸ್ಥಿರಗಳಾದ ಆ ದೇಹಾದಿಗಳನ್ನು ಸ್ಥಿರವೆಂದೂ ಭ್ರಮಿಸುವುವು. ಸ್ವಪ್ನಾವಸ್ಥೆಯಲ್ಲಿ ಬಾಹ್ಯೇಂದ್ರಿಯವ್ಯಾಪಾರಗಳು ಶಾಂತವಾಗುವುದರಿಂದ, ಅಂತಃಕರಣವುಮಾತ್ರ ಸ್ವಪ್ನಶರೀರಾದಿಗಳನ್ನು ಸ್ಥಿರವೆಂದು ಭ್ರಮಿಸುವುದು. ಸುಷುಪ್ತಿಯಲ್ಲಿ ಬಾಹ್ಯಾಭ್ಯಂತರಜ್ಞಾನವೆಲ್ಲವೂ ಅಡಗಿ, ಕರ್ಮವಾಸನಾರೂಪವಾದ ಬೀಜವೊಂದುಮಾತ್ರ ಉಳಿದಿರುವುದು. ಈ ಸುಷುಪ್ತಿದಶೆಯೂ ಪ್ರಕೃತಿಸಂಬಂಧದಿಂದಾದ ಕಾರ್ಯವೇ! ಹೀಗೆ ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರವಸ್ಥೆಗಳೊಡಗೂಡಿದ ಪ್ರತ್ಯಗಾತ್ಮನು, ಪ್ರಕೃತಿಪರಿಣಾಮರೂಪವಾದ ಶರೀರವನ್ನು ಬಿಟ್ಟಾಗ, ದೇಹಸಂಬಂಧಮೂಲಕವಾದ ಆಮೂರವಸ್ಥೆಗಳನ್ನೂ ಅತಿಕ್ರಮಿಸಿದ ಮುಕ್ತಾವಸ್ಥೆಯೆನಿಸುವುದು. ಇದೇ ನಾಲ್ಕನೆಯ

ಅವಸ್ಥೆಯು. ಜೀವನ ಸಹಜಸ್ವರೂಪವು ರಾಗಾದಿದೋಷಗಳಿಲ್ಲದೆ ಪರಿಶುದ್ಧವಾದುದು. ಜಾಗರಾದ್ಯವಸ್ಥಾಭೇದಗಳೂ ಇಲ್ಲದೆ ಒಂದೇ ವಿಧವಾದುದು. ಜ್ಞಾನೈಕಸ್ವರೂಪವೆನಿಸಿರುವುದು. ಹಾಗಿದ್ದರೂ ಆ ಜೀವಾತ್ಮನಿಗೆ ಪ್ರಕೃತಿಪರಿಣಾಮರೂಪವಾದ ದೇಹಸಂಬಂಧವಿದ್ದಾಗ, ಇಂದ್ರಿಯಗಳು, ಅಂತಃಕರಣ, ವಾಸನಾಬೀಜವೆಂಬಿವುಗಳು, ಅವನಿಗೆ ಆ ಜಾಗರಾದ್ಯವಸ್ಥೆಗಳಿರುವಂತೆ ತೋರಿಸುತ್ತಿರುವುವು. ಸ್ವಪ್ನಪದಾರ್ಥಗಳು ಅಸ್ಥಿರಗಳೆನಿಸಿಕೊಂಡಿದ್ದರೂ ಸ್ಥಿರವಾಗಿ ತೋರುವಂತೆ,ಇದೂ ಭ್ರಾಂತಿಯು. ಜ್ಞಾನಸ್ವರೂಪನಾದ ಜೀವನಿಗೆ, ಈವಿಧವಾದ ಸಂಬಂಧವೆಲ್ಲವೂ ಅನಾದಿಕರ್ಮವಾಸನೆಯ ಫಲವಾಗಿರುರುವುದು. ಜೀವನಿಗೆ ಮೇಲೆ ಹೇಳಿದ ಮೂರವಸ್ಥೆಗಳೂ ಸ್ವಾಭಾವಿಕವಾಗಿ ಒಂದುದೂ ಅಲ್ಲ ! ನಿಯತವಾಗಿ ನಿಲ್ಲತಕ್ಕುವೂ ಅಲ್ಲ. ಅವು ನಿತ್ಯವಾಗಿದ್ದಪಕ್ಷದಲ್ಲಿ, ಮುಕ್ತಾವಸ್ಥೆಯಲ್ಲಿಯೂ ಇರಬೇಕಾಗುವುದು ! ಮುಕ್ತಜೀವನಿಗೆ ಈ ಅವಸ್ಥೆಗಳಿಲ್ಲ. ಇದಲ್ಲದೆ ಬದ್ಧದಶೆಯಲ್ಲಿಯೂ ಜೀವನಿಗೆ ಒಂದುವಿಧವಾದ ಅವಸ್ಥೆಯಲ್ಲಿ ಮತ್ತೊಂದವಸ್ಥೆಯು ಕಲೆತಿರಲಾರದು. ಆದುದರಿಂದ ಈ ಅವಸ್ಥೆಗಳೆಲ್ಲವೂ ಜೀವನಿಗೆ ಸ್ವಾಭಾವಿಕಗಳಲ್ಲವೆಂದೂ, ಸ್ವಪ್ನದಲ್ಲಿ ತೋರುವ ಸುಖದುಃಖಗಳಂತೆ, ಇವೂ ಅವರವರ ಕರ್ಮಗಳಿಗೆ ಫಲರೂಪವಾಗಿ ಅನಿತ್ಯವಾಗಿರುವುವೆಂದೂ ತಿಳಿದುಕೊಂಡಾಗ, ಪುರುಷನು ಲೌಕಿಕಗಳಾದ ಅಲ್ಪಸುಖಗಳಿಗಾಗಿ ದುಡಿಯಲಾರನು. ಆದಿಪುರುಷನಾದ ಸರ್ವೇಶ್ವರನು ಸಕಲಭೂತಗಳಲ್ಲಿಯೂ ಅಂತರ್ಯಾಮಿಯಾಗಿದ್ದು, ತನ್ನ ಮಾಯಾಕಾರ್ಯಗಳಾದ ಪೃಥಿವಿ ಮೊದಲಾದ ಸಮಷ್ಟಿಭೂತಗಳಿಂದ, ಸಣ್ಣದೊಡ್ಡ ವಿಭಾಗಗಳುಳ್ಳ ಹಲವು ಬಗೆಯ ಭೂತಗಳನ್ನು ಸೃಜಿಸಿರುವನು ಅದರ ಹೀಗೆ ಕೇವಲಜ್ಞಾನಸ್ವರೂಪಗಳಾದ ಜೀವಗಳಿಗೆ ದೇಹೇಂದ್ರಿಯಾದಿಗಳನ್ನು ಕಲ್ಪಿಸಿ ಸೃಷ್ಟಿಸುವುದರಿಂದ ಫಲವೇನು ? ಎಂದು ಕೇಳುವೆಯಾ ! ತನಗೆ ಶರೀರಭೂತಗಳಾದ ಆ ಜೀವಗಳು, ಆ ಕರಣಕಳೇಬರಾದಿಗಳನ್ನು ಹೊಂದಿ,ಅವುಗಳಿಂದ ತನ್ನನ್ನಾರಾಧಿಸಿ, ಮುಕ್ತಿಯೆಂಬ ಉತ್ತಮಪುರುಷಾರ್ಥವನ್ನು ಪಡೆಯಬೇಕೆಂಬುದೇ ಅವನ ಉದ್ದೇಶವು.

ಹೀಗಿದ್ದಾಗಲೂ ಶರೀರಗಳಲ್ಲಿ ಪ್ರವೇಶಿಸಿದ ಜೀವಾತ್ಮನು, ತನ್ನ ಜ್ಞಾನವನ್ನು ಹತ್ತು ಇಂದ್ರಿಯಗಳಿಗೂ, ಅಂತಃಕರಣಕ್ಕೂ ಅಧೀನವಾಗಿ ಮಾಡಿ, ಶಬ್ದಾದಿವಿಷಯಗಳನ್ನು ಅನುಭವಿಸುವುದರಲ್ಲಿಯೇ ನಿರತನಾಗಿರುವ ನೇಹೊರತು, ಪರಮಪುರುಷನನ್ನು ಆರಾಧಿಸಲಾರನು. ತನ್ನ ದೇಹವನ್ನೇ ಆತ್ಮವೆಂದೂ ಭ್ರಮಿಸುವನು. ಭಗವತ್ಕಲ್ಪಿತಗಳಾದ ಆ ಇಂದ್ರಿಯಗಳಿಂದ ಐಹಿಕಸುಖಗಳಿಗಾಗಿಯೇ ತೊಳಲುತ್ತಿರುವನು. ಈ ವಿಷಯಾನುಭವವು ಮೇಲೆಮೇಲೆ ವಿಷಯಾಭಿಲಾಷೆಯನ್ನೇ ಹೆಚ್ಚಿಸುತ್ತ ಬರುವುದು. ಈ ಸಂಸಾರದಲ್ಲಿ ದೇಹವಿಶಿಷ್ಟನಾದ ಜೀವನು, ಹಿಂದಿನಿಂದ ತನ್ನನ್ನು ಅನುಸರಿಸಿ ಬರುವ ಕರ್ಮವಾಸನೆಯಿಂದಲೇ ಪುಣ್ಯಪಾಪಕರ್ಮಗಳನ್ನು ನಡೆಸುತ್ತ ಬರುವನು. ಆ ಕರ್ಮಗಳೇ ಉತ್ತರೋತ್ತರದೇಹಗಳನ್ನುಂಟುಮಾಡಲು ಕಾರಣಗಳಾಗುವುವು. ಹೀಗೆ ಜೀವನು ಕರ್ಮಗಳನ್ನಾಚರಿಸುತ್ತಲೂ, ಅದಕ್ಕೆ ತಕ್ಕಂತೆ ಸುಖದುಃಖಗಳನ್ನನುಭವಿಸುತ್ತಲೂ, ದುಃಖಪ್ರಚುರವಾದ ಸಂಸಾರದಲ್ಲಿ ಬಿದ್ದು ತೊಳಲುವನು. ಹೀಗೆ ಜೀವನು ಕರ್ಮಾಧೀನವಾಗಿ ಬಂದ ದೇಹಗಳಲ್ಲಿ ಸಿಕ್ಕಿ, ಪ್ರಕೃತಿಗೆ ಪರವಶನಾಗಿ, ಮಹಾಪ್ರಳಯಪರ್ಯಂತವೂ ಜನನಮರಣಗಳನ್ನನುಭವಿಸುತ್ತ ಕ್ಲೇಶಪಡುವನು. ಪಂಚಮಹಾಭೂತಪ್ರಳಯವು ಸಮೀಪಿಸಿದಾಗ, ಆದ್ಯಂತಶೂನ್ಯನಾಗಿಯೂ, ಕಾಲಶರೀರಕನಾಗಿಯೂ ಇರುವ ಪರಮಪುರುಷನು, ಪಂಚಮಹಾಭೂತಗಳಿಂದಲೂ, ಶಬ್ದಾದಿಗುಣಗಳಿಂದಲೂ ನಿರ್ಮಿತವಾಗಿ, ನಾಮರೂಪವಿಭಾಗಗಳಿಂದ ಕೂಡಿದ ಈ ಸ್ಥೂಲಪ್ರಪಂಚವನ್ನೆಲ್ಲಾ, ಆ ನಾಮರೂಪಗಳೊಂದೂ ಇಲ್ಲದ ಸೂಕ್ಷ್ಮರೂಪಕ್ಕೆ ತಿರುಗಿಸಿ, ತಮಸ್ಸೆಂಬ ಅಚಿತ್ತಿನಕಡೆಗೆ ಆಕರ್ಷಿಸಿಡುವುದಕ್ಕಾಗಿ ಸಂಕಲ್ಪಿಸುವನು. ಈ ಸಂಕಲ್ಪಾನುಸಾರವಾಗಿ, ಆಗಲೇ ಭೂಮಿಯಲ್ಲಿ ನೂರುವರ್ಷಗಳವರೆಗೆ ಲೋಕನಾಶಕರವಾದ ಅನಾವೃಷ್ಟಿಯು ತಲೆದೋರುವುದು. ಸೂರ್ಯನ ತಾಪವು ಮೂರುಲೋಕಗಳನ್ನೂ ದಹಿಸುವಂತೆ ಅತಿಪ್ರಬಲವಾಗುವುದು. ಮತ್ತು ಆಗ ಪಾತಾಳದಿಂದ ಸಂಕರ್ಷಣನ ಮುಖಾಗ್ನಿಜ್ವಾಲೆಗಳು ಹೊರಟು, ಪ್ರಚಂಡವಾದ ವಾಯುವಿನ ಸಹಾಯದಿಂದ ಬ್ರಹ್ಮಾಂಡವೆಲ್ಲವನ್ನೂ ವ್ಯಾಪಿಸಿ ದಹಿಸುತ್ತಬರುವುವು.

ಆಮೇಲೆ ಸಾಂವರ್ತಕಗಳೆಂಬ ಪ್ರಳಯಮೇಘಗಳು, ಆನೆಯ ಸುಂಡಿಲಿನಂತಿರುವ ದೊಡ್ಡ ಜಲಧಾರೆಗಳಿಂದ, ನೂರು ವರ್ಷಗಳವರೆಗೆ ಎಡಬಿಡದೆ ಮಹಾವೃಷ್ಟಿಯನ್ನು ಸುರಿಸುವುವು. ಆಗ ಬ್ರಹ್ಮಾಂಡವೆಲ್ಲವೂ ಜಲದಲ್ಲಿ ಮುಳುಗಿ ಹೋಗುವುದು. ಆಗ ಜೀವವರ್ಗಗಳೆಲ್ಲವೂ ಪ್ರಳಯಜಲದಲ್ಲಿ ಲೀನವಾದ ಆ ಬ್ರಹ್ಮಾಂಡವನ್ನು ಬಿಟ್ಟು, ಸೌದೆಯಿಲ್ಲದ ಬೆಂಕಿಯು ಹೇಗೋ ಹಾಗೆ, ಜ್ಞಾನಸಂಕೋಚದಿಂದ ಶಾಂತವಾಗಿ, ಸೂಕ್ಷ್ಮಾವಸ್ಥೆಯಿಂದ ತಮಸ್ಸೆಂಬ ಪ್ರಧಾನದಲ್ಲಿ ಅಡಗಿಹೋಗುವುದು. ಮತ್ತು ಆಗ ಪಂಚಮಹಾಭೂತಗಳಲ್ಲಿ ಒಂದಾದ ಭೂಮಿಯು, ಪ್ರಳಯವಾಯುವಿನಿಂದ ಅಪಹರಿಸಲ್ಪಟ್ಟ ತನ್ನ ಗಂಧಗುಣವುಳ್ಳದಾಗಿ ಜಲದಲ್ಲಿ ಲಯಿಸುವುದು. ಹಾಗೆಯೇ ಆ ಜಲವೂ ವಾಯುವೇಗದಿಂದ ನೀರಸವಾಗಿ, ತೇಜಸ್ಸಿನಲ್ಲಿ ಲಯಿಸುವುದು. ಆ ತೇಜಸ್ಸೂ ಕೂಡ, ಪ್ರಬಲವಾದ ತಮಸ್ಸಿನಿಂದ ತನ್ನ ರೂಪಗುಣವು ಅಪಹರಿಸಲ್ಪಡಲು, ವಾಯುವಿನಲ್ಲಿ ಲಯಿಸುವುದು. ಆ ವಾಯುವೂ ಆಕಾಶದಿಂದ ಅಪಹರಿಸಲ್ಪಟ್ಟ ತನ್ನ ಸ್ಪರ್ಶಗುಣವುಳ್ಳದಾಗಿ, ಆಕಾಶದಲ್ಲಿಯೇ ಉಡುಗಿಹೋಗುವುದು. ಆ ಆಕಾಶವೂ ಕೂಡ ಕಾಲದಿಂದ (ಕಾಲಾತ್ಮಕನಾದ ಈಶ್ವರನಿಂದ) ಅಪಹರಿಸಲ್ಪಟ್ಟ ತನ್ನ ಗುಣವುಳ್ಳದಾಗಿ, ಭೂತಾದಿಯೆಂಬ ತನ್ನ ಕಾರಣದಲ್ಲಿ ಲಯಿಸಿಹೋಗುವುದು. ದಶೇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ, ತಮಗೆ ಅಧಿಷ್ಠಾತೃದೇವತೆಗಳೊಡನೆ, ತಮಗೆ ಕಾರಣಭೂತವೆನಿಸಿದ ಸಾತ್ವಿಕಾಹಂಕಾರವನ್ನು ಪ್ರವೇಶಿಸುವುವು. ಸಾತ್ವಿಕ, ರಾಜಸ, ತಾಮಸಗಳೆಂಬ ಮೂರುಬಗೆಯ ಅಹಂಕಾರಗಳೂ ತಮಗೆ ಕಾರಣವಾದ ಮಹತ್ತಿನಲ್ಲಿ ಸೇರಿ ಹೋಗುವುವು. ಕೊನೆಗೆ ಆ ಮಹತ್ತೂ ತನಗೆ ಕಾರಣವಾದ ಭಗವಂತನ ಮಾಯೆಯಲ್ಲಿ ಲಯಿಸುವುದು. ಈ ಭಗವನ್ಮಾಯೆಯಲ್ಲಿ ಕ್ರಮವಾಗಿ ಸೃಷ್ಟಿಸ್ಥಿತಿಸಂಹಾರಗಳಿಗೆ ಉಪಯುಕ್ತಗಳಾದ, ಕೆಂಪು, ಬಿಳುಪು, ಕಪ್ಪು ಬಣ್ಣವುಳ್ಳ ರಜಸ್ಸತ್ವತಮಸ್ಸುಗಳೆಂಬ ಮೂರುಗುಣಗಳುಂಟು. ರಾಜೇಂದ್ರಾ! ನಾನು ಇದುವರೆಗೆ ಆ ಮಾಯೆಯ ಸ್ವರೂಪವನ್ನೂ, ಕಾರ್ಯಗಳನ್ನೂ ನಿನಗೆ ವಿವರಿಸಿದುದಾಯಿತು. ಮುಂದೆ ಇನ್ನೇನಾದರೂ ಕೇಳಬೇಕಾಗಿದ್ದರೆ ಕೇಳಬಹುದು." ಎಂದನು.

## ಭಾಗವತ ಧರ್ಮಗಳು.

ಆಗ ವಿದೇಹರಾಜನು “ಓ ಮಹರ್ಷಿಗಳೇ! ಇಂದ್ರಿಯಗಳನ್ನು ಜಯಿಸಲಾರದವರಿಗೆ ಆ ಭಗವನ್ಮಾಯೆಯು ದುಸ್ತರವಾಗಿರುವುದಲ್ಲವೆ? ಹಾಗಿದ್ದರೆ ನಮ್ಮಂತವರ ಗತಿಯೇನು? ಮಂದಬುದ್ಧಿಯುಳ್ಳ ನಮ್ಮಂತವರು, ಆ ಈಶ್ವರಮಾಯೆಯನ್ನು ದಾಟುವುದಕ್ಕೆ ಸುಲಭವಾದ ಬೇರೆ ಯಾವುದಾದರೂ ಉಪಾಯವಿದ್ದರೆ ಅದನ್ನು ತಿಳಿಸಬೇಕು” ಎಂದನು. ಅದಕ್ಕೆ ಪ್ರಬುದ್ಧನೆಂಬವನು ಹೀಗೆಂದು ಉತ್ತರವನ್ನು ಹೇಳುವನು. “ಓ ರಾಜೇಂದ್ರಾ! ಕೇಳು! ಲೋಕದಲ್ಲಿ ಕುಟುಂಬಿಗಳಾದವರು, ತಮ್ಮ ದುಃಖನಿವೃತ್ತಿಯನ್ನೂ, ಸುಖಪ್ರಾಪ್ತಿಯನ್ನೂ ಉದ್ದೇಶಿಸಿಯೇ ವಿವಿಧ ಕರ್ಮಗಳನ್ನಾಚರಿಸುವರು ಆದರೇನು? ಕೊನೆಗೆ ಆ ಕರ್ಮಗಳಿಂದ ಅವರು ತಮ್ಮ ಉದ್ದೇಶಕ್ಕೆ ವಿರುದ್ಧವಾಗಿ, ದುಃಖಪ್ರಾಪ್ತಿಯನ್ನೇ ಹೊಂದುವರು. ಅವರು ಮರಣವನ್ನೂ ಲಕ್ಷ್ಯಮಾಡದೆ ದೇಹವನ್ನು ದಂಡಿಸಿ, ಎಷ್ಟೋ ಕಷ್ಟಪಟ್ಟು, ದುರ್ಲಭವಾದ ಧನವನ್ನು ಗಳಿಸಿಟ್ಟರೂ, ಆ ಧನದಿಂದಾಗಲಿ, ಆಹಣದಿಂದ ಪೋಷಿಸಲ್ಪಡುವ ಮನೆಮಂದಿಮಕ್ಕಳಿಂದಾಗಲಿ, ಅವರಿಗೆ ಲವಮಾತ್ರವೂ ಸುಖವಿಲ್ಲ. ಇವೆಲ್ಲವೂ ಅಶಾಶ್ವತಗಳು. ಈ ಲೋಕದಲ್ಲಿ ಈ ಗೃಹಧನಾದಿಗಳಿಂದುಂಟಾಗುವ ಸುಖವು ಕ್ಷಣಿಕವಾಗಿ, ಕೊನೆಗೆ ದುಃಖನಿಮಿತ್ತವೇ ಆಗುವಂತೆ, ಯಜ್ಞಾದಿಕರ್ಮಗಳಿಂದ ಲಭಿಸತಕ್ಕ ಪಾರಲೌಕಿಕ ಸುಖವೂ ಅನಿತ್ಯವೇ! ಇದರಿಂದ ಮುಖ್ಯವಾಗಿ ಕರ್ಮಪ್ರಾಪ್ತವಾದ ಫಲವೆಲ್ಲವೂ ಅಶಾಶ್ವತಗಳೆಂದು ಸ್ಪಷ್ಟವಾಗುವುದು. ಮಂಡಲಾಧೀಶ್ವರರ ಸುಖದಲ್ಲಿ ಹೇಗೋಹಾಗೆ, ಈ ಸುಖಗಳಲ್ಲಿ ಸರ್ವೋತ್ತಮವಾದ ಅತಿಶಯವಾಗಲಿ, ಸಮೂಲವಾದ ನಾಶವಾಗಲಿ ಎರಡೂ ಸಮಾನವೇ! ಈ ಐಹಿಕ ಸುಖಗಳಲ್ಲಿ ಯಾವಾಗಲೂ ಮನಸ್ಸಿಗೆ ನೆಮ್ಮದಿಯಿರದು. ಈ ಸುಖದಲ್ಲಿ ತನಗೆ ಸಮಾನರಾದ ಬೇರೊಬ್ಬರನ್ನು ನೋಡಿದಾಗ ಮನಸ್ಸು ಈರ್ಷೆಯಿಂದ ಕುದಿಯುವುದು. ತನಗಿಂತಲೂ ಮೇಲಾದವರನ್ನು ನೋಡಿದಾಗ ತನ್ನ ಸ್ಥಿತಿಯಲ್ಲಿ ಅತೃಪ್ತಿಯು ತೋರುವುದು. ತನಗಿದ್ದ ಆ ಸುಖವೂ ನಷ್ಟವಾದಾಗ ಮಿತಿಮೀರಿ ಸಂಕಟಪಡಬೇಕಾಗುವುದು. ಐಹಿಕಸುಖಗಳ ಸ್ಥಿತಿಯು

ಹೀಗಿರುವುದರಿಂದ, ಅವುಗಳಲ್ಲಿ ಆಸೆಯನ್ನು ಬಿಟ್ಟು, ಉತ್ತಮವಾದ ಶ್ರೇಯಸ್ಸನ್ನೂ, ಅದಕ್ಕೆ ಸಾಧನವನ್ನೂ ತಿಳಿಯುವುದಕ್ಕಾಗಿ, ವೇದಪಾರಂಗತನಾಗಿಯೂ, ಬ್ರಹ್ಮಜ್ಞಾನಿಯಾಗಿಯೂ, ರಾಗದ್ವೇಷಾದಿದೋಷಗಳಿಲ್ಲದವನಾಗಿಯೂ ಇರುವ ಆಚಾರ್ಯನಲ್ಲಿ ಶರಣಾಗತಿಯನ್ನು ಮಾಡಬೇಕು. ಆ ಗುರುವನ್ನೇ ಪರದೈವವೆಂದು ಭಾವಿಸಿ, ನಿಷ್ಕಪಟವಾದ ಸೇವೆಯಿಂದ ಅವನನ್ನು ಸಂತೋಷಪಡಿಸುತ್ತ, ಅವನಿಂದ ಭಾಗವತಧರ್ಮಗಳನ್ನು ಅಭ್ಯಸಿಸಬೇಕು. ಈ ಧರ್ಮಗಳಿಂದ ಭಗವಂತನು, ಭಕ್ತರಿಗೆ ತನ್ನನ್ನೇ ಕೊಟ್ಟುಬಿಡುವಷ್ಟು ಪ್ರಸನ್ನನಾಗುವನು. ರಾಜಾ ! ಆ ಭಾಗವತಧರ್ಮಗಳನ್ನೇ ನಿನಗೆ ವಿವರಿಸಿ ತಿಳಿಸುವೆನು ಕೇಳು ! ಮೊದಲು ತನ್ನ ದೇಹದಲ್ಲಿಯೂ, ದೇಹಾನುಬಂಧಿಗಳಲ್ಲಿಯೂ ವಿಶೇಷಸಂಗವನ್ನು ತ್ಯಜಿಸಿ, ಹೆಚ್ಚಾಗಿ ಸಾಧುಗಳ ಸಹವಾಸದಲ್ಲಿರುವುದು! ಸಮಸ್ತಭೂತಗಳಲ್ಲಿಯೂ, ವಿಶೇಷವಾಗಿ ದೀನರಲ್ಲಿಯೂ ದಯೆ, ಸಮಾನರಲ್ಲಿ ಮೈತ್ರಿ, ಹಿರಿಯರಲ್ಲಿ ನಮ್ರತೆ, ಬಾಹ್ಯಾಭ್ಯಂತರಶುದ್ಧಿ ! ತಮ್ಮ ವರ್ಣಾಶ್ರಮಧರ್ಮಗಳನ್ನು ಬಿಡದೆ ನಡೆಸುವುದು! ತಪಸ್ಸು! ಶೀತೋಷ್ಣ ಸುಖದುಃಖಾದಿದ್ವಂದ್ವಗಳನ್ನು ಸಮಾನಬುದ್ಧಿಯಿಂದ ಸಹಿಸಿಕೊಳ್ಳುವುದು ! ವೇದಾಧ್ಯಯನಮಾಡುವುದು! ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿಯೂ ಒಂದೇ ವಿಧವಾಗಿರತಕ್ಕ ಆರ್ಜವಗುಣ, ಋತುಕಾಲದಲ್ಲಿಹೊರತು ಇತರಕಾಲದಲ್ಲಿ ಸ್ತ್ರೀಸಂಗವಿಲ್ಲದ ಬ್ರಹ್ಮಚರ್ಯೆ, ಅಹಿಂಸೆ, ಸಮಸ್ತಚರಾಚರಗಳಲ್ಲಿಯೂ ಪರಮಾತ್ಮನು ಅಂತರ್ಗತನಾಗಿರುವನೆಂಬ ತಿಳಿವಳಿಕೆ, ಪರಿಗ್ರಹಗಳೊಂದೂ ಇಲ್ಲದೆ ತಾನೊಬ್ಬನೇ ಏಕಾಕಿಯಾಗಿರುವುದಕ್ಕೆ ಯತ್ನಿಸುವುದು, ಗೃಹಾದಿಗಳಲ್ಲಿ ಮೋಹವನ್ನು ಬಿಡುವುದು, ಶುದ್ಧವಾದ ವಲ್ಕಲಗಳನ್ನುಡುವುದು, ದೈವಲಬ್ಧವಾದುದರಲ್ಲಿ ತೃಪ್ತಿ, ಭಗವಂತನವಿಷಯವಾದ ಗ್ರಂಥಗಳಲ್ಲಿ ಆಸಕ್ತಿ, ದೇವತಾಂತರಗಳಲ್ಲಿ ವಿಮುಖತೆ,ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ದಂಡಿಸಿ,ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವುದು, ಸಮಸ್ತ ಭೂತಗಳಿಗೂ ಹಿತವನ್ನೇ ನುಡಿಯುವುದು,ಅಂತರಿಂದ್ರಿಯವನ್ನು ನಿಗ್ರಹಿಸತಕ್ಕ ಶಮೆ, ಬಾಹ್ಯೇಂದ್ರಿಯಗಳನ್ನು ನಿಗ್ರಹಿಸುವ ದಮೆ, ಭಗವಂತನಾದ ಶ್ರೀಹರಿಯ ಜನ್ಮಕರ್ಮಗುಣಾದಿಗಳನ್ನು ಅನವರತವೂ

ಕಿವಿಯಿಂದ ಕೇಳುವುದು,ಬಾಯಿಂದ ಕೊಂಡಾಡುವುದು,ಮನಸ್ಸಿನಿಂದ ಧ್ಯಾ ನಿಸುವುದು, ಸಕಲಕಾರ್ಯಗಳನ್ನೂ ಭಗವದರ್ಪಣರೂಪವಾಗಿಯೇ ನಡೆಸುವು ದು,ತಾನು ಮಾಡತಕ್ಕ ಯಜ್ಞ, ದಾನ, ತಪಸ್ಸು, ಮುಂತಾದ ಸತ್ಕರ್ಮಗ ಳನ್ನೂ, ಪುತ್ರಕಳತ್ರಗೃಹಾದಿಗಳನ್ನೂ,- ಕೊನೆಗೆ ತನ್ನ ಪ್ರಾಣಗಳನ್ನೂ ಆ ಪರಮಪುರುಷನಲ್ಲಿಯೇ ನಿವೇದಿಸುವುದು. ಆ ಶ್ರೀಹರಿಯನ್ನೇ ತನಗೆ ಗತಿಯೆಂದು ನಂಬಿದ ಸಾಧುಗಳಲ್ಲಿ ಮೈತ್ರಿ, ಚರಾಚರಗಳಾದ ಸಮಸ್ತ ಭೂತಗಳಲ್ಲಿಯೂ ಗೌರವಬುದ್ಧಿ, ಸಾಧುಗಳೊಡನೆ ಕಲೆತು ಭಗವದ್ಗುಣಗ ಳನ್ನು ಕೊಂಡಾಡುವುದು, ಆ ಭಗವದ್ಗುಣಗಳಲ್ಲಿ ವಿಶೇಷಾನುರಾಗದಿಂ ದಲೂ, ಆ ಗುಣಾನುಭವದಿಂದುಂಟಾದ ಮನಸ್ತುಷ್ಟಿಯಿಂದಲೂ, ಮನಸ್ಸಿ ನಲ್ಲಿ ಹುಟ್ಟಿದ ಆಧ್ಯಾತ್ಮಿಕಾದಿತಾಪಗಳನ್ನು ನೀಗಿಸುವುದು, ಆ ಭಗವಂತ ನಲ್ಲಿ ಹುಟ್ಟಿದ ಕ್ರಮಕ್ರಮವಾದ ಭಕ್ತಿಪರಿಪಾಕದಿಂದ ಮೈಯಲ್ಲಿ ರೋಮಾಂಚವನ್ನು ಹೊಂದುವುದು, ಆ ಭಗವಂತನನ್ನು ಮನಸ್ಸಿನಲ್ಲಿ ನೆನೆಸಿಕೊಂಡಾಗ ಮೈಮರೆತು, ಲೋಕವಿಲಕ್ಷಣವಾದ ಚೇಷ್ಟೆಗಳಿಂದ, ಒಮ್ಮೆ ಅಳುವುದು, ಒಮ್ಮೆ ನಗುವುದು, ಒಮ್ಮೆ ಆನಂದಿಸುವುದು, ಬಾಯಿಗೆ ಬಂದಹಾಗೆ ಆ ಭಗವದ್ವಿಷಯವಾದ ಮಾತುಗಳನ್ನಾಡುವುದು, ಒಮ್ಮೆ ಹಾಡುವುದು, ಕುಣಿಯುವುದು, ಹೀಗೆ ಆ ಭಗವಂತನ ಸ್ವರೂಪಸ್ವಭಾವಾ ದಿಗಳನ್ನು ಮನಸ್ಸಿನಲ್ಲಿ ಮನನಮಾಡುತ್ತ ಆನಂದಪರವಶನಾಗುವುದು ; ಇವೆಲ್ಲವೂ ಭಾಗವತಲಕ್ಷಣಗಳು. ಮೇಲೆ 'ಹೇಳಿದ ಭಾಗವತಧರ್ಮಗಳನ್ನು ಹಿಡಿದು ಆ ಶ್ರೀಹರಿಯನ್ನಾರಾಧಿಸುವುದರಿಂದ, ಅಜ್ಞನಾದವನೂ ಆ ಭಗ ವನ್ಮಾಯೆಯನ್ನು ದಾಟಿ ಮುಕ್ತಿಯನ್ನು ಪಡೆಯಬಹುದು ಎಂದನು.

## ಆತ್ಮಪರಮಾತ್ಮಸ್ವರೂಪವು.

ಆಮೇಲೆ ಜನಕನು ತಿರುಗಿ ಆ ಮುನಿಗಳನ್ನು ಕುರಿತು “ಓ ಮಹಾ ತ್ಮರೆ! ನೀವು ಬ್ರಹ್ಮವಿದರಲ್ಲಿ ಮೇಲೆನಿಸಿದವರಾದುದರಿಂದ, ನಾರಾಯಣ ಶಬ್ದವಾಚ್ಯನಾದ ಆ ಪರಬ್ರಹ್ಮದ ಸ್ವರೂಪನಿಶ್ಚಯವನು ನನಗೆ ತಿಳಿಸಬೇಕು” ಎಂದನು. ಆದಕ್ಕೆ ಪಿಪ್ಪಲಾಯನನು “ಓ ರಾಜೇಂದ್ರಾ! ಜಗತ್ತಿನ ಸೃಷ್ಟಿಸ್ಥಿತಿಲಯಗಳೆಲ್ಲಕ್ಕೂ ತಾನೇ ಕಾರಣನಾಗಿ, ತನಗೆ ಮ

ತ್ತೊಂದು ಕಾರಣವಸ್ತುವಿಲ್ಲದೆ, ಜೀವನಿಗೆ ಜಾಗರಸ್ವಪ್ನಸುಷುಪ್ತಿಯೆಂಬ ಮೂರವಸ್ಥೆಗಳಲ್ಲಿಯೂ, ಮುಕ್ತದಶೆಯಲ್ಲಿಯೂ ಅಂತರ್ಯಾಮಿಯಾಗಿರತಕ್ಕವನೇ ಪರಬ್ರಹ್ಮನು. ದೇಹ, ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಇವೆಲ್ಲವೂ,ಯಾವನ ಪ್ರೇರಣೆಯಿಂದಲೇ ತಮ್ಮ ಕೆಲಸಗಳನ್ನು ಮಾಡುವುವೋ, ಆ ವಸ್ತುವೇ ಪರಬ್ರಹ್ಮವೆಂದು ತಿಳಿ! ಅದರ ಸ್ವರೂಪವು ಮನಸ್ಸಿಗೂ, ವಾಕ್ಕಿಗೂ ಅಗೋಚರವಾದುದು. ಕಣ್ಣೂ, ಬೇರೆ ಇಂದ್ರಿಯಗಳೂ, ಪ್ರಾಣಗಳೂ, ಜೀವನೂ, ಅಗ್ನಿಗೆ ಜ್ವಾಲೆಗಳು ಹೇಗೋಹಾಗೆ ಆ ಬ್ರಹ್ಮನಿಗೆ ವಿಶೇಷಣಭೂತಗಳಾಗಿರುವುವೇ ಹೊರತು, ಅವು ಆಪರಬ್ರಹ್ಮನನ್ನು ಪ್ರಕಾಶಗೊಳಿಸಲಾರವು. ಪರಮಾತ್ಮನ ವಿಷಯವನ್ನು ತಿಳಿಸುವುದಕ್ಕೆ ಪ್ರಮಾಣಭೂತಗಳೆನಿಸಿಕೊಂಡ ವೇದಾಂತವಾಕ್ಯಗಳೂಕೂಡ "ನ ಚಕ್ಷುಷಾ ದೃಶ್ಯತೇ" "ನಾಪಿ ವಾಚಾ" ಎಂದು,ಆ ಬ್ರಹ್ಮನನ್ನು ವಾಙ್ಮನಸಾಗೋಚರನೆಂದೇ ಬೋಧಿಸುವುವು "ಪ್ರಮಾಣಭೂತವಾದ ವೇದವಾಕ್ಯವೇ ಹೀಗೆ ಇಂದ್ರಿಯಗಳಿಗೆ ಅಗೋಚರನೆಂದು ನಿಷೇಧಿಸುವಾಗ, ಪರಬ್ರಹ್ಮವೆಂಬ ವಸ್ತುವೊಂದು ಉಂಟೆಂಬುದು ಹೇಗೆ?" ಎಂದು ನೀನು ಶಂಕಿಸಬಾರದು. ಒಂದು ವಸ್ತುವಿದ್ದಾಗಲೇ ಅದರ ವಿಷಯವು "ತಿಳಿಯ" ದೆಂಬ ನಿಷೇಧವಾಕ್ಯವೂ ಪ್ರವರ್ತಿಸಬಹುದಲ್ಲದೆ, ಇಲ್ಲದ ವಸ್ತುವನ್ನು ಕುರಿತು ನಿಷೇಧವಾಕ್ಯವೂ ಪ್ರವರ್ತಿಸಲಾರದು. ಆದುದರಿಂದ ಬ್ರಹ್ಮವಿಲ್ಲದಿದ್ದಪಕ್ಷದಲ್ಲಿ ಅದರ ವಿಷಯವಾಗಿ ಬೋಧಿಸತಕ್ಕ ನಿಷೇಧವಾಕ್ಯವು ಹುಟ್ಟುವುದಕ್ಕೂ ಅವಕಾಶವಿಲ್ಲವು ಈ ಕಾರಣಗಳಿಂದ ಪರಬ್ರಹ್ಮವೆಂಬ ವಸ್ತುವೊಂದು ಉಂಟೆಂಬುದೂ, ಅದರ ಸ್ವರೂಪಸ್ವಭಾವಗಳನ್ನು ತಿಳಿಯುವುದುಮಾತ್ರ ಅಸಾಧ್ಯವೆಂದೂ ಅರ್ಥಸಿದ್ಧವಾಗುವುದು. ಸತ್ವ, ರಜಸ್ಸು, ತಮಸ್ಸೆಂಬ ಮೂರುಗುಣಗಳನ್ನೊಳಕೊಂಡ ಪ್ರಧಾನವೆಂಬ ತತ್ವವು, ಪ್ರಾಪಂಚಿಕವಾದ ಸಮಸ್ತಕಾರ್ಯವರ್ಗಗಳಿಗೂ ಆಧಾರಸೂತ್ರದಂತಿರುವುದು. ಅದರ ಕಾರ್ಯರೂಪಗಳೆನಿಸಿಕೊಂಡ, ಮಹದಹಂಕಾರಗಳೂ, ಅವುಗಳಿಂದ ಮುಂದೆ ಹುಟ್ಟತಕ್ಕ ಪೃಥಿವಿ ಮೊದಲಾದ ಕಾರ್ಯಗಳೂ, ತತ್ವಗಳೆಂದೇ ನಿರೂಪಿಸಲ್ಪಟ್ಟಿರುವುವು. ವಿಷಯೇಂದ್ರಿಯಗಳ ಸಂಬಂಧದಿಂದ ಜನ್ಮವನ್ನೆತ್ತಿ ಸುಖದುಃಖಾದಿ

ಗಳನ್ನನುಭವಿಸುತ್ತಿರುವವನೇ ಜೀವಾತ್ಮನು ! ಈಮೇಲೆ ಹೇಳಿದ ಚೇತ ನಾಚೇತನಗಳೆರಡೂ ಅಚಿಂತ್ಯಶಕ್ತಿಯಾದ ಆ ಬ್ರಹ್ಮನ ಶರೀರ ವೇ ಎಂದು ಪ್ರಮಾಣಗಳಿಂದ ತಿಳಿದುಬರುವುದು. ಆ ಪರಬ್ರಹ್ಮವೆಂ ಬುದು ಮೇಲೆಹೇಳಿದ ಚೇತನಾಚೇತನಗಳಿಗಿಂತಲೂ ವಿಲಕ್ಷಣವೆನಿಸಿರುವುದು. ಮೇಲೆ ಹೇಳಿದ ಚೇತನಾಚೇತನಗಳಲ್ಲಿ ಜೀವನಿಗೆ ಹುಟ್ಟಿಲ್ಲ! ಬೆಳೆವಳಿಕೆಯಿ ಲ್ಲ! ಕ್ಷಯವಿಲ್ಲ ! ಆದುದರಿಂದ ಮರಣವೂ ಇಲ್ಲ ! ಈ ವಿಕಾರಗಳೆಲ್ಲವೂ ದೇ ಹಕ್ಕೆ ಮಾತ್ರವೇ ! ಆತ್ಮನು ದೇಹಕ್ಕೆ ಮೊದಲೂ, ದೇಹವಿರುವಾಗಲೂ, ಆದೇಹವು ಹೋದಮೇಲೆಯೂ ಇರತಕ್ಕವನಾದುದರಿಂದ ನಿತ್ಯನು. ಆ ಚೇತನನಿಗೆ ಜ್ಞಾನವೊಂದೇ ಸ್ವರೂಪವಾದುದರಿಂದ, ಆ ಸ್ವರೂಪಕ್ಕೆ ಎಲ್ಲಿ ಯೂ ಯಾವಾಗಲೂ ವಿಕಲ್ಪವಿಲ್ಲ. “ಆದರೆ, ಕಣ್ಣು, ಕಿವಿ, ಮುಂತಾದುವು ಗಳಿಗೆ ಸಂಬಂಧಿಸಿದ ಜ್ಞಾನಕ್ಕೆ ಪರಸ್ಪರಭೇದ ವುಂಟಲ್ಲವೆ?” ಎಂದರೆ,ಪ್ರಾ ಣವೆಂಬುದೊಂದೇ, ವ್ಯಾಪಾರಭೇದದಿಂದ ಅಪಾನಾದಿಭೇದಗಳಾಗಿ ವಿಕಲ್ಪಿ ತವಾಗಿರುವಂತೆ, ಕಣ್ಣುಮೊದಲಾದ ಇಂದ್ರಿಯಗಳ ಜ್ಞಾನವೂ, ಅವುಗಳ ವ್ಯಾಪಾರಭೇದದಿಂದ ಬೇರ್ಪಡುವುವು. ಜೀವನ ಸ್ವರೂಪಭೂತವಾದ ಜ್ಞಾನಕ್ಕೆ ಈ ವಿಕಲ್ಪಗಳಿಲ್ಲ. ಆ ಜೀವನು ನಿರ್ವಿಕಾರವಾದ ಒಂದೇಸ್ವರೂ ಪದಿಂದ, ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜಗಳೆಂಬ ನಾನಾವಿಧ ಶರೀರಗಳಲ್ಲಿಯೂ ಪ್ರವೇಶಿಸಿ, ಪ್ರಾಣಗಳಮೂಲಕವಾಗಿ ಅವುಗಳಿಗೆ ಧಾರ ಕನಾಗಿರುವನು.ಆ ಆತ್ಮಸ್ವರೂಪವುಮಾತ್ರ ಎಲ್ಲರಿಗೂ ಸ್ಫುಟವಾಗಿ ಕಾಣಿಸ ಲಾರದು. ಇಂದ್ರಿಯಸಮೂಹಗಳನ್ನೂ, ಅಹಂಕಾರಮಮಕಾರಾದಿ ಮನೋವ್ಯಾಪಾರಗಳನ್ನೂ ಅಡಗಿಸಿದಮೇಲೆ, ನಮಗೆ ನಮ್ಮ (ಆತ್ಮನ) ಯಥಾವಸ್ಥಿತಸ್ವರೂಪವು ವ್ಯಕ್ತವಾಗುವುದು. “ಹಾಗಿದ್ದರೆ ಆ ಅಹಂ ಕಾರಾದಿಮನೋವ್ಯಾಪಾರಗಳನ್ನು ಅಡಗಿಸುವುದು ಹೇಗೆ?” ಎಂದು ಕೇಳು ವೆಯಾ? ಹೆಂಡಿರು, ಮಕ್ಕಳು, ಹಣ, ಮುಂತಾದುವುಗಳಲ್ಲಿ ಆಸೆಯೆಂಬ ಈ ಷಣತ್ರಯವನ್ನೂ ಪರಿತ್ಯಜಿಸಿ, ಭಗವಂತನ ಪಾದಾರವಿಂದಗಳಲ್ಲಿಯೇ ಆಸಕ್ತನಾಗಿ, ಆದರಿಂದುಂಟಾದ ಭಕ್ತಿಪರಿಪಾಕದಿಂದ, ಸತ್ವಾದಿಗುಣ ಮೂಲಕಗಳಾದ ಪುಣ್ಯಾಪುಣ್ಯಕರ್ಮಗಳ ದೆಸೆಯಿಂದುಂಟಾಗುವ ರಾಗದ್ವೇ

ಷಗಳೇ ಮೊದಲಾದ ದೋಷಗಳನ್ನು ನೀಗಿದರೆ, ಆಗ,ಶುದ್ಧವಾದ ಆ ಮನಸ್ಸಿನಲ್ಲಿ, ನೇತ್ರೇಂದ್ರಿಯ ಪಾಟವವುಳ್ಳವನಿಗೆ ಸೂರ್ಯಪ್ರಕಾಶವು ಹೇಗೋ ಹಾಗೆ, ಆತ್ಮಸ್ವರೂಪವು ತಾನಾಗಿ ತಿಳಿಯುವುದು" ಎಂದನು.

## ಕರ್ಮಯೋಗಸ್ವರೂಪವು

ಆಮೇಲೆ ವಿದೇಹನು "ಓ ಮಹಾತ್ಮರೆ! ನನಗೆ ಭಗವದಾರಾಧನಾತ್ಮಕವಾದ ಕರ್ಮಯೋಗವನ್ನು ವಿವರಿಸಿ ತಿಳಿಸಬೇಕು. ಈ ಕರ್ಮಯೋಗದಿಂದ ಸಂಸ್ಕರಿಸಲ್ಪಟ್ಟವನು, ಭಕ್ತಿವಿರೋಧಿಗಳಾದ ಪಾಪಪುಣ್ಯಕರ್ಮಗಳೆಲ್ಲವನ್ನೂ ಕಳೆದುಕೊಂಡು, ಪರಭಕ್ತಿಯನ್ನು ಹೊಂದಬಹುದಲ್ಲವೆ? ಹೀಗೆ ಕರ್ಮದಿಂದಲೇ ಕರ್ಮಕ್ಷಯವೆಂಬುದು ಹೇಗೆ? ಈಗ ನಾನು ನಿಮ್ಮಲ್ಲಿ ಕೇಳುತ್ತಿರುವ ಈ ಕರ್ಮಯೋಗದ ವಿಚಾರವನ್ನೇ, ಹಿಂದೆ ನಿಮ್ಮ ತಂದೆಯಾದ ಇಕ್ಷ್ವಾಕುವಿನ ಸಮ್ಮುಖದಲ್ಲಿ, ಸನಕಾದಿಮಹರ್ಷಿಗಳನ್ನು ಕೇಳಿದೆನು. ಆ ಬ್ರಹ್ಮಪುತ್ರರು ನನಗೆ ಅದನ್ನು ತಿಳಿಸದೆ ಹೋದರು. ಹಾಗೆ ತಿಳಿಸದಿರುವುದಕ್ಕೆ ಕಾರಣವೇನೆಂಬುದನ್ನೂ ನನಗೆ ಹೇಳಬೇಕು." ಎಂದನು. ಅದಕ್ಕೆ ಆವಿರ್ಹೋತ್ರನೆಂಬವನು "ರಾಜಾ! ಕೇಳು! ಕರ್ಮಗಳಲ್ಲಿ ಕಾಮ್ಯಕರ್ಮವೆಂದೂ, ಕೇವಲ ಜ್ಞಾನಪ್ರಧಾನವಾಗಿ ಫಲಾಪೇಕ್ಷೆಯಿಲ್ಲದೆ ನಡೆಸುವ ಅಕರ್ಮವೆಂದೂ, ನಿಷಿದ್ಧಕರ್ಮವೆಂದೂ ಮೂರುವಿಭಾಗಗಳುಂಟು. ಇದು ವೇದವಿಹಿತವಾದ ನಿರ್ಣಯವೇಹೊರತು ಲೌಕಿಕವಾದುದಲ್ಲ! ವೇದವೆಂಬುದು ಸರ್ವೇಶ್ವರನ ಅಭಿಪ್ರಾಯರೂಪವೇ ಆದುದರಿಂದಲೂ, ಅದರಲ್ಲಿ ನಿರೂಪಿಸಲ್ಪಟ್ಟ ಈ ಕರ್ಮಾದಿಗಳಲ್ಲಿ ತಿಳಿಯಬೇಕಾದ ಸೂಕ್ಷ್ಮಾಂಶಗಳು ಬಹಳ ದುರವಗಾಹವಾಗಿಯೂ, ವಿಶೇಷವಾಗಿಯೂ ಇರುವುದರಿಂದಲೂ, ವಿದ್ವಾಂಸರೂ ಅವುಗಳ ತತ್ವವನ್ನು ತಿಳಿಯಲಾರದೆ ಮೋಸಹೋಗುವರು. ಆದುದರಿಂದ ಆಗ ಬಾಲನಾಗಿದ್ದ ನಿನಗೆ ಸನಕಾದಿಮುನಿಗಳು ಅದನ್ನು ಹೇಳದೆ ಹೋದರು. ವೇದಗಳು ಮನುಷ್ಯರಿಗೆ ಹಿತಾಹಿತಗಳನ್ನು ತಿಳಿಸತಕ್ಕವುಗಳಾಗಿಯೇ ಇದ್ದರೂ, ಆದರಲ್ಲಿ "ಯಜೇತ ಸ್ವರ್ಗಕಾಮಃ" "ಸ್ವರ್ಗಸುಖವನ್ನು ಬಯಸುವವನು ಯಾಗಮಾಡಬೇಕು" ಇತ್ಯಾದಿವಾಕ್ಯಗಳ ಅರ್ಥವು ಬಹಳ ಗೂಢವಾಗಿರುವುದು. ಈ ವಾಕ್ಯಗಳಲ್ಲಿ

ಹೇಳಲ್ಪಟ್ಟ ಫಲವೂ ನಮಗೆ ಪ್ರತ್ಯಕ್ಷವಾ ಗೋಚರಿಸತಕ್ಕವುಗಳಲ್ಲ. ಅವುಗಳ ಅರ್ಥವೂ ವಾಚ್ಯವಾಗಿ ತೋರತಕ್ಕುದಲ್ಲ. ಅವುಗಳ ಫಲವು ಪರೋಕ್ಷವಾಗಿರುವಂತೆ, ಅರ್ಥವೂ ಪರೋಕ್ಷವೇ ಆದುದರಿಂದ, ಅದರ ಅಭಿಪ್ರಾಯವನ್ನು ಸುಲಭವಾಗಿ ತಿಳಿಯುವುದು ಕಷ್ಟವು. ವೈದ್ಯನು ಸಣ್ಣಮಕ್ಕಳಿಗೆ ಲಡ್ಡು ಮೊದಲಾದ ಮಧುರಪದಾರ್ಥಗಳ ಆಸೆಯನ್ನು ತೋರಿಸಿ, ಔಷಧವನ್ನು ಕುಡಿಸಿಬಿಡುವನೇ ಹೊರತು, ಆಮೇಲೆ ಅನಾರೋಗ್ಯಕರಗಳಾದ ಆ ಪದಾರ್ಥಗಳನ್ನು ಮರೆಸಿಟ್ಟು, ಅವುಗಳನ್ನು ಆರೋಗ್ಯದಲ್ಲಿರಿಸುವನಲ್ಲವೆ? ಅದರಂತೆಯೇ ಪರಮದಯಾಳುವಾದ ಭಗವಂತನು, ವೇದವಾಕ್ಯಗಳ ಮೂಲಕವಾಗಿ, ಸ್ವರ್ಗದಲ್ಲಿ ರಂಭಾಸಂಭೋಗವೇ ಮೊದಲಾದ ಫಲಗಳುಂಟಾಗುವುದಾಗಿ ಆಸೆಯನ್ನು ತೋರಿಸಿ, ಕರ್ಮಾಚರಣೆಗೆ ಪ್ರೋತ್ಸಾಹವನ್ನುಂಟುಮಾಡುವನು. ಆ ಕರ್ಮಗಳೇ ಭಕ್ತಿಯೋಗಕ್ಕೆ ಸಾಧಕಗಳಾಗಿ, ಅದರಿಂದ ಕರ್ಮಕ್ಷಯವಾಗುವಂತೆ ಮಾಡುವನು. ಆ ಕರ್ಮಕ್ಷಯವೇ ಮೋಕ್ಷಹೇತುವಾಗುವುದು. ಯಾವನು ವೇದವಿಹಿತಗಳಾದ ಕರ್ಮಗಳನ್ನು ಭಗವದರ್ಪಣರೂಪವಾಗಿ ನಡೆಸದೆ, ಅಜ್ಞನಾಗಿಯೂ, ಅಜಿತೇಂದ್ರಿಯನಾಗಿಯೂ ಇರುವನೋ, ಅವನಿಗೆ, ಕರ್ಮಭ್ರಷ್ಟತೆಯೊಂದು, ವೇದವಿರುದ್ಧಕರ್ಮಾಚರಣೆಯೊಂದು, ಇವೆರಡರಿಂದ ಮೃತ್ಯುವಿನಮೇಲೇ ಮೃತ್ಯುವನ್ನೇ ಹೊಂದುತ್ತಿರುವನು. ಹಾಗಿಲ್ಲದೆ ವೇದೋಕ್ತಕರ್ಮಗಳೆಲ್ಲವನ್ನೂ ಫಲಾಪೇಕ್ಷೆಯಿಲ್ಲದೆ ಭಗವದರ್ಪಣರೂಪವಾಗಿಯೇ ನಡೆಸತಕ್ಕವನು, ಅದರಿಂದ ಸಕಲಕರ್ಮನಿವೃತ್ತಿಗೆ ಹೇತುವಾದ ಜ್ಞಾನಸಂಪತ್ತಿಯನ್ನು ಹೊಂದಿ, ಮುಕ್ತನಾಗುವನು. ಹಾಗಿದ್ದರೆ "ಶ್ರುತಿಗಳು ಕರ್ಮಗಳಿಗೆ ಬೇರೆ ಬೇರೆ ಸ್ವರ್ಗಾದಿಫಲಗಳನ್ನು ಹೇಳುವುದೇಕೆ?" ಎಂದರೆ, ಇವೆಲ್ಲವೂ ಅಜ್ಞರಾದವರಿಗೆ ಕರ್ಮಾಚರಣೆಯಲ್ಲಿ ಆಸೆಹುಟ್ಟಿಸುವುದಕ್ಕಾಗಿಯೇ ಹೊರತು ಬೇರೆಯಲ್ಲ. ವೈದಿಕ ಕರ್ಮಗಳ ಸ್ಥಿತಿಯು ಹೀಗಾಯಿತಷ್ಟೆ? ಇದಕ್ಕಿಂತಲೂ ಶೀಘ್ರವಾಗಿ ಭಕ್ತಿಯೋಗವನ್ನು ಹುಟ್ಟಿಸತಕ್ಕ ಬೇರೆ ಕೆಲವು ಕರ್ಮಗಳು ಪಾಂಚರಾತ್ರದಲ್ಲಿ ವಿಧಿಸಲ್ಪಟ್ಟಿರುವುವು. ಅವುಗಳಿಗೆ ತಾಂತ್ರಿಕಕರ್ಮಗಳೆಂದು ಹೆಸರು. ಈ ತಾಂತ್ರಿಕಕರ್ಮವೆಂಬುದು, ಭಗವಂತನ ಅರ್ಚಾರೂ

ಪಗಳನ್ನು ಪಾಂಚರಾತ್ರವಿಧಿಯಿಂದ ಆರಾಧಿಸುವುದೇ! ಯಾವನು ತನಗೆ ಪ್ರಕೃತಿಸಂಬಂಧದಿಂದುಂಟಾದ ಅಹಂಕಾರಮಮಕಾರಾದಿ ರೂಪವಾದ ಹೃದಯಗ್ರಂಥಿಯನ್ನು ನೀಗಿಸಬೇಕೆಂದು ಅಪೇಕ್ಷಿಸುವನೋ, ಅವನು ಮೇಲೆ ಹೇಳಿದ ತಂತ್ರೋಕ್ತವಿಧಿಯಿಂದ ಭಗವಂತನನ್ನು ಪೂಜಿಸಬೇಕು. ಆ ವಿಧಿಗಳನ್ನೂ ಸೂಕ್ಷ್ಮವಾಗಿ ತಿಳಿಸುವೆನು ಕೇಳು. ಈ ಕರ್ಮದಲ್ಲಿ ಪ್ರವರ್ತಿಸತಕ್ಕವನು, ಆಚಾರ್ಯಾನುಗ್ರಹವನ್ನು ಸಂಪಾದಿಸಿ, ಆವಸಂಬ ಪೂಜಾವಿಧಿಗಳೆಲ್ಲವನ್ನೂ ಉಪದೇಶಹೊಂದಿ, ಆ ಉಪದೇಶಕ್ರಮದಂತೆ ಭಗವಂತನ ಅರ್ಚಾಮೂರ್ತಿಯಲ್ಲಿ ತನಗೆ ಇಷ್ಟವಾದುದನ್ನು ಅರ್ಚಿಸಬೇಕು. ಈ ಪೂಜೆಯನ್ನು ನಡೆಸತಕ್ಕವನು, ಅರ್ಚಾವಿಗ್ರಹದಮುಂದೆ ಕುಳಿತು, ಮೊದಲು ಪ್ರಾಣಾಯಾಮಾದಿಗಳಿಂದ ದೇಹಶುದ್ಧಿಯನ್ನು ಮಾಡಿಕೊಂಡು, ಅಂಗನ್ಯಾಸಕರನ್ಯಾಸಗಳಿಂದ ರಕ್ಷೆಯನ್ನು ನಡೆಸಬೇಕು. ದೇವತಾಪ್ರತಿಮೆಗಳಲ್ಲಿಯಾಗಲಿ,ತನ್ನ ಹೃದಯದಲ್ಲಿಯಾಗಲಿ,ಆ ಭಗವತ್ಸ್ವರೂಪವನ್ನು ಭಾವಿಸಿ ತಾಂತ್ರಿಕವಿಧಿಯಿಂದ ಪೂಜಿಸಬಹುದು. ಈ ಪೂಜೆಗೆ ಮೊದಲು ತುಲಸಿ, ಚಂದನ, ಮೊದಲಾದ ಪೂಜಾಸಾಮಗ್ರಿಗಳನ್ನು ಮಂತ್ರಜಲಪ್ರೋಕ್ಷಣದಿಂದಲೂ, ಪೂಜಾಸ್ಥಳವನ್ನು ಸಮ್ಮಾರ್ಜನಾದಿಗಳಿಂದಲೂ, ತನ್ನ ದೇಹವನ್ನು ಅಂಗನ್ಯಾಸಮಂತ್ರಗಳಿಂದಲೂ, ದೇವತಾಪ್ರತಿಮೆಯನ್ನು ಜಲದಿಂದಲೂ ಶುದ್ಧೀಕರಿಸಿಡಬೇಕು ಅರ್ಘ್ಯಪಾದ್ಯಾದಿಪಾತ್ರೆಗಳನ್ನು ತೊಳೆದು ಸಿದ್ಧವಾಗಿಟ್ಟುಕೊಂಡು, ಆ ಪ್ರತಿಮಾದಿಗಳಲ್ಲಿ ಧ್ಯಾನಯೋಗದಿಂದ ಭಗವಂತನನ್ನು ಆವಾಹನೆಮಾಡಿ, ಹೃದಯಾದಿಮಂತ್ರಗಳಿಂದಲೂ, ಮೂಲಮಂತ್ರದಿಂದಲೂ ನ್ಯಾಸಗಳನ್ನು ಮಾಡಿ, ಆ ಮೂಲಮಂತ್ರದಿಂದಲೇ ಮೂರ್ತಿಯನ್ನು ಪೂಜಿಸಬೇಕು. ಮತ್ತು ಆ ಮೂರ್ತಿಯ ಅಂಗಗಳನ್ನೂ, ಸುದರ್ಶನವೇ ಮೊದಲಾದ ಉಪಾಂಗಗಳನ್ನೂ, ಅನಂತ ಗರುಡಾದಿಪರಿವಾರಗಳನ್ನೂ, ಆ ಯಾಮೂರ್ತಿ ಮಂತ್ರದಿಂದ ಅರ್ಚಿಸಬೇಕು. ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನ, ವಸ್ತ್ರ, ಭೂಷಣ, ಹೂ, ಗಂಧ ಅಕ್ಷತೆ, ಧೂಪ, ದೀಪ, ನೈವೇದ್ಯ, ಮೊದಲಾದ ಸರ್ವೋಪಚಾರಗಳಿಂದಲೂ ಕ್ರಮವಾಗಿ ಪೂಜಿಸಬೇಕು. ಅದರಂತೆಯೇ ಭಗವಂತನ ಪರಿವಾರಗಳಿಗೂ ಯಥಾ

ವಿಧಿಯಾಗಿ ಪೂಜೆಗಳನ್ನು ಮಾಡಿ, ಸ್ತೋತ್ರಗಳಿಂದ ಸ್ತುತಿಸಿ, ನಮಸ್ಕರಿಸ ಬೇಕು. ಪ್ರತ್ಯಕ್ಷವಲ್ಲಿರುವ ಮೂರ್ತಿಯೇ ತನ್ನಲ್ಲಿ ಅಂತರಾತ್ಮನಾಗಿಯೂ ಇರುವಂತೆ ಭಾವಿಸಿ ಹೃದಯದಲ್ಲಿಯೂ ಪೂಜಿಸಬೇಕು. ಭಗವಂತನಿಗೆ ನಿವೇದಿಸಿದ ಅನ್ನಶೇಷವನ್ನು ತಾನು ಭಕ್ತಿಯಿಂದ ಭುಜಿಸಬೇಕು. ಆ ಭ ಗವಂತನಿಗೆ ಅರ್ಪಿಸಿದ ತುಲಸೀಪುಷ್ಪಾದಿಗಳನ್ನು ಭಕ್ತಿಯಿಂದ ಶಿರಸಾಧಾ ರಣಮಾಡಬೇಕು. ಹೀಗೆ ಕ್ರಮವಾದ ಪೂಜೆಗಳೆಲ್ಲವೂ ನಡೆದಮೇಲೆ, ಆ ಶ್ರೀಹರಿಯನ್ನು ಅವನಿಗೆ ಅಸಾಧಾರಣಸ್ಥಾನವಾದ ಪರಮಾಕಾಶದಲ್ಲಿ ನೆಲೆಗೊಳಿಸಿದಂತೆ ಉದ್ವಾಸನವನ್ನು ಮಾಡಿ, ಪೂಜೆಯನ್ನು ಸಮಾಪ್ತಿಗೊಳಿ ಸಬೇಕು. ಈ ವಿಧವಾಗಿಯೇ ಅಗ್ನಿ, ಸೂರ್ಯ, ಜಲ ಮೊದಲಾದುವುಗಳಲ್ಲಿ ಯೂ, ಅತಿಥಿಗಳಲ್ಲಿಯೂ, ತನ್ನ ಹೃದಯದಲ್ಲಿಯೂ ಸರ್ವಾಂತರಾತ್ಮನಾದ ಆ ಶ್ರೀಹರಿಯನ್ನು ಭಾವಿಸಿ ಪೂಜಿಸತಕ್ಕವನು, ಶೀಘ್ರದಲ್ಲಿಯೇ ಭಕ್ತಿ ಯೋಗದಲ್ಲಿ ಸಿದ್ಧಿಯನ್ನು ಹೊಂದಿ, ಕರ್ಮಬಂಧವನ್ನು ನೀಗಿ, ಮುಕ್ತಿಯನ್ನು ಪಡೆಯಬಹುದು." ಎಂದನು. ಇದು ಮೂರನೆಯ ಅಧ್ಯಾಯವು.

---

## ಜನಕಾರ್ಷಭ ಸಂವಾದವು<br>ಭಗವದವತಾರಗಳು.

ಆಗ ತಿರುಗಿ ಜನಕರಾಜನು " ಓ ಮಹಾತ್ಮರ! ಭಗವಂತನು ಕರ್ಮಾ ಧೀನವಾದ ಜನನಮರಣವಿಲ್ಲದವನಾಗಿದ್ದು, ಸ್ವೇಚ್ಛೆಯಿಂದಲೇ ಈ ಲೋ ಕದಲ್ಲಿ ಅವತರಿಸುವನಲ್ಲವೆ ? ಆ ಅವತಾರಗಳಲ್ಲಿ ಹಿಂದೆ ಯಾವಯಾವ ರೂ ಪವನ್ನೆತ್ತಿ ಯಾವಯಾವ ಕಾರ್ಯಗಳನ್ನು ನಡೆಸಿರುವನು. ಈಗ ಯಾವ ಅವ ತಾರದಲ್ಲಿ ಯಾವಕಾರ್ಯವನ್ನು ಮಾಡುತ್ತಿರುವನು? ಮುಂದೆ ಇನ್ನಾವ ಅವತಾರಗಳಿಂದ ಯಾವ ಕಾರ್ಯಗಳನ್ನು ನಡೆಸುವನು? ಇವೆಲ್ಲವನ್ನೂ ನನಗೆ ತಿಳಿಸಬೇಕು." ಎಂದು ಕೇಳಿದನು. ಅಪಕ್ಕಾ ದ್ರುಮಿಳನೆಂಬವನು " ರಾಜೇಂ ದ್ರಾ ಕೇಳು ! ಆ ಭಗವಂತನ ಸ್ವರೂಪಸ್ವಭಾವಗಳು ಅಪರಿಚ್ಛಿನ್ನವಾದು ದರಿಂದ, ಅವುಗಳನ್ನು ಹೀಗೆಂದು ನಿರ್ಣಯಿಸುವುದು ಸಾಧ್ಯವಲ್ಲ. ಹಿಂದು ವೇಳೆ ಭೂಮಿಯಲ್ಲಿರುವ ರೇಣುಗಳನ್ನಾದರೂ ಬಹುಕಾಲದವರೆಗೆ ಕಷ್ಟ

ಪಟ್ಟು ಲೆಕ್ಕಮಾಡಿ ತಿಳಿಯಬಹುದೇಹೊರತು,ಆ ಭಗವಂತನ ಗುಣಗಳನ್ನೂ ಅದ್ಭುತಕಾರ್ಯಗಳನ್ನೂ ಎಷ್ಟುಮಾತ್ರವೂ ಎಣಿಸುವುದಕ್ಕೆ ಸಾಧ್ಯವಲ್ಲ. ಆದಿದೇವವಾದ ಆ ನಾರಾಯಣನು,ಮೊದಲು ಪೃಥಿವಿ ಮೊದಲಾದ ಭೂತಗಳನ್ನೂ, ಇತರತತ್ವಗಳನ್ನೂ "ವಿರಾಟ್" ಎಂಬ ಬ್ರಹ್ಮಾಂಡರೂಪವಾಗಿ ಏರ್ಪಡಿಸಿ, ತನ್ನ ಅಂಶದಿಂದ ತಾನೂ ಅದರಲ್ಲಿ ಧಾರಕನಾಗಿ ಪ್ರವೇಶಿಸಿ, ಆಗ ವಿರಾಟ್ಪುರುಷನೆಂಬ ನಾಮವನ್ನು ಹೊಂದಿದನು ಇದೇ ಆ ಭಗವಂತನ ಮೊದಲನೆಯ ಅವತಾರವು. ಈ ಮೂರುಲೋಕಗಳೇ ಆ ವಿರಾಟ್ಪುರುಷನಿಗೆ ದೇಹವು. ಅವನ ಇಂದ್ರಿಯಗಳಿಂದಲೇ ಸಮಸ್ತಜೀವರ ಜ್ಞಾನಕರ್ಮೇಂದ್ರಿಯಗಳೆಲ್ಲವೂ ಉಂಟಾದುವು.ಅವನ ಜ್ಞಾನವು ತನಗೆತಾನೇ ಪ್ರಕಾಶಿಸತಕ್ಕುದೇಹೊರತು, ಇಂದ್ರಿಯಗಳ ಸಹಾಯವನ್ನಪೇಕ್ಷಿಸತಕ್ಕುದಲ್ಲ. ಅವನ ನಿಶ್ವಾಸರೂಪವಾದ ವಾಯುವೇ ಸಮಸ್ತಪ್ರಾಣಿಗಳ ಬಲಕ್ಕೂ,ವೀರ್ಯಕ್ಕೂ, ಚೇಷ್ಟೆಗಳಿಗೂ ಕಾರಣವಾಗಿರುವುದು. ಆತನೇ ರಜಸ್ಸತ್ವ ತಮೋಗುಣಗಳಿಂದ ಈ ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸತಕ್ಕವನು. ಆದುದರಿಂದ ಆದಿಕರ್ತನು. ಆತನೇ ಈ ಪ್ರಪಂಚದ ಸೃಷ್ಟಿಕಾರ್ಯಕ್ಕಾಗಿ ಮೊದಲು ರಜೋಗುಣವನ್ನವಲಂಬಿಸಿ ಚತುರ್ಮುಖನಾದನು. ಆತನೇ ತಮೋಗುಣದಿಂದ ರುದ್ರನಾಗಿ ಜಗತ್ತನ್ನು ಲಯಹೊಂದಿಸುವನು. ಅವನೇ ಯಜ್ಞಪತಿಯೂ, ವರ್ಣಾಶ್ರಮಧರ್ಮಗಳಿಗೆ ನಿಯಾಮಕನೂ ಆದ ವಿಷ್ಣುವಾದುದರಿಂದ,ತನ್ನ ಸಹಜವಾದ ಶುದ್ಧಸತ್ವಗುಣದಿಂದಲೇ ಸ್ಥಿತಿಯನ್ನು ನಿರ್ವಹಿಸುವನು. ಆದುದರಿಂದ ಆ ವಿಷ್ಣುವೇ ಆದಿಪುರುಷನೆನಿಸಿಕೊಂಡು, ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ತಾನೇ ಕಾರಣಭೂತನಾಗಿರುವನು. ಈ ವಿರಾಡ್ರೂಪದಿಂದಾಚೆಗೆ ನರನಾರಾಯಣಾವತಾರವು.ಇದರಲ್ಲಿ ಭಗವಂತನು ಧರ್ಮನೆಂಬವನಿಗೆ ದಕ್ಷಪುತ್ರಿಯಾದ ಮೂರ್ತಿಯೆಂಬವಳಲ್ಲಿ, ನರನಾರಾಯಣರೆಂಬ ಎರಡುರೂಪಗಳಿಂದ ಅವತರಿಸಿ, ನಾರದಾದಿಮಹರ್ಷಿಗಳಿಗೆ ಕರ್ಮನಿವೃತ್ತಿಗೆ ಕಾರಣವೆನಿಸಿದ ಜ್ಞಾನಯೋಗವನ್ನು ಉಪದೇಶಿಸಿ, ಈಗಲೂಬದರಿಕಾಶ್ರಮದಲ್ಲಿ ಅನೇಕಮಹರ್ಷಿಗಳಿಂದ ಸೇವಿಸಲ್ಪಡುತ್ತಿರುವನು. ಹೀಗೆ ಭಗವಂತನು ನರನಾರಾಯಣರೂಪದಿಂದ ಅತ್ಯಂತಶಾಂತನಾಗಿ ತಪಸ್ಸಿನಲ್ಲಿರುವುದನ್ನು

ನೋಡಿ, ಒಮ್ಮೆ ಇಂದ್ರನು, ಈ ತಪೋಬಲದಿಂದ ಆತನು ತನ್ನ ಪದವಿಯನ್ನು ಕಿತ್ತುಕೊಳ್ಳಬಹುದೆಂದು ಶಂಕಿಸಿ, ಆ ತಪಸ್ಸನ್ನು ಕೆಡಿಸುವುದಕ್ಕಾಗಿ ಮನ್ಮಥನನ್ನು ಅವನ ಪರಿವಾರಗಳೊಡನೆ ಕಳುಹಿಸಿದನು ಮೂಢನಾದ ಮನ್ಮಥನು. ಅಪ್ಸರೋಗಣವನ್ನೂ, ವಸಂತನನ್ನೂ, ಮಂದಮಾರುತನನ್ನೂ, ಇನ್ನೂ ಕಾಮೋದ್ದೀಪಕಗಳಾದ ತನ್ನ ಇತರಬಲವೆಲ್ಲವನ್ನೂ, ಸೇರಿಸಿಕೊಂಡು ಬಂದು, ಅಪ್ಸರಸ್ತ್ರೀಯರ ಕಟಾಕ್ಷಗಳೆಂಬ ತೀಕ್ಷ್ಣಬಾಣಗಳಿಂದ ಆ ಮುನಿಯನ್ನು, ಭೇದಿಸತೊಡಗಿದನು. ಆದರೇನು ? ಆದಿದೇವನಾದ ನಾರಾಯಣಮುನಿಯು, ಸ್ವಲ್ಪಮಾತ್ರವೂ ಮನಸ್ಸುಕದಲದೆ, ಅದು ಇಂದ್ರನ ಚೇಷ್ಟೆಯೆಂಬುದನ್ನು ತಿಳಿದುಕೊಂಡು, ತನ್ನ ಮುಂದೆ ವಿಫಲಪ್ರಯತ್ನರಾಗಿ ಶಾಪಭಯದಿಂದ ನಡುಗುತ್ತಿರುವ ಕಾಮಾದಿಗಳನ್ನು ನೋಡಿ ನಗುತ್ತ ಹೀಗೆಂದು ಹೇಳುವನು. “ಓ ಮನ್ಮಥಾ! ಎಲೈ ದೇವಾಂಗನೆಯರೆ ! ಓ ಮಂದಮಾರುತಾ ! ಭಯಪಡಬೇಡಿರಿ ! ಅತಿಥಿಗಳಾಗಿ ಬಂದ ನಿಮಗೆ ನಾನು ಪ್ರೀತಿಪೂರ್ವಕವಾಗಿ ಆತಿಥ್ಯವನ್ನು ಮಾಡುವೆನು. ನನ್ನ ಆತಿಥ್ಯವನ್ನು ಸ್ವೀಕರಿಸಿ, ನೀವು ನನ್ನ ಆಶ್ರಮಕ್ಕೆ ಬಂದುದನ್ನು ಸಫಲಗೊಳಿಸಿರಿ.” ಎಂದು ಅಭಯಪ್ರದಾನವನ್ನು ಮಾಡಲು,ಆಗ ಮನ್ಮಥನೇ ಮೊದಲಾದ ಆ ದೇವತೆಗಳೆಲ್ಲರೂ ನಾಚಿಕೆಯಿಂದ ತಲೆಯನ್ನು ತಗ್ಗಿಸಿ, ದೈನ್ಯದಿಂದ ಹೀಗೆಂದು ಪ್ರಾರ್ಥಿಸುವರು. “ಓ ಸ್ವಾಮೀ ! ವಿಕಾರಶೂನ್ಯನಾಗಿಯೂ, ಪ್ರಕೃತಿಪುರುಷರಿಗಿಂತಲೂ ಪರನಾಗಿಯೂ ಇರುವ ನಿನಗೆ, ಅಪರಾಧಿಗಳಾದ ನಮ್ಮಲ್ಲಿಯೂ ಹೀಗೆ ವಾತ್ಸಲ್ಯವನ್ನು ತೋರಿಸತಕ್ಕ ಪರಮದಯಾಳುತ್ವವೇನೂ ಆಶ್ಚರ್ಯವಲ್ಲ ! ಆತ್ಮಧ್ಯಾನದಿಂದ ಆನಂದಿಸತಕ್ಕವರಾಗಿಯೂ, ಜಿತೇಂದ್ರಿಯರಾಗಿಯೂ ಇರುವ ಯೋಗಿಗಳೆಲ್ಲರೂ, ನಿನ್ನ ಪಾದಸೇವೆಯಲ್ಲಿ ನಿರತರಾಗಿರುವರು. ನಿನ್ನ ಪಾದಾಶ್ರಿತರೇ ಅಂತಹ ದೃಢಚಿತ್ತರಾಗಿರುವಾಗ, ನೀನು ಈ ಕಾಮಕ್ರೋಧಾದಿವಿಕಾರಗಳಿಗೆ ಈಡಾಗದಿರುವುದೇನಾಶ್ಚರ್ಯವು ? ಸ್ವರ್ಗಾದಿಫಲಗಳನ್ನೂ ತಿರಸ್ಕರಿಸಿ, ನಿನ್ನ ಪಾದಸೇವಾಸುಖವೊಂದನ್ನೇ ಬಯಸಿ, ತಪೋನಿರತರಾಗಿರತಕ್ಕವರೆಲ್ಲರಿಗೂ ನಾನಾಬಗೆಯ ಉಪದ್ರವಗಳನ್ನು ಕೊಟ್ಟು, ತಪೋವಿಘ್ನವನ್ನು ಮಾಡು

ವುದು ದೇವತೆಗಳಿಗೆ ಸಹಜವೇ ಆಗಿರುವುದು. ನಿನ್ನ ಸೇವೆಯಲ್ಲಿ ವಿಮುಖ ರಾದವರಿಗೆ ಆ ವಿಧವಾದ ವಿಘ್ನಗಳಿಂದೂ ಸಂಭವಿಸಲಾರವು. ಏಕೆಂದರೆ, ಕೃಷಿಮಾಡುವವರು, ರಾಜನಿಗೆ ತೆರಿಗೆಯನ್ನೊಪ್ಪಿಸುವಂತೆ, ಅವರು ಯಜ್ಞಗಳಲ್ಲಿ ದೇವತೆಗಳಿಗೆ ಅವರವರ ಭಾಗಗಳನ್ನು ಒಪ್ಪಿಸಿ ಸಂತೋಷಗೊಳಿಸುತ್ತಿರುವರು. ಆದರೆ ಇದರಿಂದ ನಿನ್ನನ್ನುಪಾಸನೆಮಾಡತಕ್ಕವರಿಗೆ ವಿಘ್ನಗಳು ಬಂದೇ ಬರುವುವೆಂದು ಹೇಳುವುದಕ್ಕಿಲ್ಲ! ಅವರು ನಿನ್ನ ಅನುಗ್ರಹಕ್ಕೆ ಪಾತ್ರರಾದ ಪಕ್ಷದಲ್ಲಿ, ಆ ವಿಘ್ನಗಳೆಲ್ಲವನ್ನೂ ನೀನೇ ಕಾಲಿಂದ ಮೆಟ್ಟಿ ತುಳಿಯುವೆ ? ಹಸಿವು, ಬಾಯಾರಿಕೆ, ಶೀತ, ಉಷ್ಣ, ಮಳೆ, ಗಾಳಿ, ಆಹಾರಸುಖ, ಮೈಥುನಸುಖವೆಂಬಿವೆಲ್ಲವೂ ನಮ್ಮ ಪರಿವಾರಗಳು ! ಇವೆಲ್ಲವೂ ಮಹಾಸಮುದ್ರದಂತೆ ಅಪಾರವಾಗಿರುವುವು. ಕೆಲವರು ತಮ್ಮ ಮನೋಬಾಢ್ಯದಿಂದ ಈ ಮಹಾಸಮುದ್ರವನ್ನು ದಾಟಿ ಹೋಗುವುದುಂಟು. ಆದರೇನು? ದೊಡ್ಡ ಸಮುದ್ರವನ್ನು ದಾಟಿ ಬಂದವನು, ಗೋಷ್ಪದದಲ್ಲಿ (ಹಸುವಿನ ಹಜ್ಜೆಯಿಂದಾದ ಹಳ್ಳದಲ್ಲಿ) ಮುಳುಗಿ ಸಾಯುವಂತೆ; ಅಕಸ್ಮಾತ್ತಾಗಿ ಕೋಪವಶರಾಗಿ, ಅದುವರೆಗೆ ಮಾಡಿದ ತಪಸ್ಸನ್ನೆಲ್ಲಾ ವ್ಯರ್ಥವಾಗಿ ಕಳೆದುಕೊಳ್ಳುವರು” ಎಂದರು. ಈ ಮಾತುಗಳನ್ನು ಕೇಳುತ್ತ ನಾರಾಯಣಮುನಿಯು, ಮುಂದೆ ನಿಂತಿದ್ದ ದೇವಾಂಗನೆಯರ ಸೌಂದರ್ಯದ ಕೆಚ್ಚನ್ನು ಮುರಿಯಬೇಕೆಂಬ ಉದ್ದೇಶದಿಂದ, ಅವರೆಲ್ಲರೂ ನೋಡುತ್ತಿರುವಹಾಗೆಯೇ ತನ್ನ ಇಚ್ಛಾಮಾತ್ರದಿಂದ ಕೆಲವು ಸ್ತ್ರೀಯರನ್ನು ಸೃಷ್ಟಿಸಿ ಅವರಿಗೆ ತೋರಿಸಿದನು. ಸರ್ವಾಲಂಕಾರಭೂಷಿತರಾಗಿ, ಅದ್ಭುತ ರೂಪವಿಂದಿದ್ದ ಆ ಸ್ತ್ರೀಯರೆಲ್ಲರೂ, ಮಹಾತ್ಮರಾದ ಆ ನರನಾರಾಯಣರ ಪಾದಶುಶ್ರೂಷೆಯನ್ನು ಮಾಡತೊಡಗಿದರು. ಮನ್ಮಥಾದಿಗಳೂ,ದೇವಾಂಗನೆಯರೂ, ಸಾಕ್ಷಾಚ್ಛ್ರೀದೇವಿಯಂತೆ ರೂಪವತಿಯರಾದ ಆ ಸ್ತ್ರೀಯರನ್ನು ನೋಡಿ, ಅವರಕಡೆಯಿಂದ ಹೊರಟುಬರುವ ಸುಗಂಧಕ್ಕೂ, ಅವರ ರೂಪೌದಾರ್ಯಗಳಿಗೂ ಮರುಳಾಗಿ, ನಾಚಿಕೆಯಿಂದ ಮುಖದಲ್ಲಿ ಕಾಂತಿಗುಂದಿ ತಲೆಬಗ್ಗಿ ನಿಂತಿದ್ದರು. ಆಗ ದೇವದೇವೋತ್ತಮನಾದ ನಾರಾಯಣನು ಅವರನ್ನುಕುರಿತು ಮಂದಹಾಸಪೂರ್ವಕವಾಗಿ ” ಎಲೈ ಕಾಮಾದಿಗಳೆ !

ಇವಳಲ್ಲಿ ನಿಮಗೆ ಉತ್ತಮವಾಗಿ ತೋರಿದವಳೊಬ್ಬಳನ್ನು ನಿಮ್ಮ ಸ್ವರ್ಗ ಲೋಕಕ್ಕೆ ಅಲಂಕಾರಾರ್ಥವಾಗಿ ನಿಮ್ಮೊಡನೆ ಕರೆದುಕೊಂಡು ಹೋಗ ಬಹುದು" ಎಂದನು. ಆಗ ಅಲ್ಲಿದ್ದ ದೇವಭೃತ್ಯರೆಲ್ಲರೂ "ಹಾಗೆಯೇ ಆಗಲಿ" ಎಂದು ಭಗವದಾಜ್ಞೆಯನ್ನು ಶಿರಸಾವಹಿಸಿ, ಅವನಿಗೆ ತಲೆಬಗ್ಗಿ ನಮಸ್ಕ ರಿಸಿ, ಆ ಸ್ತ್ರೀಯರಲ್ಲಿ ಅತ್ಯುತ್ತಮ ರೂಪ ಲಾವಣ್ಯ ಶೋಭಿತೆಯಾದ ಊರ್ವಶಿಯೆಂಬವಳನ್ನು ತಮ್ಮೊಡನೆ ಕರೆದುಕೊಂಡು ದೇವಲೋಕಕ್ಕೆ ಹಿಂತಿರುಗಿ ಬಂದರು. ಅಲ್ಲಿ ದೇವೇಂದ್ರನು ಅನೇಕದೇವತೆಗಳೊಡನೆ ಸಭಾ ಸ್ಥಾನದಲ್ಲಿದ್ದಾಗ, ಮನ್ಮಥಾದಿಗಳೆಲ್ಲರೂ ಊರ್ವಶಿಯನ್ನು ಮುಂದಿಟ್ಟು ಕೊಂಡು ಬಂದು ನಮಸ್ಕರಿಸಿ, ನಾರಾಯಣಮಹರ್ಷಿಯ ಪ್ರಭಾವವೆಲ್ಲ ವನ್ನೂ ವಿವರಿಸಿ ತಿಳಿಸಿದರು. ಇಂದ್ರನು ಅದನ್ನು ಕೇಳಿ ಭಯದಿಂದಲೂ, ಆಶ್ಚರ್ಯದಿಂದಲೂ ಸ್ತಬ್ಧನಾದನು. ರಾಜೇಂದ್ರಾ! ಇದೇ ನರನಾರಾಯ ಣಾವತಾರವು. ಆಮೇಲೆ ವಿಷ್ಣುವು ಹಂಸಸ್ವರೂಪನಾಗಿಯೂ, ದತ್ತಾ ತ್ರೇಯನಾಗಿಯೂ, ಸನಕಾದಿಕುಮಾರರೂಪನಾಗಿಯೂ, ಋಷಭನೆಂಬ ಹೆಸರಿನಿಂದ ನಮ್ಮ ತಂದೆಯಾಗಿಯೂ ಅವತರಿಸಿ, ಲೋಕಕ್ಷೇಮಕ್ಕಾಗಿ ಜೀವಪರಮಾತ್ಮತತ್ವವನ್ನುಪದೇಶಿಸಿದನು. ಹಯಗ್ರೀವಾವತಾರದಲ್ಲಿ ವೇದಗಳನ್ನುದ್ಧರಿಸಿದನು. ಆಮೇಲೆ ಮತ್ಸ್ಯಾವತಾರವನ್ನೆತ್ತಿ, ಸತ್ಯವ್ರತ ನೆಂಬ ಮನುವನ್ನೂ, ಭೂಮಿಯನ್ನೂ, ಓಷಧಿಗಳನ್ನೂ ರಕ್ಷಿಸಿದನು. ಆಮೇಲೆ ವರಾಹರೂಪದಲ್ಲಿ ಪ್ರಳಯಜಲದಿಂದ ಭೂಮಿಯನ್ನುದ್ಧರಿಸಿ, ಹಿರಣ್ಯಾಕ್ಷನೆಂಬ ದೈತ್ಯನನ್ನು ಸಂಹರಿಸಿದನು. ಕೂರ್ಮಾವತಾರದಲ್ಲಿ ಅಮೃತ ಮಥನಕ್ಕಾಗಿ ಮಂದರಪರ್ವತವನ್ನು ಬೆನ್ನಮೇಲೆ ಧರಿಸಿ, ದೇವತೆಗಳಿಗೆ ಕ್ಷೇ ಮವನ್ನುಂಟುಮಾಡಿದನು. ಗಜೇಂದ್ರವರದಾವತಾರದಲ್ಲಿ ಶರಣಾಗತನಾದ ಗಜೇಂದ್ರನನ್ನು ಮೊಸಳೆಯ ಬಾಯಿಂದ ತಪ್ಪಿಸಿ ಕಾಪಾಡಿದನು. ಒಮ್ಮೆ ವಾಲ ಖಿಲ್ಯರೆಂಬ ಋಷಿಗಳು ಕಶ್ಯಪನಿಗಾಗಿ ಸಮಿತ್ತುಗಳನ್ನು ತರುತ್ತ, ನಡುವೆ ಗೋಷ್ಪದದಲ್ಲಿ ಮುಳುಗಿ ಹೋಗುತ್ತಿರುವಾಗ ತನ್ನನ್ನು ಸ್ತುತಿಸಲು, ಅವ ರನ್ನು ಮೇಲಕ್ಕೆತ್ತಿ ಆಪತ್ತಿನಿಂದ ಉದ್ಧರಿಸಿದನು. ವೃತ್ರವಧದಿಂದ ದೇವೇಂದ್ರನಿಗೆ ಪ್ರಾಪ್ತವಾಗುತಿದ್ದ ಬ್ರಹ್ಮಹತ್ಯೆಯನ್ನು ತಪ್ಪಿಸಿದನು.

ನೃಸಿಂಹಾವತಾರದಲ್ಲಿ ಹಿರಣ್ಯಕಶಿಪುವನ್ನು ಕೊಂದು, ಅವನ ಸೆರೆಯಲ್ಲಿದ್ದ ದೇವಸ್ತ್ರೀಯರನ್ನು ಬಿಡಿಸಿದುದಲ್ಲದೆ, ಅವನನ್ನು ಕೊಂದುದರಿಂದ ಸಾಧುಗಳಿಗೆ ಅಭಯವನ್ನೂ ಉಂಟುಮಾಡಿದನು. ದೇವಾಸುರಯುದ್ಧಗಳಲ್ಲಿಯೂ, ದೇವತೆಗಳ ಕ್ಷೇಮಕ್ಕಾಗಿ ದೈತ್ಯರನ್ನು ಕೊಲ್ಲಿಸುತ್ತಬಂದನು. ಒಂದೊಂದು ಮನ್ವಂತರದಲ್ಲಿಯೂ ಬೇರೆಬೇರೆ ಅವತಾರಗಳನ್ನೆತ್ತಿ ಲೋಕವನ್ನು ಪಾಲಿಸಿದನು. ವಾಮನಾವತಾರದಲ್ಲಿ ಬ್ರಹ್ಮಚಾರಿಯಾಗಿ ಬಂದು ಯಾಚಿಸುವನೆವದಿಂದ ಬಲಿಚಕ್ರವರ್ತಿಯ ವಶವಾಗಿದ್ದ ಭೂಮಿಯನ್ನು ಕಿತ್ತು ಇಂದ್ರಾದಿಗಳಿಗೆ ಕೊಡಿಸಿದನು. ಹೈಹಯರೆಂಬ ಕ್ಷತ್ರಿಯರ ಕುಲವನ್ನು ನಾಶಮಾಡುವುದಕ್ಕಾಗಿ ಭೃಗುವಂಶದಲ್ಲಿ ಪರಶುರಾಮನಾಗಿ ಅವತರಿಸಿ, ಅಗ್ನಿಯಂತೆ ಕ್ರೂರತೇಜಸ್ಸಿನಿಂದ ಇಪ್ಪತ್ತೊಂದಾವರ್ತಿ ಕ್ಷತ್ರಿಯರನ್ನು ಬೇಟೆಯಾಡಿ, ಲೋಕದಲ್ಲಿ ಕ್ಷತ್ರವಂಶವನ್ನೇ ನಿರ್ಮೂಲಮಾಡಿದನು. ಈಗ ಸೀತಾಪತಿಯಾದ ರಾಮನಾಗಿ ಜನಿಸಿ, ಸಮುದ್ರಕ್ಕೆ ಸೇತುವನ್ನು ಕಟ್ಟಿ, ಲಂಕಾಧಿಪತಿಯಾದ ದಶಕಂಠನನ್ನು ಕೊಂದು, ತನ್ನ ಪವಿತ್ರಕೀರ್ತಿಯಿಂದ ಲೋಕವನ್ನು ಪಾವನಮಾಡುತ್ತಿರುವನು. ತಾನು ಜನನವಿಲ್ಲದವನಾದರೂ, ಭೂಭಾರಪರಿಹಾರಾರ್ಥವಾಗಿ ಮುಂದೆ ಯದುವಂಶದಲ್ಲಿ ಕೃಷ್ಣರೂಪದಿಂದವತರಿಸಿ, ದೇವತೆಗಳಿಗೂ ದುಷ್ಕರಗಳಾದ ಅನೇಕಕಾರ್ಯಗಳನ್ನು ನಡೆಸುವನು. ಆಮೇಲೆ ಬುದ್ಧನಾಗಿ ಅವತರಿಸಿ, ಯಾಗಾರ್ಹರಲ್ಲದವರೂ ಯಜ್ಞಾದಿಕರ್ಮಗಳಲ್ಲಿ ಪ್ರವರ್ತಿಸುತ್ತಿರಲು, ವೇದವಿರುದ್ಧಗಳಾದ ವಾದಗಳಿಂದ ಅವರನ್ನು ತಾನೇ ಮೋಹಗೊಳಿಸುವನು. ಕಲಿಯುಗಾಂತದಲ್ಲಿ ಕಲ್ಕಿಯಾಗಿ ಅವತರಿಸಿ, ರಾಜ್ಯಾಧಿಕಾರದಿಂದ ಕೊಬ್ಬಿದ ಶೂದ್ರರನ್ನು ನಾಶಗೊಳಿಸುವನು. ಓ ರಾಜೇಂದ್ರಾ! ಆ ಭಗವಂತನ ಅವತಾರಗಳೂ, ಕರ್ಮಗಳೂ ಹೀಗೆ ಅನಂತವಾಗಿರುವುವು" ಎಂದನು. ಇದು ನಾಲ್ಕನೆಯ ಅಧ್ಯಾಯವು.

---

## ಜನಕಾರ್ಷಭ ಸಂವಾದವು.

ವಿದೇಹರಾಜನು ತಿರುಗಿ ಪ್ರಶ್ನೆಮಾಡುವನು. "ಎಲೈ ಆತ್ಮವಿದರೆ! ಇಂದ್ರಿಯಗಳನ್ನು ಜಯಿಸಲಾರದೆ, ಕಾಮಕ್ರೋಧಾದಿಗಳನ್ನೂ ಅಡಗಿಸು

ಲಾರದವರು, ಪ್ರಾಯಿಕವಾಗಿ ಭಗವಂತನನ್ನು ಭಜಿಸದೆ ಅವನಲ್ಲಿ ವಿಮುಖ ರಾಗಿಯೇ ಇರುವವರು. ಅಂತವರಗತಿಯೇನು? ಅವರು ಯಾವವಿಧವಾದ ಶ್ರೇಯಸ್ಸನ್ನು ಬಯಸುವರು? ಅವರು ಆ ಸ್ಥಿತಿಯಲ್ಲಿರಲು ಕಾರಣವೇನು? ಈ ವಿಚಾರಗಳನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕೆ ಚಮಸನೆಂಬವನು, "ರಾಜಾ ಕೇಳು! ಚತುರ್ಮುಖರೂಪಿಯಾದ ಪರಮಪುರುಷನು, ಕ್ರಮವಾಗಿ ತನ್ನ ಮುಖ,ತೋಳು, ತೊಡೆ,ಪಾದಗಳೆಂಬ ಅವಯವಗಳಿಂದ, ಬ್ರಾಹ್ಮಣ, ಕ್ಷತ್ರಿಯ,ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನು ಸೃಷ್ಟಿಸಿ, ಅವರಲ್ಲಿ ಸತ್ವಾದಿಗುಣಭೇದಗಳನ್ನೂ, ಬ್ರಹ್ಮಚರ್ಯಾದ್ಯಾಶ್ರಮಧರ್ಮಗಳನ್ನೂ ಏರ್ಪಡಿಸಿರುವನು. ಇವರಲ್ಲಿ ಯಾರು ಜಗತ್ಕಾರಣನಾದ ಪರಮಪುರುಷನಲ್ಲಿ ಏಕಭಕ್ತಿಯನ್ನಿಡದೆ,ಅವನನ್ನು ಇತರದೇವತೆಗಳಿಗೆ ಸಮಾನವಾಗಿ ಭಾವಿಸುವರೋ, ಅವರು ಆ ವರ್ಣಾಶ್ರಮಧರ್ಮಗಳಿಂದ ಹೊರಗೆನಿಸಿಕೊಂಡು, ನರಕದಲ್ಲಿ ಬೀಳುವರು. ಆದರೆ ಆ ಶ್ರೀಮನ್ನಾರಾಯಣನೇ ತಮಗೆ ಕಾರಣಭೂತನೆಂದೂ, ಅವನೇ ಸರ್ವೇಶ್ವರನೆಂದೂ, ಸರ್ವೋತ್ಕೃಷ್ಟನೆಂದೂ, ಶಾಸ್ತ್ರದೃಷ್ಟಿಯಿಂದ ತಿಳಿಯಬಲ್ಲವರು, ಅವನನ್ನು ಭಜಿಸಬೇಕಾದುದು ಸಹಜವೇ! ಆ ಜ್ಞಾನವಿದ್ದೂ ಅವನನ್ನು ಭಜಿಸದಿರುವವರು, ಕೃತಘ್ನರೆನಿಸುವುದರಿಂದ ಅಂತವರಿಗೆ ನರಕಪ್ರಾಪ್ತಿಯು ನ್ಯಾಯ್ಯವೇ! ಹಾಗಿಲ್ಲದೆ ಕೇವಲಜ್ಞಾನಶೂನ್ಯರಾಗಿರುವವರ ಗತಿಯೇನು? ಎಂದರೆ, ಶಾಸ್ತ್ರಾಧಿಕಾರವಿಲ್ಲದುದರಿಂದ, ಹರಿಕಥಾಶ್ರವಣದಲ್ಲಿಯಾಗಲಿ, ಹರಿಕೀರ್ತನದಲ್ಲಿಯಾಗಲಿ ಪ್ರವೃತ್ತಿಯಿಲ್ಲದ ಸ್ತ್ರೀಶೂದ್ರಾದಿಗಳೂಕೂಡ, ನಿನ್ನಂತಹ ಭಗವದ್ಭಕ್ತರ ಕೃಪೆಗೆ ಪಾತ್ರರಾಗಿ ತಪ್ಪದೆ ಮುಕ್ತಿಯನ್ನು ಹೊಂದಬಹುದು. ಬ್ರಾಹ್ಮಣಾದಿವರ್ಣತ್ರಯದವರಿಗೂ ವೇದಾಧಿಕಾರವಿರುವುದರಿಂದ, ಆ ವೇದಾಧ್ಯಯನದಿಂದಲೂ, ಅದರಿಂದ ಸಂಪಾದಿಸಬಹುದಾದ ಜ್ಞಾನದಿಂದಲೂ, ಭಗವದುಪಾಸನೆಗೆಬೇಕಾದ ಸೌಕರ್ಯಗಳನ್ನು ಪಡೆದಿದ್ದರೂ ಕೆಲವರು ಮೋಹಪರವಶರಾಗಿ, ಭಗವದುಪಾಸನೆಯನ್ನು ಬಿಟ್ಟು, ಅರ್ಥಕಾಮಗಳಲ್ಲಿಯೇ ಆಸೆಯುಳ್ಳವರಾಗುವರು. ಅವರು ವೇದಗಳಲ್ಲಿ ಸ್ವರ್ಗಾದಿಸುಖಗಳ ಆಸೆಯನ್ನು ತೋರಿಸತಕ್ಕ* ಅರ್ಥ

* ಇಲ್ಲಿ "ಅಪಾಮ ಸೋಮಮಮೃತಾ ಅಭೂಮ, ಅಕ್ಷಯ್ಯಗ್ಂ ಹವೈ ಚಾತುರ್ಮಾಸ್ಯಯಾಜಿನ ಸ್ಸುಕೃತಂ ಭವತಿ, ಯತ್ರನೋಷ್ಣಂ ನಶೀತಂ ನಗ್ಲಾನಿ

ವಾದಗಳಿಗೆ ಮರುಳಾಗಿ,ಅವನ್ನೇ ಹಿಡಿದು ವಾದಿಸುವರು. ಆಕರ್ಮಗಳು ತಮ
ಗೆ ಸಂಸಾರಬಂಧಕಗಳೆಂಬುದನ್ನು ತಾವೂ ತಿಳಿದುಕೊಳ್ಳಲಾರರು. ತಾವೇ
ಪ್ರಾಜ್ಞರೆಂಬ ಹೆಮ್ಮೆಯಿಂದ ತಿಳಿದವರಲ್ಲಿ ಕೇಳಿ ತಿಳಿಯುವುದಕ್ಕೂ ಪ್ರಯ
ತ್ನಿಸರು. ಕಿವಿಗಿಂಪಾಗಿರುವ ಆ ವೇದವಾಕ್ಯಗಳಿಗೆ ಮರುಳಾಗಿ, ಅದನ್ನೇ ಇತ
ರರಿಗೂ ಉಪದೇಶಿಸುವರು. ಮತ್ತು ರಜೋಗುಣಪ್ರಾಬಲ್ಯದಿಂದ ಅವರ
ಮನಸ್ಸಿನಲ್ಲಿ ಮತ್ತೊಬ್ಬರನ್ನು ಕೊಲ್ಲತಕ್ಕ ಅಭಿಚಾರಾದಿಕೃತ್ಯಗಳಲ್ಲಿಯೂ
ಆಸೆ ಹುಟ್ಟುವುದು. ಕ್ರೂರಸರ್ಪಗಳಂತೆ ಅವರು ಯಾವಾಗಲೂ ಕೋಪಕ್ಕೆ
ವಶರಾಗಿರುವರು. ದಾಂಭಿಕರೂ, ದುರಹಂಕಾರಿಗಳೂ ಆದ ಅಂತಹ ಪಾಪಿ
ಗಳು, ವಿಷ್ಣುಭಕ್ತರನ್ನು ಅಪಹಾಸ್ಯಮಾಡುವುದೂ ಉಂಟು. ಅವರು ಯಾ
ವಾಗಲೂ ಸ್ತ್ರೀಯರನ್ನೇ ಪರದೈವದಂತೆ ಪೂಜಿಸುವರೇಹೊರತು ಗುರುಹಿರಿ
ಯರನ್ನು ಸೇವಿಸಲಾರರು. ಮೈಥುನಸುಖವೊಂದೇ ಅವರಿಗೆ ಪರಮಸುಖವು.
ಆತ್ಮಸ್ತುತಿಯೂ, ತಮ್ಮ ಅಭ್ಯುದಯಗಳನ್ನು ಹೇಳಿಹೇಳಿ ಹಿಗ್ಗುವುದೂ ಅ
ವರಿಗೆ ನಿತ್ಯಕೃತ್ಯವು. ಅವರು ಲೋಭಬುದ್ಧಿಯಿಂದ ಇತರರಿಗೆ ಅನ್ನವಸ್ತ್ರ
ಗಳನ್ನಾಗಲಿ, ದಕ್ಷಿಣೆಗಳನ್ನಾಗಲಿ ಕೊಡದಪಂತೆಯೇ ಡಂಭಕ್ಕಾಗಿ ಯಜ್ಞ
ಗಳನ್ನು ನಡೆಸುವರು. ತಮ್ಮ ಸುಖಕ್ಕಾಗಿ ನಿಷ್ಕಾರಣವಾಗಿ ಪಶುಗಳನ್ನು
ಕೊಲ್ಲುವರು. ಅದರಿಂದುಂಟಾಗುವ ದೋಷವೇನೆಂಬುದನ್ನು ಭಾವಿಸ
ಲಾರರು. ಮತ್ತು ತಮ್ಮ ಕುಲ, ರೂಪ, ಧನ, ಅಧಿಕಾರ, ವಿದ್ಯೆ,
ದಾನ ಕರ್ಮಾದಿಗಳಿಗಾಗಿ ಹೆಮ್ಮೆಗೊಂಡು, ಸರ್ವೇಶ್ವರನಾದ ಶ್ರೀ
ಹರಿಯನ್ನೂ, ಹರಿಭಕ್ತರನ್ನೂ, ಸಾಧುಗಳನ್ನೂ ನಿರಾಕರಿಸುವರು.
ಆ ಭಗವಂತನು ಸಮಸ್ತಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿ ನೆಲೆ
ಗೊಂಡಿದ್ದರೂ, ಆಕಾಶದಂತೆ ಅವುಗಳ ದೋಷಕ್ಕೀಡಾಗದೆ ನಿರತಿಶಯ
ಪುರುಷಾರ್ಥರೂಪನಾಗಿರುವನೆಂಬ ಅವನ ಸ್ವರೂಪಸ್ವಭಾವಗಳನ್ನು ವೇ
ದಾಂತಗಳಿಂದಮಾತ್ರವೇ ತಿಳಿಯಬೇಕಾಗಿರುವುದು. ಕಾಮ್ಯಕರ್ಮಗಳಲ್ಲಿ

---

ನಿಶ್ವಾಸ್ಯಾಗ್ನಯಃ" ಇತ್ಯಾದಿಶ್ರುತಿಗಳು ಕಿವಿಗಿಂಪಾಗಿರುವುದನ್ನು ನಂಬಿ, ರಂಭಾಸಂ
ಭೋಗಾದಿಗಳನ್ನು ಕೋರಿ ಕರ್ಮಗಳನ್ನನುಷ್ಠಿಸುತ್ತ ಅವುಗಳನ್ನು ಪ್ರಮಾಣವಾಗಿ
ನಿರೂಪಿಸುವರೆಂದು ಭಾವವು.

ಬಿದ್ದ ಮೂಢರು ಆ ಭಗವಂತನ ಸುದ್ದಿಯನ್ನಾದರೂ ಕಿವಿಯಿಂದ ಕೇಳ ರು. ತಮ್ಮತಮ್ಮ ಮನೋರಥಗಳನ್ನೇ ಹೇಳಿಕೊಳ್ಳುತ್ತ ವ್ಯರ್ಥವಾಗಿ ಕಾಲ ವನ್ನು ಕಳೆದುಬಿಡುವರು.† ಲೋಕದಲ್ಲಿ ಮನುಷ್ಯರಿಗೆ ಸ್ತ್ರೀಸಂಗ, ಮಾಂ ಸಭೋಜನ, ಮದ್ಯಸೇವನೆ, ಮುಂತಾದ ದುರ್ವ್ಯಾಪಾರಗಳೆಲ್ಲವೂ ಹುಟ್ಟು ವುದು ರಾಗಾದಿದೋಷಗಳಿಂದಲೇ! ಆದರೆ ಶಾಸ್ತ್ರಗಳಲ್ಲಿ ಈ ವಿಚಾರವಾಗಿ ಯೂ ಕೆಲವು ಅವಕಾಶಗಳು ಏರ್ಪಟ್ಟಿರುವುವು. ವಿವಾಹಿತೆಯಾದ ಸ್ತ್ರೀಯೊ ಡನೆಋತುಕಾಲಗಳಲ್ಲಿಮಾತ್ರ ಸಂಭೋಗವೂ, ಯಜ್ಞಕಾಲದಲ್ಲಿಮಾತ್ರವೇ ಮಾಂಸಭೋಜನವೂ, ಸೌತ್ರಾಮಣಿಯೆಂಬ ಇಷ್ಟಿಯಲ್ಲಿಮಾತ್ರವೇ ಸು ರಾಪಾನವೂ ವಿಹಿತವಾಗಿವೆ. ಮಿಕ್ಕ ಕಾಲಗಳಲ್ಲಿ ಇವುಗಳನ್ನು ತ್ಯಜಿಸಬೇಕು. ಮತ್ತು ಸಂಪಾದಿಸಿದ ಧನಕ್ಕೆ ಭಗವತ್ಪ್ರೀತಿಕರಗ ಳಾದ ಧರ್ಮಗಳೇ ಫಲವೇಹೊರತು ವಿಷಯೋಪಭೋಗಗಳಲ್ಲ. ಅಂತಹ ಧರ್ಮಗಳನ್ನು ನಡೆಸುವುದರಿಂದ, ಪ್ರಕೃತಿ ಜೀವ ಪರಮಾತ್ಮವಿವೇಚನಪೂ ರ್ವಕವಾಗಿ,ಆ ಭಗವಂತನ ಯಾಥಾತ್ಮ್ಯಜ್ಞಾನವುಂಟಾಗುವುದು.ಈ ಜ್ಞಾನ ವು ಹುಟ್ಟಿದಮೇಲೆ, ಹಸಿವು, ಬಾಯಾರಿಕೆ ಮುಂತಾದ ಷಡೂರ್ಮಿಗಳನ್ನು ಜ ಯಿಸಬಹುದು. ಇದನ್ನು ತಿಳಿಯದೆ ಕೆಲವರು,ವಿಷಯೋಪಭೋಗಕ್ಕಾಗಿಯೇ ಧನವನ್ನು ಉಪಯೋಗಿಸುವರು. ಅಂತವರು ತಮ್ಮ ದೇಹವು ಎಂದಿದ್ದರೂ ಮೃತ್ಯುವಿನ ಪಾಲೆಂಬುದನ್ನು ಯೋಚಿಸದೆ ಅದರ ಪೋಷಣೆಗಾಗಿಯೇ ಶ್ರಮಪಡುವರು. ಇಂತವರು ಕೇವಲನಿಂದ್ಯರು. ಯಜ್ಞಕಾಲಗಳಲ್ಲಿ ವಿಹಿತಗಳಾಗಿರುವ ಸುರಾಪಾನ ಮಾಂಸಭಕ್ಷಣಗಳೆರಡೂ, ತನಗೆ ಪ್ರಾಣ ಭೂತನಾದ ಪರಮಾತ್ಮನ ಪ್ರೀತಿಗಾಗಿಯೇಹೊರತು ತನ್ನ ತೃಪ್ತಿಗಲ್ಲ! ಅದರಲ್ಲಿ ಮಾಡಿದ ಪಶುವಧವೂ ಹಿಂಸೆಯೆನಿಸುವುದಿಲ್ಲ! ಅವುಗಳಿಂದ ಆತ್ಮ

---

* "ಧರ್ಮಪ್ರಜಾಸಂಪನ್ನ್ಯರ್ಥಃ ಸ್ತ್ರೀಯಮುದ್ವಹೇತ್, ಋತಾ ಉಪೇಯಾತ್ ಪಶುಮಾಲಭೇತ, ಯಜಮಾನಪಂಚಮಾ ಇಡಾಂ ಭಕ್ಷಯನ್ತಿ. ಹುತಶೇಷಮಶ್ನೀ ಯಾತ್, ಸೌತ್ರಾಮಣ್ಯಾಸುರಾಗ್ರಹಾನ್ ಗೃಹ್ಣಾತಿ, ಪ್ರತಿಗ್ರಹಾದಿನಾ ಧನಮಾರ್ಜ ಯೇತ್" ಇತ್ಯಾದಿಶಾಸ್ತ್ರಗಳು ಸ್ತ್ರೀಸಂಗಾದಿಗಳನ್ನು ವಿಧಿಸುತ್ತಿರುವಾಗ ಅವುಗಳ ನ್ನು ನಿಂದಿಸಬಹುದೆ ? ಎಂದರೆ ಅದಕ್ಕೆ ಸಮಾಧಾನವಾಗಿ ಮುಂದಿನ ವಾಕ್ಯವೆಂದು ಗ್ರಹಿಸಬೇಕು

ಶುದ್ಧಿಯೇ ಹೊರತು ದೋಷವಿಲ್ಲ! ಋತುಕಾಲದಲ್ಲಿ ಪತ್ನೀಸಂಭೋಗವೂ ಕೂಡ ಸಂತಾನಾರ್ಥವಾಗಿಯೇಹೊರತು ರತಿಸುಖಕ್ಕಲ್ಲ. ಈ ಸಂತಾನವನ್ನು ಪಡೆಯುವುದರಿಂದ, ಪಿತೃಋಣದಿಂದ ಮುಕ್ತನಾಗುವನು. ಯಾರು ಈ ಧರ್ಮಸೂಕ್ಷ್ಮವನ್ನು ತಿಳಿಯದೆ,ತಾವೇ ದೊಡ್ಡ ಕರ್ಮನಿಷ್ಠರೆಂಬ ಹೆಮ್ಮೆಯಿಂದ ನಿರ್ಭಯರಾಗಿ ಪಶುಹಿಂಸೆಯನ್ನು ಮಾಡುವರೋ, ಅಂತವರು ಸತ್ತಮೇಲೆ, ಪರಲೋಕದಲ್ಲಿ ಆ ಪಶುಗಳಿಂದಲೇ ತಾವು ಭಕ್ಷಿಸಲ್ಪಡುವರು. ಇತರಪ್ರಾಣಿಗಳಿಗೆ ದ್ರೋಹವನ್ನೆಣಿಸುವುದರಿಂದ, ಅವುಗಳಲ್ಲಿ ಅಂತರಾತ್ಮನಾದ ಶ್ರೀಹರಿಯಲ್ಲಿಯೇ ದ್ವೇಷವನ್ನು ತೋರಿಸಿದಂತಾಗುವುದು. ಹೀಗೆ ಮಾಡುವವರಿಗೂ, ಶವಪ್ರಾಯವಾದ ತಮ್ಮ ದೇಹದಲ್ಲಿಯೂ ಆ ದೇಹಾನುಬಂಧಿಗಳಾದ ಪುತ್ರಕಳತ್ರಾದಿಗಳಲ್ಲಿಯೂ ವಿಶೇಷ ಮೋಹವನ್ನಿಡುವವರಿಗೂ, ನರಕವು ತಪ್ಪಿದುದಲ್ಲ ! ಜ್ಞಾನನಿಷ್ಠೆಯಿಂದ ತಮ್ಮ ಮೌಢ್ಯವನ್ನು ಕಳೆಯದೆ, ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನೇ ಪ್ರಧಾನವಾಗಿಟ್ಟುಕೊಂಡು, ಅದರಿಂದ ಕ್ಷಣಮಾತ್ರವೂ ಉಪಶಾಂತಿಯಿಲ್ಲದೆ ದುಡಿಯುವವರನ್ನು ಆತ್ಮಘಾತುಕರೆಂದೇ ಹೇಳಬಹುದು. ಹೀಗೆ ಆತ್ಮಘಾತುಕರಾದ ಅಜ್ಞಾನಿಗಳಾಗಿದ್ದರೂ, ತಮ್ಮನ್ನೇ ಮಹಾಜ್ಞಾನಿಗಳಂತೆ ಎಣಿಸತಕ್ಕವರು, ಕೊನೆಗೆ ಕಾಲವಶದಿಂದ ತಮ್ಮ ಮನೋರಥಗಳೆಲ್ಲವೂ ಕೆಟ್ಟುಹೋದಾಗ, ಆಶಾಭಂಗವನ್ನು ಹೊಂದಿ, ಬದುಕಿರುವಾಗಲೇ ಅನೇಕಕ್ಲೇಶಗಳನ್ನು ಹೊಂದುವರು. ಕೊನೆಗಾಲಕ್ಕೆ ಅವರು ತಾವು ಎಷ್ಟೋಕಷ್ಟಪಟ್ಟು ಪೋಷಿಸುತ್ತ ಬಂದ ಗೃಹಧನಾದಿಗಳನ್ನೂ, ಹೆಂಡಿರುಮಕ್ಕಳನ್ನೂ ಬಿಡಲಾರದೆ ಬಿಟ್ಟುಹೋಗಬೇಕಾಗುವುದು. ಮತ್ತು ಅವರು ಬದುಕಿರುವವರೆಗೂ ಶ್ರೀಹರಿಯಲ್ಲಿ ವಿಮುಖರಾಗಿದ್ದುದರಿಂದ ಸತ್ತಮೇಲೆ ನರಕದಲ್ಲಿಯೂ ಬಿದ್ದು ಕೊಳಲುವರು." ಎಂದನು. ಆಮೇಲೆ ವಿದೇಹರಾಜನು ತಿರುಗಿ ಆ ಮಹರ್ಷಿಯನ್ನೇ ಕುರಿತು. "ಓ ಮಹಾತ್ಮಾ ! ಭಗವಂತನು ಯಾವಯಾವ ನಾಮರೂಪ ವರ್ಣಭೇದಗಳುಳ್ಳವನಾಗಿ ಯಾವಯಾವ ವಿಧಿಗಳಿಂದ ಪೂಜಿಸಲ್ಪಡುತಿದ್ದನೆಂಬುದನ್ನು ತಿಳಿಸಬೇಕು." ಎಂದು ಕೇಳಲು, ಅದಕ್ಕಾಮಹರ್ಷಿಯು "ರಾಜಾ ಕೇಳು ! ಕೃತ, ತ್ರೇತಾ, ದ್ವಾಪರ, ಕ

ಲಿಗಳೆಂಬ ನಾಲ್ಕು ಯುಗಗಳಲ್ಲಿಯೂ, ಶ್ರೀಹರಿಯು ನಾನಾವಿಧವರ್ಣಗಳಿಂದಲೂ, ನಾಮರೂಪಗಳಿಂದಲೂ ಕೂಡಿದವನಾಗಿ, ಬೇರೆಬೇರೆ ವಿಧಿಗಳಿಂದ ಪೂಜಿಸಲ್ಪಡುವನು. ಕೃತಯುಗದಲ್ಲಿ ಶುಕ್ಲವರ್ಣದಿಂದಲೂ, ಚತುರ್ಬಾಹುಗಳಿಂದಲೂ ಕೂಡಿದವನಾಗಿ, ಜಡೆ, ನಾರುಮಡಿ, ಕೃಷ್ಣಾಜಿನ, ಯಜ್ಞೋಪವೀತ, ಅಕ್ಷಮಾಲಿಕೆ, ದಂಡ, ಕಮಂಡಲುಗಳನ್ನು ಧರಿಸಿ, ಬ್ರಹ್ಮಚಾರಿವೇಷದಿಂದಿರುವನು. ಆ ಕಾಲದಲ್ಲಿ ಮನುಷ್ಯರೆಲ್ಲರೂ ವೈರಬುದ್ಧಿಯಿಲ್ಲದೆ, ಶಾಂತರಾಗಿ, ಸರ್ವಭೂತಸುಹೃತ್ತುಗಳೆನಿಸಿಕೊಂಡು, ಸಮದರ್ಶಿಗಳಾಗಿ, ಶಮದಮಾದಿಗುಣಗಳಿಂದಲೂ, ಧ್ಯಾನಯೋಗದಿಂದಲೂ ಕೂಡಿ ಭಗವಂತನನ್ನಾರಾಧಿಸುವರು. ಆಗ ಭಗವಂತನು, ಹಂಸ, ಸುವರ್ಣ, ವೈಕುಂಠ, ಧರ್ಮ, ಯೋಗೀಶ್ವರ, ಅಮಲ, ಈಶ್ವರ, ಪುರುಷ, ಅವ್ಯಕ್ತ, ಪರಮಾತ್ಮನೆಂಬೀ ಹೆಸರುಗಳಿಂದಲೂ, ಆ ಹೆಸರಿಗೆ ತಕ್ಕ ಗುಣಗಳಿಂದಲೂ ಕೀರ್ತಿಸಲ್ಪಡುವನು. ತ್ರೇತಾಯುಗದಲ್ಲಿ ಭಗವಂತನು ರಕ್ತವರ್ಣದಿಂದಲೂ, ನಾಲ್ಕುಭುಜಗಳಿಂದಲೂ ಕೂಡಿದವನಾಗಿ, ಯಜ್ಞಾಂಗವೆನಿಸಿ ಮೂರೆಳೆಯ ಮೇಖಲೆಯನ್ನು ಧರಿಸಿರುವನು ಆಗ ಅವನು ಪಿಂಗಳವರ್ಣವಾದ ಕೇಶಗಳೊಡನೆ ಯಜ್ಞಮೂರ್ತಿಯೆನಿಸಿಕೊಂಡು, ಯಜ್ಞನಿರ್ವಾಹಕನಾಗಿ, ಸ್ರುಕ್ಕು, ಸ್ರುವೆ ಮೊದಲಾದ ಯಜ್ಞಚಿಹ್ನಗಳನ್ನು ಧರಿಸಿರುವನು. ಆ ಕಾಲದಲ್ಲಿ, ಜನರೆಲ್ಲರೂ ಪ್ರಾಯಕವಾಗಿ, ಧರ್ಮನಿಷ್ಠರೂ, ಬ್ರಹ್ಮವಾದಿಗಳೂ ಆಗಿದ್ದು, ಯಜ್ಞಾದಿಕರ್ಮಗಳಿಂದ ಆತನನ್ನಾರಾಧಿಸುವರು. ಆಗ ಭಗವಂತನು, ಯಜ್ಞ, ಪೃಶ್ನಿಗರ್ಭ, ಸರ್ವ, ದೇವ, ಉರುಕ್ರಮ, ವೃಷಾಕಪಿ, ಜಯಂತ, ಉರುಗಾಯ ನೆಂಬೀಹೆಸರುಗಳಿಂದಲೂ, ಅದಕ್ಕೆ ತಕ್ಕಗುಣಗಳಿಂದಲೂ ಕೀರ್ತಿಸಲ್ಪಡುವನು.

ದ್ವಾಪರಯುಗದಲ್ಲಿ ಭಗವಂತನು, ಪೀತಾಂಬರವನ್ನು ಧರಿಸಿ, ಶಂಖಚಕ್ರಾದ್ಯಾಯುಧಗಳಿಂದಲೂ, ಶ್ರೀವತ್ಸಾದಿ ಸಹಜಚಿಹ್ನಗಳಿಂದಲೂ, ಕೌಸ್ತುಭ, ವನಮಾಲಿಕೆ, ಮುಂತಾದ ಅಸಾಧಾರಣಭೂಷಣಗಳಿಂದಲೂ ಒಪ್ಪುತ್ತ, ಸಾರ್ವಭೌಮಲಕ್ಷಣಗಳಾದ ಛತ್ರಚಾಮರಾದಿಗಳಿಂದಲೂ ಕೂಡಿರುವನು. ಆಗ ಮನುಷ್ಯರು, ತತ್ವತ್ರಯಜ್ಞಾನವನ್ನು ಕೋರಿ, ವೇದಗಳಲ್ಲಿ

ಯೂ, ಪಾಂಚರಾತ್ರಗಳಲ್ಲಿಯೂ ವಿಧಿಸಲ್ಪಟ್ಟ ಪೂಜಾವಿಧಾನಗಳಿಂದ ಪರಮಪುರುಷನನ್ನು ಪೂಜಿಸುವರು. ಆಗ ಜನರು ‘‘ಓ ಭಗವಂತಾ! ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೆಂಬ ನಾಲ್ಕು ವ್ಯೂಹ ರೂಪಗಳಿಂದವತರಿಸಿದ ನಿನಗೆ ನಮಸ್ಕಾರವು. ನಾರಾಯಣಋಷಿಯೂ ಮಹಾಪುರುಷನೂ ವಿಶ್ವೇಶ್ವರನೂ ವಿಶ್ವಾತ್ಮಕನೂ,ಸರ್ವಭೂತಾಂತರಾತ್ಮನೂ ಆದ ನಿನಗೆ ನಮಸ್ಕಾರವು.” ಎಂದು ಸ್ತುತಿಸುವರು. ಇನ್ನು ಕಲಿಯುಗದಲ್ಲಿ ಆ ಭಗವಂತನ ಸ್ಥಿತಿಯನ್ನೂ, ಅವನನ್ನು ಜನರು ಹೇಗೆ ಉಪಾಸನೆ ಮಾಡುವರೆಂಬುದನ್ನೂ ತಿಳಿಸುವೆನು ಕೇಳು! ಆಗ ಭಗವಂತನು ಕಾಂತಿಯಲ್ಲಿ ಇಂದ್ರನೀಲಮಣಿಯನ್ನು ಹೋಲುತ್ತ, ಕೃಷ್ಣನಾಮದಿಂದಲೇ ಕರೆಯಲ್ಪಡುವನು. ಆ ಶ್ರೀಕೃಷ್ಣನನ್ನೂ, ಅವನ ಹೃದಯಾದ್ಯಂಗಗಳನ್ನೂ, ಕೌಸ್ತುಭವೇ ಮೊದಲಾದ ಅವನ ಉಪಾಂಗಗಳನ್ನೂ, ಶಂಖಚಕ್ರಾದ್ಯಾಯುಧಗಳನ್ನೂ, ಸುನಂದ, ನಂದರೇ ಮೊದಲಾದ ಅವನ ಪಾರ್ಷದರನ್ನೂ, ವಿವೇಕಿಗಳಾದ ಜನರು, ಕಲಿಯುಗದಲ್ಲಿ ಕೇವಲ ಸಂಕೀರ್ತನರೂಪವಾದ ಪೂಜೆಗಳಿಂದಲೇ ಆರಾಧಿಸುವರು. ಆಗ ಅವರು ಭಗವಂತನನ್ನು ಕುರಿತು. ‘‘ಓ ಆಶ್ರಿತರಕ್ಷಕಾ! ಮಹಾಪುರುಷಾ! ನಿನ್ನ ಚರಣಾರವಿಂದಗಳನ್ನು ವಂದಿಸುವೆವು. ಆ ನಿನ್ನ ಪಾದಪದ್ಮವೊಂದೇ ಈಗ ನಮಗೆ ಧ್ಯಾನಯೋಗ್ಯವಾದುದು. ನಮಗೆ ಕುಟುಂಬಮೋಹವನ್ನೂ, ಇಂದ್ರಿಯಚಾಪಲ್ಯವನ್ನೂ ನೀಗಿಸಿ, ನಮ್ಮ ಇಷ್ಟಾರ್ಥಗಳನ್ನು ಕೈಗೂಡಿಸುವುದಕ್ಕೂ ನಿನ್ನ ಪಾದಸೇವೆಯೇ ಮುಖ್ಯೋಪಾಯವು. ಗಂಗಾದಿ ಪುಣ್ಯತೀರ್ಥಗಳಿಗೂ ಆಶ್ರಯವೆನಿಸಿಕೊಂಡು, ಬ್ರಹ್ಮ ರುದ್ರಾದಿದೇವತೆಗಳಿಗೂ ಸೇವ್ಯವಾಗಿ, ಸಮಸ್ತಪ್ರಾಣಿಗಳಿಗೂ ಮುಖ್ಯಗತಿಯಾಗಿ, ಭಕ್ತರ ಅನಿಷ್ಟಗಳೆಲ್ಲವನ್ನೂ ನಿವಾರಿಸತಕ್ಕ ನಿನ್ನ ಪಾದವನ್ನು ವಂದಿಸುವೆವು. ಸಂಸಾರಸಮುದ್ರವನ್ನು ದಾಟಿಸುವುದಕ್ಕೆ ಆ ನಿನ್ನ ಪಾದಗಳೇ ನಾವೆಯಂತಿರುವುವು. ಲೋಕದಲ್ಲಿ ಧರ್ಮಮರ್ಯಾದೆಯನ್ನು ನಿರೂಪಿಸುವುದಕ್ಕಾಗಿ ರಾಮರೂಪದಿಂದವತರಿಸಿದ ನೀನು, ಪಿತೃವಾಕ್ಯಪರಿಪಾಲನಕ್ಕಾಗಿ, ದೇವತೆಗಳೂ ಆಸೆಪಡತಕ್ಕ ದುಸ್ತ್ಯಜವಾದ ಸಾಮ್ರಾಜ್ಯಲಕ್ಷ್ಮಿಯನ್ನೂ ತೊರೆದು, ಕಾಡಿಗೆ

ಹೋಗಿ, ಅಲ್ಲಿ ಪ್ರಿಯೆಯಾದ ಸೀತಾದೇವಿಯ ಬಯಕೆಯನ್ನು ಸಲ್ಲಿಸುವುದ ಕ್ಕಾಗಿ, ಸುಕುಮಾರವಾದ ಯಾವ ಪಾದಪದ್ಮಗಳಿಂದ ಮಾಯಾಮೃಗ ವನ್ನು ಬೆನ್ನಟ್ಟಿಓಡಿದೆಯೋ, ಅಂತಹ ಪಾದಾರವಿಂದಗಳನ್ನು ನಮಸ್ಕರಿಸು ವೆವು" ಎಂಬಿವೇ ಮೊದಲಾದ ಅವತಾರಚರಿತ್ರಗಳಿಂದ ಭಗವಂತನನ್ನು ಸ್ತುತಿಸುವರು. ಓ ರಾಜಾ! ಹೀಗೆ ಭಗವಂತನು ಆಯಾಯುಗಕ್ಕೆ ಅನು ರೂಪಗಳಾದ ನಾಮರೂಪಗಳಿಂದ ಕೂಡಿ,ಆಯಾ ಯುಗಧರ್ಮವನ್ನನುಸರಿಸ ತಕ್ಕ ಮನುಷ್ಯರಿಂದ ಪೂಜಿಸಲ್ಪಡುವನು. ದೋಷಗಳೆಷ್ಟಿದ್ದರೂ ಗಣಿಸದೆ, ಕೇವಲಗುಣಗ್ರಾಹಿಗಳಾದ ಆರ್ಯರು ವಿಶೇಷವಾಗಿ ಕಲಿಯುಗವನ್ನೇ ಗೌರ ವಿಸುವರು. ಏಕೆಂದರೆ,* ಆ ಯುಗದಲ್ಲಿ ಕೇವಲಭಗವನ್ನಾಮಸಂಕೀರ್ತನ ದಿಂದಲೇ ಇಷ್ಟಾರ್ಥಗಳೆಲ್ಲವೂ ಕೈಗೂಡುವುವು. ಈ ಸಂಸಾರದಲ್ಲಿ ತೊಳ ಲುತ್ತಿರುವ ದೇಹಿಗಳಿಗೆ, ಕಲಿಯುಗದಲ್ಲಿ ಇದಕ್ಕಿಂತಲೂ ಉತ್ತಮವಾದ ಉಪಾಯವಿಲ್ಲ. ಮರಣಾಂತವಾಗಿ ಇದನ್ನಾಚರಿಸಿದವರು ಸಂಸಾರಮು ಕ್ತರಾಗಿ, ಉತ್ತಮಶಾಂತಿಯನ್ನು ಹೊಂದುವರು. ಹೀಗೆ ಮೋಕ್ಷೋಪಾಯ ವು ಬಹುಸುಲಭವಾದುದರಿಂದ, ಕೃತಾದಿಯುಗದವರೂ, ಕಲಿಯುಗದಲ್ಲಿ ತಮಗೆ ಜನ್ಮವಾಗಬೇಕೆಂದು ಕೋರುವರು. ಹಾಗೆಯೇ ತಮ್ಮ ಉದ್ದೇಶ ದಂತೆ ಪರಮಭಾಗವತೋತ್ತಮರಾಗಿ ಹುಟ್ಟುವರು. ಇಂತವರನ್ನು ದ್ರವಿ ಡದೇಶಗಳಲ್ಲಿ ಹೆಚ್ಚಾಗಿ ಕಾಣಬಹುದು. ಓ ರಾಜಾ! ಅದರಲ್ಲಿಯೂ ತಾಮ್ರ ಪರ್ಣಿ, ಕಾವೇರಿ, ಕೃತಮಾಲೆ, ಪಯಸ್ವಿನಿ, ಪ್ರತೀಚಿ, ಮುಂತಾದ ಪುಣ್ಯ ನದಿಗಳ ಜಲವನ್ನು ಯಾರು ಪಾನಮಾಡುವರೋ, ಅವರು ಶುದ್ಧಮನಸ್ಕ ರಾದ ಭಾಗವತೋತ್ತಮರೆನಿಸುವರು. ಇಲ್ಲಿ ತನ್ನನ್ನು ಕೀರ್ತಿಸಿದವರಿಗೆ ಭ ಗವಂತನು ಪುನರ್ಜನ್ಮವಿಲ್ಲದಂತೆ ಮಾಡುವನು. ಯಾವನು ಸಮಸ್ತಕರ್ಮಗಳ ನ್ನೂ ಬಿಟ್ಟು ಆ ಮುಕುಂದವನ್ನೇ ಸರ್ವಭಾವದಿಂದ ಶರಣುಹೊಂದುವನೋ ಅವನು ಅದರಿಂದಲೇ ದೇವರ್ಷಿ ಪಿತೃಬಂಧು ಋಣಮುಕ್ತನಾಗಿ ಯಾರಿಗೂ ತಾನು ಕಿಂಕರನೆನಿಸದೆ, ಭಗವಂತನ ಪ್ರೀತಿಗೆ ಪಾತ್ರನಾಗುವನು. ಅಂತ ವನಿಗೆ ಪ್ರಮಾದವಶದಿಂದ ಯಾವುದಾದರೂ ವಿರುದ್ಧಕರ್ಮಗಳಲ್ಲಿ ಪ್ರವೃ ತ್ತಿಯುಂಟಾದರೂ, ಅವನ ಹೃದಯದಲ್ಲಿ ನೆಲೆಗೊಂಡ ಭಗವಂತನು ಆ ಕರ್ಮ ದೋಷವನ್ನೂ ನೀಗಿಸುವನು." ಎಂದನು.

---

* ಇಲ್ಲಿ "ಧ್ಯಾಯನ್ ಕೃತೇ, ಯಜನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚ ಯನ್ । ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್" ಎಂಬಂತೆ ಕಲಿ ಯುಗದಲ್ಲಿ ಹರಿಸಂಕೀರ್ತನಮಾತ್ರವೇ ಸಕಲ ಪುರುಷಾರ್ಥಸಾಧಕವೆಂದು ಗ್ರಾಹ್ಯವು.

ಓ ವಸುದೇವಾ ! ಮಿಥಿಲಾಧಿಪತಿಯಾದ ಜನಕನು ಈ ಭಾಗವತ ಧರ್ಮಗಳನ್ನು ಕೇಳಿ ಬಹಳ ಸಂತೋಷಗೊಂಡವನಾಗಿ, ತನ್ನ ಉಪಾಧ್ಯಾಯರೊಡಗೂಡಿ, ಜಯಂತೀದೇವಿಯ ಪುತ್ರರಾದ ಆ ಮಹರ್ಷಿಗಳನ್ನು ವಿಶೇಷವಾಗಿ ಸತ್ಕರಿಸಿ ಪೂಜಿಸಿದನು. ಆಮೇಲೆ ಅಲ್ಲಿ ನೆರೆದಿದ್ದ ಜನರೆಲ್ಲರೂ ನೋಡುತಿದ್ದಹಾಗೆಯೇ ಆ ಮುನಿಗಳೆಲ್ಲರೂ ಅಂತರ್ಧಾನವನ್ನು ಹೊಂದಿದರು. ಇತ್ತಲಾಗಿ ವಿದೇಹರಾಜನೂಕೂಡ ಆ ಮುನಿಗಳಿಂದ ಉಪದೇಶಿಸಲ್ಪಟ್ಟ ಭಾಗವತಧರ್ಮಗಳನ್ನು ನಿಯಮದಿಂದನುಷ್ಠಿಸುತ್ತ, ಕೊನೆಗೆ ಅದರಿಂದ ಉತ್ತಮಗತಿಯಾದ ಮುಕ್ತಿಯನ್ನು ಹೊಂದಿದನು. ಓ ಮಹಾಭಾಗಾ ! ನೀನೂ ಹಾಗೆಯೇ ಆ ಭಾಗವತಧರ್ಮಗಳನ್ನು ಶ್ರದ್ಧೆಯಿಂದ ಅನುಷ್ಠಿಸುತ್ತ, ದೇಹದಲ್ಲಿಯೂ, ದೇಹಾನುಬಂಧಗಳಲ್ಲಿಯೂ ಮೋಹವನ್ನು ತ್ಯಜಿಸಿದಪಕ್ಷದಲ್ಲಿ ಉತ್ತಮಪದವನ್ನು ಹೊಂದಬಹುದು. ಇದೇನೋ ಶಾಸ್ತ್ರವಿಹಿತವಾದ ಪ್ರಕ್ರಿಯೆಯು. ಆದರೆ ನೀನೂ, ನಿನ್ನ ಪತ್ನಿಯೂ ಆ ಶಾಸ್ತ್ರಪಕ್ರಿಯೆಯಿಲ್ಲದೆಯೇ ಕೃತಾರ್ಥರೆನಿಸಿರುವಿರಿ ! ಏಕೆಂದರೆ, ಸರ್ವೇಶ್ವರನಾದ ಆ ಶ್ರೀಹರಿಯೇ ನಿಮಗೆ ಪುತ್ರನಾಗಿ ಅವತರಿಸಿರುವನು. ಅದರಿಂದ, ದಂಪತಿಗಳಾದ ನಿಮ್ಮಿಬ್ಬರ ಯಶಸ್ಸು ಲೋಕವಿಖ್ಯಾತವಾಗಿರುವುದು. ಸರ್ವೇಶ್ವರನಾದ ಆ ಕೃಷ್ಣನನ್ನು ಪುತ್ರಸ್ನೇಹದಿಂದ ಕಾಣುವುದು, ಅವನ ಲೀಲೆಗಳನ್ನು ಆಗಾಗ ಕಣ್ಣಾರೆ ನೋಡುತ್ತಿರುವುದು, ಆಗಾಗ ಅವನನ್ನಾಲಿಂಗಿಸುವುದು, ಅವನೊಡನೆ ಸಂಭಾಷಿಸುವುದು, ಅವನೊಡನೆ ಸಹಶಯ್ಯೆಯಲ್ಲಿ ಮಲಗುವುದು, ಅವನೊಡನೆ ಏಕಾಸನದಲ್ಲಿ ಕುಳ್ಳಿರುವುದು, ಸಂಗಡ ಸೇರಿ ಭೋಜನಮಾಡುವುದು, ಹೀಗೆ ನೀವು ಯಾವಾಗಲೂ ಅವನೊಡನೆ ಕಲೆತಿರುವುದರಿಂದಲೇ ನಿಮ್ಮ ಆತ್ಮವು ಪಾವನವಾಗಿರುವುದು ಶಿಶುಪಾಲ, ಪೌಂಡ್ರಕ, ಸಾಲ್ವ ಮುಂತಾದ ದುಷ್ಟರಾಜರು, ಅವನಲ್ಲಿ ಆಜನ್ಮದ್ವೇಷವನ್ನಿಟ್ಟು, ತಾವು ಮಲಗುವಾಗಲೂ, ಕುಳ್ಳಿರುವಾಗಲೂ, ಇತರಸಮಯಗಳಲ್ಲಿಯೂ ಆ ಶ್ರೀಕೃಷ್ಣನ ನಡೆನುಡಿಗಳನ್ನೂ, ಅವನ ನೋಟಗಳನ್ನೂ ನೆನೆಸಿಕೊಂಡು, ಅಸೂಯೆಯಿಂದ ಕುದಿಯುತಿದ್ದವರು. ಆ ವಿಧವಾದ ಬದ್ಧದ್ವೇಷದಿಂದ ಆ ಕೃಷ್ಣನನ್ನು ಸ್ಮರಿಸುತಿದ್ದಮಾತ್ರಕ್ಕೇ

ಅವರಿಗೆ ಆ ಕೃಷ್ಣನೊಡನೆ ಸಾಯುಜ್ಯವು ಲಭಿಸಿರುವಾಗ, ನಿಮ್ಮಂತೆ ಮನಃಪೂರ್ವಕವಾದ ಅನುರಾಗದಿಂದ ಅವನನ್ನು ಸ್ಮರಿಸತಕ್ಕವರಿಗೆ ಉತ್ತಮಗತಿಯು ಲಭಿಸುವುದರಲ್ಲಿ ಸಂದೇಹವೇನಿದೆ? ಓ ರಾಜಾ ! ನಿನ್ನ ಮಗನಾದ ಆ ಶ್ರೀಕೃಷ್ಣನೇ ಸರ್ವೇಶ್ವರನು! ಆತನೇ ಸರ್ವಾತ್ಮಕನು. ಈಗ ಮಾಯಾಮನುಷ್ಯನಾಗಿ ತನ್ನ ಐಶ್ವರ್ಯವನ್ನು ಮರೆಸಿಟ್ಟುಕೊಂಡಿರುವನು. ಆತನು ಪ್ರಕೃತಿಗಿಂತಲೂ ವಿಲಕ್ಷಣನಾದುದರಿಂದ ಪರನೆಂದೂ, ಸ್ವರೂಪ ಸ್ವಭಾವಗಳಲ್ಲಿ ವಿಕಾರವಿಲ್ಲದವನಾದುದರಿಂದ ಅವ್ಯಯನೆಂದೂ, ಕರೆಯಲ್ಪಡುವನು. ಅಂತಹ ಕೃಷ್ಣನಲ್ಲಿ ನೀನು ಇನ್ನು ಮೇಲೆ ನಿನ್ನ ಮಗನೆಂಬ ಬುದ್ಧಿಯನ್ನು ಬಿಟ್ಟುಬಿಡಬೇಕು. "ಹಾಗಿದ್ದರೆ ಸರ್ವೇಶ್ವರನಾದ ಆ ಪರಮಪುರುಷನು ಹೀಗೆ ಮಾಯಾಮನುಷ್ಯನಾಗಿ ಹುಟ್ಟಿರುವುದೇಕೆ?" ಎಂದು ಕೇಳುವೆಯಾ? ಕೆಲವುದೈತ್ಯರು ಕ್ಷತ್ರಿಯರಾಗಿ ಹುಟ್ಟಿ, ಲೋಕಕಂಟಕರಾಗಿ ವರ್ತಿಸುತಿದ್ದುದರಿಂದ, ಭೂಭಾರವು ಹೆಚ್ಚಿಹೋಯಿತು. ಅವರನ್ನು ಕೊಂದು ಸಾಧುಗಳನ್ನು ರಕ್ಷಿಸುವುದಕ್ಕಾಗಿಯೇ ಭಗವಂತನು ಈ ಮಾಯಾಮನುಷ್ಯರೂಪದಿಂದ ಕೃಷ್ಣನಾಗಿ ನನ್ನ ಗರ್ಭದಲ್ಲಿ ಅವತರಿಸಿರುವನು. ನಾನಾಬಗೆಯ ಅದ್ಭುತಕಾರ್ಯಗಳಿಂದ ಲೋಕದಲ್ಲಿ ತನ್ನ ಕೀರ್ತಿಯನ್ನು ವಿಸ್ತರಿಸುತ್ತಿರುವನು. ಅವನಲ್ಲಿ ನೀನು ಪುತ್ರನೆಂಬ ಬುದ್ಧಿಯನ್ನು ಬಿಟ್ಟುಬಿಡಬೇಕು." ಎಂದನು. ಓ ಪರೀಕ್ಷಿದ್ರಾಜಾ ! ನಾರದನು ಹೇಳಿದ ಈ ತತ್ವೋಪದೇಶವನ್ನು ಕೇಳಿದುದು ಮೊದಲು,ವಸುದೇವದೇವಕಿಯರಿಬ್ಬರೂ, ಕೃಷ್ಣನಲ್ಲಿ ತಮ್ಮ ಮಗನೆಂಬ ಮೋಹವನ್ನು ಬಿಟ್ಟು, ಆತನೇ ಪರಮಪುರುಷನೆಂಬ ಭಾವದಿಂದ ಗೌರವಿಸುತಿದ್ದರು. ಓ ರಾಜಾ ! ಪುಣ್ಯಕರವಾದ ಈ ಇತಿಹಾಸವನ್ನು ಯಾವನು ಶ್ರದ್ಧೆಯಿಂದ ಮನಸ್ಸಿನಲ್ಲಿ ಧಾರಣಮಾಡುವನೋ, ಅವನು ಆ ಜನ್ಮದಲ್ಲಿಯೇ ಮುಕ್ತಿವಿರೋಧಿಗಳಾದ ಪುಣ್ಯಪಾಪಕರ್ಮಗಳನ್ನು ಕಳೆದು ಆ ಭಗವಂತನ ಸಾಯುಜ್ಯವನ್ನು ಹೊಂದುವನು.ಇದು ಐದನೆಯ ಅಧ್ಯಾಯವು.

---

{ಬ್ರಹ್ಮಾದಿದೇವತೆಗಳು ದ್ವಾರಕೆಗೆ ಬಂದು ಶ್ರೀಕೃಷ್ಣನನ್ನು ಸ್ತುತಿಸಿದುದು.}

ಓ ಪರೀಕ್ಷಿದ್ರಾಜಾ! ಕೃಷ್ಣನು ಯಾದವಕುಲಸಂಹಾರಕ್ಕಾಗಿ ಬ್ರಾಹ್ಮಣಶಾಪವನ್ನೇ ವ್ಯಾಜವಾಗಿ ಸಂಕಲ್ಪಿಸಿದನಷ್ಟೆ? ಆ ಸಂಕಲ್ಪವು ಹುಟ್ಟಿದಮೇಲೆ, ಒಮ್ಮೆ ಬ್ರಹ್ಮನು ಮರೀಚಿ ಮೊದಲಾದ ಪ್ರಜಾಧಿಪತಿಗಳೊಡನೆಯೂ, ತನ್ನ ಪುತ್ರರಾದ ಸನಕಾದಿಗಳೊಡನೆಯೂ, ರುದ್ರನು ಸಮಸ್ತಭೂತಗಣಗಳೊಡನೆಯೂ, ದೇವೇಂದ್ರನು, ದೇವಗಣಗಳೊಡನೆಯೂ, ದ್ವಾದಶಾದಿತ್ಯರು, ಅಷ್ಟವಸುಗಳು, ಅಶ್ವಿನೀದೇವತೆಗಳು, ಋಷಿಗಳು, ಆಂಗಿರಸರು, ಏಕಾದಶರುದ್ರರು, ವಿಶ್ವೇದೇವತೆಗಳು, ಸಿದ್ಧರು, ಸಾಧ್ಯರು, ನಾಗರು, ಗುಹ್ಯಕರು, ಚಾರಣರು, ಪಿತೃಗಳು, ವಿದ್ಯಾಧರರು, ಕಿನ್ನರರು, ಮುಂತಾದ ಇತರದೇವತೆಗಳೂ ಒಟ್ಟಾಗಿ ಸೇರಿ, ಶ್ರೀಕೃಷ್ಣನ ದರ್ಶನಾರ್ಥವಾಗಿ ದ್ವಾರಕೆಗೆ ಬಂದರು. ಭಗವಂತನು ಸಮಸ್ತಲೋಕಕ್ಕೂ ಮೋಹಕವಾದ ಯಾವ ಶರೀರದಿಂದ ಲೋಕಪಾವನವಾದ ತನ್ನ ಕೀರ್ತಿಯನ್ನು ವಿಸ್ತರಿಸಿದನೋ, ಆ ಮೂರ್ತಿಯನ್ನು ತಾವೂ ಕಣ್ಣಾರೆ ಕಂಡು ಆನಂದಿಸಬೇಕೆಂಬ ಉತ್ಸಾಹದಿಂದ, ಆ ದೇವತೆಗಳೆಲ್ಲರೂ ಭಾಗ್ಯಸಮೃದ್ಧವಾದ ದ್ವಾರಕೆಗೆ ಬಂದು,ಅಲ್ಲಿ ಅದ್ಭುತದರ್ಶನವುಳ್ಳ ಆ ಶ್ರೀಕೃಷ್ಣನ ದೇಹಸೌಂದರ್ಯವನ್ನು ಎಷ್ಟೆಷ್ಟು ನೋಡಿದರೂ ತೃಪ್ತಿಯಿಲ್ಲದಂತೆ, ಆತನ ದರ್ಶನಾನಂದವನ್ನನುಭವಿಸುತಿದ್ದರು. ಆಮೇಲೆ ಅವರು ಆ ಕೃಷ್ಣನಮೇಲೆ ನಂದನವನದಿಂದ ತಂದ ಪುಷ್ಪಗಳನ್ನು ವರ್ಷಿಸುತ್ತ, ಶಬ್ದಾರ್ಥವಿಚಿತ್ರಗಳಾದ ಸ್ತುತಿವಾಕ್ಯಗಳಿಂದ ಹೀಗೆಂದು ಸ್ತುತಿಸುವರು. “ನಾಥಾ! ನಾವು ನಮ್ಮ ಮನೋವಾಕ್ಕಾಯಗಳೆಂಬ ಕರಣತ್ರಯದಿಂದಲೂ ನಿನ್ನ ಪಾದಾರವಿಂದವನ್ನು ವಂದಿಸುವೆವು. ಕರ್ಮಪಾಶದಿಂದ ಬಿಡುಗಡೆಹೊಂದಬೇಕೆಂದು ಬಯಸುವ ಯೋಗೀಶ್ವರರೂಕೂಡ ಯಾವುದನ್ನು ಕೇವಲಮನಸ್ಸಿನಿಂದಮಾತ್ರ ಹುಡುಕುತ್ತಿರುವರೋ, ಆ ನಿನ್ನ ಪಾದಾರವಿಂದವನ್ನು ಈಗ ನಾವು ಪ್ರತ್ಯಕ್ಷವಾಗಿ ಕಣ್ಣಿಂದ ನೋಡಿ ನಮಸ್ಕರಿಸುತ್ತಿರುವೆವಲ್ಲವೆ? ಇಂತಹ ದುರ್ಲಭವಾದ ಭಾಗ್ಯಕ್ಕೆ ನಾವು

ಪಾತ್ರರಾದೆವು. ದೇವಾ! ಸತ್ವರಜಸ್ತಮಸ್ಸುಗಳೆಂಬ ಗುಣತ್ರಯಾತ್ಮಕ ವಾದ ನಿನ್ನ ಮಾಯೆಯಿಂದ, ನೀನು ಇತರರಿಗೆ ಚಿಂತಿಸುವುದಕ್ಕೂ ಅಸಾಧ್ಯವಾದ ಈ ಸ್ಥೂಲಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳನ್ನು ನಿರ್ವಹಿಸ ತಕ್ಕವನು. ಆ ಮೂರುಗುಣಗಳಿಗೂ ನೀನು ನಿಯಾಮಕನೇಹೊರತು, ಅವುಗಳಿಗೆ ಅಧೀನನಲ್ಲ! ಸೃಷ್ಟಿ ಮೊದಲಾದ ಆ ಕಾರ್ಯಗಳೆಲ್ಲವೂ ನಿನ್ನ ಲೀಲೆಗಳೇಹೊರತು, ಆ ಕರ್ಮಗಳಿಗೆ ನೀನು ಕಟ್ಟುಬಿದ್ದವನಲ್ಲ! ಮತ್ತು ನೀನು, ಅಸಾಧಾರಣವಾಗಿಯೂ,ಅಪರಿಚ್ಛಿನ್ನವಾಗಿಯೂ ಇರುವ ಆತ್ಮಾನಂದದಲ್ಲಿ ನೆಲೆಗೊಂಡಿರತಕ್ಕವನೇಹೊರತು, ಪ್ರಾಕೃತಜೀವರಂತೆ ವಿಷಯ ಸುಖಕ್ಕೆ ವಶನಾಗತಕ್ಕವನಲ್ಲ. ಅಂತಹ ವಿಷಯಾಸಕ್ತರಿಗೇ ಕರ್ಮಸಂಬಂಧವೂ, ತನ್ಮೂಲಕವಾದ ಸುಖದುಃಖಾನುಭವವೂ ಬಂದೊದಗುವುವು. ಹೇಯಗುಣಗಳೆಂಬಿವು ನಿನ್ನನ್ನಾಗಲಿ, ಕೊನೆಗೆ ನಿನ್ನ ಭಕ್ತರನ್ನಾಗಲಿ ಮುಟ್ಟಲಾರವು. ಸತ್ವಾತ್ಮಕರಾದ ಸಜ್ಜನರಿಗೆ ಪ್ರಭುವೆನಿಸಿಕೊಂಡ ಓ ಕೃಷ್ಣಾ! ವಿಷಯಾಸಕ್ತಿಯಿಂದ ದೂಷಿತರಾದ ಜನರಿಗೆ, ನಿನ್ನ ಗುಣಕೀರ್ತನದಿಂದ ಶುದ್ಧಿಯುಂಟಾಗುವಂತೆ, ವೇದಾಧ್ಯಯನದಿಂದಾಗಲಿ, ಅದರ ಅರ್ಥ ಶ್ರವಣದಿಂದಾಗಲಿ, ಅದರಿಂದುಂಟಾಗುವ ಉತ್ತಮಜ್ಞಾನದಿಂದಾಗಲಿ, ತಪಸ್ಸು, ದಾನ, ವರ್ಣಾಶ್ರಮಧರ್ಮಗಳು, ಮುಂತಾದುವುಗಳಿಂದಾಗಲಿ ಉಂಟಾಗಲಾರದು. ಹೀಗೆ ನಿನ್ನ ಪುಣ್ಯಕಥಾಶ್ರವಣದಿಂದಲೇ ಜನ್ಮವು ಪಾವನವಾಗುವಾಗ, ಸಾಕ್ಷಾತ್ತಾಗಿ ನಿನ್ನ ಪಾದಸೇವಾಪ್ರಭಾವ ವನ್ನು ಹೇಳತಕ್ಕುದೇನು ? ಸಂಸಾರನಿವೃತ್ತಿಯನ್ನಪೇಕ್ಷಿಸುವ ಮಹಾ ಮುನಿಗಳೂಕೂಡ, ತಮ್ಮ ಶ್ರೇಯಸ್ಸಿಗಾಗಿ, ಭಕ್ತಿಯುಕ್ತವಾದ ಮನಸ್ಸಿನಿಂದ ಯಾವುದನ್ನು ಮನನಮಾಡುತ್ತಿರುವರೋ, ಆ ನಿನ್ನ ಪಾದಾರವಿಂದವು ಅಶುಭಕಾರಣಗಳಾದ ನಮ್ಮ ಕರ್ಮವಾಸನೆಗಳಿಗೆಲ್ಲಾ ಧೂಮಕೇತುವಿನಂತೆ ನಾಶಹೇತುವಾಗಿ ನಮಗೆ ಶ್ರೇಯಸ್ಸನ್ನು ಕೈಗೂಡಿಸಲಿ! ಮತ್ತು ಆತ್ಮಪರಯಾತ್ಮತತ್ವವನ್ನು ತಿಳಿದ ಪಾಂಚರಾತ್ರಪ್ರವರ್ತಕರು, ಸ್ವರ್ಗಾದಿಲೋಕಗಳನ್ನೂ ಅತಿಕ್ರಮಿಸಿದ ನಿನ್ನ ನಿತ್ಯವಿಭೂತಿಸ್ಥಾನವನ್ನೂ, ಅದರಲ್ಲಿಯೂ ನಿನ್ನೊಡನೆ ಸಮಾನವಾದ ಐಶ್ವರ್ಯವನ್ನೂ ಪಡೆಯುವುದ

ಕ್ಕಾಗಿ ವಾಸುದೇವಾದಿವ್ಯೂಹಗಳನ್ನು ಉಪಾಸನೆಮಾಡುವಾಗ, ತ್ರಿಸಂಧ್ಯಾಕಾಲಗಳಲ್ಲಿಯೂ ಯಾವುದನ್ನು ಅರ್ಚಿಸುತ್ತಿರುವರೋ, ಆ ನಿನ್ನ ಪಾದಾರವಿಂದವು ನಮಗೆ ಶ್ರೇಯಸ್ಸನ್ನು ಕೈಗೂಡಿಸಲಿ! ಮತ್ತು ವೈದಿಕಕರ್ಮಗಳಲ್ಲಿ ನಿಷ್ಠರಾದವರು, ವೇದೋಕ್ತಗಳಾದ ಚರುಪುರೋಡಾಶಾದಿಹವಿಸ್ಸುಗಳನ್ನು ಕೈಯಲ್ಲಿ ಹಿಡಿದು ಹೋಮಮಾಡುವಾಗ, ಯಜ್ಞಾಗ್ನಿಗಳಲ್ಲಿಯೇ ಯಾವುದನ್ನು ಧ್ಯಾನಿಸುವರೋ, ಮತ್ತು ನಿನ್ನ ಮಾಯೆಯಾದ ಪ್ರಕೃತಿಗೆ ಪ್ರಾಧಾನ್ಯವನ್ನು ನಿರೂಪಿಸತಕ್ಕ ಸಾಂಖ್ಯಯೋಗಿಗಳೂ ಪ್ರಪತ್ತಿನಿಷ್ಠರಾದ ಭಾಗವತೋತ್ತಮರೂ, ಯಾವುದನ್ನು ತಮಗೆ ಮುಖ್ಯಪ್ರಾಪ್ಯವೆಂದು ಭಾವಿಸುತ್ತಿರುವರೋ, ಆ ನಿನ್ನ ಪಾದಾರವಿಂದವು ನಮ್ಮ ಅಶುಭಗಳೆಲ್ಲವನ್ನೂ ನೀಗಿಸಲಿ! ಪೂಜ್ಯಳಾದ ಶ್ರೀದೇವಿಯು ನಿನ್ನ ವಕ್ಷಸ್ಥಳದಲ್ಲಿಯೇ ನಿತ್ಯನಿವಾಸವನ್ನು ಮಾಡತಕ್ಕವಳಾಗಿದ್ದರೂ, ತನ್ನಂತೆಯೇ ನಿನ್ನ ಕಂಠಾಲಿಂಗನಸೌಖ್ಯವನ್ನನುಭವಿಸುತ್ತಿರುವ ವನಮಾಲಿಕೆಯು ಮಾತ್ರ ನಿನ್ನ ಪಾದಾಗ್ರದಮೇಲೆ ತೂಗಾಡುವುದನ್ನು ನೋಡಿ ಸಹಿಸಲಾರದೆ, ಸವತಿತನದ ಮಾತ್ಸರ್ಯದಿಂದ ಅದರೊಡನೆ ಸ್ಪರ್ಧಿಸುವಂತೆ, ತಾನೂ ಬಗೆಬಗೆಯ ಕಾಣಿಕೆಗಳನ್ನು ತಂದಿಟ್ಟು ಯಾವುದನ್ನು ಸೇವಿಸುತ್ತಿರುವಳೋ, ಆ ನಿನ್ನ ಪಾದಾರವಿಂದವು ನಮ್ಮ ಅಶುಭಗಳೆಲ್ಲವನ್ನೂ ನೀಗಿಸಲಿ! ದೇವಾ! ತ್ರಿವಿಕ್ರಮಾವತಾರದಲ್ಲಿ ಬಲಿಚಕ್ರವರ್ತಿಯನ್ನು ಬಂಧಿಸುವಾಗ, ಯಾವಪಾದದಿಂದಲೇ ನೀನು ಮೂರುಲೋಕವನ್ನೂ ಅಳೆದೆಯೋ, ಮೇಲೆ ನೀಡಿದ ಯಾವಪಾದವು, ದೈತ್ಯರಿಗೆ ಭಯವನ್ನೂ, ದೇವತೆಗಳಿಗೆ ಅಭಯವನ್ನೂ ತೋರಿಸತಕ್ಕ ವಿಜಯಧ್ವಜದಂತೆಯೂ, ತ್ರೈಲೋಕ್ಯವನ್ನೂ ಪಾವನಮಾಡುವುದಕ್ಕಾಗಿ ಅದರಿಂದ ಹೊರಟ ಗಂಗಾಪ್ರವಾಹವು ಆಧ್ವಜದ ಪತಾಕೆಯಂತೆಯೂ ಶೋಭಿಸುತಿತ್ತೋ, ಆ ನಿನ್ನ ಪಾದಾರವಿಂದವು ಸಜ್ಜನರಿಗೆ ಸುಖವನ್ನೂ, ದುರ್ಜನರಿಗೆ ದುಃಖವನ್ನೂ ಉಂಟುಮಾಡತಕ್ಕ ಆ ನಿನ್ನ ಪಾದವು- ನಿನ್ನಭಕ್ತರಾದ ನಮ್ಮ ಪಾಪಗಳನ್ನು ನೀಗಿಸಿ ನಮ್ಮನ್ನು ಪವಿತ್ರಮಾಡಲಿ! ದೇವಾ! ತಮ್ಮ ತಮ್ಮ ಅಧಿಕಾರವೇ ಮೇಲೆಂದು ಅನ್ಯೋನ್ಯಸ್ಪರ್ಧೆಯಿಂದ ಹೋರಾಡುತ್ತಿರುವ ಬ್ರಹ್ಮರುದ್ರರೇ ಮೊದಲಾದ ದೇಹಿಗ

ಳೆಲ್ಲರೂ, ಪ್ರಕೃತಿಪುರುಷರಿಗಿಂತಲೂ ಪರನಾಗಿಯೂ, ಕಾಲಸ್ವರೂಪನಾ ಗಿಯೂ ಇರುವ ನಿನಗೆ ಅಧೀನರಾಗಿ, ಮೂಗುದಾರವನ್ನು ಬೀರಿದ ಎತ್ತುಗ ಳಂತೆ ನಿನ್ನ ನಿಯಮಕ್ಕೊಳಪಟ್ಟಿರುವರು. ಇಂತಹ ಸರ್ವನಿಯಾಮಕನಾದ ನಿನ್ನಪಾದವು ನಮಗೆ ಶ್ರೇಯಸ್ಸನ್ನು ಕೈಗೂಡಿಸಲಿ! ದೇವಾ! ಚರಾಚರ ರೂಪವಾದ ಈ ಸ್ಥೂಲಪ್ರಪಂಚದ ಉತ್ಪತ್ತಿ ಸ್ಥಿತಿ ಲಯಗಳೆಲ್ಲಕ್ಕೂ ನೀನೇ ಕಾರಣಭೂತನು. ಆ ಪ್ರಪಂಚದೊಳಗೆ ಅಂತರ್ಯಾಮಿಯಾಗಿದ್ದು ಅದನ್ನು ಧರಿಸತಕ್ಕವನೂ ನೀನೇ! ಮತ್ತು ನೀನು ಅವ್ಯಕ್ತವೆನಿಸಿದ ಪ್ರಕೃತಿಗಿಂ ತಲೂ, ಆ ಪ್ರಕೃತಿಸಂಬಂಧವುಳ್ಳ ಬದ್ಧಜೀವನಿಗಿಂತಲೂ, ನಿತ್ಯಮುಕ್ತ ಜೀವರಿಗಿಂತಲೂ, ಆ ಪ್ರಕೃತಿಯ ಕಾರ್ಯಭೂತಗಳೆನಿಸಿಕೊಂಡ ಮಹತ್ತು ಮೊದಲಾದ ಎಲ್ಲಾ ಪ್ರಪಂಚಕ್ಕಿಂತಲೂ ಉತ್ತಮನೆನಿಸಿರುವೆ. ಸಂವತ್ಸ ರಾತ್ಮಕವೆನಿಸಿ ಸಕಲಜಗತ್ತನ್ನೂ ಲಯಹೊಂದಿಸುವುದಕ್ಕಾಗಿ ಪ್ರವರ್ತಿ ಸುವ ಗಂಭೀರವೇಗವುಳ್ಳ ಕಾಲವೆಂಬುದೂ ನಿನ್ನ ಶರೀರವೇ ಆದುದರಿಂದ, ಆ ಕಾಲರೂಪದಿಂದ ಸಮಸ್ತಜಗತನ್ನೂ ಉಪಸಂಹಾರಮಾಡತಕ್ಕವನೂ ನೀನೇ! ಮತ್ತು ಈ ಜಗತ್ತಿನ ಸೃಷ್ಟಿಕಾರ್ಯಕ್ಕಾಗಿ ಅಧಿಕಾರವನ್ನು ಹೊಂ ದಿದ (ಅನಿರುದ್ಧನೆಂಬ) ಪುರುಷನೂಕೂಡ, ಸಮಸ್ತಕ್ಕೂ ಮೂಲಭೂತ ನಾದ ನಿನ್ನ ಅಂಶದಿಂದಲೇ ಆವಿರ್ಭವಿಸಿ, ಆ ಸೃಷ್ಟಿಕಾರ್ಯಕ್ಕೆ ಬೇಕಾದ ವಿಚಿತ್ರಶಕ್ತಿಯುಳ್ಳವನಾಗಿ, ಪುರುಷನು ಸ್ತ್ರೀಯಲ್ಲಿ ಗರ್ಭೋತ್ಪತ್ತಿಯನ್ನು ಮಾಡುವಂತೆ, ಪ್ರಕೃತಿಯಲ್ಲಿ ಪರಿಣಾಮಸಾಮರ್ಥ್ಯವೆಂಬ ತನ್ನ ವೀರ್ಯ(ಶಕ್ತಿ) ವನ್ನಿಟ್ಟು, ಅದರಿಂದ ಮಹತ್ತೆಂಬ ತತ್ವವನ್ನು ಹುಟ್ಟಿಸಿದನು. ಆ ಮಹ ತ್ತತ್ವವು ತನಗೆ ಕಾರಣಭೂತವಾದ ಪ್ರಕೃತಿಯಂತೆಯೇ ಸತ್ವರಜಸ್ತ ಮಸ್ಸುಗಳೆಂಬ ಮೂರುಗುಣಗಳೊಡಗೂಡಿ, ಜಲವೇ ಮೊದಲಾದ ಏಳು ಆವರಣಗಳುಳ್ಳ ಸುವರ್ಣಮಯವಾದ ಒಂದು ಅಂಡಕೋಶವನ್ನು ತನ್ನಿಂದ ಸೃಜಿಸಿತು. ಆದುದರಿಂದ ಸ್ಥಾವರಜಂಗಮಾತ್ಮಕವಾದ ಸಮಸ್ತ ಜಗ ತ್ತಿಗೂ ನೀನೇ ಮೂಲಸೃಷ್ಟಿಕರ್ತನು. ಅವೆಲ್ಲಕ್ಕೂ ಅಂತರ್ಯಾಮಿಯಾಗಿ ನಿಯಮಿಸತಕ್ಕವನೂ ನೀನೇ! ಬೇರೆಬೇರೆ ಅವತಾರಗಳಿಂದ ಅದನ್ನು ಪಾಲಿಸುತ್ತ, ಅದಕ್ಕೆ ಸ್ಥಿತಿಯನ್ನು ಕಲ್ಪಿಸತಕ್ಕವನೂ ನೀನೇ! ಹೀಗೆ ನೀನು

ಸಮಸ್ತಜೀವಗಳಲ್ಲಿಯೂ ಅಂತರ್ಯಾಮಿಯಾಗಿದ್ದು, ಆಯಾಜೀವಗಳಿಗೆ ಅವರವರ ಕರ್ಮಾನುಸಾರವಾಗಿಯೇ ನಿನ್ನ ಮಾಯೆಯಿಂದ ಇಂದ್ರಿಯ ವ್ಯಾಪಾರಗಳನ್ನು ಉದ್ಬೋಧಿಸಿ, ಅವರನ್ನು ಶಬ್ದಾದಿವಿಷಯಗಳಲ್ಲಿ ತೊಳ ಲುವಂತೆ ಮಾಡುವೆ ? ಆ ಜೀವನಮೂಲಕವಾಗಿ ನೀನೂ ಆ ಶಬ್ದಾದಿವಿಷ ಯಗಳನ್ನು ಅನುಭವಿಸುತ್ತಿರುವವನಾದರೂ, ನೀನು ಕರ್ಮವಶ್ಯನಲ್ಲದುದ ರಿಂದ, ಅದರಿಂದುಂಟಾಗುವ ಪುಣ್ಯಪಾಪಕರ್ಮಗಳು ನಿನ್ನನ್ನಂಟಲಾರವು. ಮತ್ತು ಇಂದ್ರಿಯಗಳಿಗೆ ನೀನೇ ಪತಿಯಾದುದರಿಂದ, ನೀನು ಅವುಗಳಿಗೆ ನಿಯಾಮಕನೇಹೊರತು, ಅವುಗಳಿಗೆ ವಶನಾಗಿ ಕರ್ಮಗಳನ್ನು ನಡೆಸತಕ್ಕವ ನಲ್ಲ. ನೀನೊಬ್ಬನುಹೊರತು ಇತರಜೀವವರ್ಗಗಳಾಗಲಿ, ಕೊನೆಗೆ ಯೋಗಿಗ ಳಾಗಲಿ, ಪ್ರಯತ್ನಪೂರ್ವಕವಾಗಿ ವಿಷಯಾಸಕ್ತಿಯನ್ನು ಬಿಟ್ಟಿದ್ದರೂ, ಅದರ ವಾಸನಾಮಾತ್ರಕ್ಕೆ ಬದ್ಧರಾಗಿಯೇ ಇರುವುದರಿಂದ ಅದರ ಭಯವು ಯಾರಿ ಗೂತಪ್ಪಿದುದಲ್ಲ. ನೀನು ಇಂದ್ರಿಯಗಳಿಗೆ ಅಧಿಪತಿಯೆಂಬುದನ್ನು ಈ ಅವ ತಾರದಲ್ಲಿಯೇ ಕಂಡುಕೊಳ್ಳಬಹುದು. ಹೇಗೆಂದರೆ, ನಿನಗೆ ಈ ಅವತಾರದಲ್ಲಿ ಹದಿನಾರುಸಾವಿರಮಂದಿ ಪತ್ನಿಯರಿದ್ದರೂ, ಅವರಲ್ಲಿ ಒಬ್ಬೊಬ್ಬರೂ, ನಿನ್ನನ್ನು, ಮನ್ಮಥಬಾಣಗಳಂತಿರುವ ಮಂದಹಾಸವಿಶಿಷ್ಟವಾದ ತಮ್ಮ ಕಟಾಕ್ಷವೀಕ್ಷಣದಿಂದಲೂ, ತಮ್ಮ ಹಾವಭಾವವಿಲಾಸಗಳಿಂದಲೂ, ತಮ್ಮ ಹುಬ್ಬಿನಾಟಗಳಿಂದಲೂ, ಅನುರಾಗಸೂಚಕಗಳಾದ ಸಲ್ಲಾಪಗಳಿಂದಲೂ, ನಿನ್ನನ್ನು ಮೋಹಗೊಳಿಸುವುದಕ್ಕೆ ಪ್ರಯತ್ನಿಸಿದರೂ, ನಿನ್ನ ಇಂದ್ರಿಯಗ ಳನ್ನು ಕಲಗಿಸಲಾರದೆ ಹೋದರಲ್ಲವೆ ! ಕೃಷ್ಣಾ ! ಮುಖ್ಯವಾಗಿ ಅಮೃತಪ್ರಾಯವಾದ ನಿನ್ನ ಕಥೆಗಳೆಂಬ ತೀರ್ಥಗಳು, ನಿನ್ನ ಪಾದತೀರ್ಥ ವೆನಿಸಿಕೊಂಡ ಗಂಗಾದಿನದಿಗಳು, ಇವೆರಡೇ ಮೂರುಲೋಕವನ್ನೂ ಪಾವನಮಾಡತಕ್ಕವುಗಳು. ಆದುದರಿಂದ ಆತ್ಮಶುದ್ಧಿಯನ್ನಪೇಕ್ಷಿಸತಕ್ಕವ ರೊಬ್ಬೊಬ್ಬರೂ, ನಿನ್ನ ಕೀರ್ತಿಯೆಂಬ ತೀರ್ಥವನ್ನು ಕಿವಿಗಳಿಂದಲೂ, ನಿನ್ನ ಪಾದತೀರ್ಥವಾದ ಗಂಗಾನದಿಯನ್ನು ಸ್ನಾನಾದಿಗಳಿಂದಲೂ ಸೇವಿಸಿ ಕೃತಾರ್ಥರಾಗುವರು” ಎಂದು ಸ್ತುತಿಸಿದರು.

ಹೀಗೆ ಬ್ರಹ್ಮನು ರುದ್ರಾದಿದೇವತೆಗಳೊಡಗೂಡಿ ಕೃಷ್ಣನನ್ನು ಸ್ತುತಿಸಿ, ಅಂತರಿಕ್ಷದಲ್ಲಿದ್ದಂತೆಯೇ ಸಾಷ್ಟಾಂಗಪ್ರಣಾಮವನ್ನು ಮಾಡಿ ತಿರುಗಿ ಹೀಗೆಂದು ಹೇಳುವನು. “ಪ್ರಭೂ! ನಾವು ಹಿಂದೆ ನಿನ್ನಲ್ಲಿಗೆ ಬಂದು ಭೂಭಾರವನ್ನು ಪರಿಹರಿಸಬೇಕೆಂದು ಪ್ರಾರ್ಥಿಸಿಕೊಂಡೆವು. ನೀನು ಆ ಕಾರ್ಯವನ್ನು ಹಾಗೆಯೇ ನಡೆಸಿ ಪೂರೈಸಿದೆ! ಸತ್ಪುರುಷರ ಧರ್ಮವನ್ನೂ ಲೋಕದಲ್ಲಿ ಸ್ಥಿರವಾಗಿ ನೆಲೆಗೊಳಿಸಿದೆ! ಶ್ರವಣಕೀರ್ತನಾದಿಗಳಿಂದ ಸಮಸ್ತ ಲೋಕವನ್ನೂ ಪಾವನಮಾಡತಕ್ಕ ನಿನ್ನ ಕೀರ್ತಿಯನ್ನೂ ಹರಡಿದೆ! ಇಂತಹ ದಿವ್ಯಸುಂದರವಿಗ್ರಹದಿಂದ ಯದುವಂಶದಲ್ಲಿ ಅವತರಿಸಿ, ಲೋಕ ಕ್ಷೇಮಕ್ಕಾಗಿ ಎಷ್ಟೋ ಅದ್ಭುತಕಾರ್ಯಗಳನ್ನೂ ನಡೆಸಿದೆ. ಓ ಸರ್ವೇಶ್ವರಾ! ಪಾಪಪ್ರಚುರವಾದ ಕಲಿಯುಗದಲ್ಲಿ, ಸತ್ಪುರುಷರು ನಿನ್ನ ಕಥಾಶ್ರವಣ ಕೀರ್ತನಗಳಿಂದಲೇ ಸುಲಭವಾಗಿ ಸಂಸಾರವನ್ನು ದಾಟುವುದಕ್ಕೂ ಅವ ಕಾಶವನ್ನು ಕಲ್ಪಿಸಿದೆ. ಓ ಪುರುಷೋತ್ತಮಾ! ನೀನು ಯದುವಂಶದಲ್ಲಿ ಅವತರಿಸಿ, ಇದುವರೆಗೆ ನೂರಿಪ್ಪತ್ತೈದುವರ್ಷಗಳು ಕಳೆದುಹೋದುವು. ದೇವತೆಗಳ ಮತ್ತು ಸಾಧುಗಳ ಕ್ಷೇಮಕ್ಕಾಗಿ ನೀನು ಇನ್ನು ಮೇಲೆ ಮಾಡಬೇ ಕಾಗಿರುವ ಕಾರ್ಯವೇನೂ ಉಳಿದಿರುವಂತೆ ನಮಗೆ ತೋರಲಿಲ್ಲ! ಯಾದವ ಕುಲವೂಕೂಡ, ಬ್ರಾಹ್ಮಣಶಾಪದಿಂದ ಹೆಚ್ಚು ಕಡಿಮೆಯಾಗಿ ಹತಪ್ರಾಯ ವಾಗಿಯೇ ಇರುವುದು. ಆದುದರಿಂದ ನಿನಗೆ ಸಮ್ಮತವಾದರೆ, ಇನ್ನು ಮೇಲೆ ನೀನು ನಿನ್ನ ನಿಜಸ್ಥಾನವಾದ ಪರಮಪದಕ್ಕೆ ತೆರಳಬಹುದು. ನೀನು ಇನ್ನು ಮೇಲೆ ಆ ನಿನ್ನ ಸ್ಥಾನದಲ್ಲಿಯೇ ಇದ್ದು, ಈ ಸಮಸ್ತಲೋಕಗಳನ್ನೂ, ಲೋಕಪಾಲಕರನ್ನೂ, ನಿನ್ನ ಕಿಂಕರರಾದ ನಮ್ಮನ್ನೂ ರಕ್ಷಿಸುತ್ತಿರು.” ಎಂದನು. ಮಾಯಾಮನುಷ್ಯನಾದ ಕೃಷ್ಣನು, ಆ ಬ್ರಹ್ಮಾದಿದೇವತೆಗ ಳಲ್ಲಿ ಪ್ರಸನ್ನನಾಗಿ, ಅವರನ್ನು ಮನ್ನಿಸಿ ಹೀಗೆಂದು ಹೇಳುವನು. “ಓ ದೇ ವಶ್ರೇಷ್ಠಾ! ಈಗ ನೀನು ಹೇಳಿದ ವಿಷಯವನ್ನು ಮೊದಲೇ ನಾನು ನಿಶ್ಚಯಿಸಿಕೊಂಡಿರುವೆನು. ನಿಮಗಾಗಿ ನಾನು ಈ ಭೂಮಿಯಲ್ಲಿ ನಡೆಸ ಬೇಕಾದ ಕಾರ್ಯಗಳೆಲ್ಲವೂ ಪೂರಯಿಸಿದುವು. ಭೂಭಾರವನ್ನು ಪರಿಹರಿಸಿದು ದಾಯಿತು. ಆದರೆ ನಮ್ಮ ಯಾದವಕುಲವೊಂದುಮಾತ್ರ ಎಣೆಯಿಲ್ಲದ

ವೀರ್ಯಶೌರ್ಯಾದಿಗಳಿಂದಲೂ,ಭಾಗ್ಯದಿಂದಲೂ ಕೊಬ್ಬಿ, ಲೋಕವನ್ನೇ ಕಬಳಿ ಸುವ ಪ್ರಯತ್ನದಲ್ಲಿರುವುದು. ಸಮುದ್ರಪ್ರವಾಹವನ್ನು ಅದರ ದಡವು ಹೇಗೋ ಹಾಗೆ, ನಾನು ನನ್ನ ಸಂಕಲ್ಪದಿಂದ ಅದನ್ನು ತಡೆದಿಟ್ಟಿರುವೆನು. ಹೀಗೆ ಗರ್ವಾಂಧರಾದ ಆ ಯಾದವರ ದೊಡ್ಡ ಕುಲವನ್ನು ನಾನು ಸಂಹ ರಿಸದೆ ಬಿಟ್ಟು, ಹಾಗೆಯೇ ನನ್ನ ನಿಜಸ್ಥಾನಕ್ಕೆ ಹೋದಪಕ್ಷದಲ್ಲಿ, ಅದು ಹ ದ್ದುಮೀರಿ ಬಂದಾಗ, ಲೋಕವೆಲ್ಲವೂ ನಾಶಹೊಂದುವುದರಲ್ಲಿ ಸಂದೇಹ ವಿಲ್ಲ. ಆದರೆ ಆ ಕಾರ್ಯವು ತೀರುವುದಕ್ಕೆ ಇನ್ನೂ ಬಹಳ ದಿನಗಳಾಗಬಹು ದೆಂದು ಶಂಕಿಸಬೇಡ ! ಈಗಾಗಲೇ ಬ್ರಾಹ್ಮಣಶಾಪಕ್ಕನುಸಾರವಾಗಿ ಯಾದವಕುಲನಾಶಕ್ಕೆ ಆರಂಭವಾಯಿತು. ಇದು ಮುಗಿದಕೂಡಲೇ ನಾನು ನನ್ನ ಸ್ಥಾನಕ್ಕೆ ಹಿಂತಿರುಗಿಬರುವೆನು." ಎಂದನು. ಓ ಪರೀಕ್ಷಿದ್ರಾಜಾ! ಈ ಮಾತನ್ನು ಕೇಳಿದೊಡನೆ ಬ್ರಹ್ಮನು, ಸಮಸ್ತದೇವತೆಗಳೊಡನೆ ಆ ಕೃಷ್ಣನಿಗೆ ನಮಸ್ಕರಿಸಿ ತನ್ನ ಲೋಕಕ್ಕೆ ಹಿಂತಿರುಗಿದನು. ಒಡನೆಯೇ ಇತ್ತಲಾಗಿ ದ್ವಾರಕೆಯಲ್ಲಿ ಅತಿಭಯಂಕರಗಳಾದ ಮಹೋತ್ಪಾತಗಳು ತ ಲೆದೋರಿದುವು. ಅವುಗಳನ್ನು ನೋಡಿ ಕೃಷ್ಣನು ತನ್ನ ಸುತ್ತುಮುತ್ತ ಲೂ ನೆರೆದಿದ್ದ ಯದುವೃದ್ಧರನ್ನು ಕುರಿತು. "ಎಲೈ ಯಾದವಶ್ರೇಷ್ಠರೆ ! ಇದೋ ! ಈಗ ನಾನಾಕಡೆಗಳಲ್ಲಿಯೂ ಮಹೋತ್ಪಾತಗಳು ತಲೆದೋ ರುತ್ತಿರುವುವು. ಇದಕ್ಕೆ ಮೊದಲೇ ನಮ್ಮ ಯಾದವಕುಲಕ್ಕೆ ಬ್ರಾಹ್ಮಣ ಶಾಪದಿಂದ ದುಸ್ತರವಾದ ಭಯವು ಹುಟ್ಟಿರುವುದನ್ನು ನೀವೂ ಬಲ್ಲಿರಷ್ಟೆ? ಬದುಕಬೇಕೆಂಬ ಆಸೆಯಿದ್ದರೆ, ಇನ್ನುಮೇಲೆ ನಾವೂ ಇಲ್ಲಿ ನಿಲ್ಲಬಾ ರದು. ಈಗಲೇ ಪ್ರಭಾಸತೀರ್ಥಕ್ಕೆ ಹೋಗುವೆವು. ಈ ವಿಷಯದಲ್ಲಿ ಈಗ ಕಾಲವಿಳಂಬವನ್ನು ಮಾಡಬಾರದು. ಹಿಂದೆ ಚಂದ್ರನು ದಕ್ಷ ಶಾಪದಿಂದ ಕ್ಷಯರೋಗವನ್ನು ಹೊಂದಿದಾಗ, ಆ ಪ್ರಭಾಸತೀರ್ಥದಲ್ಲಿ ಸ್ನಾನಮಾಡಿದಮಾತ್ರಕ್ಕೆ, ಅವನಿಗೆ ಆ ದೋಷವು ನಿವೃತ್ತವಾಗಿ, ಮೊದಲಿ ನಂತೆ ತನ್ನ ಕಳೆಗಳನ್ನು ಹೊಂದಿದನು. ಹಾಗೆಯೇ ನಾವೂ ಅಲ್ಲಿ ಸ್ನಾನ ಮಾಡಿ, ಪಿತೃಗಳಿಗೂ, ದೇವತೆಗಳಿಗೂ ತರ್ಪಣವನ್ನು ಬಿಟ್ಟು, ಬ್ರಾಹ್ಮಣ ರಿಗೂ ಸಂತರ್ಪಣವನ್ನು ಮಾಡಿ, ಸತ್ಪಾತ್ರಗಳಲ್ಲಿ ದಾನಧರ್ಮಗಳನ್ನು ನಡೆಸಿ

ದರೆ, ಆ ಪುಣ್ಯಫಲದಿಂದ ನಾವು, ನಾವೆಯಿಂದ ಸಮುದ್ರವನ್ನು ಹೇಗೋ
ಹಾಗೆ ಆ ಬ್ರಾಹ್ಮಣಶಾಪದಿಂದುಂಟಾಗುವ ದುಃಖವನ್ನು ದಾಟಬಹುದು.”
ಎಂದನು ಹೀಗೆ ಶ್ರೀಕೃಷ್ಣನು ಆಜ್ಞೆಮಾಡಿದೊಡನೆ ಯಾದವರೆಲ್ಲರೂ,
ಪ್ರಭಾಸತೀರ್ಥಕ್ಕೆ ಹೊರಡುವುದಾಗಿ ನಿಶ್ಚಯಿಸಿಕೊಂಡು, ರಥಗಳು,
ಕುದುರೆಗಳು, ಮೊದಲಾದ ವಾಹನಗಳನ್ನು ಸಿದ್ಧಪಡಿಸುತಿದ್ದರು.
ಆಗ ಶ್ರೀಕೃಷ್ಣನಿಗೆ ಪರಮಭಕ್ತನಾದ ಉದ್ಧವನು, ಯಾದವರು ನಡೆಸು
ತ್ತಿರುವ ಪ್ರಯಾಣಸನ್ನಾಹಗಳನ್ನೂ, ಅಲ್ಲಲ್ಲಿ ತಲೆದೋರುತ್ತಿರುವ
ಮಹೋತ್ಪಾತಗಳನ್ನೂ ನೋಡಿ, ಭಗವಂತನು ಹೇಳಿದ ವಾಕ್ಯವನ್ನೂ ಪರ್ಯಾ
ಲೋಚಿಸಿ, ಒಮ್ಮೆ ಏಕಾಂತವಾಗಿ ಶ್ರೀಕೃಷ್ಣನಬಳಿಗೆ ಬಂದು, ಅವನ
ಪಾದಗಳಿಗೆ ತಲೆಯನ್ನು ಸೋಕಿಸಿ ನಮಸ್ಕರಿಸಿ ಬದ್ಧಾಂಜಲಿಯಾಗಿ
ಹೀಗೆಂದು ವಿಜ್ಞಾಪಿಸುವನು. “ಓ ದೇವದೇವೇಶಾ! ನೀನು ನಮ್ಮ ಯಾ
ದವಕುಲವನ್ನು ನಿಶ್ಶೇಷವಾಗಿ ತೀರಿಸಿ, ಈ ಲೋಕವನ್ನು ಬಿಟ್ಟು ನಿನ್ನ ನಿಜ
ಸ್ಥಾನಕ್ಕೆ ಹೋಗುವುದೇನೋ ನಿಶ್ಚಿತವಾದ ಸಂಗತಿಯೇ! ಏಕೆಂದರೆ,
ನಿನಗೆ ಆ ಉದ್ದೇಶವು ಹುಟ್ಟದಿದ್ದಪಕ್ಷದಲ್ಲಿ ಈಗಾಗಲೇ ಆ ಬ್ರಾಹ್ಮಣಶಾಪ
ವನ್ನೂ ತಪ್ಪಿಸಿಬಿಡುತಿದ್ದೆ! ಆ ಕಾರ್ಯಕ್ಕೆ ನೀನು ಸಮರ್ಥನಾಗಿರುವಾಗಲೂ,
ಸುಮ್ಮನೆ ತಟಸ್ಥನಾಗಿರುವುದರಿಂದ, ಯಾದವಕುಲನಾಶವು ನಿನಗೂ
ಸಮ್ಮತವೆಂದೇ ನಿಶ್ಚಯಿಸಬೇಕಾಗಿದೆ. ಆದರೆ ನಾನುಮಾತ್ರ ನಿನ್ನ ಪಾದಾರ
ವಿಂದವನ್ನು ಕ್ಷಣಮಾತ್ರವೂ ಅಗಲಿರಲಾರೆನು. ನೀನು ನಿನ್ನ ಸ್ಥಾನಕ್ಕೆ
ಹೊರಡುವಾಗ ನನ್ನನ್ನೂ ನಿನ್ನೊಡನೆ ಕರೆದುಕೊಂಡೇ ಹೋಗಬೇಕು.
ಕೃಷ್ಣಾ! ಸಮಸ್ತಲೋಕಕ್ಕೂ ಮಂಗಳಕರಗಳಾಗಿ, ಕೇಳುವವರ ಕಿವಿಗೆ
ಅಮೃತಪ್ರಾಯಗಳಾದ ನಿನ್ನ ಚರಿತ್ರಗಳನ್ನು ಯಾರು ಒಂದಾವರ್ತಿ ಕೇಳಿ
ರುಚಿನೋಡಿರುವರೋ,ಅವರಿಗೆ,ಅದರಲ್ಲಿಹೊರತು ತಮ್ಮ ದೇಹದಲ್ಲಿಯಾಗಲಿ,
ದೇಹಾನುಬಂಧಿಗಳಲ್ಲಿಯಾಗಲಿ, ಇತರ ವಿಷಯಗಳಲ್ಲಿಯಾಗಲಿ, ಯಾವುದ
ರಲ್ಲಿಯೂ ರುಚಿಯು ಹುಟ್ಟದು. ಹಾಗಿರುವಾಗ ಅನವರತವೂ ನಿನ್ನ ಸಹ
ವಾಸುಖವನ್ನೇ ಅನುಭವಿಸುತಿದ್ದ ನನಗೆ ನಿನ್ನನ್ನು ಬಿಟ್ಟಿರುವುದು ಹೇಗೆ
ತಾನೇ ಸಾಧ್ಯವು? ಮತ್ತು ನೀನು ಮಲಗುವಾಗ ಮಲಗುವುದು, ಕುಳ್ಳಿರ

ವಾಗ ನಿನ್ನೊಡನೆ ಕುಳ್ಳಿರುವುದು, ಸಂಚರಿಸುವಾಗ ನಿನ್ನೊಡನೆ ಸಂಚರಿಸು ವುದು, ನಿನ್ನೊಡನೆ ಸ್ನಾನಮಾಡುವುದು, ನೀನು ನಿಂತ ಕಡೆಯಲ್ಲಿ ನಿಲ್ಲು ವುದು, ನಿನ್ನ ಸಂಗಡಲೇ ಭೋಜನಮಾಡುವುದು, ನೀನು ಕೆಲಸಮಾಡು ವಾಗ ನಿನ್ನೊಡನೆ ಕೆಲಸಮಾಡುವುದು, ಹೀಗೆಯೇ ಬೇರೆ ಎಲ್ಲಾ ಸಮಯಗ ಳಲ್ಲಿಯೂ ನಾನು ನಿನ್ನೊಡನೆ ಕಲೆತೇ ಇದ್ದವನಲ್ಲವೆ? ಈಗ ನಾನು ನಿನ್ನನ್ನು ಅಗಲಿರಬಲ್ಲೆನೆ? ಕೃಷ್ಣಾ! ನೀನೇ ನನಗೆ ಆತ್ಮಭೂತನಾಗಿರುವಾಗ, ನಿನ ಗಿಂತಲೂ ನನಗೆ ಬೇರೆ ಪ್ರಿಯವಸ್ತುವಾವುದುಂಟು? ಭಕ್ತರಾದ ನಮ್ಮನ್ನು ನೀನು ಬಿಟ್ಟುಹೋದರೆ, ನಾವು ಹೇಗೆ ತಾನೇ ಸಹಿಸಬಲ್ಲೆವು? ಮತ್ತು ಗಂಧಪುಷ್ಪವಸ್ತ್ರಾಲಂಕಾರಾದಿಗಳಲ್ಲಿ ನೀನು ಅನುಭವಿಸಿ ಮಿಕ್ಕುದನ್ನೇ ಕೈಕೊಳ್ಳುತ್ತ, ನೀನು ತಿಂದು ಮಿಗಿಸಿದ ಉಚ್ಛಿಷ್ಟವನ್ನೇ ಪರಮಭೋಗ್ಯ ವೆಂದು ತಿಳಿದು ಭುಜಿಸುತಿದ್ದ ನಾವು, ಈಗ ನಿನ್ನನ್ನು ಅಗಲಿರಬಲ್ಲೆವೆ? ಆದರೆ ಸಂಸಾರಭಯಕ್ಕಾಗಿ ನಾವು ನಿನ್ನೊಡನೆ ಬರುವುದಕ್ಕೆ ಬಯಸಿದೆ ವೆಂದು ತಿಳಿಯಬೇಡ! ನಿನ್ನ ಭಕ್ತರಾದ ನಮಗೆ ಆ ಸಂಸಾರಭಯವೆಲ್ಲಿ ಯದು? ನಿನ್ನ ಅನುಗ್ರಹಬಲದಿಂದ ನಾವೂ ಈ ಸಂಸಾರಮಾಯೆಯನ್ನು ಜಯಿಸಿದವರೇ! ನಿನ್ನನ್ನು ಬಿಟ್ಟಿರುವುದಕ್ಕೆ ಭಯಪಡುವೆವೇ ಹೊರತು, ಸಂಸಾರಕ್ಕೆ ಭಯಪಟ್ಟು ನಿನ್ನನ್ನು ನಿರ್ಬಂಧಿಸುವೆವೆಂದೆಣಿಸಬೇಡ! ಕೆಲವು ಮಹರ್ಷಿಗಳು, ಕೌಪೀನಮಾತ್ರವನ್ನು ಧರಿಸಿ, ದಿಗಂಬರರಾಗಿ, ಉಪ ವಾಸಾದಿಗಳಿಂದ ದೇಹವನ್ನು ದಂಡಿಸಿ, ಊರ್ಧ್ವರೇತಸ್ಕರೆನಿಸಿಕೊಂಡು, ರಾಗದ್ವೇಷಾದಿಗಳನ್ನು ನೀಗಿ, ಸನ್ಯಾಸವನ್ನು ಹಿಡಿದು, ಇಷ್ಟುಪ್ರಯಾಸಗ ಳಿಂದ ತಮ್ಮ ಪಾಪಶೇಷವೆಲ್ಲವನ್ನೂ ಕಳೆದಮೇಲೆ, ಬ್ರಹ್ಮಲೋಕವೆಂಬ ನಿನ್ನ ಸ್ಥಾನವನ್ನು ಹೊಂದಬಲ್ಲರು. ಕೆಲವರು ಬ್ರಹ್ಮಚರ್ಯಾದಿಕ್ಲೇಶಗಳಿಗೆ ಗುರಿ ಯಾಗಿ ಸಂಸಾರವನ್ನು ದಾಟುವರು. ನಾವಾದರೋ, ಈ ಸಂಸಾರದಲ್ಲಿ ಕರ್ಮಾರ್ಜಿತಗಳಾದ ಸುಖದುಃಖಾದಿಗಳಲ್ಲಿ ಬಿದ್ದು ಕಳವಳಿಸತಕ್ಕರಾ ಗಿದ್ದರೂ, ನಿನ್ನ ಮತ್ತು ನಿನ್ನ ಭಕ್ತರ ಸಹವಾಸಮಾತ್ರದಿಂದಲೇ ಅನಾ ಯಾಸವಾಗಿ ಸಂಸಾರಸಮುದ್ರವನ್ನು ದಾಟುತ್ತಿರುವೆವು. ನಿನ್ನ ನಡೆ, ನುಡಿ, ನಗೆ, ನೋಟ, ಮೊದಲಾದುವುಗಳನ್ನೂ, ಇತರಮನುಷ್ಯಲೀಲೆಗ

ಳನ್ನೂ ಸ್ಮರಿಸಿದಮಾತ್ರದಿಂದಲೇ ನಾವು ಅನಾಯಾಸವಾಗಿ ಆ ಸಂಸಾರ ಸಾಗರವನ್ನು ದಾಟಬಲ್ಲವರು." ಎಂದನು. ಆಗ ಶ್ರೀಕೃಷ್ಣನು ತನಗೆ ಏಕಾಂತಭಕ್ತನಾದ ಉದ್ಧವನನ್ನು ಕುರಿತು ಹೀಗೆಂದು ಹೇಳುವನು. ಇದು ಆರನೆಯ ಅಧ್ಯಾಯವು.

---

(ಕೃಷ್ಣನು ಉದ್ಧವನಿಗೆ ಪರಮಾತ್ಮೋಪದೇಶವನ್ನು ಮಾ)
(ಡುತ್ತ, ಅವಧೂತ ಯದುಸಂವಾದವನ್ನು ತಿಳಿಸಿದುದು.)

ಆಗ ಕೃಷ್ಣನು ಉದ್ಧವನನ್ನು ಕುರಿತು "ಓ ಮಹಾತ್ಮಾ! ಉದ್ಧವಾ! ನೀನು ಹೇಳಿದಂತೆ ನಾನು ಈ ಲೋಕವನ್ನು 'ಬಿಟ್ಟುಹೊರಡುವುದಾಗಿ ಮೊದಲೇ ಸಂಕಲ್ಪಿಸಿರುವುದೇನೋ ವಾಸ್ತವವೇ! ಅದಕ್ಕನುಸಾರವಾಗಿ ಈಗ ಬ್ರಹ್ಮರುದ್ರರೂ, ಇತರಲೋಕಪಾಲಕರೂ ನನ್ನಲ್ಲಿಗೆ ಬಂದು ನನ್ನನ್ನು ತಮ್ಮ ಲೋಕಕ್ಕೆ ಬರಬೇಕೆಂದು ಪ್ರಾರ್ಥಿಸಿ ಹೋದರು. ಮೊದಲು ಆ ಬ್ರಹ್ಮಾದಿಗಳ ಪ್ರಾರ್ಥನೆಯಿಂದಲೇ ನಾನು ದೇವತೆಗಳ ಕಾರ್ಯಾರ್ಥವಾಗಿ ಈ ಅವತಾರವನ್ನೆತ್ತಿದೆನು. ನನ್ನ ಅವತಾರಪ್ರಯೋಜನವನ್ನೂ ಬಹಳ ಮಟ್ಟಿಗೆ ಪೂರಯಿಸಿಬಿಟ್ಟೆನು. ಆದರೆ ಯಾದವಕುಲನಾಶವೊಂದುಮಾತ್ರ ಉಳಿದಿರುವುದು. ಈಗಾಗಲೇ ಆ ಯಾದವಕುಲವು ಬ್ರಾಹ್ಮಣಶಾಪದಿಂದ ದಗ್ಧಪ್ರಾಯವಾಗಿರುವುದು. ಮುಂದೆ ಶೀಘ್ರಕಾಲದಲ್ಲಿಯೇ ಅನ್ಯೋನ್ಯ ಕಲಹದಿಂದ ಆ ಕುಲವು ನಿರ್ಮೂಲವಾಗುವುದು. ಈ ಹೊತ್ತಿಗೆ ಏಳನೆಯ ದಿನದಲ್ಲಿ ಸಮುದ್ರವು ಉಕ್ಕಿ ಬಂದು ಈ ದ್ವಾರಕೆಯನ್ನು ಮುಳುಗಿಸಿಬಿಡುವುದು. ಇದಲ್ಲದೆ ನಾನು ಯಾವಕ್ಷಣದಲ್ಲಿ ಈ ಲೋಕವನ್ನು ಬಿಟ್ಟು ಹೊರಡುವೆನೋ, ಅದುಮೊದಲೇ ಇದರ ಸೌಭಾಗ್ಯಗಳೆಲ್ಲವೂ ನಶಿಸುವುವು. ಕಲಿಯು ಇದನ್ನು ಆಕ್ರಮಿಸುವನು. ಆದುದರಿಂದ ನಾನು ಈ ಲೋಕವನ್ನು ಬಿಟ್ಟಮೇಲೆ, ನೀನು ಕ್ಷಣಮಾತ್ರವೂ ಇಲ್ಲಿ ನಿಲ್ಲುವುದು ಉಚಿತವಲ್ಲ! ಕಲಿಯುಗದಲ್ಲಿ ಜನರೆಲ್ಲರಿಗೂ ಅಧರ್ಮದಲ್ಲಿಯೇ ಅಭಿರುಚಿಯು ಹೆಚ್ಚುವುದು. ಆದುದರಿಂದ ನೀನು ಶಬ್ದಾದಿವಿಷಯಗಳಲ್ಲಿ ಆಸೆಯನ್ನೂ, ಸ್ವಜನರಲ್ಲಿಯೂ ಬಂಧುಗಳಲ್ಲಿಯೂ ಮೋಹವನ್ನೂ ತ್ಯಜಿಸಿ, ನನ್ನಲ್ಲಿಯೇ ನಟ್ಟಮನಸ್ಸುಳ್ಳವ

ನಾಗಿ, ಸಮಸ್ತವನ್ನೂ ಬ್ರಹ್ಮಾತ್ಮಕವೆಂದು ತಿಳಿದು ಸಮದೃಷ್ಟಿಯುಳ್ಳವ ನಾಗಿ, ನಿಂತಲ್ಲಿ ನಿಲ್ಲದೆ ಭೂಸಂಚಾರವನ್ನು ಮಾಡುತ್ತಿರು. ಮನಸ್ಸು, ವಾಕ್ಕು, ಕಣ್ಣು, ಕಿವಿ ಮೊದಲಾದ ಇಂದ್ರಿಯಗಳೂ, ಇವುಗಳಿಂದ ಗ್ರಹಿಸಲ್ಪಡತಕ್ಕವುಗಳೂ,ಇವೆಲ್ಲವೂ ನಶ್ವರಗಳೆಂದೂ,ಪ್ರಕೃತಿಗುಣಗಳಿಗೆ ವಶವಾದ ಮನಸ್ಸಿನ ವಿಕಾರಗಳೇ ಈ ಅನುಭವಕ್ಕೆ ಕಾರಣಗಳೆಂದೂ ನೀನು ತಿಳಿಯಬೇಕು ನನ್ನನ್ನು ಸರ್ವಾಂತರಾತ್ಮನೆಂದು ತಿಳಿಯಲಾರದ ಮನುಷ್ಯನ ಮನಸ್ಸಿಗೆ. ಲೋಕದ ವಸ್ತುಗಳೆಲ್ಲವೂ ತಮಗೆತಾವು ಸ್ವತಂತ್ರಗಳೆಂಬ ಭ್ರಮವು ಹುಟ್ಟುವುದು ಸಹಜವೇ ! ನನ್ನಲ್ಲಿ ಮನಸ್ಸಿಟ್ಟವನಿಗಾದರೋ ಎಲ್ಲವೂ ಮದಾತ್ಮಕವಾಗಿ, ಏಕರೂಪದಿಂದಲೇ ಇರುವಹಾಗೆ ತೋರುವುದೇ ಹೊರತು, ಹಿಂದೆ ಹೇಳಿದ ನಾನಾತ್ವಭ್ರಮವು ತೋರಲಾರದು. ಆ ಭ್ರಮವೇ ಸುಖದುಃಖಗಳಿಗೆ ಕಾರಣವು. ಆದರೆ ಆ ಭ್ರಮವು ತಾನಾಗಿ ತನ್ನ ಸ್ವರೂಪದಿಂದಲೇ ಮನುಷ್ಯನಿಗೆ ಸುಖದುಃಖಗಳನ್ನುಂಟುಮಾಡಲಾರದು. ಆ ಭ್ರಮವು ವಿಧಿನಿಷೇಧಾದಿಭೇದಗಳನ್ನು ನಿರೂಪಿಸತಕ್ಕಶಾಸ್ತ್ರಗಳಿಗೆ ಮನುಷ್ಯನನ್ನು ಕಟ್ಟುಬೀಳುವಂತೆ ಮಾಡಿ, ಆ ಮೂಲಕವಾಗಿ ಸುಖದುಃಖಗಳನ್ನು ತೋರಿಸುವುದು ಹೇಗೆಂದರೆ, ಶಾಸ್ತ್ರದಲ್ಲಿ ಕರ್ಮವಿಭಾಗವನ್ನು ಹೇಳುವಾಗ, ಮನುಷ್ಯನಿಗೆ ಅವಶ್ಯಕರ್ತವ್ಯಗಳಾದ ನಿತ್ಯನೈಮಿತ್ತಿಕಕರ್ಮಗಳೆಂದೂ, ನಿಷಿದ್ಧಕರ್ಮಗಳೆಂದೂ, ಫಲಾಪೇಕ್ಷೆಯಿಂದ ನಡೆಸತಕ್ಕ ಕಾಮ್ಯಕರ್ಮಗಳೆಂದೂ ಮೂರುವಿಧವಾದ ವಿಭಾಗವು ತೋರಿಸಲ್ಪಟ್ಟಿರುವುದು. ಈ ಶಾಸ್ತ್ರವಿಧಿಗಳಲ್ಲಿ ನಂಬಿಕೆಯಿಟ್ಟವನಿಗೆ, ವಿಹಿತಕರ್ಮಗಳನ್ನನುಸರಿಸುವುದರಿಂದ ಸುಖವೂ, ಅವುಗಳನ್ನತಿಕ್ರಮಿಸುವುದರಿಂದ ದುಃಖವೂ ತೋರುವುವು. ಆದುದರಿಂದ ಆ ಭ್ರಮವೆಂಬುದು ಮೊದಲು ಶಾಸ್ತ್ರವಿಧಿಗಳಲ್ಲಿ ಕಟ್ಟುಹಾಕಿ, ಆ ಮೂಲಕವಾಗಿ ಸುಖದುಃಖಗಳಿಗೆ ಕಾರಣವಾಗುವುದು. ಹೀಗೆ ಪ್ರಪಂಚವನ್ನು ನಾನಾವಿಧವಾಗಿ ತೋರಿಸತಕ್ಕ ಭ್ರಮವೇ, ಸುಖದುಃಖಗಳನ್ನೊಳಕೊಂಡ ಸಂಸಾರಕ್ಕೆ ಕಾರಣವಾದುದರಿಂದ,ನೀನು ಇಂದ್ರಿಯಗಳನ್ನು ನಿಗ್ರಹಿಸಿ, ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ,ಅಚೇತನವಾದ ಈ ಜಗತ್ತೆಲ್ಲವೂ ಜೀವನಿಂದಲೂ, ಆ ಜೀವನು ನನ್ನಿಂದಲೂ ಧರಿಸಲ್ಪಟ್ಟಿರುವುದಾಗಿ ತಿಳಿಯ

ಬೇಕು. ನೀನು ಈ ತಿಳುವಳಿಕೆಯಲ್ಲಿಯೇ ದೃಢವಾಗಿದ್ದರೆ, ಆಗ ನಿನಗೆ ಹಿಂದೆ ಹೇಳಿದ ಭ್ರಮವೂ, ಅದರಮೂಲಕವಾದ ಸಂಸಾರವೂ ನಿವೃತ್ತವಾಗು ವುದು. ಆದರೆ ‹‹ಇದುವೊದಲು ನಾನು ಅದೇವಿಧವಾದ ತಿಳಿವಳಿಕೆಯನ್ನು ದೃಢವಾಗಿ ಹಿಡಿದಿದ್ದರೂ, ಅನಾದಿಯಾಗಿ ಅನುಸರಿಸಿ ಬರುತ್ತಿರುವ ವಿಷ ಯಾಸಕ್ತಿಯಿಂದ, ನಡುನಡುವೆ ನನಗೆ ಆ ಜ್ಞಾನವು ತಪ್ಪಿಹೋಗಬಹುದ ಲ್ಲವೆ?" ಎಂದರೆ. ವೊದಲು ಪೃಥಿವಿ ವೊದಲುಗೊಂಡು ಆತ್ಮಪರ್ಯಂತವಾದ ಎಲ್ಲಾ ತತ್ವಗಳಿಗಿರುವ ಸಮಾನಧರ್ಮಗಳನ್ನೂ, ಅವುಳಲ್ಲಿ ತೋರುವ ಪರಸ್ಪರ ವಿಲಕ್ಷಣಧರ್ಮಗಳನ್ನೂ ತಿಳಿದು ಸಮಸ್ತಭೂತಗಳನ್ನೂ ತನ್ನಂತೆಯೇ ಭಾವಿ ಸುತ್ತ,ಆತ್ಮಾನುಭವದಿಂದಲೇ ಸಂತುಷ್ಟನಾಗಿರತಕ್ಕವನಿಗೆ, ಆ ತಿಳುವಳಿಕೆಗೆ ಎಂದಿಗೂ ವಿಘ್ನವು ಬರಲಾರದು.ಮೇಲೆ ಹೇಳಿದಂತೆ ಆತ್ಮಾನುಭವವೆಂಬ ಆ ನಂದದಲ್ಲಿ ಮುಳುಗಿದ್ದವನಿಗೆ, ಅತ್ಯಲ್ಪಗಳಾದ ಬೇರೆ ಲೌಕಿಕ ಸುಖಗಳಲ್ಲೆ ಲ್ಲಾ ರುಚಿಯು ತಪ್ಪುವುದರಿಂದ, ಪ್ರಾಪಂಚಿಕಸುಖದುಃಖಗಳೆರಡನ್ನೂ ಅತಿ ಕ್ರಮಿಸಿದವನಾಗುವನು. ‹‹ ಆದರೆ ಹೀಗೆ ಸುಖದುಃಖಗಳೆರಡನ್ನೂ ಲಕ್ಷ್ಯಕ್ಕೆ ತಾರದವನು ಶಾಸ್ತ್ರೀಯವಾದ ವಿಧಿನಿಷೇಧಗಳನ್ನೂ ಲಕ್ಷ್ಯದಲ್ಲಿಡದೆ ಯಥೇ ಚ್ಛವಾಗಿ ನಡೆಯಬೇಕಷ್ಟೆ? " ಎಂದರೆ. ಈ ವಿಚಾರವಾಗಿ ಅವನಲ್ಲಿ ಸ್ವಲ್ಪ ವಿಶೇಷವುಂಟು. ಏನೆಂದರೆ; ಅಂತವನು ಸುಖದುಃಖಗಳನ್ನು ಗಮನಿಸ ದಿದ್ದರೂ, ನಿಷಿದ್ಧಕರ್ಮಗಳನ್ನಾಚರಿಸುವುದರಿಂದ ಆತ್ಮಪ್ರಾಪ್ತಿಗೆ ವಿಘಾ ತವು ಬರುವುದೆಂದು ಅವುಗಳಲ್ಲಿ ದೋಷವನ್ನೆಣಿಸಿ, ಆ ನಿಷೇಧವಾಕ್ಯಗಳಿಗ ನುಸಾರವಾಗಿಯೇ ದುಷ್ಕಾರ್ಯಗಳನ್ನು ಬಿಟ್ಟುಬಿಡುವನು. ಹಾಗೆಯೇ ವಿಹಿ ತಕಾರ್ಯಗಳನ್ನು ನಡೆಸುವುದರಿಂದ ಸ್ವರ್ಗಾದಿಸುಖಗಳು ಲಭಿಸಬಹುದೆಂಬ ಗುಣಗ್ರಹಣವಿದ್ದರೂ, ಆ ಕಾಮ್ಯಕರ್ಮಗಳು, ಆಯಾಕರ್ಮಗಳಿಗೆ ತಕ್ಕ ಅಲ್ಪ ಫಲಗಳನ್ನೇ ಕೈಗೂಡಿಸುವುದರಿಂದ, ತನ್ನ ಮುಖ್ಯೋದ್ದೇಶವಾದ ಆತ್ಮ ಪ್ರಾಪ್ತಿಗೆ ವಿಘ್ನಕಾರಿಗಳೆಂಬ ಭಾವದಿಂದ ಆ ಕಾರ್ಯಗಳನ್ನೂ ನಡೆಸ ಲಾರನು. ಮುಖ್ಯವಾಗಿ ನಿಷಿದ್ಧಕರ್ಮಗಳು ದೋಷೋತ್ಪಾದನದಿಂದ ಆತ್ಮ ಪ್ರಾಪ್ತಿಗೆ ವಿರೋಧಿಗಳಾಗುವಂತೆ, ವೇದವಿಹಿತಕರ್ಮಗಳನ್ನು ಗುಣಬುದ್ಧಿ ಯಿಂದ ನಡೆಸಿದಾಗಲೂ, ಅವು ಅಲ್ಪಫಲಗಳನ್ನು ಕೈಗೂಡಿಸಿ ಮೋಕ್ಷಪ್ರಾ

ಪ್ತಿಗೆ ವಿಘ್ನವನ್ನು ತರುವುವೆಂಬ ಭಾವದಿಂದ, ಆತ್ಮಜ್ಞಾನವುಳ್ಳರು, ಆ ಎರಡುಬಗೆಯ ಕರ್ಮಗಳನ್ನೂ ಬಿಟ್ಟುಬಿಡುವರು. ಮೇಲೆ ಹೇಳಿದಂತೆ ಅವನಿಗೆ ಗುಣದೋಷಗ್ರಹಣಸಾಮರ್ಥ್ಯವಿದ್ದರೂ, ಏನೂ ತಿಳಿಯದ ಸಣ್ಣ ಮಗುವಿನಂತೆ ತನ್ನ ಮಾಹಾತ್ಮ್ಯವನ್ನು ಹೊರಕ್ಕೆ ಕಾಣಿಸದಹಾಗೆಯೇ ಕರ್ಮವಿಮುಖನಾಗಿ ಸುಮ್ಮನಿರುವನು. ಮೇಲೆಹೇಳಿದಂತೆ ಸರ್ವಭೂತ ಸುಹೃತ್ತಾಗಿ, ವೈರಾಗ್ಯವನ್ನು ವಹಿಸಿ, ಶಾಂತನಾಗಿ, ಪೃಥಿವ್ಯಾದಿಸಮಸ್ತ ತತ್ವಗಳ ಸಾಧರ್ಮ್ಯವೈಧರ್ಮ್ಯಗಳನ್ನು ದೃಢನಿಶ್ಚಯದಿಂದ ತಿಳಿದು, ಸಮಸ್ತವನ್ನೂ ನನ್ನ ಸ್ವರೂಪದಿಂದ ನೋಡತಕ್ಕವನು ತಿರುಗಿ ಸಂಸಾರದಲ್ಲಿ ಸಿಕ್ಕಿ ಕಷ್ಟಪಡಲಾರನು" ಎಂದನು.

ಶ್ರೀಕೃಷ್ಣನು ಹೇಳಿದ ಈ ವಾಕ್ಯವನ್ನು ಕೇಳಿ ಉದ್ಧವನು, ಅವನಿಂದ ಇನ್ನೂ ವಿಶೇಷವಾಗಿ ತತ್ವಜ್ಞಾನವನ್ನು ಪಡೆಯಬೇಕೆಂಬ ಕೋರಿಕೆಯಿಂದ, ತಿರುಗಿ ಬದ್ಧಾಂಜಲಿಯಾಗಿ ಹೀಗೆಂದು ಪ್ರಶ್ನಮಾಡುವನು. "ದೇವಾ! ನೀನೇ ಅಧ್ಯಾತ್ಮಯೋಗಕ್ಕೆ ನಿರ್ವಾಹಕನು! ಅದನ್ನುಪದೇಶಿಸತಕ್ಕವನೂ, ಅದಕ್ಕೆ ಫಲರೂಪನೂ ನೀನೇ! ಆ ಯೋಗಶಾಸ್ತ್ರವನ್ನು ಕಲ್ಪಿಸಿದವನೂ ನೀನೇ! ಪ್ರಭೂ! ಈಗ ನೀನು ನನಗೆ ಮೋಕ್ಷೋಪಾಯವನ್ನು ತಿಳಿಸುವುದಕ್ಕಾಗಿ, ಪ್ರತಿಫಲಾಪೇಕ್ಷೆಯಿಂದ ಮಾಡುವ ದಾನಾದಿಗಳಂತಲ್ಲದೆ, ಸನ್ಯಾಸರೂಪವಾದ ಸರ್ವಸಂಗಪರಿತ್ಯಾಗವನ್ನು ಉಪದೇಶಿಸಿದೆಯಲ್ಲವೆ? ವಿಷಯಾಭಿಲಾಷೆಯಲ್ಲಿಯೇ ತೊಳಲುತ್ತಿರುವ ಮನಸ್ಸುಳ್ಳ ನಮ್ಮಂತವರಿಗೆ, ನೀನು ಹೇಳಿದಂತೆ ಸರ್ವಸಂಗಪರಿತ್ಯಾಗರೂಪವಾದ ಕಾರ್ಯವು ಬಹಳದುಷ್ಕರವೆಂದು ತೋರುವುದು. ಅದರಲ್ಲಿಯೂ ಸರ್ವಾತ್ಮಕನಾದ ನಿನ್ನಲ್ಲಿ ಭಕ್ತಿಯಿಲ್ಲದವರಿಗೆ, ಆ ಕಾರ್ಯವು ಎಂದಿಗೂ ಸಾಧ್ಯವಲ್ಲವೆಂದೇ ನನ್ನ ಅಭಿಪ್ರಾಯವು. ಈಗ ನಾನಾದರೋ ನಿನ್ನ ಮಾಯೆಯಿಂದ ಕಲ್ಪಿತಗಳಾದ ದೇಹದಲ್ಲಿಯೂ, ದೇಹಾನುಬಂಧಿಗಳಲ್ಲಿಯೂ, "ನಾನು ನನ್ನದೆಂ"ಬ ಅಹಂಕಾರಮಮಕಾರಗಳಿಂದ, ವಿವೇಕಹೀನನಾಗಿ ಅಜ್ಞಾನದಲ್ಲಿ ಮುಳುಗಿರತಕ್ಕವನು. ಆದುದರಿಂದ ಈಗ ನೀನು ಹೇಳಿದ ಸರ್ವಸಂಗ ಪರಿತ್ಯಾಗವನ್ನು ಸುಲಭವಾಗಿ ಸಾಧಿಸುವುದಕ್ಕೆ ಏನುಪಾಯವೆಂಬುದನ್ನೂ

ನೀನೇ ನನಗೆ ಉಪದೇಶಿಸಬೇಕು. "ಇದನ್ನೇ ಬೇರೊಬ್ಬ ಗುರುವಿನಿಂದ ವಿಸ್ತಾರವಾಗಿ ಕೇಳಿ ತಿಳಿಯಬಾರದೆ?" ಎಂದು ನೀನು ಹೇಳಬಹುದು. ಓ ಸರ್ವೇಶ್ವರಾ! ನಾನು ಬೇರೆ ಯಾರನ್ನು ಹುಡುಕಲಿ! ನಿನ್ನಂತೆ ಬೇರೊಬ್ಬ ಉಪದೇಶಕನು ಬ್ರಹ್ಮಾದಿದೇವತೆಗಳಲ್ಲಿಯೂ ಲಭಿಸುವಂತೆ ನನಗೆ ತೋರ ಲಿಲ್ಲ! ಏಕೆಂದರೆ, ನೀನಾದರೋ ಯಾವಾಗಲೂ ಆತ್ಮಾನುಭವದಿಂದ ನಿನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿ ತಿಳಿಯತಕ್ಕವನು. ನಿನ್ನ ಸ್ವರೂಪಸ್ವಭಾವ ಗಳಿಗಾಗಲಿ, ನಿನ್ನ ಜ್ಞಾನಕ್ಕಾಗಲಿ ಎಂದಿಗೂ ಸಂಕೋಚವಿರದು. ಸಮ ಸ್ತಜೀವಾತ್ಮಗಳಿಗೂ ನೀನು ಅಂತರಾತ್ಮನು. ಬ್ರಹ್ಮಾದಿದೇವತೆಗಳೆಲ್ಲರೂ ನಿನ್ನ ಮಾಯೆಗೆ ಮರುಳಾಗಿರತಕ್ಕವರು. ಆದುದರಿಂದ, ಅವರೂ ಕರ್ಮಾ ಧೀನವಾದ ದೇಹವನ್ನು ಹೊಂದಿ, ಆತ್ಮವಲ್ಲದ ದೇಹಾದಿಗಳಲ್ಲಿ ಅಹಂಭಾವ ವನ್ನಿಟ್ಟು ಅಜ್ಞರಾಗಿರುವರು. ನಿನ್ನ ಪಾದಸೇವೆಯಲ್ಲಿ ರಸಾನುಭವವನ್ನು ಮಾಡಿದ ಭಕ್ತೋತ್ತಮರೊಡನೆ ಸಹವಾಸವಿಲ್ಲದವರಿಗೆ, ಬೇರೆ ಎಷ್ಟೇ ಉಪಾಯಗಳಿಂದಲೂ ನಿನ್ನ ಮಾಯೆಯನ್ನು ತಪ್ಪಿಸಿಕೊಳ್ಳುವುದು ಸಾಧ ವಲ್ಲ! "ಹಾಗಿದ್ದರೆ ಅಂತಹ ಸತ್ಸಹವಾಸಕ್ಕಾಗಿಯೇ ನೀನೂ ಪ್ರವರ್ತಿಸ ಬಾರದೆ?" ಎಂದರೆ, ಮೊದಲು ವಿಷಯಾಸಕ್ತಿಯನ್ನು ಬಿಟ್ಟವರಿಗಲ್ಲದೆ ಆ ಸತ್ಸಂಗವೂ ಲಭಿಸಲಾರದು. ಸಪತ್ನೀಕನಾಗಿ ಗೃಹಸ್ಥಧರ್ಮದಲ್ಲಿರುತಿದ್ದ ರೂ, ತಾಪತ್ರಯದಲ್ಲಿ ಸಿಕ್ಕಿ ನರಳುತ್ತಿದ್ದರೂ, ಮನುಷ್ಯನು ವಿಷಯಾಸ ಕ್ತಿಯನ್ನು ತ್ಯಜಿಸುತ್ತಬಂದ ಪಕ್ಷದಲ್ಲಿ, ಅಂತವನಿಗೆ ಸತ್ಸಹವಾಸವೂ ಸು ಲಭವಾಗಿ ದೊರೆಯುವುದು. ವಿಷಯಾಸಕ್ತನಿಗೆ ಆ ಭಾಗ್ಯವು ಲಭಿಸಲಾರ ದು. ಆದುದರಿಂದ ಓ ದೇವಾ! ಬ್ರಹ್ಮಾದಿಗಳಂತೆ ಮೋಹಾದಿದೋಷಗಳಿಲ್ಲದೆ ಅಪರಿಚ್ಛಿನ್ನಸ್ವರೂಪಸ್ವಭಾವಗಳುಳ್ಳವನಾಗಿಯೂ, ಸರ್ವವಸ್ತುಗಳನ್ನೂ ಸಾಕ್ಷಾತ್ಕರಿಸತಕ್ಕವನಾಗಿಯೂ, ಸರ್ವನಿಯಾಮಕನಾಗಿಯೂ, ಯಾವ ಕಾಲಕ್ಕೂ ಚ್ಯುತಿಯಿಲ್ಲದ ವೈಕುಂಠವೆಂಬ ನಿತ್ಯವಿಭೂತಿಸ್ಥಾನದಲ್ಲಿ ನೆಲೆಗೊಂ ಡವನಾಗಿಯೂ, ಜ್ಞಾನಿಗಳಿಗೆ ಸದ್ಗತಿಯಾಗಿಯೂ ಇರುವ ನಿನ್ನಲ್ಲಿಯೇ ನಾನು ಮರೆಹೊಕ್ಕಿರುವೆನು. ಸಂಸಾರತಾಪದಲ್ಲಿ ಸಿಕ್ಕಿ ಬುದ್ಧಿಮೋಹದಿಂದ ತತ್ತಳಿಸುತ್ತಿರುವ ನನಗೆ ನೀನೇ ಆಚಾರ್ಯನಾಗಿ ಜ್ಞಾನೋಪದೇಶದಿಂದ ನನ್ನನ್ನು ಉದ್ಧರಿಸಬೇಕು" ಎಂದನು.

ಆದಕ್ಕಾ ಶ್ರೀಕೃಷ್ಣನು "ಉದ್ಧವಾ! ಕೇಳು. ಪುರುಷನಿಗೆ, ಮುಖ್ಯ ವಾಗಿ ಮನುಷ್ಯಜನ್ಮದಲ್ಲಿ, ಸುಶಿಕ್ಷಿತವಾದ ಅವನವನ ಮನಸ್ಸೇ ಗುರುವೆಂದು ತಿಳಿ ! ಲೋಕದಲ್ಲಿ ಆಯಾವಸ್ತುಗಳ ತತ್ವವನ್ನು ತಿಳಿಯಬಲ್ಲವರು, ತಮಗೆ ತಾವೇ ತಮ್ಮ ಬುದ್ಧಿಯನ್ನು ಸುಶಿಕ್ಷಿತವಾಗಿ ಮಾಡಿಕೊಂಡು, ಆ ಶಿಕ್ಷಾಬಲದಿಂದಲೇ ವಿಷಯವಾಸನೆಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಉತ್ತೀರ್ಣರಾಗಬಹುದು. ಆಯಾ ಮನುಷ್ಯನಿಗೆ ತನ್ನ ಮನಸ್ಸೇ ಹಿತಪ್ರವರ್ತಕವಾಗುವುದು. ಏಕೆಂದರೆ ಮನುಷ್ಯಜನ್ಮವನ್ನು ಹೊಂದಿದಾಗಲೇ ಶಾಸ್ತ್ರಾಧಿಕಾರವಿರುವುದರಿಂದ, ಶ್ರುತಿಸ್ಮೃತಿಗಳಮೂಲನಾಗಿ ಅನೇಕವಿಷಯಗಳನ್ನು ಕೇಳಿಯೂ, ಪ್ರತ್ಯಕ್ಷದಿಂದ ಕಂಡೂ, ಅನುಮಾನದಿಂದ ಆಲೋಚಿಸಿಯೂ, ತನ್ನ ಶ್ರೇಯಸ್ಸಿಗೆ ಮಾರ್ಗವನ್ನು ತಿಳಿದುಕೊಳ್ಳಬಹುದು. ಮನುಷ್ಯಜನ್ಮವನ್ನೆತ್ತಿದಾಗಲೇ ಜೀವನು, ಚಿದಚಿದೀಶ್ವರರೆಂಬ ತತ್ವತ್ರಯಜ್ಞಾನವನ್ನು ಪಡೆದು, ಪರಮಾತ್ಮೋಪಾಸನವೆಂಬ ಯೋಗವನ್ನು ಸಾಧಿಸಿ, ಜಿತೇಂದ್ರಿಯನಾಗಿದ್ದು, ಸರ್ವಜ್ಞತ್ವಾದಿಸಮಸ್ತಶಕ್ತಿಗಳಿಂದ ಕೂಡಿದ ನನ್ನ ಸ್ವರೂಪವನ್ನು ಸ್ಪಷ್ಟವಾಗಿ ಕಾಣಬಹುದು. ಈ ಪ್ರಪಂಚದಲ್ಲಿ ಒಂದು ಕಾಲುಳ್ಳವು, ಎರಡು ಕಾಲುಳ್ಳವು, ಮೂರುಕಾಲುಗಳುಳ್ಳವು, ನಾಲ್ಕು ಕಾಲುಳ್ಳವು, ಅದಕ್ಕಿಂತಲೂ ಹೆಚ್ಚಾಗಿ ಇನ್ನೂ ಅನೇಕ ಪಾದಗಳುಳ್ಳವು, ಕಾಲೇ ಇಲ್ಲದವುಗಳು, ಹೀಗೆ ನಾನಾಬಗೆಯ ಶರೀರಗಳು ಜೀವನಿಗೆ ನಿವಾಸಸ್ಥಾನವಾಗಿರುವುವು. ಈ ಪ್ರಾಣಿಭೇದಗಳಲ್ಲಿ ಮನುಷ್ಯಜನ್ಮವೇ ನನಗೆ ವಿಶೇಷಪ್ರೇಮಪಾತ್ರವೆನಿಸಿರುವುದು. "ಹಾಗಿದ್ದರೆ ಮನುಷ್ಯಜನ್ಮದಲ್ಲಿ ಹುಟ್ಟಿದವರೆಲ್ಲರೂ ನಿನ್ನನ್ನು ಸಾಕ್ಷಾತ್ಕರಿಸಿ, ಮೋಕ್ಷವನ್ನು ಹೊಂದಬೇಕಲ್ಲವೆ? "ಎಂದರೆ, ಹಾಗಲ್ಲ! ಮನುಷ್ಯಜನ್ಮವನ್ನೆತ್ತಿದವರೆಲ್ಲರೂ ನನ್ನನ್ನು ಸಾಕ್ಷಾತ್ಕರಿಸಲಾರರು. ಏಕೆಂದರೆ, ಪ್ರತ್ಯಕ್ಷಾನುಮಾನಾದಿ ಪ್ರಮಾಣಗಳಿಂದ ನನ್ನನ್ನು ತಿಳಿಯುವುದು ಸಾಧ್ಯವಲ್ಲ. ಆದುದರಿಂದ ಅಸಾಧಾರಣಜ್ಞಾನಬಲವುಳ್ಳ ಕೆಲವು ಮಹಾತ್ಮರುಮಾತ್ರ ನನ್ನನ್ನು ತಮ್ಮ ಧ್ಯಾನಯೋಗದಿಂದ ಕಂಡುಕೊಳ್ಳಬಲ್ಲರು. ಉದ್ಧವಾ! ಇದೇ ವಿಚಾರವಾಗಿ ಹಿಂದೆ ಅವಧೂತನಿಗೂ ಯದುವಿಗೂ ನಡೆದ ಸಂವಾದ

ರೂಪವಾದ ಒಂದು ಇತಿಹಾಸವನ್ನು ಹೇಳುವೆನು! ಕೇಳು. ಹಿಂದೆ ಇನ್ನೂ ತರುಣವಯಸ್ಸಿನಲ್ಲಿದ್ದ ಒಬ್ಬಾನೊಬ್ಬ ಬ್ರಾಹ್ಮಣನು, ತನ್ನ ಯೌವನ ಕಾಲದಲ್ಲಿಯೂ ಐಹಿಕಸುಖದ ಆಸೆಯೇ ಇಲ್ಲದೆ, ಅಭ್ಯಂಗನವೇ ಮೊದ ಲಾದ ದೇಹಸಂಸ್ಕಾರವೂ ಇಲ್ಲದೆ, ಶೀತೋಷ್ಣಾದಿಬಾಧೆಗಳಿಗೂ ಭಯಪಡ ದೆ ಅಲ್ಲಲ್ಲಿ ತಿರುಗುತಿದ್ದನು. ಆತನಾದರೋ ಮಹಾಜ್ಞಾನಿಯು. ಹೀಗೆ ಭೂಸಂಚಾರವನ್ನು ಮಾಡುತಿದ್ದ ಬ್ರಾಹ್ಮಣತರುಣನನ್ನು ನೋಡಿ, ಧರ್ಮ ಜ್ಞನಾದ ಯದುವೆಂಬ ರಾಜನು, ಅವನನ್ನು ಕುರಿತು ಹೀಗೆಂದು ಪ್ರಶ್ನೆ ಮಾಡುವನು. "ಬ್ರಾಹ್ಮಣಾ! ನೀನು ನಿನ್ನ ದೇಹದ, ಮತ್ತು ಇಂದ್ರಿಯ ಗಳ ಸುಖಕ್ಕಾಗಿ ಯಾವ ಕಾರ್ಯವನ್ನೂ ಮಾಡುವಹಾಗೆ ತೋರಲಿಲ್ಲ! ಲೋಕವಿಲಕ್ಷಣವಾದ ಈ ನಿಪುಣಬುದ್ಧಿಯು ನಿನಗೆ ಹೇಗೆ ಹುಟ್ಟಿತು? ನೀನು ಒಳ್ಳೇ ವಿದ್ವಾಂಸನಾಗಿದ್ದರೂ, ಏನೂ ತಿಳಿಯದ ಅಜ್ಞನಂತೆ ತಿರುಗುತ್ತಿರುವೆಯಲ್ಲಾ! ಲೋಕದಲ್ಲಿ ಸಾಮಾನ್ಯವಾಗಿ ವಿವೇಕಿಗಳಾದ ಮಹನೀಯರೂಕೂಡ, ಧರ್ಮಾರ್ಥಕಾಮುಗಳಲ್ಲಿಯೂ, ಅವುಗಳ ಸಾಧನಗ ಳನ್ನು ತಿಳಿಯುವುದರಲ್ಲಿಯೂ, ಆಯುಸ್ಸು, ಕೀರ್ತಿ, ಸಂಪತ್ತು, ಮುಂತಾ ದ ಐಹಿಕಭೋಗಗಳನ್ನು ಪಡೆಯುವುದರಲ್ಲಿಯೂ ಆಸೆಯಿಂದ ಪ್ರವರ್ತಿ ಸುವರು. ನೀನಾದರೋ ಕೈಲಾಗದ ಅಶಕ್ತನಲ್ಲ! ಲೋಕವ್ಯವಹಾರವನ್ನೂ ಶಾಸ್ತ್ರವನ್ನೂ ತಿಳಿಯದ ಮೂಢನಲ್ಲ! ಯಾವ ಕಾರ್ಯಕ್ಕಾಗಲಿ ಸಾಮರ್ಥ್ಯ ವಿಲ್ಲದವನಲ್ಲ! ಕುರೂಪಿಯಲ್ಲ! ಹೀಗೆ ಸುಖಸಾಧನೆಗೆ ಬೇಕಾದ ಸಮಸ್ತ ಸೌಕರ್ಯಗಳೂ ನಿನಗಿರುವುವು. ಹೀಗಿದ್ದರೂ ನೀನು ಲೌಕಿಕಸುಖಕ್ಕೆ ಬೇ ಕಾದ ಯಾವ ಕಾರ್ಯವನ್ನೂ ಮಾಡದೆ, ಜಡನಂತೆಯೂ, ಹುಚ್ಚನಂತೆಯೂ, ಭೂತಾವಿಷ್ಟನಂತೆಯೂ ಸುಮ್ಮನೆ ತಿರುಗುತ್ತಿರುವುದೇಕೆ? ಲೋಕ ದಲ್ಲಿ ಇತರಜನರೆಲ್ಲರೂ ಕಾಮಲೋಭಗಳೆಂಬ ಕಾಡುಗಿಚ್ಚಿನಲ್ಲಿ ಬೇಯು ತ್ತಿದ್ದರೂ, ನೀನು, ಗಂಗಾಜಲದಲ್ಲಿ ಓಲಾಡುತ್ತಿರುವ ಮದದಾನೆ ಯಂತೆ, ಆ ಕಾಮಲೋಭಾದಿತಾಪಗಳೊಂದಕ್ಕೂ ಈಡಾಗದೆ ಸುಖವಾಗಿ ರುವೆಯಲ್ಲವೆ? ಹೀಗೆ ನೀನು ಶಬ್ದಾದಿವಿಷಯಸಂಬಂಧವನ್ನು ಬಿಟ್ಟು, ನಿಶ್ಚಿಂ ತವಾದ ಆತ್ಮಾನಂದವನ್ನನುಭವಿಸುವುದಕ್ಕೆ ಕಾರಣವೇನು? ಈ ಬುದ್ಧಿಯು

ನಿನಗೆ ಹೇಗೆ, ಯಾರಿಂದ ಹುಟ್ಟಿತೆಂಬುದನ್ನು ನಾನು ತಿಳಿಯಬೇಕೆಂದಿರುವೆನು. ಕೃಪೆಯಿಟ್ಟು ತಿಳಿಸಬೇಕು." ಎಂದನು. ಹೀಗೆ ಬಹಳಮೇಧಾವಿಯೂ, ಬ್ರಾಹ್ಮಣಪ್ರಿಯನೂ ಆದ ಯದುವು ವಿನಯದಿಂದ ಪ್ರಾರ್ಥಿಸಲು, ಮಹಾಭಾಗನಾದ ಆ ಬ್ರಾಹ್ಮಣನು ಹೀಗೆಂದು ಹೇಳುವನು. "ಓ ರಾಜೇಂದ್ರಾ! ನನಗೆ ಈ ಬುದ್ಧಿಯು ಹೇಗೆ ಹುಟ್ಟಿತೆಂದು ಕೇಳಿದೆಯಲ್ಲವೆ? ನನಗೆ ಈ ಲೋಕದಲ್ಲಿ ಬುದ್ಧಿಸಂಪನ್ನರಾದ ಅನೇಕವುಂದಿ ಗುರುಗಳುಂಟು. ಅವರಿಂದಲೇ ನಾನು ಸುಶಿಕ್ಷಿತವಾದ ಈ ಬುದ್ಧಿಯನ್ನು ಪಡೆದು, ತಾಪತ್ರಯಸಂಬಂಧವಿಲ್ಲದೆ, ನಿಶ್ಚಿಂತನಾಗಿ ತಿರುಗುತ್ತಿರುವೆನು. ಈ ವಿಷಯದಲ್ಲಿ ನನಗೆ ಗುರುಗಳಾರೆಂಬುದನ್ನೂ ತಿಳಿಸುವೆನು ಕೇಳು! ಭೂಮಿ, ವಾಯು, ಆಕಾಶ, ಜಲ, ಅಗ್ನಿ, ಚಂದ್ರ, ಸೂರ್ಯ, ಪಾರಿವಾಳ, ಹೆಬ್ಬಾವು, ಸಮುದ್ರ, ಪತಂಗ, ಜೇನುಹುಳು, ಆನೆ, ಬೇಡರು, ಜಿಂಕೆ, ಮೀನು, ಪಿಂಗಳೆಯೆಂಬ ವೇಶ್ಯೆ, ಕುರರಪಕ್ಷಿ, ಸಣ್ಣಮಗು, ಒಬ್ಬಕನ್ಯೆ, ಲೋಹಕಾರನು, ಹಾವು, ಜೇಡರಹುಳು, ದುಂಬಿ, ಈ ಇಪ್ಪತ್ತುನಾಲ್ಕೂ ನನಗೆ ಜ್ಞಾನೋಪದೇಶಕರಾದ ಗುರುಗಳು. ನಾನು ಇವರನ್ನಾಶ್ರಯಿಸಿ, ಇವರಿಂದಲೇ ಶಿಕ್ಷಿತನಾಗಿ, ಈ ಮಾರ್ಗವನ್ನು ಹಿಡಿದಿರುವೆನು. ಓ ಯಯಾತಿಕುಮಾರಾ! ಮೇಲೆ ಹೇಳಿದ ಗುರುಗಳಲ್ಲಿ ಯಾರುಯಾರಿಂದ ನಾನು ಯಾವಯಾವ ಶಿಕ್ಷೆಯನ್ನು ಹೊಂದಿದೆನೋ ಅದನ್ನೂ ಕ್ರಮವಾಗಿ ವಿವರಿಸುವೆನು ಕೇಳು ಇತರಭೂತಗಳು ನಮ್ಮನ್ನು ಕಾಲಿಂದ ಮೆಟ್ಟಿತುಳಿದು, ನಾನಾವಿಧದಿಂದ ಪೀಡಿಸುತಿದ್ದರೂ, ಮನಸ್ಸು ಕಲಗದೆ, ಆ ಭೂತವ್ಯಾಪಾರಗಳೆಲ್ಲವೂ ದೈವಪ್ರೇರಿತಗಳೆಂದೇ ತಿಳಿದು, ತಾಳ್ಮೆಯನ್ನು ವಹಿಸಿ ನಿಶ್ಚಲವಾಗಿರಬೇಕೆಂಬ ಕ್ಷಮಾಗುಣವನ್ನು ಭೂಮಿಯಿಂದ ಕಲಿತುಕೊಂಡೆನು. ಮತ್ತು ಅದೇ ಭೂಮಿಯಲ್ಲಿರುವ ಪರ್ವತಗಳೂ, ವೃಕ್ಷಗಳೂ, ಪರೋಪಕಾರಕ್ಕಾಗಿಯೇ ಹುಟ್ಟಿರುವುದನ್ನೂ, ಪರೋಪಕಾರಕ್ಕಾಗಿಯೇ ಅವು ಕೆಲಸನಡೆಸುತ್ತಿರುವುದನ್ನೂ ನೋಡಿ, ಅವುಗಳಲ್ಲಿ ಶಿಷ್ಯವೃತ್ತಿಯಿಂದ, ನಮ್ಮ ಜನ್ಮಕರ್ಮಗಳೆಲ್ಲವೂ ಪರಾರ್ಥವಾಗಿಯೇ ಇರಬೇಕೆಂಬುದನ್ನು ಕಲಿತುಕೊಂಡೆನು. ವಾಯುವಿನಲ್ಲಿ ನಮ್ಮ ದೇಹದೊಳಗಿನ ಪ್ರಾಣವಾಯುವಿನಿಂದಲೂ, ಹೊರಗಿನ ವಾಯುಮಂಡಲದಿಂದ

ಲೂ ಒಂದೆರಡುವಿಷಯಗಳನ್ನು ಕಲಿತುಕೊಂಡೆನು. ಅವುಗಳಲ್ಲಿ ಪ್ರಾಣ ವಾಯುವಿನ ವ್ಯಾಪಾರದಿಂದ ತಿಳಿದುಕೊಂಡ ವಿಷಯವೇನೆಂದರೆ, ಪ್ರಾಣ ಧಾರಣೆಗೆ ಆಹಾರಮಾತ್ರವೇ ಬೇಕಲ್ಲದೆ ಇಂದ್ರಿಯತೃಪ್ತಿಯಿಂದ ಅದಕ್ಕೇನೂ ಕೆಲಸವಿಲ್ಲ. ಅದರಂತೆ ಯೋಗಿಯಾದವನೂಕೂಡ, ಆ ಪ್ರಾಣಧಾರಣೆಗೆ ಬೇಕಾದ ಆಹಾರವನ್ನು ಮಾತ್ರ ತೆಗೆದುಕೊಂಡರೆ ಸಾಕೇಹೊರತು ಶಬ್ದಾದಿವಿಷಯಗಳಿಗಾಗಿ ದುಡಿಯಬಾರದು. "ಆದರೆ ಆ ಪ್ರಾಣವನ್ನು ತಾನೇ ಏಕೆರಕ್ಷಿಸಿಡಬೇಕು" ಎಂದರೆ, ಮನುಷ್ಯನಿಗೆ ಪ್ರಾಣವ್ಯಾಪಾರವು ಜರುಗದಿದ್ದರೆ, ಮನಸ್ಸು ಕಳವಳಿಸಿ, ಜ್ಞಾನವೂ ನಶಿಸುವುದು. ಆದುದರಿಂದ ಮನಸ್ಸೂ, ಜ್ಞಾನವೂ ನಶಿಸದಹಾಗೆ ಪ್ರಾಣ ಧಾರಣೆಯನ್ನು ಮಾಡಿಕೊಳ್ಳಬೇಕು. ಅದಕ್ಕೆ ತಕ್ಕಷ್ಟು ಆಹಾರದಲ್ಲಿಮಾತ್ರ ಜೀವಿಸಿದ್ದರೆ ಸಾಕೇಹೊರತು, ಇಂದ್ರಿಯತೃಪ್ತಿಯಿಂದ ಪ್ರಯೋಜನವಿಲ್ಲ ವೆಂಬುದನ್ನು ಮೇಲೆ ಹೇಳಿದ ಪ್ರಾಣವಾಯುವಿನ ವ್ಯಾಪಾರದಿಂದ ನಾನು ತಿಳಿದೆನು. ಹೊರಗಿನ ವಾಯುಮಂಡಲದಿಂದ ತಿಳಿದವಿಷಯವೇನೆಂದರೆ, ವಾಯುವು, ಚಂದನ, ಅಗ್ನಿ, ಮುಂತಾದ ಶೀತೋಷ್ಣಾದಿವಸ್ತುಗಳಮೇಲೆ ಬೀಸಿಬಂದರೂ, ಸುಗಂಧದುರ್ಗಂಧಗಳನ್ನು ಪ್ರವೇಶಿಸಿಬಂದರೂ, ಆ ಗುಣ ಗಳನ್ನು ತನ್ನಲ್ಲಿ ಸ್ಥಿರವಾಗಿ ಅಂಟಿಸಿಕೊಳ್ಳದಿರುವಂತೆ, ಯೋಗಿಯಾದವನೂ ಕೂಡ, ಪ್ರಿಯಾಪ್ರಿಯಗಳೆನಿಸಿಕೊಂಡ ವಿಷಯಗಳನ್ನು ತನ್ನ ಇಂದ್ರಿಯ ಗಳಿಂದ ಅನುಭವಿಸುತಿದ್ದರೂ, ಅದರಿಂದ ತೋರಿಬರುವ ಸುಖದುಃಖಗ ಳನ್ನು ಮನಸ್ಸಿಗೆ ತಂದುಕೊಳ್ಳದೆ, ದೇವಮನುಷ್ಯಾದಿಪಾರ್ಥಿವಶರೀರಗಳಲ್ಲಿ ತಾನು ಪ್ರವೇಶಿಸಿದ್ದರೂ, ಅದರಿಂದ ತೋರಿಬರುವ ದೇವತ್ವ, ಮನು ಷ್ಯತ್ವ, ಸ್ಥೂಲತ್ವ, ಕೃಶತ್ವ ಮೊದಲಾದ ದೇಹಧರ್ಮಗಳನ್ನು ಮನಸ್ಸಿಗೆ ತಂದುಕೊಳ್ಳದೆ, ತನ್ನನ್ನು ದೇಹವಿಲಕ್ಷಣವಾದ ಆತ್ಮವೆಂದೇ ತಿಳಿಯಬೇ ಕೆಂಬುದನ್ನು ವಾಯುವಿನಿಂದ ನಾನು ತಿಳಿದೆನು. ಆಕಾಶವು ಎಲ್ಲಾವಸ್ತುಗಳ ಒಳಗೂ, ಹೊರಗೂ ವ್ಯಾಪಿಸಿ. ಆ ವಸ್ತುಗಳ ಸಂಬಂಧವಿಲ್ಲದಿರುವಂತೆ, ಸರ್ವವಸ್ತುಗಳೂ ಬ್ರಹ್ಮಾತ್ಮಕವೆಂಬ ವೇದಾಂತನಿರ್ಣಯಕ್ಕನುಸಾರವಾಗಿ, ಪರಮಾತ್ಮನು ಸಮಸ್ತಚರಾಚರಗಳ ಒಳಗೂ ಹೊರಗೂ ನಿರಂತರವಾಗಿ

ವ್ಯಾಪಿಸಿರುವನೆಂಬುದನ್ನು ಆಕಾಶದಿಂದ ನಾನು ತಿಳಿದೆನು. ಮತ್ತು ಪೃಥಿವ್ಯಪ್ತೇಜೋಮಯಗಳಾದ ಮೇಘಗಳು, ಕಾಲವಶದಿಂದ ವಾಯುಪ್ರೇರಿತಗಳಾಗಿ ಸುತ್ತಲೂ ವ್ಯಾಪಿಸಿದರೂ, ಆಕಾಶವು ಅವುಗಳ ಸ್ಪರ್ಶವಿಲ್ಲದಿರುವಂತೆ, ಪರಮಪುರುಷನು ಪ್ರಕೃತಿಗುಣಪರಿಣಾಮರೂಪಗಳಾಗಿ, ಕಾಲದಿಂದ ಸೃಜಿಸಲ್ಪಟ್ಟ ಚರಾಚರವಸ್ತುಗಳೊಳಗೆಲ್ಲಾ ವ್ಯಾಪಿಸಿದ್ದರೂ, ಆ ವಸ್ತುಗಳ ದೋಷಕ್ಕೆ ಈಡಾಗತಕ್ಕವನಲ್ಲವೆಂಬುದನ್ನು ಆ ಆಕಾಶದ ಗುಣದಿಂದಲೇ ಗ್ರಹಿಸಿದೆನು. ನೀರಿನಲ್ಲಿ ಸ್ವಚ್ಛತೆಯೂ, ಸಹಜವಾದ ಸ್ನಿಗ್ಧತೆಯೂ, ಮಾಧುರ್ಯವೂ ಇದ್ದು, ಅದು ದರ್ಶನ ಸ್ಪರ್ಶನ ಸಂಕೀರ್ತನಾದಿಗಳಿಂದ ಲೋಕವನ್ನು ಪಾವನಮಾಡತಕ್ಕ ಪುಣ್ಯತೀರ್ಥವೆಂದೂ ಹೇಳಿಸಿಕೊಳ್ಳುವಂತೆ ಮುನಿಯಾದವನು ಸ್ವಚ್ಛಹೃದಯನಾಗಿಯೂ, ಇತರಭೂತಗಳಲ್ಲಿ ಸ್ನೇಹವನ್ನು ತೋರಿಸತಕ್ಕವನಾಗಿಯೂ, ಮಧುರಭಾಷಿಯಾಗಿಯೂ ಇದ್ದು, ತನ್ನ ದರ್ಶನ ಸ್ಪರ್ಶನಾದಿಗಳಿಂದಲೇ ಇತರರನ್ನು ಪುನೀತರನ್ನಾಗಿ ಮಾಡುವಂತಿರಬೇಕೆಂಬುದನ್ನು ಆ ಜಲದಿಂದ ನಾನು ಗ್ರಹಿಸಿದೆನು. ಅಗ್ನಿಯು ತೇಜಸ್ಸಿನಿಂದ ಜ್ವಲಿಸುತ್ತ, ಸಿಕ್ಕಿದುದನ್ನು ಭಕ್ಷಿಸುತಿದ್ದರೂ, ಶುದ್ಧವೆನಿಸಿಕೊಂಡಿರುವಂತೆ, ಯೋಗಿಯಾದವನು ಜ್ಞಾನದಿಂದಲೂ, ತಪಸ್ಸಿನಿಂದಲೂ ತೇಜಸ್ವಿಯೆನಿಸಿಕೊಂಡು, ಮೃಷ್ಟಾನ್ನ ಕದನ್ನಗಳೆಂಬ ಭೇದವನ್ನೆಣಿಸದೆ, ಉದರಭರಣಮಾತ್ರದಲ್ಲಿ ತೃಪ್ತನಾಗಿ, ದೇಹಧಾರಣಮಾಡುತ್ತ ಶುದ್ಧಮನಸ್ಕನಾಗಿರಬೇಕೆಂಬುದನ್ನು ಆ ಅಗ್ನಿಯಿಂದ ತಿಳಿದೆನು. ಮತ್ತು ಅದೇ ಅಗ್ನಿಯು, ಒಂದೊಂದುಕಡೆಯಲ್ಲಿ ಭಸ್ಮಾದಿಗಳಲ್ಲಿ ಮರೆಸಿಕೊಂಡೂ, ಮತ್ತೆ ಕೆಲವೆಡೆಗಳಲ್ಲಿ ಜ್ವಾಲೆಗಳನ್ನು ಕೆದರುತ್ತ ಸ್ಪಷ್ಟವಾಗಿ ತೋರುತ್ತಲೂ ಇದ್ದು, ಶ್ರೇಯಃಕಾಂಕ್ಷಿಗಳಾಗಿ ತನ್ನನ್ನು ಉಪಾಸಿಸತಕ್ಕವರು ತಾವಾಗಿ ತಂದುಕೊಟ್ಟ ಹವಿಸ್ಸನ್ನು ಗ್ರಹಿಸಿ, ಅವರ ಹಿಂದುಮುಂದಿನ ಪಾಪಗಳೆಲ್ಲವನ್ನೂ ನೀಗಿಸುವಂತೆ, ಯೋಗಿಯಾದವನು ತನ್ನ ಮಹಿಮೆಯನ್ನು ಹೊರಕ್ಕೆ ಕಾಣಿಸದೆ, ಬೂದಿಮುಚ್ಚಿದ ಕೆಂಡದಂತಿದ್ದು, ಅವಶ್ಯಸಮಯಗಳಲ್ಲಿ ತನ್ನ ತೇಜಸ್ಸನ್ನು ಹೊರಪಡಿಸುತ್ತ, ಲಭಿಸಿದುದನ್ನು ಭುಜಿಸಿ ತೃಪ್ತನಾಗಿ, ಮೋಕ್ಷಾರ್ಥಿಗಳಿಂದ ಅನುವರ್ತಿಸಲ್ಪಡುತ್ತ, ತನ್ನನ್ನು ಸೇವಿಸಿದ

ವರಿಗೆ ಹಿಂದುಮುಂದಿನ ಪಾಪಗಳನ್ನು ನೀಗಿಸತಕ್ಕವನಾಗಿರುವನೆಂಬು ದನ್ನೂ ಆ ಅಗ್ನಿಯಿಂದಲೇ ಗ್ರಹಿಸಿಕೊಂಡೆನು. ಮತ್ತು ಅಗ್ನಿಯು ತನಗಾ ಶ್ರಯವಾದ ಕಟ್ಟಿಗೆ ಮೊದಲಾದುವುಗಳಲ್ಲಿ ಸೇರಿ, ಆಯಾವಸ್ತುಗಳ ವಕ್ರ ತ್ವ ಋಜುತ್ವ ಮೊದಲಾದ ಆಕಾರದಿಂದಲೇ ತೋರುವಂತೆ, ಪರಮಪುರು ಷನೂಕೂಡ ತನ್ನ ಮಾಯೆಯಿಂದ ಚಿದಚಿದಾತ್ಮಕವಾದ ಪ್ರಪಂಚದಲ್ಲಿ ಅಡಗಿದ್ದು, ಆಯಾ ದೇವಮನುಷ್ಯಾದಿರೂಪಗಳಿಂದಲೇ ಕಾಣುತ್ತಿರುವ ನೆಂಬುದನ್ನೂ ಗ್ರಹಿಸಿದೆನು. ಚಂದ್ರನ ಕಳೆಗಳಿಗೆ ಸಂಭವಿಸುವ ವೃದ್ಧಿ ಕ್ಷಯಗಳು ಆ ಚಂದ್ರನಿಗಿಲ್ಲವೆಂಬುದನ್ನೂ, ಅಗ್ನಿಯಲ್ಲಿ ಜ್ವಾಲೆಗಳಿಗೆ ಸಂಭವಿ ಸುವ ಉತ್ಪತ್ತಿವಿನಾಶಗಳು ಆ ಅಗ್ನಿಗಿಲ್ಲದಿರುವುದನ್ನೂ ನೋಡಿ, ಮನು ಷ್ಯನಿಗೆ ನಿಷೇಕ ಮೊದಲಾಗಿ ಶ್ಮಶಾನಾಂತವಾಗಿ ಕಾಲವೇಗದಿಂದ ನಡೆಯು ವ ವಿಕಾರಗಳೆಲ್ಲ, ಅವನ ದೇಹಕ್ಕೇಹೊರತು ಆತ್ಮನಿಗಿಲ್ಲವೆಂಬುದನ್ನು ಆ ಚಂದ್ರಾಗ್ನಿಗಳ ದೃಷ್ಟಾಂತದಿಂದ ಗ್ರಹಿಸಿದೆನು. ಸೂರ್ಯನು ತನ್ನ ಕಿರಣಗಳಿಂ ದ ಸಮುದ್ರಜಲವನ್ನೆಳೆದು, ಸ್ವಾರ್ಥವಾಗಿ ಉಪಯೋಗಿಸಕೊಳ್ಳದೆ, ಅದ ನ್ನು ಸಕಾಲದಲ್ಲಿ ಪರೋಪಕಾರಾರ್ಥವಾಗಿ ಮಳೆಯ ರೂಪದಿಂದ ಭೂಮಿ ಗೆ ಚೆಲ್ಲುವಂತೆ, ಯೋಗಿಯಾದವನೂಕೂಡ ,ಭೋಗ್ಯವಸ್ತುಗಳನ್ನು ಸಂಪಾ ದಿಸಿದರೂ, ಸ್ವೋಪಯೋಗದಲ್ಲಿ ದೃಷ್ಟಿಯಿಡದೆ, ಅವುಗಳನ್ನು ಅರ್ಥಿಗಳಾ ಗಿ ಬಂದವರ ಉಪಯೋಗಕ್ಕೆ ಬಿಟ್ಟುಬಿಡಬೇಕೆಂಬುದನ್ನು ಸೂರ್ಯನ ದೃ ಷ್ಟಾಂತದಿಂದ ಗ್ರಹಿಸಿದೆನು. ಮತ್ತು ಆಕಾಶದಲ್ಲಿರುವ ಸೂರ್ಯನು,ಕನ್ನಡಿ, ನೀರು ಮುಂತಾದುವುಗಳಲ್ಲಿ ಪ್ರತಿಫಲಿಸಿದಾಗ, ಅಜ್ಞರಿಗೆ ಅದರಲ್ಲಿರುವಂ ತೆಯೇ ತೋರಿದರೂ, ಆ ಸೂರ್ಯನಿಗೆ ಅವುಗಳ ಸಂಸರ್ಗವೇ ಇಲ್ಲದಿರುವಂತೆ ಆತ್ಮನೂಕೂಡ ದೇವಾದಿಶರೀರಗಳಲ್ಲಿದ್ದರೂ ಅವುಗಳ ಸ್ವಭಾವಕ್ಕೀಡಾಗ ದಿರುವನೆಂಬುದನ್ನೂ ಸೂರ್ಯದೃಷ್ಟಾಂತದಿಂದ ಗ್ರಹಿಸಿದೆನು. ಒಮ್ಮೆ ನಾನು ಹಿಂದಾನೊಂದು ಕಪೋತಪಕ್ಷಿಗುಂಟಾದ ಕಷ್ಟದಶೆಯನ್ನು ನೋಡಿ ಯೋಗಿಯಾದವನು ಎಲ್ಲಿಯೂ, ಯಾವಾಗಲೂ ಅತಿಸ್ನೇಹವನ್ನು ಬೆಳೆಸ ಬಾರದೆಂದೂ, ಅದರಿಂದ ಕೊನೆಗೆ ಬಹಳದುಃಖಕ್ಕೆ ಭಾಗಿಯಾಗಬೇಕಾಗು ವುದೆಂದೂ ಗ್ರಹಿಸಿದೆನು. ಆ ಕಥೆಯನ್ನೂ ನಿನಗೆ ತಿಳಿಸುವೆನು ಕೇಳು.

ಒಂದಾನೊಂದು ಕಪೋತಪಕ್ಷಿಯು, ಒಂದು ಕಾಡಿನಲ್ಲಿ ಗೂಡುಕಟ್ಟಿ ಕೊಂಡು, ತನ್ನ ಭಾರ್ಯೆಯೊಡನೆ ಅನೇಕದಿನಗಳಿಂದ ವಾಸಮಾಡುತಿತ್ತು. ಅವುಗಳಿಗೆ ಅನ್ಯೋನ್ಯವಾಗಿದ್ದ ದಾಂಪತ್ಯಪ್ರೇಮವು ಅಷ್ಟಿಷ್ಟಲ್ಲ. ಅವೆರಡೂ ಅನ್ಯೋನ್ಯವಾಗಿ ದಂಪತಿಸುಖವನ್ನನುಭವಿಸುತ್ತ, ದೃಷ್ಟಿಯಿಂದ ದೃಷ್ಟಿಯನ್ನೂ, ದೇಹದಿಂದ ದೇಹವನ್ನೂ, ಬುದ್ಧಿಯಿಂದ ಬುದ್ಧಿಯನ್ನೂ ಕಟ್ಟಿಹಾಕಿದಂತೆ,ಒಂದಕ್ಕೊಂದು ಪ್ರೇಮಪಾಶದಲ್ಲಿ ಬಂಧಿಸಲ್ಪಟ್ಟಿದ್ದುವು. ಹೀಗಿರುವಾಗ, ಕಾಲಕ್ರಮದಿಂದ ಹೆಣ್ಣುಪಾರಿವಾಳಕ್ಕೆ ಗರ್ಭವು ತಲೆದೋರಿತು. ಹೀಗೆ ಗರ್ಭಿಣಿಯಾದ ಆ ಕಪೋತಿಯು, ಯಾವಯಾವ ವಸ್ತುವನ್ನಪೇಕ್ಷಿಸಿದರೂ, ಗಂಡುಹಕ್ಕಿಯು, ಅದರಲ್ಲಿ ತನಗಿರುವ ಪ್ರೇಮಾತಿಶಯದಿಂದ,ಅದನ್ನು ಬಹಳ ಕಷ್ಟದಿಂದಾದರೂ ತಂದುಕೊಡುತಿದ್ದಿತು. ಅವೆರಡೂ, ಮಲಗುವಾಗಲೂ, ಕುಳ್ಳಿರುವಾಗಲೂ, ಸಂಚರಿಸುವಾಗಲೂ ನಿಂತಿರುವಾಗಲೂ, ಮಾತಾಡುವಾಗಲೂ, ಆಟವಾಡುವಾಗಲೂ, ಊಟಮಾಡುವಾಗಲೂ, ಒಂದನ್ನೊಂದು ಕ್ಷಣಮಾತ್ರವೂ ಅಗಲದೆ, ಒಂವಾಗಿ ಸೇರಿಯೇ ಆ ಸುತ್ತಿನ ವನಗಳಲ್ಲಿ ಯಥೇಚ್ಛವಾಗಿ ತಿರುಗುತಿದ್ದುವು, ಕ್ರಮವಾಗಿ ಆ ಕಪೋತಿಗೆ ಪ್ರಸವಕಾಲವು ಸಮೀಪಿಸಿತು. ತನ್ನ ಪತಿಯೊಡನೆ ತಾನಿದ್ದ ಗೂಡಿನಲ್ಲಿಯೇ ಕೆಲವು ಮೊಟ್ಟೆಗಳನ್ನಿಟ್ಟಿತು. ಆ ಮೊಟ್ಟೆಗಳೂ ಕಾಲಕ್ರಮದಲ್ಲಿ ಪಕ್ವವಾಗುತ್ತಬರಲು, ಅವುಗಳಿಗೆ ಒಂದೊಂದಾಗಿ ಅವಯವಗಳೂ ಸಣ್ಣಗರಿಗಳೂ ತಲೆದೋರತ್ತ ಬಂದುವು. ಭಗವಂತನ ಅಚಿಂತ್ಯಶಕ್ತಿಯಿಂದ ಅವು ಮೊಟ್ಟೆಯೊಡೆದು ಮರಿಗಳಾದುವು. ಆ ಕಪೋತ ದಂಪತಿಗಳೆರಡೂ ತಮ್ಮ ಮರಿಗಳಲ್ಲಿ ಅತ್ಯಂತಮೋಹವನ್ನು ತೋರಿಸುತ್ತ, ಅವ್ಯಕ್ತಮಧುರವಾದ ಅವುಗಳ ಕೂಗನ್ನು ಕೇಳಿ. ಆನಂದಿಸುತ್ತ, ಅತಿಪ್ರೇಮದಿಂದ ಗುಟುಕುಕೊಟ್ಟು ಆ ಮರಿಗಳನ್ನು ಪೋಷಿಸುತ್ತಬಂದುವು. ಸುಖಸ್ಪರ್ಶವುಳ್ಳ ಆಮರಿಗಳ ಗರಿಗಳು ತಮ್ಮ ಮೈಗೆ ಸೋಕುವಂತೆ ಅವುಗಳಮೇಲೆ ಬಿದ್ದು ಕಿಲಾಡುತ್ತ ಅದರಿಂದ ಸ್ಪರ್ಶಸುಖವನ್ನೂ, ಆ ಮರಿಗಳ ಕಿಚಕಿಚಧ್ವನಿಯನ್ನು ಕೇಳಿ ಕರ್ಣಾನಂದವನ್ನೂ, ಅವುಗಳ ಮನೋಹರವಾದ ಬಾಲಲೀಲೆಗಳನ್ನೂ,ಹಾರಾಟಗಳನ್ನೂ ನೋಡಿ ನೇತ್ರಾನಂದವನ್ನೂ ಅನುಭವಿಸುತ್ತ

ತಮ್ಮ ಸುಖಕ್ಕೆ ಎಣೆಯೇ ಇಲ್ಲವೆಂದು ಭಾವಿಸುತಿದ್ದುವು. ಹೀಗೆ ಆ ಕಪೋತ ದಂಪತಿಗಳೆರಡೂ, ಭಗವನ್ಮಾಯೆಯಿಂದ ತನ್ನ ಮಕ್ಕಳೆಂಬ ಮೋಹಪಾಶ ದಲ್ಲಿ ಕಟ್ಟುಬಿದ್ದು, ಆ ಮರಿಗಳನ್ನು ಬಹಳ ಕಷ್ಟದಿಂದ ಪೋಷಿಸುತಿದ್ದುವು. ಹೀಗೆ ಕುಟುಂಬಭರಣವೆಂಬ ಕಷ್ಟಕ್ಕೆ ಸಿಕ್ಕಿಬಿದ್ದ ಆ ಹೆಣ್ಣುಗಂಡುಹಕ್ಕಿಗ ಳೆರಡೂ, ಒಮ್ಮೆ ಮರಿಗಳಿಗೆ ಆಹಾರವನ್ನು ಸಂಪಾದಿಸಿ ತರುವುದಕ್ಕಾಗಿ ಗೂಡಿನಿಂದ ಹೊರಟು, ಸುತ್ತುಮುತ್ತಿನ ಅಡವಿಗಳಲ್ಲಿ ಬಹಳಹೊತ್ತಿನವರೆಗೆ ಅಲೆದಾಡುತಿದ್ದುವು. ಈ ಸಮಯದಲ್ಲಿ ಇತ್ತಲಾಗಿ ಬೇಟೆಗಾಗಿ ಬಂದ ಒಬ್ಬಾನೊಬ್ಬ ಬೇಡನು,ಆಹಕ್ಕಿಯ ಮರಿಗಳು ತಮ್ಮ ಗೂಡಿನ ಮುಂದೆ ಸಂ ತೋಷದಿಂದ ಹಾರಾಡುತ್ತಿರುವುದನ್ನು ಕಂಡು,ಬಲೆಯನ್ನು ಬೀಸಿ,ಆ ಮರಿಗ ಳನ್ನು ಹಿಡಿದುಬಿಟ್ಟನು. ಅತ್ತಲಾಗಿ ಆಹಾರವನ್ನು ತರುವುದಕ್ಕಾಗಿ ಹೋ ಗಿದ್ದ ಪಕ್ಷಿದಂಪತಿಗಳೆರಡೂ, ತಮ್ಮ ಮರಿಗಳಲ್ಲಿರುವ ಮೋಹದಿಂದ, ಅವು ಗಳ ಪೋಷಣೆಗಾಗಿ ಎಲ್ಲೆಲ್ಲಿಯೋ ಕಷ್ಟಪಟ್ಟು ಆಹಾರವನ್ನು ಸಂಗ್ರಹಿಸಿ ಕೊಂಡು, ಆತುರದಿಂದ ತಮ್ಮ ಗೂಡಿನ ಬಳಿಗೆ ಬಂದು ಸೇರಿದುವು. ಆಗ ಬಲೆಯಲ್ಲಿ ಸಿಕ್ಕಿಬಿದ್ದ ಮರಿಗಳು ತಂದೆತಾಯಿಗಳನ್ನು ಕಂಡೊಡನೆ, ಅರಚಿ ಕೊಳ್ಳುವುದಕ್ಕೆ ತೊಡಗಿದುವು. ಆ ಮರಿಗಳ ದುರವಸ್ಥೆಯನ್ನೂ, ಅವುಗಳ ಆಕ್ರಂದನವನ್ನೂ ನೋಡಿ, ಈ ಪಕ್ಷಿದಂಪತಿಗಳೂ ದೈನ್ಯದಿಂದ ಕೂಗಿ ಡುತ್ತ,ಆ ಬಲೆಯ ಸಮೀಪಕ್ಕೆ ಬಂದುವು. ಆಗ ತಾಯಿಹಕ್ಕಿಯು,ತನ್ನ ಮರಿ ಗಳಲ್ಲಿ ತನಗೆ ಭಗವನ್ಮಾಯೆಯಿಂದ ಕಲ್ಪಿತವಾದ ಮೋಹಪಾಶದಲ್ಲಿ ಕಟ್ಟು ಬಿದ್ದು, ಬಲೆಯಲ್ಲಿ ಸಿಕ್ಕಿಬಿದ್ದ ಆ ಮರಿಗಳ ದುರವಸ್ಥೆಯನ್ನು ನೋಡಿ ಸಹಿಸ ಲಾರದೆ, ಆ ಬಲೆಯಸುತ್ತಲೂ ಸುಳಿದಾಡುತ್ತ, ಕೊನೆಗೆ ಸ್ಮೃತಿತಪ್ಪಿ, ತಾನೂ ಆ ಬಲೆಯಲ್ಲಿ ಸಿಕ್ಕಿಬಿದ್ದಿತು. ಆಗ ಕಪೋತವು, ತನ್ನ ದೇಹಕ್ಕಿಂತ ಲೂ ತನಗೆ ಅತ್ಯಂತಮೋಹಪಾತ್ರಗಳಾದ ಮರಿಗಳೂ, ತನ್ನ ಅರ್ಧಾಂಗಿ ಯಾದ ಪತ್ನಿಯೂ ಬಲೆಗೆ ಸಿಕ್ಕಿಬಿದ್ದುದನ್ನು ಕಂಡು, ಮಹಾವ್ಯಸನದಿಂದ ಹೀಗೆಂದು ವಿಲಪಿಸುವುದಕ್ಕೆ ತೊಡಗಿತು. ‘‘ಅಯ್ಯೋ! ನನ್ನ ದುಃಖವನ್ನು ಯಾರೂ ಕೇಳುವರಿಲ್ಲವೆ? ಮಂದಭಾಗ್ಯನೂ, ಬುದ್ಧಿಹೀನನೂ ಆದ ನಾನು, ಇದುವರೆಗೆ ಎಷ್ಟೆಷ್ಟು ವಿಷಯಸುಖಗಳನ್ನನುಭವಿಸಿದರೂ ತೃಪ್ತಿ

ಯಿಲ್ಲದೆ, ಅವುಗಳಿಂದ ಕೃತಾರ್ಥನೆಂದೆಣಿಸದೆ, ಮೇಲೆಮೇಲೆ ಆಶೆಯಿಂದ ಕುದಿಯುತ್ತಿದ್ದೆನು. ಧರ್ಮಾರ್ಥಕಾಮಗಳಿಗೆ ಸಾಧನಭೂತವಾಗಿದ್ದ ನನ್ನ ಗೃಹ ಜೀವನವು ಈಗ ಅಕಸ್ಮಾತ್ತಾಗಿ ಒಮ್ಮೆಯೇ ಕೊನೆಗಂಡಿತು. ನನಗೆ ಸರ್ವ ವಿಧದಲ್ಲಿಯೂ ಅನುರೂಪಳಾಗಿಯೂ, ಎಲ್ಲಾಕಾರ್ಯಗಳಿಗೂ ಅನುಕೂಲೆ ಯಾಗಿಯೂ, ನನ್ನನ್ನೇ ದೈವವೆಂದು ನಂಬಿದವಳಾಗಿಯೂ ಇದ್ದ ನನ್ನ ಪತ್ನಿಯು, ಈ ಶೂನ್ಯವಾದ ಗೃಹದಲ್ಲಿ ನನ್ನೊಬ್ಬನನ್ನೇ ಬಿಟ್ಟು, ತನ್ನ ಮುದ್ದು ಮಕ್ಕಳೊಡನೆ ಪರಲೋಕಕ್ಕೆ ಹೋಗುತ್ತಿರುವಳಲ್ಲಾ ! ಅಯ್ಯೋ! ಇನ್ನು ನಾನು ಪತ್ನೀಪುತ್ರರೆಲ್ಲರನ್ನೂ ಕಳೆದುಕೊಂಡು, ಈ ಹಾಳುಮನೆಯಲ್ಲಿ ಹೇಗೆ ಜೀವಿಸಲಿ ! ಇನ್ನು ಈ ದುಃಖಜೀವನದಿಂದ ನಾನು ಬದುಕಿರುವುದೇಕೆ ? " ಎಂದು ಗೋಳಿಡುತ್ತ, ಬಲೆಯಲ್ಲಿ ಸಿಕ್ಕಿ ಮರಣೋನ್ಮುಖವಾಗಿ ತತ್ತಳಿಸು ತ್ತಿರುವ ತನ್ನ ಹೆಂಡತಿಮಕ್ಕಳನ್ನು ನೋಡಸಹಿಸಲಾರದೆ, ಅವುಗಳ ಸ್ಥಿತಿ ಯನ್ನು ತಾನು ಕಣ್ಣಾರ ನೋಡುತ್ತಿದ್ದರೂ ಹಿಂದುಮುಂದುತೋರದೆ, ಪ್ರಜ್ಞೆತಪ್ಪಿ ತಾನೂ ಆ ಬಲೆಯೊಳಗೆ ಬಿದ್ದು ಸಿಕ್ಕಿಕೊಂಡಿತು. ಆಮೇಲೆ ಕ್ರೂರನಾದ ಆ ಬೇಡನು, ಆ ಕಪೋತದಂಪತಿಗಳನ್ನೂ, ಆ ಮರಿಗಳನ್ನೂ, ಹಿಡಿದು ತನ್ನ ಬುಟ್ಟಿಯಲ್ಲಿ ಸೇರಿಸಿಕೊಂಡು, ತಾನು ಬಂದ ಕಾರ್ಯವು ಕೈಗೂಡಿತೆಂಬ ಸಂತೋಷದಿಂದ ತನ್ನ ಮನೆಗೆ ಹಿಂತಿರುಗಿಹೋದನು. ರಾಜಾ ! ಹೀಗೆಯೇ ಕುಟುಂಬಿಯಾಗಿ ಇಂದ್ರಿಯಗಳನ್ನು ಜಯಿಸಲಾರದ ಮನುಷ್ಯನು, ಸುಖದುಃಖಾದಿದ್ವಂದ್ವಗಳಿಗೆ ಸಿಕ್ಕಿ ತೊಳಲುತ್ತ, ಜನ್ಮಾವಧಿ ಕುಟುಂಬಪೋಷಣೆಗಾಗಿಯೇ ಕಷ್ಟಪಡುತ್ತಿದ್ದು, ಕೊನೆಗೆ ಮೇಲೆ ಹೇಳಿದ ಕಪೋತಪಕ್ಷಿಯಂತೆ ತನ್ನ ಪುತ್ರಕಳತ್ರಾದಿಗಳೊಡನೆ ಅಪಾರದುಃಖಕ್ಕೆ ಗುರಿಯಾಗುವುದೇ ನಿಶ್ಚಯವು. ಮುಕ್ತಿದ್ವಾರವನ್ನು ತೆರೆಯುವುದಕ್ಕೆ ಸಾಧನ ವೆನಿಸಿಕೊಂಡ ಉತ್ತಮವಾದ ಮನುಷ್ಯಜನ್ಮವು ಲಭಿಸಿರುವಾಗಲೂ, ಯಾವನು ವಿವೇಕಶೂನ್ಯನಾಗಿ ಆಕಪೋತಪಕ್ಷಿಯಂತೆ ಕುಟುಂಬದಲ್ಲಿಯೇ ಅಭಿಕಾಸಕ್ತನಾಗಿರುವನೋ, ಅವನನ್ನು ಆರೂಢಪತಿತನೆಂದು (ಮೊದಲು ಉ ತ್ತಮಪದವಿಯನ್ನು ಹೊಂದಿದ್ದು ಅದರಿಂದ ಅಧೋಗತಿಗೆ ಬೀಳುವವನಿಗೆ) ಸಮಾನವಾಗಿ ಭಾವಿಸಬಹುದು. ಇದು ಏಳನೆಯ ಅಧ್ಯಾಯವು.

## ಅವಧೂತಯದುಸಂವಾದವು.

ಓ ರಾಜಾ! ಇನ್ನು ಅಜಗರವೆಂಬ ಹಾವಿನಿಂದ ನಾನು ಗ್ರಹಿಸಿದ ವಿಷಯಗಳನ್ನು ತಿಳಿಸುವೆನು ಕೇಳು. ಪ್ರಾಣಿಗಳಿಗೆ ಇಂದ್ರಿಯತೃಪ್ತಿಯೆಂಬುದು, ಆಯಾಪ್ರಾರಬ್ಧಕರ್ಮಾನುಸಾರವಾಗಿ ಸ್ವರ್ಗದಲ್ಲಿಯೂ, ನರಕದಲ್ಲಿಯೂ ಲಭಿಸುವುವು. ದುಃಖಗಳು ಹೇಗೋ ಹಾಗೆಯೇ ಸುಖವೆಂಬುದೂ ಮನುಷ್ಯನಿಗೆ ಅನಪೇಕ್ಷಿತವಾಗಿಯೇ ಬಂದು ಸೇರುವುವು. ಆದುದರಿಂದ ವಿವೇಕಿಯು, ಈ ಸುಖದುಃಖಗಳೆರಡೂ ಕರ್ಮಾಧೀನವೆಂಬುದನ್ನು ತಿಳಿದು, ಸುಖವನ್ನೂ ದುಃಖದಂತೆಯೇ ಭಾವಿಸಿ, ಅದರಲ್ಲಿ ವಿಮುಖನಾಗಿರಬೇಕು. ಆಹಾರವು, ರಸವತ್ತಾದ ಮೃಷ್ಟಾನ್ನವಾಗಿದ್ದರೂ ಕದನ್ನವಾಗಿದ್ದರೂ, ಸ್ವಲ್ಪವಾಗಿದ್ದರೂ ಸಮೃದ್ಧವಾಗಿದ್ದರೂ, ತನಗೆ ಎಷ್ಟುಮಾತ್ರವು ಲಭಿಸುವುದೋ ಅಷ್ಟರಲ್ಲಿಯೇ ದೇಹಧಾರಣಮಾಡಿಕೊಂಡು, ದೈವಲಬ್ಧವಾದುದರಲ್ಲಿ ತೃಪ್ತನಾಗಿರುವುದೇ ಅಜಗರವೃತ್ತಿಯೆನಿಸುವುದು. ಆಹಾರವು ತಾನಾಗಿ ಲಭಿಸದಿದ್ದಾಗಲೂ ಅದಕ್ಕಾಗಿ ಪ್ರಯತ್ನಿಸಬಾರದು. ಅದರಿಂದ ತನ್ನ ಪ್ರಾರಬ್ಧಪಾಪವು ಕಳೆಯಬಹುದೆಂದು ತಿಳಿದು, ಬಹುದಿನಗಳವರೆಗಾದರೂ ನಿರುದ್ಯೋಗಿಯಾಗಿ ಹೆಬ್ಬಾವಿನಂತೆ ನೆಲದಮೇಲೆ ಸುಮ್ಮನೆ ಮಲಗಿರಬೇಕು. ಒಳ್ಳೇ ಇಂದ್ರಿಯಪಾಟವವೂ, ದೇಹಬಲವೂ ಇದ್ದವನಾಗಿದ್ದರೂ, ಯಾವ ಸುಖವನ್ನೂ ಕೋರದೆ, ಯಾವ ಉದ್ಯೋಗಕ್ಕೂ ಪ್ರಯತ್ನಿಸದೆ, ತತ್ವವಿಮರ್ಶನೆಯಲ್ಲಿಮಾತ್ರ ಎಚ್ಚರಗೊಂಡು ಮಲಗಿರಬೇಕು! ಇವೆಲ್ಲವನ್ನೂ ನಾನು ಅಜಗರವೆಂಬ ಹೆಬ್ಬಾವಿನಿಂದ ಗ್ರಹಿಸಿಕೊಂಡೆನು

ಮತ್ತು ಮುನಿಯು,ಸಮುದ್ರದಂತೆ ಹೊರಗೆ ಎಲ್ಲರಲ್ಲಿಯೂ ಪ್ರಸನ್ನನಾಗಿಯೂ, ಒಳಗೆ ಗಂಭೀರನಾಗಿಯೂ, ಇಂತವನೆಂದು ಬೇರೊಬ್ಬರಿಗೆ ತಿಳಿಯಲಸಾಧ್ಯನಾಗಿಯೂ,ತನ್ನ ಮಹಿಮೆಯನ್ನು ಇಷ್ಟೆಂದು ತಿಳಿಸದವನಾಗಿಯೂ, ಇತರರಿಗೆ ದರತಿಕ್ರಮನಾಗಿಯೂ, ಅಕ್ಷೋಭ್ಯನಾಗಿಯೂ, ನಿಶ್ಚಲನಾಗಿಯೂ ಇರಬೇಕು. ಸಮುದ್ರವು ಮಳೆಗಾಲದಲ್ಲಿ ಅನೇಕನದೀಪ್ರವಾಹಗಳು ಸರ್ವತೋಮುಖವಾಗಿ ತನ್ನಲ್ಲಿ ಬಂದುಬಿದ್ದರೂ ಅದರಿಂದ ಉಕ್ಕಿಬರಲಾರದು. ತೀಕ್ಷ್ಣವಾದ ಬೇಸಗೆಯಲ್ಲಿಯೂ ಒಣಗಿಹೋಗಲಾರದು

ಹೀಗೆಯೇ ಯೋಗಿಯಾದವನೂ ಕೂಡ, ತನಗೆ ಭಾಗ್ಯಸಮೃದ್ಧಿಗಳು ವಿಶೇಷವಾಗಿ ಒದಗಿ ಬಂದಾಗ ಸಂತೋಷದಿಂದುಬ್ಬದೆ,ಅವಿಲ್ಲದಿದ್ದಾಗ ದುಃಖದಿಂದ ಕುಗ್ಗದೆ, ಭಗವದ್ಧ್ಯಾನದಲ್ಲಿಯೇ ನಟ್ಟಮನಸ್ಸುಳ್ಳನಾಗಿರಬೇಕು.

ಪತಂಗಗಳು*ಅಗ್ನಿಜ್ವಾಲೆಯನ್ನು ನೋಡಿ,ತನಗೆ ಭೋಗ್ಯವಸ್ತುವೆಂಬ ಆಸೆಯಿಂದ ಅದರಲ್ಲಿ ಬಿದ್ದು ಸಾಯುವಂತೆ, ಪುರುಷನು ಭಗವನ್ಮಾಯಾರೂಪವಾಗಿ ತನ್ನ ಮನಸ್ಸನ್ನು ಮರುಳುಗೊಳಿಸತಕ್ಕ ಸ್ತ್ರೀರೂಪವನ್ನು ನೋಡಿ ಕಲಗಿದ ಇಂದ್ರಿಯಗಳುಳ್ಳವನಾಗಿ, ಅದಕ್ಕಾಸೆಪಟ್ಟಾಗ, ಅಂಧತಮಸ್ಸಿನಲ್ಲಿ ಮುಳುಗುವನೆಂಬುದನ್ನು ಆ ಪತಂಗದೃಷ್ಟಾಂತದಿಂದ ಗ್ರಹಿಸಿದೆನು. ಭಗವನ್ಮಾಯಾಕಲ್ಪಿತಗಳಾದ ಸ್ತ್ರೀವ್ಯಕ್ತಿಗಳಲ್ಲಿಯೂ, ವಸ್ತ್ರಾಭರಣಾದಿಗಳಲ್ಲಿಯೂ ತನಗೆ ಭೋಗ್ಯವಸ್ತುಗಳೆಂಬ ಆಸೆಯನ್ನಿಟ್ಟು, ವಿವೇಕಹೀನನಾಗಿ ಪ್ರವರ್ತಿಸಿದವನು, ಅಗ್ನಿಜ್ವಾಲೆಗಾಗಿ ಆಸೆಪಟ್ಟ ಪತಂಗಗಳಂತೆ ಅವುಗಳಿಂದಲೇ ನಾಶವನ್ನೂ ಹೊಂದುವನು.

ಜೇನುಹುಳುಗಳು ಪುಷ್ಪಗಳನ್ನು ಕದಲಿಸದಂತೆಯೇ ಅಲ್ಲಲ್ಲಿರುವ ಮಕರಂದವನ್ನು ಸ್ವಲ್ಪಸ್ವಲ್ಪವಾಗಿ ಸಂಗ್ರಹಿಸುತ್ತ, ಒಂದೇ ಪುಷ್ಪವನ್ನು ನಂಬಿ ನಿಲ್ಲದೆ ಸುತ್ತುತ್ತಿರುವಂತೆ, ಮುನಿಯೂ ಕೂಡ, † ತನ್ನ ಪ್ರಾಣಧಾರಣೆಗೆ ಬೇಕಾದಷ್ಟು ಆಹಾರವನ್ನು ಮಾತ್ರ ಬೇರೊಬ್ಬರಿಗೆ ಬಾಧೆ ಕೊಡದಂತೆ, ಅಲ್ಲಲ್ಲಿ ಸಿಕ್ಕಿದಷ್ಟನ್ನು ಸ್ವಲ್ಪಸ್ವಲ್ಪವಾಗಿ ಸಂಗ್ರಹಿಸುತ್ತ, ಅದರಿಂದಲೇ ಕಾಲಹರಣವನ್ನು ಮಾಡಬೇಕು. ಭ್ರಮರವು ಒಂದೇಪುಷ್ಪದ ಸಾರವನ್ನೆಲ್ಲಾ ಹೀರಬೇಕೆಂದು ಅಲ್ಲಿಯೇ ನೆಲೆಯಾಗಿ ನಿಂತುಬಿಟ್ಟರೆ, ಆ ಪುಷ್ಪವು ಮುಕುಳಿತವಾದಾಗ, ತಾನೂ ಅದರಲ್ಲಿ ಸಿಕ್ಕಿಬಿಳು

* ''ಪತಂಗ ಮಾತಂಗ, ತುರಂಗ ಭೃಂಗ ಮೀನಾ ಹತಾಃ ಪಂಚಭಿರೇವ ಪಂಚ'' ಎಂಬಂತೆ, ಪತಂಗಾದಿಗಳೈದೂ ಕ್ರಮವಾಗಿ, ರೂಪ, ಸ್ಪರ್ಶ, ಶಬ್ದ, ಗಂಧ, ರಸಗಳಿಗೆ ಮರುಳಾಗಿ, ಅವುಗಳಿಂದಲೇ ನಾಶಹೊಂದುವುದರಿಂದ, ಯೋಗಿಯೂ ಇಂತಹ ಶಬ್ದಾದಿವಿಷಯಗಳಲ್ಲಿ ಚಾಪಲ್ಯದಿಂದ ಪ್ರವರ್ತಿಸಬಾರದೆಂಬ ನೀತಿಯು ಆ ಐದುಜಂತುಗಳ ದೃಷ್ಟಾಂತದಿಂದಲೂ ಇಲ್ಲಿ ಕ್ರಮವಾಗಿ ವ್ಯಕ್ತವಾಗುವುದು.

† ಇದನ್ನೇ ಮಾಧುಕರ ವೃತ್ತಿಯೆಂದು ಹೇಳುವರು.

ವಂತೆ,ಮುನಿಯೂಕೂಡ ಲೋಭಬುದ್ಧಿಯಿಂದ ಒಂದೇಸ್ಥಳವನ್ನು ಹಿಡಿದು ನಿಂತರೆ, ಅದರಲ್ಲಿ ಮೋಹಪಾಶಬದ್ಧನಾಗಿ ಕೆಡುವನು. ಮತ್ತು ಅದೇ ಜೇನುಹುಳುಗಳು ಸಣ್ಣದು ದೊಡ್ಡದೆಂದು ನೋಡದೆ, ಎಲ್ಲಾ ಪುಷ್ಪಗಳಿಂದಲೂ ಮಕರಂದವನ್ನು ಗ್ರಹಿಸುವಂತೆ, ಬುದ್ಧಿಶಾಲಿಯಾದ ಮನುಷ್ಯನು, ಅಲ್ಪಸಾರವುಳ್ಳ ಮತ್ತು ವಿಶೇಷಸಾರವತ್ತಾದ ಎಲ್ಲಾಶಾಸ್ತ್ರಗಳಿಂದಲೂ ಸಾರವನ್ನು ಗ್ರಹಿಸಬೇಕು. ಮತ್ತು ಜೇನುನೊಣಗಳು ಕಾಲಾಂತರದಲ್ಲಿ ಭುಜಿಸಬೇಕೆಂಬ ಆಸೆಯಿಂದ ಸಂಗ್ರಹಿಸಿಟ್ಟ ಜೇನನ್ನು ಇತರರು ಅಪಹರಿಸಿಕೊಂಡು ಹೋಗುವರಲ್ಲವೆ? ಆದುದರಿಂದ ಯೋಗಿಯಾದವನು, ಹಗಲೂಟಕ್ಕಾಗಲಿ, ರಾತ್ರಿಭೋಜನಕ್ಕಾಗಲಿ, ಸಾಕಾದಷ್ಟು ಅನ್ನವನ್ನು ಆಗಾಗ ಭಿಕ್ಷೆಮಾಡಿ ತಂದು ಭುಜಿಸಿ ತೃಪ್ತನಾಗಬೇಕೇಹೊರತು, ನಾಳೆಗೆಂದೂ, ಅಥವಾ ನಾಡಿದ್ದಿಗೆಂದೂ ಸಂಗ್ರಹಿಸಿಡಬಾರದು. ಜೇನುಹುಳುವು ತನ್ನ ಮುಂದಿನ ಆಹಾರಕ್ಕಾಗಿ ಸಂಗ್ರಹಿಸಿಟ್ಟ ಜೇನಿನೊಡನೆ ತಾನೂ ನಾಶಹೊಂದುವಂತೆ, ಲೋಭಬುದ್ಧಿಯಿಂದ ಆಹಾರವನ್ನು ಸಂಗ್ರಹಿಸಿಡುವವನು, ಅದರೊಡನೆ ತಾನೂ ಕೆಡುವನು. ಆದುದರಿಂದ ಮೇಲೆ ಹೇಳಿದಂತೆ ಆಗಾಗಿನ ಆಹಾರವನ್ನು ಭಿಕ್ಷೆಮಾಡಿ ತರತಕ್ಕವನಿಗೆ ಅವನ ಕೈಯೇ ಭೋಜನಪಾತ್ರದಂತೆಯೂ, ಹೊಟ್ಟೆಯೇ ಆಹಾರಪದಾರ್ಥವನ್ನು ಸಂಗ್ರಹಿಸಿಡತಕ್ಕ ಕಣಜದಂತೆಯೂ ಇರಬೇಕು. ಇವೆಲ್ಲವನ್ನೂ ನಾನು ಜೇನುಹುಳುಗಳ ಚರ್ಯೆಯಿಂದ ತಿಳಿದುಕೊಂಡೆನು.

ಯೋಗಿಯು ಮರದಿಂದ ಮಾಡಿದ ಸ್ತ್ರೀವ್ಯಕ್ತಿಯಾಗಿದ್ದರೂ, ಅದನ್ನು ತನ್ನ ಕಾಲಿಂದಾದರೂ ಮುಟ್ಟಬಾರದೆಂಬುದನ್ನು ಆನೆಗಳ ದೃಷ್ಟಾಂತದಿಂದ ಗ್ರಹಿಸಿದೆನು. ಹೇಗೆಂದರೆ, ಕಾಡಾನೆಗಳು ಹುಲ್ಲುಕಡ್ಡಿಗಳಿಂದ ಮುಚ್ಚಲ್ಪಟ್ಟ ಹಳ್ಳದಮೇಲೆ,ಮರದಿಂದ ಮಾಡಿ ನಿಲ್ಲಿಸಿರುವ ಹೆಣ್ಣಾನೆಯ ಆಕಾರವನ್ನು ನೋಡಿ,ಅದರಮೇಲೆ ಬೀಳುವುದಕ್ಕೆ ಹೋದಾಗ,ಹಳ್ಳದಲ್ಲಿ ಬಿದ್ದು ಸಿಕ್ಕಿಕೊಳ್ಳುವುವಲ್ಲವೆ? ಅದರಂತೆ ಮುನಿಯಾದವನು, ಹೆಣ್ಣುಬೊಂಬೆಯನ್ನು ಸ್ಪರ್ಶಿಸಿದರೂ ಮೋಹಪಾಶಕ್ಕೆ ಸಿಕ್ಕಿ ಹಳ್ಳದಲ್ಲಿ ಬೀಳುವನು ಮತ್ತು ಒಂದು ಹೆಣ್ಣಾನೆಗೆ ಆಸೆಪಟ್ಟ ಕಾಡಾನೆಯು, ತನಗಿಂತಲೂ ಬಲಾಢ್ಯಗಳಾದ

ಬೇರೆ ಆನೆಗಳಿಂದ ಕೊಲ್ಲಲ್ಪಡುವಂತೆ,ಸ್ತ್ರೀಯರಿಗೆ ಆಸೆಪಟ್ಟವನು,ತನಗಿಂತ ಲೂ ಬಲಾಢ್ಯರಾದವರಿಂದ ಸಂಹರಿಸಲ್ಪಡುವನೆಂದೂ, ವಿವೇಕಿಯಾದವನು ಅಂತಹ ಸ್ತ್ರೀಚಾಪಲ್ಯಕ್ಕೆ ವಶನಾಗಬಾರದೆಂದೂ ಆ ಆನೆಯ ದೃಷ್ಟಾಂತ ದಿಂದಲೇ ಗ್ರಹಿಸಿದೆನು

ಕಾಡಿನಲ್ಲಿ ಜೇನುನೊಣಗಳು ಕಷ್ಟಪಟ್ಟು ಸಂಗ್ರಹಿಸಿಟ್ಟ ಜೇನನ್ನು, ಬೇಡರು (ಜೇನುತೆಗೆಯುವವರು) ಉಪಾಯದಿಂದ ಅಪಹರಿಸಿಕೊಂಡು ಹೋಗುವುದನ್ನು ನೋಡಿ, ಮನುಷ್ಯನು ಲೋಭಬುದ್ಧಿಯಿಂದ ತಾ ನೂ ಅನುಭವಿಸದೆ, ಮತ್ತೊಬ್ಬರಿಗೂ ದಾನಮಾಡದೆ ಕಷ್ಟದಿಂದ ಸಂಗ್ರಹಿಸಿಟ್ಟ ಧನವು ಇತರರ ಪಾಲಾಗುವುದೆಂದು ತಿಳಿದೆನು. ಮತ್ತು ಆ ಜೇನುಹುಳುಗಳು ಎಷ್ಟೋ ಕಷ್ಟಪಟ್ಟು ಸಂಪಾದಿಸಿದ ಜೇನು, ಬೇಡ ನಿಗೆ ಅನಾಯಾಸವಾಗಿ ಲಭಿಸುವಂತೆ, * ಗೃಹಸ್ಥರು ಕಷ್ಟದಿಂದ ಸಂಗ್ರ ಹಿಸಿದ ಭೋಜನವನ್ನು, ಯೋಗಿಯಾದವನು ಅವನಿಗಿಂತ ಮೊದಲೇ ಅನಾ ಯಾಸವಾಗಿ ಭುಜಿಸಬಹುದೆಂಬುದನ್ನೂ, ಆ ಬೇಡನ ದೃಷ್ಟಾಂತದಿಂದಲೇ ಗ್ರಹಿಸಿಕೊಂಡೆನು.

ಜಿಂಕೆಯು ಬೇಟೆಗಾರರ ಗಾನಧ್ವನಿಗೆ ಮರುಳಾಗಿ, ಅವರ ಕೈಗೆ ಸಿಕ್ಕಿ ಸಾಯುವುದನ್ನು ನೋಡಿ, ಯೋಗಿಯಾದವನು ಭಗವದ್ವಿಷ ಯವಲ್ಲದ ಗ್ರಾಮ್ಯಗೀತಗಳಿಗೆ ಕಿವಿಗುಡಬಾರದೆಂಬುದನ್ನು ಗ್ರಹಿಸಿಕೊಂಡೆ ನು. ಇದರಂತೆಯೇ ಜಿಂಕೆಯ ಗರ್ಭದಿಂದ ಜನಿಸಿದ ಋಶ್ಯಶೃಂಗನೆಂಬವನು, ಮೊದಮೊದಲು ಲೌಕಿಕಸುಖವೆಂಬುದನ್ನೇ ಕಾಣದವನಾಗಿದ್ದರೂ,ವೇಶ್ಯಾ ಸ್ತ್ರೀಯರ ಗ್ರಾಮ್ಯಗೀತನರ್ತನಾದಿಗಳಿಗೆ ಮೋಹಗೊಂಡು, ಅವರ ಕೈ ಯಾಟದ ಬೊಂಬೆಯಂತಾದುದನ್ನು ನೋಡಿ, ಯೋಗಿಯಾದವನು ಅಂತವು ಗಳನ್ನು ಕಣ್ಣೆತ್ತಿಯೂ ನೋಡಬಾರದೆಂದು ಗ್ರಹಿಸಿಕೊಂಡೆನು.

---

* "ಯತಿಶ್ಚ ಬ್ರಹ್ಮಚಾರೀಚ ಪಕ್ವಾನ್ನ ಸ್ವಾಮಿನಾವುಭೌ । ತಯೋರನ್ನ ಮದತ್ವಾತು ಭುಕ್ತ್ವಾ ಚಾಂದ್ರಾಯಣಂ ಚರೇತ್" ಎಂಬ ಶಾಸ್ತ್ರವಿಧಿಯಂತೆ ಗೃಹಸ್ಥ ರು ಯತಿಗೆ ಮೊದಲು ಅನ್ನವನ್ನಿಕ್ಕಿ, ಆಮೇಲೆ ತಾವು ಭುಜಿಸುವರೆಂದು ಗ್ರಾಹ್ಯವು.

ಮೀನುಗಳು ಗಾಳವನ್ನು ಕಚ್ಚಿ, ಬೆಸ್ತರ ಕೈಗೆ ಸಿಕ್ಕಿಸಾಯುವು ದನ್ನು ನೋಡಿ, ಯೋಗಿಯಾದವನು ಜಿಹ್ವಾಚಾಪಲ್ಯವನ್ನು ಬಿಟ್ಟುಬಿಡಬೇ ಕೆಂದು ಗ್ರಹಿಸಿಕೊಂಡೆನು. ಓ ರಾಜೇಂದ್ರಾ! ಇಂದ್ರಿಯಜಯವನ್ನಪೇಕ್ಷಿಸ ತಕ್ಕವರು ಕೆಲವುದಿನಗಳವರೆಗೆ ಆಹಾರವಿಲ್ಲದಿರುವುದರಿಂದ, ಬೇರೆ ಎಲ್ಲಾ ಇಂದ್ರಿಯಗಳ ಶಕ್ತಿಯನ್ನೂ ಅಡಗಿಸಬಹುದು. ರಸನೇಂದ್ರಿಯವನ್ನು ಮಾ ತ್ರ ಜಯಿಸುವುದು ಸಾಧ್ಯವಲ್ಲ. ಏಕೆಂದರೆ, ಹೊಟ್ಟೆಗೆ ಅನ್ನವಿಲ್ಲದಷ್ಟೂ ಜಿಹ್ವೇಂದ್ರಿಯದ ಚಾಪಲ್ಯವು ಹೆಚ್ಚುತ್ತಬರುವುದು. ಬೇರೆ ಎಲ್ಲಾ ಇಂದ್ರಿ ಯಗಳನ್ನು ನಿಗ್ರಹಿಸಿಟ್ಟರೂ ರಸನೇಂದ್ರಿಯವನ್ನು ಜಯಿಸದಹೊರತು ಮನುಷ್ಯನು ಜಿತೇಂದ್ರಿಯನೆನಿಸಲಾರನು. ಆ ರಸನೇಂದ್ರಿಯವೊಂದನ್ನು ಮಾತ್ರ ಜಯಿಸಿದರೂ, ಬೇರೆ ಇಂದ್ರಿಯಗಳನ್ನೆಲ್ಲಾ ಜಯಿಸಿದಂತೆಯೇ ಆಗುವುದು. ಆದುದರಿಂದ ಯೋಗಿಯೆನಿಸುವವನು ಮೊದಲು ರಸನೇಂದ್ರಿಯ ವನ್ನು ಜಯಿಸಬೇಕು.

ಓ ರಾಜೇಂದ್ರಾ! ಪೂರ್ವದಲ್ಲಿ ವಿದೇಹನಗರದಲ್ಲಿ ಪಿಂಗಳೆಯೆಂಬ ವೇಶ್ಯೆಯೊಬ್ಬಳಿದ್ದಳು. ಅವಳ ದೃಷ್ಟಾಂತದಿಂದ ನಾನು ಕಲಿತುಕೊಂಡ ಒಂದಾನೊಂದು ವಿಚಾರವನ್ನು ತಿಳಿಸುವೆನು ಕೇಳು. ಆಕೆಯು ಕಾಮ ಚಾರಿಣಿಯಾಗಿ, ತನ್ನಲ್ಲಿಗೆ ಬರತಕ್ಕವರು ಇಷ್ಟೇ ಹಣವನ್ನು ಕೊಡ ಬೇಕೆಂಬ ಒಂದು ನಿರ್ಣಯವನ್ನಿಟ್ಟುಕೊಂಡು, ಉತ್ತಮವಾದ ವಸ್ತ್ರಾ ಭರಣಗಳಿಂದ ದೇಹವನ್ನಲಂಕರಿಸಿಕೊಂಡು, ಆಗಾಗ ತನ್ನ ಮನೆಯ ಬಾಗಿ ಲಲ್ಲಿ ಬಂದು ನಿಲ್ಲುತಿದ್ದಳು. ದಾರಿಯಲ್ಲಿ ಬರತಕ್ಕವರೆಷ್ಟೋ ಮಂದಿ ಪುರು ಷರು, ಬಹಳಧನಿಕರಾಗಿ ಕಂಡುಬಂದರೂ, ಅವರು ಸಮೃದ್ಧವಾಗಿ ಹಣ ವನ್ನುಕೊಡುವುದಾಗಿ ಹೇಳಿದರೂ, ಆ ವೇಶ್ಯೆಯು, ತನಗೆ ಇನ್ನೂ ಹೆಚ್ಚು ಹಣವು ಬೇಕೆಂಬದುರಾಸೆಯಿಂದ,ಅವರೊಡನೆ ರಮಿಸುವುದಕ್ಕೆ ಇಷ್ಟಪಡದೆ ನಿರಾಕರಿಸುತಿದ್ದಳು. ಹೀಗೆಯೇ ಎಷ್ಟೋಮಂದಿ ಪುರುಷರು ಆಗಾಗ ಬಂದು ಇವಳಿಂದ ನಿರಾಕೃತರಾಗಿ ಹೋಗುತಿದ್ದರು. ಹಾಗಿದ್ದರೂ ಅವಳು ತಾನು ಕೇಳಿದಷ್ಟು ಹಣವನ್ನು ಕೊಡತಕ್ಕ ಭಾಗ್ಯವಂತನು ಬೇರೆ ಯಾವನಾದರೂ ಬಂದೇಬರುವನೆಂಬ ಆಶೋತ್ತರದಿಂದ, ಆಗಾಗ ಬಂದು,

ಸ್ವಲ್ಪಹೊತ್ತು ಬಾಗಿಲಲ್ಲಿ ನಿಲ್ಲುವುದು, ಆಮೇಲೆ ಆಶಾಭಂಗದಿಂದ ಒಳಗೆ ಹೋಗುವುದು, ಕ್ಷಣಕಾಲದಮೇಲೆ ತಿರುಗಿ ಬಾಗಿಲಿಗೆ ಬಂದುನೋಡುವುದು, ಹೀಗೆ ನಿದ್ರಾಹಾರಗಳನ್ನೂ ಬಿಟ್ಟು ನಿರೀಕ್ಷಿಸುತಿದ್ದಳು. ಹಾಗೆಯೇ ಅರ್ಧ ರಾತ್ರಿಯು ಕಳೆದುಹೋಯಿತು. ಹೀಗೆ ದುರಾಸೆಯಿಂದ ಕುದಿಯುತಿದ್ದ ಆವೇಶ್ಯೆಗೆ, ಕೊನೆಕೊನೆಗೆ ಚಿಂತೆಯಿಂದ ಮುಖವು ಬಾಡಿತು! ಮನಸ್ಸಿನ ಉತ್ಸಾಹವು ತಗ್ಗಿತು. ಹಣದಾಸೆಯಿಂದುಂಟಾದ ಆ ಚಿಂತೆಯೇ ಕೊನೆಗೆ ಆಕೆಯ ಮನಸ್ಸಿನಲ್ಲಿ ಮುಂದೆ ಕ್ಷೇಮಕರವಾದ ವಿರಕ್ತಿಯನ್ನು ಹುಟ್ಟಿಸಿತು. ಆಗ ಆ ವೇಶ್ಯೆಯು ಮನಸ್ಸಿನಲ್ಲಿ ಹುಟ್ಟಿದ ನಿರ್ವೇದದಿಂದ ತನ್ನಲ್ಲಿತಾನು ಹೇಳಿಕೊಂಡ ಒಂದೆರಡುವಿಷಯಗಳನ್ನೂ ತಿಳಿಸುವೆನು ಕೇಳು! ಮನುಷ್ಯನಿಗೆ ಈ ವಿಧವಾದ ನಿರ್ವೇದವೇ ಅವನ ಆಶಾಪಾಶವನ್ನು ಕತ್ತರಿಸತಕ್ಕ ಕತ್ತಿಯೆಂದು ತಿಳಿ! ಆವಿಧವಾದ ನಿರ್ವೇದವು ಹುಟ್ಟದಹೊರತು, ಮನುಷ್ಯನಿಗೆ ದೇಹದಲ್ಲಿಯಾಗಲಿ, ದೇಹಾನುಬಂಧಿಗಳಲ್ಲಿಯಾಗಲಿ ಮೋಹವು ಬಿಟ್ಟುಹೋಗಲಾರದು. ಆಗ ಪಿಂಗಳೆಯು ತನ್ನಲ್ಲಿ ತಾನು ಯೋಚಿಸಿದುದೇನೆಂದರೆ “ಅಹಾ! ಮನಸ್ಸನ್ನು ಜಯಿಸಲಾರದೆ ಹೋದುದರಿಂದ, ನನ್ನ ದುರಾಶೆಯು ಎಷ್ಟು ಪ್ರಬಲಿಸಿತು ನೋಡಿರಿ! ಆ ದುರಾಶೆಯಿಂದಲ್ಲವೇ ನಾನು ಅತ್ಯಲ್ಪರಾದ ವಿಟರಿಂದ ಹಣವನ್ನು ಸುಲಿಯುವುದಕ್ಕೆ ಯೋಚಿಸಿದೆನು. ಛೀ! ನಾನು ಎಂತಹ ವಿವೇಕಶೂನ್ಯಳು! ನನಗೆ ಬೇಕಾದಷ್ಟು ಹಣವನ್ನು ಮಾತ್ರವಲ್ಲದೆ, ಸರ್ವಾಭೀಷ್ಟಗಳನ್ನೂ ಕೊಡತಕ್ಕವನಾಗಿಯೂ, ಯಾವಾಗಲೂ ನನ್ನನ್ನು ಬಿಡದೆ, ನನಗೆ ಸಂತೋಷಪ್ರದನಾಗಿಯೂ, ಎಲ್ಲಕ್ಕಿಂತಲೂ ನನಗೆ ಪ್ರಿಯನಾಗಿಯೂ ಇರುವ ರಮಣನು, ನನ್ನ ಸಮೀಪದಲ್ಲಿಯೇ (ಹೃದಯದಲ್ಲಿಯೇ) ಇರುವಾಗಲೂ, ನಾನು ಆ ಕಾಂತನನ್ನು (ಭಗವಂತನನ್ನು) ಬಿಟ್ಟು, ನನ್ನ ಅಭೀಷ್ಟವನ್ನು ಸಲಿಸಲಾರದ, ಮತ್ತು ದುಃಖ, ಭಯ, ಸಂಕಟ, ಶೋಕ, ಮೋಹಾದಿಗಳನ್ನುಂಟು ಮಾಡುವ ಬೇರೊಬ್ಬ ತುಚ್ಛಮನುಷ್ಯನನ್ನು ಸೇವಿಸುವುದಕ್ಕೆ ಬಯಸಿದೆನಲ್ಲಾ. ಛೀ! ವ್ಯರ್ಥವಾಗಿ ನಾನು ಹಣಕ್ಕಾಗಿ ಬೇರೊಬ್ಬಪುರುಷನಿಗೆ ದೇಹವನ್ನೊಪ್ಪಿಸುವೆನೆಂಬ ನೀಚವೃತ್ತಿಯಿಂದ, ನನ್ನ ಆತ್ಮವನ್ನೇ ಕೆಡಿಸಿಕೊಂಡೆ

ನು. ಸ್ತ್ರೀಲಂಪಟನಾಗಿಯೂ, ಹಣದಾಸೆಯುಳ್ಳವನಾಗಿಯೂ ಇರುವ ಅಲ್ಪಮನುಷ್ಯನಿಂದ ಹಣವನ್ನೂ, ಸುಖವನ್ನೂ ಕೋರುತಿದ್ದ ನನ್ನ ಕುತ್ಸಿತ ಜೀವನವನ್ನು ಸುಡಬೇಕಲ್ಲವೇ? ದೇಹವೆಂಬುದು, ಅಸ್ಥಿಗಳೆಂಬ ಕಂಬಗಳನ್ನು ನಿಲ್ಲಿಸಿ, ರಕ್ತಮಾಂಸಗಳಿಂದ ಮೆತ್ತಿ ಮಾಡಿದ ಒಂದು ಮನೆ! ಉಗುರು, ಕೂದಲು, ಇವೆಲ್ಲವೂ ಅದರ ಕಟ್ಟುಗಳು.ಇದಕ್ಕೆ ನವದ್ವಾರಗಳು! ಈ ಮನೆಯು ಮಲಮೂತ್ರಗಳಿಂದ ತುಂಬಿ, ಆ ನವದ್ವಾರಗಳಿಂದಲೂ ಕಶ್ಮಲಗಳನ್ನು ಕಾರುತ್ತಿರುವುದು. ಇಂತಹ ಕಶ್ಮಲಪೂರ್ಣವಾದ ದೇಹವನ್ನು ನನ್ನಂತೆ ಬೇರೆ ಯಾರುತಾನೇ ಅಭಿಮಾನಿಸುವರು? ಈ ವಿದೇಹನಗರವನ್ನೆಲ್ಲಾ ಹುಡುಕಿದರೂ ನನ್ನಂತಹ ವಿವೇಕಹೀನಳು ಬೇರೊಬ್ಬಳು ಸಿಕ್ಕಲಾರಳು. ಆಶ್ರಿತರಿಗೆ ತನ್ನನ್ನೇ ಕೊಡುವಷ್ಟು ಪರಮದಯಾಳುವಾದ ಆ ಭಗವಂತನನ್ನು ಬಿಟ್ಟು, ಮತ್ತೊಬ್ಬನನ್ನು ಕಾಂತನನ್ನಾಗಿ ಬಯಸಿದ ನಾನು ಎಷ್ಟು ಬುದ್ಧಿಹೀನಳು! ಸಮಸ್ತಪ್ರಾಣಿಗಳಿಗೂ ಆತನೇ ಆತ್ಮಭೂತನಾಗಿರುವಾಗ, ಅವನಿಗಿಂತಲೂ ಬೇರೆ ಪ್ರಿಯವಾವುದುಂಟು? ಆದುದರಿಂದ ಈಗಲಾದರೂ ನಾನು, ನನ್ನ ಆತ್ಮವನ್ನು ಆತನಿಗಾಗಿಯೇ ಸಮರ್ಪಿಸಿ, ಅದರಿಂದ ಆತನನ್ನು ವಶೀಕರಿಸಿಕೊಂಡು, ಶ್ರೀದೇವಿಯಹಾಗೆ ನಾನೂ ಅವನೊಡನೆ ಸದಾ ರಮಿಸುತ್ತಿರುವೆನು. ಕಾಮಿತವಿಷಯಗಳಿಗೂ, ಆ ಕಾಮಿತಗಳನ್ನು ಕೊಡತಕ್ಕ ದೇವತೆಗಳಿಗೂ, ಮನುಷ್ಯರಿಗೂ ಆದ್ಯಂತಗಳುಂಟು ಇವೆಲ್ಲಕ್ಕೂ ಕಾಲದಿಂದ ನಾಶವುಂಟು! ಇವರು ತಮ್ಮ ಭಾರ್ಯೆಯರಿಗಾಗಲಿ, ಇತರರಿಗಾಗಲಿ ಯಾವವಿಧವಾದ ಪ್ರಿಯವನ್ನುಂಟುಮಾಡಬಲ್ಲರು? ಆ ಭಗವಂತನೊಬ್ಬನೇ ಆದ್ಯಂತಶೂನ್ಯನಾಗಿ,ಇತರರಿಗೂ ಕೋರಿದ ಕೋರಿಕೆಗಳನ್ನು ಕೈಗೂಡಿಸಬಲ್ಲವನು. ಆದುದರಿಂದ ಅವನುಹೊರತು ಬೇರೊಬ್ಬರೂ ಸೇವ್ಯರಲ್ಲ' ಅವನನ್ನೇ ಸೇವಿಸಿ ಅವನ ಅನುಗ್ರಹವನ್ನು ಪಡೆಯುವೆನು. ಅಥವಾ ಅವನ ಅನುಗ್ರಹವಿಲ್ಲದಿದ್ದರೆ ನನಗೆ ಈಬುದ್ಧಿಯುತಾನೇ ಹೇಗೆ ಹುಟ್ಟುತಿತ್ತು? ಇದುವರೆಗೆ ದುರಾಶೆಹಿಡಿದಿದ್ದ ನನಗೆ, ಪೂರ್ವಜನ್ಮದಲ್ಲಿ ಮಾಡಿದ ಯಾವುದೋ ಅಲ್ಪಸ್ವಲ್ಪಸುಕೃತವಿಶೇಷದಿಂದಲೇ, ಮುಂದೆ ಸುಖಕರವಾದ ಈ ನಿರ್ವೇದವು ಹುಟ್ಟಿರಬೇಕು. ನಾನು ಇದುವರೆಗಿದ್ದಂತೆಯೇ

ಮಂದಭಾಗಿನಿಯಾಗಿದ್ದ ಪಕ್ಷದಲ್ಲಿ, ನನಗೆ ನನ್ನ ಹಿಂದಿನ ಸ್ಥಿತಿಯನ್ನು ಕುರಿತು ಪಶ್ಚಾತ್ತಾಪವೂ ಹುಟ್ಟುತ್ತಿರಲಿಲ್ಲ. ಇಂತಹ ನಿರ್ವೇದದಿಂದಲ್ಲವೇ ಮನುಷ್ಯನು, ತನ್ನ ದೇಹದಲ್ಲಿಯೂ, ದೇಹಾನುಬಂಧಿಗಳಲ್ಲಿಯೂ ಅಹಂಕಾರಮಮಕಾರಗಳನ್ನು ನೀಗಿ ಪ್ರಸನ್ನಮನಸ್ಕನಾಗುವನು. ಗ್ರಾಮ್ಯಜನಗಳೊಡನೆ ಓಲಾಡುತಿದ್ದ ನಾನು, ಆ ಭಗವದನುಗ್ರಹದಿಂದ ಲಭಿಸಿದ ಈ ನಿರ್ವೇದವನ್ನೇ ಶಿರಸಾವಹಿಸಿ, ದುರಾಶೆಯನ್ನು ಬಿಟ್ಟು, ಆತನನ್ನೇ ಆಶ್ರಯಿಸುವೆನು. ಇನ್ನುಮೇಲೆ ನಾನು ದೈವಿಕವಾಗಿ ಲಭಿಸುದುದರಲ್ಲಿ ತೃಪ್ತಳಾಗಿ, ಅದರಿಂದಲೇ ಜೀವಧಾರಣೆಯನ್ನು ಮಾಡುತ್ತ, ಆ ಭಗವಂತನೊಡನೆಮಾತ್ರವೇ ರಮಿಸುವೆನು. ಸಂಸಾರಕೂಪದಲ್ಲಿ ಬಿದ್ದು, ವಿಷಯಲೋಭದಿಂದ ಬುದ್ಧಿಗೆಟ್ಟ ನಾನು, ಕಾಲಸರ್ಪದಿಂದ ಹಿಡಿಯಲ್ಪಡುವಾಗ, ನನ್ನನ್ನು ರಕ್ಷಿಸುವುದಕ್ಕೆ ಆ ಪರಮಪುರುಷನೊಬ್ಬನುಹೊರತು ಬೇರೆ ಯಾವನು ಸಮರ್ಥನುಂಟು ? ಸಮಸ್ತವಿಷಯಗಳಲ್ಲಿಯೂ ನಿರ್ವೇದವನ್ನು ಹೊಂದಿ,ಸಮಸ್ತಜಗತ್ತೂ ಕಾಲವೆಂಬ ಸರ್ಪದಿಂದ ಕಬಳಿಸಲ್ಪಡುವುದೆಂಬುದನ್ನು ತಿಳಿದು, ಎಚರಿಕೆಯಿಂದಿರುವ ಜೀವಾತ್ಮನಿಗೆ, ಆ ಪರಮಾತ್ಮನೇ ರಕ್ಷಕನಾಗುವನು.” ಎಂದಿವೇಮೊದಲಾಗಿ, ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಆ ಪಿಂಗಳೆಯೆಂಬ ವೇಶ್ಯೆಯು, ದುರಾಶೆಯನ್ನು ಬಿಟ್ಟು, ನಿಶ್ಚಿಂತಳಾಗಿ ಹೋಗಿ, ಹಾಸಿಗೆಯಲ್ಲಿ ನೆಮ್ಮದಿಯಿಂದ ಮಲಗಿಬಿಟ್ಟಳು. ಆದುದರಿಂದ ಓ ಯಾದವೇಂದ್ರಾ ! ಆಶೆಯೆಂಬುದೇ ಮಹಾದುಃಖವು, ನಿರಾಶೆಯೇ ಪರಮಸುಖವು ಎಂಬೀವಿಚಾರವನ್ನು ನಾನು ಆ ವೇಶ್ಯೆಯ ನಡತೆಯಿಂದ ಗ್ರಹಿಸಿದೆನು. ಇದು ಎಂಟನೆಯ ಅಧ್ಯಾಯವು.

---

ಅವಧೂತಯದುಸಂವಾದವು. ಅನುಬಂಧವು.

ಓ ಯಾದವೇಂದ್ರಾ ! ಯಾವುದಾದರೂ ವಸ್ತುವನ್ನು ತನ್ನದೆಂಬ ಆಸೆಯಿಂದ ಪರಿಗ್ರಹಿಸಿಡುವುದು ದುಃಖಕಾರಣವು. ಈ ಸೂಕ್ಷ್ಮಾಂಶವನ್ನು ತಿಳಿದು ಆ ಪರಿಗ್ರಹವನ್ನು ಬಿಟ್ಟುಬಿಡುವವನು ಸುಖವನ್ನು ಹೊಂದುವನು. ಈ ವಿಚಾರವನ್ನು ನಾನು ಒಂದಾನೊಂದು ಕುರರಪಕ್ಷಿಯ

ದೃಷ್ಟಾಂತದಿಂದ ಗ್ರಹಿಸಿದೆನು. ಹೇಗೆಂದರೆ, ಒಂದಾನೊಂದು ಕುರರ ಪಕ್ಷಿಯು, ಕೊಕ್ಕಿನಲ್ಲಿ ಒಂದುಮಾಂಸದ ತುಂಡನ್ನು ಕಚ್ಚಿಕೊಂಡು,ಇತರ ಪಕ್ಷಿಗಳಿಂದ ಅದನ್ನು ಹೇಗೆ ಕಾಪಾಡಿಡುವುದೆಂಬ ಚಿಂತೆಯಿಂದ ಯಾವಾಗಲೂ ಭಯಪಡುತಿತ್ತು. ಇಷ್ಟರಲ್ಲಿ ಅದಕ್ಕಿಂತಲೂ ಹೆಚ್ಚು ಬಲವುಳ್ಳ ಒಂದಾನೊಂದು ಗಿಡುಗವು ಬಲಾತ್ಕಾರದಿಂದ ಅದರಮೇಲೆ ಬಿದ್ದು ಆ ಮಾಂಸದ ತುಂಡನ್ನು ಅಪಹರಿಸಿಕೊಂಡುಹೋದಮೇಲೆ, ಆ ಕುರರವು ನಿರ್ಭಯವಾಗಿ ಸುಖದಿಂದಿರುವಂತಾಯಿತು. ಆದುದರಿಂದ ಯಾವುದಾದರೂ ವಸ್ತುವಿನಲ್ಲಿ ನಮ್ಮದೆಂಬ ಅಭಿಮಾನವಿರುವವರೆಗೆ, ನಮಗೆ ಭಯವು ತಪ್ಪದು. ಅದನ್ನು ಬಿಟ್ಟಮೇಲೆ ಯಾರಿಗೂ ಭಯಪಡಬೇಕಾದುದಿಲ್ಲ.

ರಾಜೇಂದ್ರಾ! ಸಣ್ಣಮಗುವಿನಂತೆ ನಾನು ಮಾನಾವಮಾನಗಳನ್ನು ಗಮನಿಸತಕ್ಕವನಲ್ಲ. ಮನೆಮಂದಿಮಕ್ಕಳನ್ನು ಕಟ್ಟಿಕೊಂಡಿರುವ ಚಿಂತೆಯೂ ನನಗಿಲ್ಲ. ಆ ಪರಮಾತ್ಮನೊಬ್ಬನಲ್ಲಿಯೇ ನನಗೆ ಪ್ರೀತಿ! ಯಾವಾಗಲೂ ಆ ಪರಮಾತ್ಮನೊಡನೆಯೇ ಕ್ರೀಡಿಸುತ್ತ, ನಾನು ನಿಶ್ಚಿಂತನಾಗಿ ಬಾಲನಂತೆ ಲೋಕವನ್ನು ಸಂಚರಿಸುತ್ತಿರುವೆನು. ಹೀಗೆ ಲೋಕದಲ್ಲಿ ಮಾನಾವಮಾನಗಳ ವಿಚಾರವಿಲ್ಲದೆ ನಿಶ್ಚಿಂತರಾಗಿ, ಸರ್ವದಾ ಪರಮಾನಂದದಲ್ಲಿ ಮುಳುಗಿ ಓಲಾಡತಕ್ಕವರು ಇಬ್ಬರೇ! ಯಾರೆಂದರೆ, ಏನೂ ತಿಳಿಯದ ಸಣ್ಣ ಮಗುವೊಂದು! ಆತ್ಮಧ್ಯಾನದಿಂದ ಸಾಕ್ಷಾತ್ಪರಮಾತ್ಮನನ್ನು ಸಾಕ್ಷಾತ್ಕರಿಸತಕ್ಕ ಯೋಗಿಯೊಬ್ಬನು. ಸಣ್ಣಮಗುವು ಮಾನಾವಮಾನವನ್ನು ತಿಳಿಯಲಾರದು. ಅದಕ್ಕೆ ಸಂಸಾರಚಿಂತೆಯಿಲ್ಲ! ತನ್ನ ದೇಹಪೋಷಣೆಯಲ್ಲಿಯೂ ಅದಕ್ಕೆ ದೃಷ್ಟಿಯಿಲ್ಲ. ಹಾಗೆಯೇ ಆತ್ಮಧ್ಯಾನಪರನಾದ ಯೋಗಿಯೂ ಇಂದೊಂದರಲ್ಲಿಯೂ ದೃಷ್ಟಿಯಿಡದೆ, ನಿಶ್ಚಿಂತನಾಗಿ ನಿತ್ಯಾನಂದದಲ್ಲಿರುವ ನೆಂಬುದನ್ನು ನಾನು ಸಣ್ಣಮಗುವಿನ ಚರ್ಯೆಯಿಂದ ಗ್ರಹಿಸಿದೆನು.

ಇನ್ನು ಒಬ್ಬಾನೊಬ್ಬ ಕನ್ಯೆಯಿಂದ ಕಲಿತುಕೊಂಡ ವಿಚಾರವನ್ನು ತಿಳಿಸುವೆನು ಕೇಳು. ಒಂದು ಗ್ರಾಮದಲ್ಲಿ ಒಬ್ಬ ಕನ್ಯೆಯಿದ್ದಳು. ಅವಳಿಗೆ ವಿವಾಹಕಾಲವು ಬಂದಾಗ, ಅವಳನ್ನು ವರಿಸಬೇಕೆಂದು, ಅಲ್ಲಲ್ಲಿಂದ ಕನ್ಯಾರ್ಥಿಗಳು ಅವಳನ್ನು ನೋಡಿ ಹೋಗುವುದಕ್ಕಾಗಿ ಬರುತಿದ್ದರು.ಒಮ್ಮೆ

ಆ ಹೆಣ್ಣಿನ ಬಂಧುಗಳೆಲ್ಲರೂ ಬೇರೆಲ್ಲಿಗೋ ಹೋಗಿದ್ದುದರಿಂದ, ಮನೆಗೆ, ಬಂದವರಿಗೆ ಆ ಕನ್ಯೆಯೇ ಆತಿಥ್ಯವನ್ನು ಮಾಡಬೇಕಾಯಿತು. ಇದಕ್ಕಾಗಿ ಆ ಕನ್ಯೆಯು, ಬಂದವರಿಗೆ ಭೋಜನವನ್ನು ಸಿದ್ಧಪಡಿಸಬೇಕೆಂದು, ತಾನೇ ಮನೆಯೊಳಗೆ ರಹಸ್ಯವಾಗಿ ಬತ್ತವನ್ನು ಕುಟ್ಟುವುದಕ್ಕೆ ತೊಡಗಿದಳು. ಹೀಗೆ ಕುಟ್ಟುವಾಗ ಅವಳ ಕೈಗೆ ತೊಡಿಸಿದ್ದ ಕವಡೆಯ ಬಳೆಗಳು, ಒಂದ ಕ್ಕೊಂದಕ್ಕೆ ತಗುಲಿ ಗಲ್ಲಲನೆ ಶಬ್ದವಾಯಿತು. ಆಕುಮಾರಿಯು ಬಹಳ ಚತುರೆಯಾದುದರಿಂದ, ತನ್ನಲ್ಲಿ ತಾನು. "ಅಯ್ಯೋ! ಇದೇನಿದು! ನಾನು ರಹಸ್ಯವಾಗಿ ಮನೆಯೊಳಗಿದ್ದು, ಯಾರಿಗೂ ತಿಳಿಯದಂತೆ ಕೆಲಸಮಾಡು ತಿದ್ದರೂ, ಈ ಕೈಬಳೆಗಳ ಶಬ್ದದಿಂದ ನನ್ನ ಸ್ಥಿತಿಯು ಹೊರಬೀಳುವುದಲ್ಲಾ! ಈ ಶಬ್ದವನ್ನು ಕೇಳಿದವರು, "ಈ ಹೆಣ್ಣಿಗೆ ಬೇರೆ ದಿಕ್ಕಿಲ್ಲದುದಕ್ಕಾಗಿ ತಾನೇ ಬತ್ತವನ್ನು ಕುಟ್ಟುವಳು. ಈ ಬಡಹೆಣ್ಣನ್ನು ಮದುವೆಯಾಗಬಾರ" ದೆಂದು ನನ್ನನ್ನು ತಿರಸ್ಕರಿಸುವರಲ್ಲವೆ? ಎಂದು ನಾಚಿಕೆಪಟ್ಟು, ತಾನು ಮಾಡುವ ಕಾರ್ಯವು ಹೊರಬೀಳಬಾರದೆಂದು, ತನ್ನ ಕೈಬಳೆಗಳಲ್ಲಿ ಕೆಲವನ್ನು ಒಡೆದು ಹಾಕಿ, ಕನ್ಯಾಲಕ್ಷಣಕ್ಕಾಗಿ ಒಂದೊಂದು ಕೈ ಯಲ್ಲಿ ಎರಡೆರಡು ಬಳೆಗಳನ್ನುಮಾತ್ರ ಉಳಿಸಿಕೊಂಡು, ಮೊದಲಿನಂತೆ ಬತ್ತ ವನ್ನು ಕುಟ್ಟುವುದಕ್ಕಾರಂಭಿಸಿದಳು. ಆಗಲೂ ಆ ಎರಡೆರಡು ಬಳೆಗಳು ಒಂದಕ್ಕೊಂದಕ್ಕೆ ತಗುಲುವುದರಿಂದ ಶಬ್ದವು ಕೇಳಿಸುತಿತ್ತು. ಅದನ್ನು ನೋಡಿ ಆ ಎರಡೆರಡು ಬಳೆಗಳಲ್ಲಿಯೂ ಒಂದೊಂದನ್ನು ಒಡೆದು ಹಾಕಿ ಒಂದೊಂದು ಕೈಯಲ್ಲಿ ಒಂದೊಂದೇ ಬಳೆಯನ್ನುಳಿಸಿಕೊಂಡಳು. ಆಗ ಸ್ವಲ್ಪವೂ ಶಬ್ದವಿಲ್ಲದೆ ಕೆಲಸವು ನಡೆದುಹೋಗುತಿತ್ತು. ಓ ಯಾದವೇಂ ದ್ರಾ! ಇಂತಹ ಲೋಕತತ್ವವನ್ನು ತಿಳಿಯುವುದಕ್ಕಾಗಿ ಭೂಸಂಚಾರಮಾಡು ತಿದ್ದ ನಾನು, ಆ ಕುಮಾರಿಯಿಂದ ಗ್ರಹಿಸಿದ ಮುಖ್ಯವಿಷಯವೇನೆಂದರೆ, ಅನೇಕರು ಒಂದುಕಡೆಯಲ್ಲಿ ಸೇರಿದಾಗ ಕಲಹವುಂಟಾಗುವುದು. ಇಬ್ಬರು ಮಾತ್ರ ಒಂದುಕಡೆಯಲ್ಲಿ ಸೇರಿದಾಗಲೂ, ಮಾತಾಡದೆ ಬಾಯಿಮುಚ್ಚಿ ಕೊಂಡು ಸುಮ್ಮನಿರಲಾರದೆ, ಏನಾದರೂ ಸುದ್ದಿಯನ್ನೆತ್ತಬೇಕಾಗಿ ಬ ರುವುದು. ಆದುದರಿಂದ ಆ ಕುಮಾರಿಯ ಕಡಗದಂತೆ ಮನುಷ್ಯನು ಏ

ಕಾಕಿಯಾಗಿದ್ದಾಗ, ಕಲಹಕ್ಕಾಗಲಿ, ಅನುಪಯುಕ್ತವಾದ ಮಾತುಗಳಿಗಾ ಗಲಿ ಅವಕಾಶವಿಲ್ಲದುದರಿಂದ, ಯೋಗನಿಷ್ಠನು, ಏಕಾಕಿಯಾಗಿದ್ದಾಗಲೇ ಅವನ ಯೋಗಸಿದ್ಧಿಗೆ ಪ್ರತಿಬಂಧಕಗಳೇನೂ ಇಲ್ಲವೆಂಬುದನ್ನು ಗ್ರಹಿಸಿದೆನು.

ಅದರಿಂದಾಚೆಗೆ ಬಾಣಗಾರನಿಂದ ನಾನು ಗ್ರಹಿಸಿದ ವಿಷಯವೇ ನೆಂಬುದನ್ನು ತಿಳಿಸುವೆನು ಕೇಳು! ಮನುಷ್ಯನು ವೈರಾಗ್ಯವನ್ನು ಹಿಡಿದು, ಅದರ ಅಭ್ಯಾಸಬಲದಿಂದ ಮನಸ್ಸನ್ನು ಸ್ಥಿರಪಡಿಸಿಕೊಂಡು, ಆಸನಜಯ ವನ್ನೂ, ಶ್ವಾಸಜಯವನ್ನೂ ಸಾಧಿಸಿ, ಆ ಮನಸ್ಸನ್ನು ಶುಭಾಶ್ರಯವಾದ ಭಗವಂತನ ದಿವ್ಯರೂಪವೊಂದರಲ್ಲಿಯೇ ನೆಲೆಗೊಳಿಸಬೇಕು. ಹೀಗೆ ಮನ ಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವುದರಿಂದ, ಕರ್ಮವಾಸನೆಗಳು ಕ್ರಮ ಕ್ರಮವಾಗಿ ಕುಂದುತ್ತಬರುವುವು. ಆಗ ಆ ಮನಸ್ಸಿನಲ್ಲಿ ರಜೋಗುಣ ತ ಮೋಗುಣಗಳೆರಡೂ ಅಡಗಿ, ಸತ್ವಗುಣವುಮಾತ್ರ ತಲೆಯೆತ್ತುವುದು. ಸತ್ವಪ್ರಧಾನವಾದ ಆ ಮನಸ್ಸು, ವಿಷಯಾಂತರಸಂಬಂಧವಿಲ್ಲದೆ ಆ ಶುಭಾಶ್ರಯದಲ್ಲಿಯೇ ಲಯಿಸುವುದು. ಹೀಗೆ ಪರಮಾತ್ಮನಲ್ಲಿ ಲಯಿಸಿದ ಮನಸ್ಸಿಗೆ, ಒಳಗಾಗಲಿ, ಹೊರಗಾಗಲಿ ಯಾವುದೂ ತಿಳಿಯಲಾರದು. ಬಾ ಣಗಾರನು, ಬಾಣದ ಅಲಗಿಗೆ ಹದವನ್ನು ಕೊಡುವಾಗ, ಪಕ್ಕದಲ್ಲಿ ಹೋ ಗುತ್ತಿರುವ ಚಕ್ರವರ್ತಿಯನ್ನಾದರೂ ತಲೆಯೆತ್ತಿ ನೋಡದೆ, ಆ ತನ್ನ ಕೆಲಸ ದಲ್ಲಿಯೇ ಏಕಾಗ್ರಚಿತ್ತನಾಗಿರುವಂತೆ, ಆ ಭಗವಂತನಲ್ಲಿ ನಟ್ಟ ಮನಸ್ಸು ಳ್ಳವನು, ಬೇರೆ ಯಾವುದನ್ನೂ ಗಮನಿಸಲಾರನೆಂಬುದನ್ನು ಆ ಬಾಣಗಾರನ ದೃಷ್ಟಾಂತದಿಂದ ತಿಳಿದುಕೊಂಡೆನು.

ಅದರಿಂದಾಚೆಗೆ ನಾನು ಹಾವುಗಳಚರ್ಯೆಯನ್ನು ನೋಡಿ, ಗ್ರಹಿಸಿದು ದೇನೆಂದರೆ, ಯೋಗಿಯಾದವನು, ಸರ್ಪದಂತೆ ಜನಗಳ ಗುಂಪಿನಲ್ಲಿ ಸೇರದೆ, ಏಕಾಕಿಯಾಗಿ ಸಂಚರಿಸುತ್ತ, ನೆಲೆಯಾದ ಒಂದು ವಾಸಸ್ಥಾನ ವಿಲ್ಲದೆ,ಯಾರ ಕಣ್ಣಿಗೂ ಬೀಳದೆ, ಗವಿಗಳಲ್ಲಿದ್ದುಕೊಂಡು, ಮಿತಭಾಷಿಯಾಗಿ ಎಚ್ಚರಿಕೆಯಿಂದಿರಬೇಕೆಂಬುದನ್ನು ಗ್ರಹಿಸಿದೆನು. ಮತ್ತು ಮನುಷ್ಯನಿಗೆ ತನ್ನ ದೇಹವೇ ಸ್ಥಿರವಲ್ಲದಿರುವಾಗ, ಆ ಶರೀರಪೋಷಣೆಗಾಗಿ ಗೃಹಾದಿಗ ಳನ್ನು ಕಲ್ಪಿಸಿಕೊಳ್ಳುವುದು ಕೇವಲಶ್ರಮಕಾರಣವೆಂದೂ, ಸರ್ಪವು, ಬೇರೆ

ಪ್ರಾಣಿಗಳು (ಇರುವೆಗಳು) ಕಟ್ಟಿದ ಗೂಡಿನಲ್ಲಿ ಸೇರಿಕೊಂಡು ಸುಖವಾಗಿರುವಂತೆ, ಯೋಗಿಯಾದವನೂ ಕೂಡ, ತಾನು ಹೋದಕಡೆಯಲ್ಲಿ ಸಾಧುಗಳಾದ ಗೃಹಸ್ಥರ ನಿವಾಸಗಳನ್ನು ಸೇರಿ, ಅಲ್ಲಲ್ಲಿ ನಿದ್ರಾಹಾರಗಳನ್ನು ನಿರ್ವಹಿಸಿಕೊಂಡು ತನ್ನ ಜೀವನವನ್ನು ಕಳೆಯುತ್ತ ನಿಶ್ಚಿಂತನಾಗಿರಬಹುದೆಂದೂ ಗ್ರಹಿಸಿದೆನು.

ಆಮೇಲೆ ನಾನು ಊರ್ಣನಾಭಿ (ಜೇಡರಹುಳು) ಗಳ ಚರ್ಯೆಯಿಂದ ಗ್ರಹಿಸಿದ ವಿಷಯವನ್ನು ತಿಳಿಸುವೆನು ಕೇಳು. ಜೇಡರಹುಳುಗಳು ತಮ್ಮ ಹೃದಯದಿಂದಲೇ ದಾರವನ್ನು ನಿರ್ಮಿಸಿ, ಅದನ್ನು ನಾನಾಕಡೆಗೂ (ಬಲೆಯಂತೆ) ವಿಸ್ತರಿಸಿ, ಅದರಲ್ಲಿಯೇ ತಾನು ವಿಹರಿಸುತಿದ್ದು, ತಿರುಗಿ ಆ ನೂಲನ್ನು ತನ್ನಲ್ಲಿಯೇ ಅಡಗಿಸಿಟ್ಟುಕೊಳ್ಳುವುದಲ್ಲವೆ? ಅದರಂತೆಯೇ ಭಗವಂತನು, ಮೊದಲು ಪ್ರಳಯದಶೆಯಲ್ಲಿ ತಾನು ತನ್ನ ಸಂಕಲ್ಪರೂಪವಾದ ಮಾಯೆಯಿಂದ ಸೃಷ್ಟಿಸಿದ ಜಗತ್ತೆಲ್ಲವನ್ನೂ, ಕಾಲರೂಪವಾದ ತನ್ನ ಶಕ್ತಿಯಿಂದ ಉಪಸಂಹರಿಸಿ, ತನ್ನಲ್ಲಿಯೇ ಅಡಗಿಸಿಟ್ಟುಕೊಂಡು, ತಾನೊಬ್ಬನಾಗಿಯೇ ನಿಲ್ಲುವನು. ಎಂದರೆ, ಚಿದಚಿತ್ತುಗಳೆರಡೂ ನಾಮರೂಪವಿಭಾಗಗಳಿಲ್ಲದ ಸೂಕ್ಷ್ಮದಶೆಯಿಂದ, ಆ ಪರಮಪುರುಷನಿಗೆ ಶರೀರಭೂತವಾಗಿ ನಿಲ್ಲುವುದು, ಸೃಷ್ಟಿಕಾಲದಲ್ಲಿ ಭಗವಂತನು ತನಗೆ ಶರೀರವಾದ ಆ ಸೂಕ್ಷ್ಮಚಿದಚಿತ್ತುಗಳನ್ನೇ ಸ್ಥೂಲರೂಪಕ್ಕೆ ತಿರುಗಿಸಿ, ತನ್ನ ಸಂಕಲ್ಪಶಕ್ತಿಯಿಂದ ಪ್ರಪಂಚರೂಪವಾಗಿ ಹರಡುವನು. ಇದರಿಂದ, ಈ ಜಗತ್ತಿಗೆ ಆ ಭಗವಂತನೇ ನಿಮಿತ್ತಕಾರಣನಾಗಿಯೂ, ಉಪಾದಾನಕಾರಣನಾಗಿಯೂ ಇರುವನು ಹೀಗೆ ಪ್ರಪಂಚವು ಸೂಕ್ಷ್ಮದಶೆಯಲ್ಲಿಯೂ, ಸ್ಥೂಲದಶೆಯಲ್ಲಿಯೂ ಆ ಭಗವಂತನಿಗೆ ಶರೀರವಾಗಿಯೇ ಇರುವುದರಿಂಧ, ಆತನು ಅವೆಲ್ಲಕ್ಕೂ ಆಶ್ರಯವಾಗಿ, ತನಗೆ ಬೇರೊಂದು ಆಧಾರವಸ್ತುವಿಲ್ಲದೆ, ಎಲ್ಲವೂ ತಾನೊಬ್ಬನೇ ಆಗಿರುವನು. ಸೃಷ್ಟಿದಶೆಯಲ್ಲಿ ವೈಷಮ್ಯದಿಂದಿದ್ದ ಸತ್ವಾದಿಗಳೆಲ್ಲವೂ, ಕಾಲರೂಪವಾದ ಆವನ ಸಂಕಲ್ಪಶಕ್ತಿಯಿಂದ, ಪ್ರಳಯದಶೆಯಲ್ಲಿ ಸಾಮ್ಯವನ್ನು ಹೊಂದಿ, ಒಂದೇವಿಧವಾಗುವುವು. ಭಗವಂತನು ಹೀಗೆ ಸಕಲ ಜಗತ್ಕಾರಣಭೂತನಾದುದರಿಂದ (ಆದಿಪುರುಷನೆನಿಸಿಕೊಂಡು, ಚಿದಚಿತ್ತು

ಗಳಿಗೆ ಕಾರ್ಯಕಾರಣಾವಸ್ಥೆಗಳೆರಡರಲ್ಲಿಯೂ ತಾನೇ ಮೇರೆಯಾಗಿ, ಅವೆಲ್ಲ ಕ್ಕೂ ತಾನೇ ನಿಯಾಮಕನಾಗಿಯೂ ಇರುವನು. ಪ್ರಳಯದಶೆಯಲ್ಲಿ ಚಿದ ಚಿತ್ತುಗಳಿಗೆ ನಾಮರೂಪವಿಭಾಗಗಳಿಲ್ಲದೆ, ಎಲ್ಲವೂ ಸೇರಿ ಆ ಭಗವಂತನೊ ಬ್ಬನೇ ಆಗಿರುವುದರಿಂದ, ಆಗ ಆ ಭಗವತ್ಸ್ವರೂಪವು ಕೈವಲ್ಯವೆಂಬ ಹೆಸರಿ ನಿಂದ ಕರೆಯಲ್ಪಡುವುದು. ಮತ್ತು ಆಗ ಭಗವಂತನು ಸ್ವಲ್ಪಮಾತ್ರವೂ ಜಾಡ್ಯದುಃಖಾದಿಗಳ ಸಂಪರ್ಕವಿಲ್ಲದೆ, ಕೇವಲ ಜ್ಞಾನಾನಂದಸ್ವರೂಪನಾ ಗಿರುವನು. ಆ ಜ್ಞಾನಾನಂದಗಳು ಅವನಿಗೆ ಸಹಜವಾದುವೇ ಹೊರತು ಕರ್ಮಪ್ರಾಪ್ತವಾದುದಲ್ಲ. ಆ ಭಗವಂತನಿಗೆ ಯಾವಾಗ ಸೃಷ್ಟಿಸಂಕಲ್ಪ ವುಂಟಾಗುವುದೋ, ಆಗ ಕೇವಲಸಂಕಲ್ಪಮಾತ್ರದಿಂದಲೇ, ತನಗೆ ಶರೀರ ಭೂತವಾಗಿಯೂ,ಅತಿಸೂಕ್ಷ್ಮವಾಗಿಯೂ, ತ್ರಿಗುಣಾತ್ಮಕವಾಗಿಯೂ ಇರು ವ ಪ್ರಕೃತಿಯ ಗುಣಗಳನ್ನು ಕಲಗಿಸಿ,ಅದನ್ನು ಸ್ಥೂಲರೂಪಕ್ಕೆ ತಿರುಗುವಂ ತೆ ಪ್ರೇರಿಸುವನು. ಆ ಪ್ರಕೃತಿಯಿಂದ ಅಹಂಕಾರಾದಿತತ್ವಗಳೆಲ್ಲಕ್ಕೂ ಆಧಾರಸೂತ್ರವೆನಿಸಿಕೊಂಡ ಮಹತ್ತತ್ವವನ್ನು ಮೊದಲು ಸೃಷ್ಟಿಸುವನು. ಈ ಮಹತ್ತತ್ವವೇ ಅಹಂಕಾರ ಮೊದಲಾಗಿ ಪೃಥಿವಿಯವರೆಗಿನ ತತ್ವಪರಂಪ ರೆಗಳ ಸೃಷ್ಟಿಗೆ ಕಾರಣವೆನಿಸುವುದು.ಆದುದರಿಂದ ಈ ಸ್ಥೂಲವಾದ ಸಮ ಸ್ತಪ್ರಪಂಚವೂ ಆ ಮಹತ್ತತ್ವತದಲ್ಲಿಯೇ ನಿರ್ಮಿತವಾಗಿರುವುದು. ಅದ ರಿಂದೇರ್ಪಟ್ಟ ಶರೀರದಿಂದಲೇ ಪುರುಷನು ಸಂಸಾರಬದ್ಧನಾಗುವನು. ಓ ರಾ ಜೇಂದ್ರಾ! ಮೇಲೆ ಹೇಳಿದಂತೆ ಜೇಡರಹುಳುಗಳ ದೃಷ್ಟಾಂತದಿಂದ, ಭಗವಂ ತನು ಪ್ರಪಂಚವನ್ನು ತನ್ನಿಂದಲೇ ಸೃಷ್ಟಿಸಿ, ತಾನೂ ಅದರಲ್ಲಿಯೇಸೇರಿ ಕೆಲವುಕಾಲದವರೆಗೆ ವಿಹರಿಸುತಿದ್ದು, ಕೊನೆಗೆ ಅದನ್ನು ತನ್ನಲ್ಲಿಯೇ ಅಡಗಿ ಸಿಕೊಳ್ಳುವನೆಂಬ ತತ್ವವನ್ನು ಗ್ರಹಿಸಿದೆನು.

ಮನುಷ್ಯನು ತನ್ನ ಮನಸ್ಸಿನಲ್ಲಿ ಸ್ನೇಹಭಾವದಿಂದಾಗಲಿ, ದ್ವೇ ಷಬುದ್ಧಿಯಿಂದಾಗಲಿ, ಭಯದಿಂದಾಗಲಿ ಯಾವಯಾವುದನ್ನು ನಿಶ್ಚಲ ವಾಗಿ ಧ್ಯಾನಿಸುವನೋ ಆಯಾಸ್ವರೂಪವನ್ನೇ ಕಾಲಕ್ರಮದಿಂದ ತಾ ನೂ ಹೊಂದುವನೆಂಬುದನ್ನು ಕಣಜದ ಹುಳುಗಳ ದೃಷ್ಟಾಂತದಿಂದ ಕಂಡುಕೊಂಡೆನು. ಕಣಜದ ಹುಳುವು, ತನ್ನ ಆಹಾರಕ್ಕಾಗಿ ಬೇರೆ

ಕೀಟವನ್ನು ತಂದು ತನ್ನ ಗೂಡಿನಲ್ಲಿಟ್ಟಾಗ, ಆ ಕೀಟವು ಮರಣ ಭಯದಿಂದ ಆ ಕಣಜವನ್ನೇ ಚಿಂತಿಸುತ್ತ, ಕೊನೆಗೆ ತಾನೂ ಆ ಕಣಜದ ರೂಪವನ್ನೇ ಹೊಂದುವುದು. ಹೀಗೆಯೇ ಚೇತನನು, ಬ್ರಹ್ಮಧ್ಯಾನದಿಂದ ಬ್ರಹ್ಮಸಾರೂಪ್ಯವನ್ನು ಹೊಂದಬಹುದೆಂಬುದನ್ನು ಆ ಕೀಟವ ದೃಷ್ಟಾಂತದಿಂದ ಗ್ರಹಿಸಿದೆನು.

ಓ ರಾಜೇಂದ್ರಾ! ಹೀಗೆ ನಾನು ಆಯಾಗುರುಗಳಿಂದ ಕಲಿತ ವಿಷಯಗಳನ್ನು ತಿಳಿಸಿದೆನಷ್ಟೆ? ಇನ್ನು ನನ್ನ ಸ್ವದೇಹದಿಂದಲೇ ನನಗೆ ಶಿಕ್ಷಿತವಾದ ಬುದ್ಧಿಯನ್ನು ತಿಳಿಸುವೆನು ಕೇಳು. ಈ ದೇಹಕ್ಕೆ ಉತ್ಪತ್ತಿವಿನಾಶಗಳೆರಡೂ ಉಂಟು. ಈ ದೇಹವಿರುವವರೆಗೆ ಮೇಲೆಮೇಲೆ ದುಃಖಾನುಭವವೇ ಇದಕ್ಕೆ ಫಲವು ಇದನ್ನು ನೋಡಿ, ನನಗೆ ಈ ದೇಹದಲ್ಲಿ ವಿರಕ್ತಿಯು ಹುಟ್ಟಿತು. ಹಾಗಿದ್ದರೂ ಈ ದೇಹಸಂಬಂಧದಿಂದಲೇ ನಾನು ತತ್ವಜ್ಞಾನವನ್ನು ಪಡೆದವನಾದುದರಿಂದ, ನನ್ನ ವಿವೇಕಕ್ಕೆ ಈ ದೇಹವೇ ಮೂಲವಾಯಿತೆಂಬುದನ್ನೂ ಬಲ್ಲೆನು. ಹೀಗೆ ಈ ಮನುಷ್ಯದೇಹವು ನನಗೆ ಉಪಕಾರಿಯಾಗಿದ್ದರೂ, ಕೊನೆಗೆ ಇದು ನಾಯಿನರಿಗಳಿಗೆ ಆಹಾರಯೋಗ್ಯವೆಂಬ ನಿಶ್ಚಯದಿಂದ, ಇದರಲ್ಲಿ ಸ್ವಲ್ಪಮಾತ್ರವೂ ಅಭಿಮಾನವಿಡದಿರುವೆನು. ಈ ದೇಹವು ಯಾವಾಗಲೂ ದುಃಖಹೇತುವೆಂಬುದು ಹೇಗೆಂದು ಕೇಳುವೆಯಾ! ಮನುಷ್ಯನು ತನ್ನ ದೇಹಕ್ಕೆ ಪ್ರಿಯವನ್ನುಂಟುಮಾಡಬೇಕೆಂಬ ಇಚ್ಛೆಯಿಂದಲೇ, ಹೆಂಡಿರು, ಮಕ್ಕಳು, ಬಂಧುಗಳು, ಮಿತ್ರರು ಮೊದಲಾದ ಪರಿವಾರಗಳೆಲ್ಲವನ್ನೂ ಸಂಪಾದಿಸಿಕೊಂಡು, ಅವರನ್ನೆಲ್ಲಾ ಕಷ್ಟಪಟ್ಟು ಪೋಷಿಸುವನು. ಎಷ್ಟೋ ಶ್ರಮಪಟ್ಟು ಹಣವನ್ನೂ ಸಂಗ್ರಹಿಸಿಡುವನು. ಸಾಯುವ ಕಾಲಕ್ಕೂ ಇವೆಲ್ಲವನ್ನೂ ಬಿಡಲಾರದೆ ಮಹಾಸಂಕಟದಿಂದ ಸಾಯುವನು. ಸತ್ತಮೇಲೆಯಾದರೂ ಸುಖವುಂಟೆ? ಅದೂ ಇಲ್ಲ. ಹೇಗೆಂದರೆ, ಮರಗಿಡಗಳು ಕಾಲಕ್ರಮದಿಂದ ಒಣಗಿಹೋದರೂ, ತಮ್ಮಂತೆ ಬೇರೆ ಗಿಡಗಳನ್ನು ಹುಟ್ಟಿಸುವುದಕ್ಕಾಗಿ, ನೆಲದಮೇಲೆ ಬೀಜಗಳನ್ನು ಚೆಲ್ಲಿಡುವಂತೆ, ಮನುಷ್ಯನೂಕೂಡ ಮುಂದೆ ದೇಹಾಂತರಪ್ರಾಪ್ತಿಗೆ ಕಾರಣವಾದ ಕರ್ಮಬೀಜವನ್ನು ಹುಟ್ಟಿಸಿಯೇ, ಆಮೇಲೆ ಪೂರ್ವದೇಹವನ್ನು ನೀಗುವನು.

ಮತ್ತು ಮನುಷ್ಯನು ಜೀವಿಸಿರುವವರೆಗೆ, ಅವನನ್ನು, ನಾಲಗೆ, ಕಣ್ಣು, ಕಿವಿ, ಮೂಗು, ಚರ್ಮ, ಶಿಶ್ನ, ಉದರ, ವಾಕ್ಕು ಮುಂತಾದ ಇಂದ್ರಿಯಸಮೂಹವೆಲ್ಲವೂ, ಅನೇಕಮಂದಿ ಸವತಿಯರು ಕುಟುಂಬಿಯನ್ನು ಹೇಗೋಹಾಗೆ ನಾನಾಕಡೆಗೆ ಎಳೆದಾಡುತ್ತಿರುವುವು. ಸೃಷ್ಟಿಕಾರ್ಯಕ್ಕಾಗಿ ಚತುರ್ಮುಖಶರೀರಕನಾದ ಭಗವಂತನು, ತನ್ನ ಶಕ್ತಿಯೆನಿಸಿಕೊಂಡ ಪ್ರಕೃತಿಯಿಂದ, ಮೊದಲು ಸಸ್ಯವರ್ಗಗಳಿಂದೂ, ಪಶು ಪಕ್ಷಿ ಮೃಗ, ಮತ್ಸ್ಯ, ಸರೀಸೃಪಾದಿ ಜಂತುಗಳಿಂದೂ ನಾನಾಭೇದವುಳ್ಳ ಶರೀರಗಳನ್ನು ಸೃಷ್ಟಿಸಿದರೂ, ಇವೆಲ್ಲವೂ ಮುಕ್ತಿಸಾಧನವನ್ನು ಅನುಷ್ಠಿಸುವುದಕ್ಕೆ ಅಶಕ್ತಗಳಾಗಿರುವುದನ್ನು ಕಂಡು, ತಾನು ಚೇತನೋಜ್ಜೀವನಾರ್ಥವಾಗಿ ನಡೆಸಿದ ಸೃಷ್ಟಿಕಾರ್ಯವು ವ್ಯರ್ಥವಾಯಿತೆಂದು ತಿಳಿದು, ಮನಸ್ತೃಪ್ತಿಯಿಲ್ಲದೆ, ಆಮೇಲೆ ಮನುಷ್ಯರನ್ನು ಸೃಷ್ಟಿಸಿದನು. ಈ ಮನುಷ್ಯದೇಹದಲ್ಲಿ ಚೇತನನು ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೆ ಶಕ್ತನಾಗಿರುವುದನ್ನು ನೋಡಿ ಭಗವಂತನು ತನ್ನ ಸೃಷ್ಟಿಕಾರ್ಯವು ಸಾರ್ಥಕವಾಯಿತೆಂದು ಸಂತುಷ್ಟನಾದನು. ಓ ರಾಜೇಂದ್ರಾ! ಜೀವನು ಅನೇಕಜನ್ಮಗಳನ್ನೆತ್ತಿ, ಕೊನೆಗೆ, ದುರ್ಲಭವಾದ ಮತ್ತು ಸರ್ವಾರ್ಥಸಿದ್ಧಿಪ್ರದವಾದ ಈ ಮನುಷ್ಯಜನ್ಮವನ್ನು ಪಡೆಯುವನು. ಈ ಮನುಷ್ಯದೇಹವೂ ಇತರದೇಹಗಳಂತೆ ಅಶಾಶ್ವತವಾಗಿಯೇ ಇರುವುದು. ಇದರ ಬೆನ್ನಹಿಂದೆ ಮೃತ್ಯುವು ಕಾದಿರುವುದರಿಂದ, ಈದೇಹವು ಬಿದ್ದು ಹೋಗುವುದರೊಳಗಾಗಿ ತನ್ನ ಶ್ರೇಯಸ್ಸಿಗೆ ಎಂದರೆ, ಮುಕ್ತಿಸಾಧನೆಗಾಗಿ ಪ್ರಯತ್ನಿಸಬೇಕೇಹೊರತು ವಿಷಯಸುಖಕ್ಕಾಗಿ ಆಸೆಪಡಬಾರದು. ಈ ವಿಷಯಸುಖವನ್ನು ಅನುಭವಿಸುವುದಕ್ಕೆ ಮಾನುಷಜನ್ಮವೇ ಬೇಕಾದುದಿಲ್ಲ. ನಾಯಿ, ನರಿ, ಕತ್ತೆ ಮೊದಲಾದ ಹೀನಜನ್ಮಗಳಲ್ಲಿಯೂ ಆ ವಿಷಯೋಪಭೋಗವು ಸುಲಭವಾಗಿರುವುದು. ಓ ರಾಜೇಂದ್ರಾ! ಹೀಗೆ ನಾನು ಮೇಲೆ ಹೇಳಿದ ಅನೇಕನಿದರ್ಶನಗಳಿಂದ ಅನೇಕವಿಷಯಗಳನ್ನು ತಿಳಿದುಕೊಂಡು, ವೈರಾಗ್ಯವನ್ನು ವಹಿಸಿ, ಜ್ಞಾನದೃಷ್ಟಿಯಿಂದ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿ, ಅಹಂಕಾರ ಮಮಕಾರಗಳನ್ನು ತೊರೆದು ಭೂಮಿಯಲ್ಲಿ ತಿರುಗುತ್ತಿರುವೆನು. ಪುರುಷನಿಗೆ ಜ್ಞಾನವೆಂಬುದು ಒಂದೇ ಗುರುವಿನಿಂದ ಸಂಪೂರ್ಣವಾಗಿ

ಲಕ್ಷಿಲಾರದು. ಅಂತಹ ಜ್ಞಾನವು ಸ್ಥಿರವಾಗಿಯೂ ಇಲ್ಲದು. ಏಕೆಂದರೆ, (ಒಂದೇ ವಿಧವಾದ ಬ್ರಹ್ಮಸ್ವರೂಪವನ್ನೇ ಮಹರ್ಷಿಗಳಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ನಿರೂಪಿಸುವರು) ಮೇಲೆ ಹೇಳಿದಂತೆ ಪೃಥಿವ್ಯಾದಿ ಗುರುಸಮೂಹದಿಂದ ಪಡೆದ ಜ್ಞಾನವು ಅಸಮಾನವಾದುದು. ಋಷಿಗಳು ಇದೇಜ್ಞಾನವನ್ನು ಭೂಮ್ಯಾದಿನಿದರ್ಶನಗಳಿಂದ ನಾನಾವಿಧವಾಗಿ ವರ್ಣಿಸಿರುವರು" ಎಂದು ಅವಧೂತನು ಹೇಳಿದ ತತ್ತ್ವೋಪದೇಶವನ್ನು ತಿಳಿಸಿ, ಕೃಷ್ಣನು ಉದ್ಧವನನ್ನು ಕುರಿತು. "ಓ ಉದ್ಧವಾ! *ಮಹಾಜ್ಞಾನಿಯಾದ ಆ ಬ್ರಾಹ್ಮಣನು ಯದುವಿಗೆ ಈ ವಿಷಯಗಳನ್ನು ಹೇಳಿ, ಅವನ ಅನುಜ್ಞೆಯನ್ನು ಪಡೆದು ಅವನಿಂದ ಸತ್ಕೃತನಾಗಿ, ತನ್ನ ದಾರಿಯನ್ನು ಹಿಡಿದು ಹೊರಟುಹೋದನು. ನಮ್ಮ ವಂಶದಲ್ಲಿ ಹಿರಿಯರಿಗೂ ಹಿರಿಯನಾದ ಆ ಯದುವೂ ಕೂಡ, ಅವಧೂತನು ಹೇಳಿದ ವಿಷಯಗಳನ್ನು ಕೇಳಿದಮೇಲೆ, ಸಮಸ್ತ ಸಂಗಗಳನ್ನೂ ತೊರೆದು, ಸಮಚಿತ್ತನಾಗಿದ್ದು ಕೊನೆಗೆ ಮುಕ್ತಿಯನ್ನು ಹೊಂದಿದನು. ಇದು ಒಂಬತ್ತನೆಯ ಅಧ್ಯಾಯವು.

---

(ಶ್ರೀಕೃಷ್ಣನು ಭಕ್ತಿಯೋಗವನ್ನೂ, ಅದಕ್ಕೆ ಅಂಗಗಳಾದ ಕರ್ಮಜ್ಞಾನಾದಿಸಾಧನಗಳನ್ನೂ ಉದ್ಧವನಿಗೆ ಉಪದೇಶಿಸಿದುದು.)

ಉದ್ಧವಾ! ಸದ್ಗತಿಯನ್ನಪೇಕ್ಷಿಸತಕ್ಕವನೊಬ್ಬೊಬ್ಬನೂ, ನಾನು ಗೀತಾದಿಗಳಮೂಲಕವಾಗಿ ಉಪದೇಶಿಸಿರುವ ಅವನವನ ಸ್ವರೂಪಾನುರೂಪವಾದ ಧರ್ಮಗಳಲ್ಲಿ ಎಚ್ಚರಿಕೆತಪ್ಪದೆ, ತನ್ನತನ್ನ ವರ್ಣಾಶ್ರಮಧರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ನಡೆಸುತ್ತ ಬರಬೇಕು ಮತ್ತು ಅವನು ತನ್ನ ಸ್ಥಿತಿ, ಪ್ರವೃತ್ತಿ, ಸದ್ಗತಿಗಳಿಗೆಲ್ಲಾ ನಾನೇ ಆಧಾರಭೂತನೆಂಬ ಜ್ಞಾನವುಳ್ಳವನಾಗಿರಬೇಕು. ಆದರೆ "ಫಲೋದ್ದೇಶವಿಲ್ಲದೆ ಯಾವನುತಾನೇ ಕೆಲಸವನ್ನು ಮಾಡುವನು" ಎಂದು ನೀನು ಶಂಕಿಸಬಾರದು. ವರ್ಣಾಶ್ರಮಧರ್ಮಗಳನ್ನು

---

* ಕಾರ್ತವೀರ್ಯನಿಗೆ ಜ್ಞಾನೋಪದೇಶಮಾಡಿದ ದತ್ತಾತ್ರೇಯನೇ ಈತನೆಂದು ಪಾಠಾಂತರಗಳಿಂದ ಸ್ಪಷ್ಟವಾಗುವುದು.

ನಿರುದ್ವೇಗವಾಗಿ ಅನುಷ್ಠಿಸುತ್ತ ಬರುವುದರಿಂದ ಶುದ್ಧಮನಸ್ಕನಾಗುವನು. ಆದರಿಂದ ಅಂತವನು ಆತ್ಮಪರಮಾತ್ಮಸ್ವರೂಪವನ್ನು ಚೆನ್ನಾಗಿ ಚಿಂತಿಸ ಬಲ್ಲನು. ವಿಷಯಾಸಕ್ತರಾದ ಜನರೆಲ್ಲರೂ ಶಬ್ದಾದಿಭೋಗಗಳನ್ನುದ್ದೇಶಿಸಿಯೇ ಪ್ರಯತ್ನಿಸುತ್ತಿರುವರೆಂದೂ, ಆ ಪ್ರಯತ್ನದಿಂದ ಅವರಿಗೆ ಕೊನೆಗೆ ಆ ಉದ್ದೇಶಕ್ಕೆ ವಿರುದ್ಧವಾದ ಫಲವೇ, ಎಂದರೆ ದುಃಖವೇ ಪ್ರಾಪ್ತವಾಗುವುದೆಂದೂ, ಅವನಿಗೆ ತಾನಾಗಿಯೇ ತಿಳಿಯುವುದು. ಈ ತಿಳುವಳಿಕೆಯು ಯಾವಾಗ ಹುಟ್ಟುವುದೋ, ಆಗ ಅವನಿಗೆ ಕಾಮ್ಯಾದಿಫಲಗಳಲ್ಲಿ ತನಗೆತಾನೇ ಜಿಹಾಸೆಯೂ ಹುಟ್ಟುವುದು. ಕನಸಿನಲ್ಲಿ ತೋರುವ ಸುಖದುಃಖಗಳೂ, ಮನಸ್ಸಿನಲ್ಲಿ ಹುಟ್ಟುವ ಮನೋರಥಗಳೂ, ಒಮ್ಮೆ ಪ್ರಿಯವಾಗಿಯೂ, ಮತ್ತೊಮ್ಮೆ ಅಪ್ರಿಯವಾಗಿಯೂ ನಾನಾವಿಧವಾಗಿ ತೋರಿದರೂ, ಕೊನೆಗೆ ಯಾವ ಪುರುಷಾರ್ಥವನ್ನೂ ಕೈಗೂಡಿಸದೆ ವಿಫಲವಾಗುವಂತೆ, ಆತ್ಮನಲ್ಲಿ ದೇವಮನುಷ್ಯಾದಿಭೇದಗಳೂ, ಶಬ್ದಾದಿವಿಷಯಗಳೂ ಬುದ್ಧಿಗೆ ತೋರುತಿದ್ದರೂ, ಅವೆಲ್ಲವೂ ಅಸತ್ಯಗಳಾದುದರಿಂದ, ಕೊನೆಗೆ ವಿಫಲಗಳೇ ಆಗುವುವು. ಆದುದರಿಂದ ತತ್ವವಿಮರ್ಶನೆಯಿಂದಲೇ ಮನಸ್ಸಿನಲ್ಲಿ ಕಾಮವು ಬಿಟ್ಟುಹೋಗಬೇಕೇಹೊರತು, ಅಸತ್ಯಗಳಾದ ವಿಷಯಾದಿಗಳ ಚಿಂತೆಯಿಂದ ಕಾಮಾದಿಗಳು ಮತ್ತಷ್ಟು ಪ್ರಬಲವಾಗಿ, ಕೊನೆಗೆ ದುಃಖಕ್ಕೇ ಮೂಲವಾಗುವುದು. ಆದುದರಿಂದ ವಿವೇಕಿಯಾದವನು, ನನ್ನನ್ನೇ ಪರಮಪುರುಷಾರ್ಥವೆಂದು ನಂಬಿ, ನಿಷ್ಕಾಮವಾದ ನಿವೃತ್ತಿಕರ್ಮವನ್ನೇ ಆಚರಿಸುತ್ತಬರಬೇಕು. ಫಲಾಪೇಕ್ಷೆಯಿಂದ ನಡೆಸತಕ್ಕ ಪ್ರವೃತ್ತಿಕರ್ಮಗಳೆಲ್ಲವನ್ನೂ ತ್ಯಜಿಸಬೇಕು. ಕಾಮ್ಯಕರ್ಮಗಳು ಎಷ್ಟೇ ಭೋಗಾಭಿಲಾಷೆಯನ್ನು ಹುಟ್ಟಿಸಿದರೂ, ತತ್ವಜ್ಞಾನದಲ್ಲಿ ಪ್ರವರ್ತಿಸಿದವನಿಗೆ ಆ ಕರ್ಮಗಳಲ್ಲಿ ಪ್ರವೃತ್ತಿಯುಂಟಾಗದು. ಬ್ರಹ್ಮಜ್ಞಾನವನ್ನಪೇಕ್ಷಿಸುವವನು, ಯಾವಾಗಲೂ ಅಂತರಿಂದ್ರಿಯ ಬಹಿರಿಂದ್ರಿಯಗಳನ್ನು ನಿಗ್ರಹಿಸುವುದಕ್ಕೆ ಪ್ರಯತ್ನಿಸುತ್ತಿರಬೇಕು. ಶೌಚಾದಿನಿಯಮಗಳನ್ನೂ ಕೂಡ ಯಥಾಶಕ್ತಿಯಾಗಿ ನಡೆಸುತ್ತ, ನನ್ನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿರಬೇಕು. ಮತ್ತು ನನ್ನ (ಬ್ರಹ್ಮದ) ಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿಯೂ, ಸಮಸ್ತವನ್ನೂ ನನ್ನ ಸ್ವರೂಪವೆಂದಲೇ ಭಾವಿಸ

ತಕ್ಕವನಾಗಿಯೂ, ಜಿತೇಂದ್ರಿಯನಾಗಿಯೂ ಇರುವ ಆಚಾರ್ಯನನ್ನಾಶ್ರ ಯಿಸಿ, ಆ ಗುರುವಿನಲ್ಲಿ ಕಾಪಟ್ಯವನ್ನಾಗಲಿ, ಮಾತ್ಸರ್ಯವನ್ನಾಗಲಿ ತೋರಿ ಸದೆ, ಆತನನ್ನು ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಸೇವಿಸಬೇಕು. ಅಹಂಕಾರಮಮಕಾರಗಳನ್ನು ನೀಗಿ, ದೊಡ್ಡವರಲ್ಲಿ ಮನಃಪೂರ್ವಕವಾದ ಭಕ್ತಿಯನ್ನು ತೋರಿಸುತ್ತ, ಯುಕ್ತಾಯುಕ್ತವಿಮರ್ಶನಪರನಾಗಿ, ಅಸೂ ಯೆಯಿಲ್ಲದೆ, ಅಸಂಬದ್ಧವಾದ ಹೆಚ್ಚುಮಾತುಗಳನ್ನಾಡದೆ, ಎಚ್ಚರಿಕೆಯಿಂ ದಿರಬೇಕು. ಹೆಂಡಿರು, ಮಕ್ಕಳು, ಮನೆ, ಮಠ, ಬಂಧುಗಳು, ಹಣ, ಕಾಸು, ಮುಂತಾದುವುಗಳಲ್ಲಿ ತನ್ನದೆಂಬ ಮೋಹವನ್ನು ಬಿಟ್ಟು ಉದಾಸೀನಭಾವ ದಿಂದಿರಬೇಕು. ತನ್ನದೆಂದು ಭಾವಿಸಿಕೊಂಡಿದ್ದ ವಸ್ತುವೇ ತನ್ನ ಪುತ್ರಾದಿ ಗಳು ಅನುಭವಿಸುವಾಗ ಅವರದಾಗಿರುವಂತೆ, ಹೆಂಡಿರು, ಮಕ್ಕಳು ಮೊದ ಲಾದವರು ತನ್ನವರಂತೆ ತೋರಿದರೂ, ಅವರನ್ನು ತನ್ನವರಲ್ಲದಂತೆಯೇ ಭಾವಿಸಬೇಕು. ಜೀವಾತ್ಮವೆಂಬುದು, ಬುದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಇವುಗಳ ಸಂಘಾತರೂಪವಾದ ಸೂಕ್ಷ್ಮದೇಹಕ್ಕಿಂತಲೂ, ಅವುಗಳ ಪರಿಣಾಮರೂಪವಾದ ಸ್ಥೂಲದೇಹಕ್ಕಿಂತಲೂ ಬೇರೆಯಾದುದು. ಆತ್ಮವು ಎಲ್ಲವನ್ನೂ ನೋಡಬಲ್ಲುದು. ದೇಹವಾದರೋ ದೃಷ್ಟಿವಿಷಯ ವಾಗತಕ್ಕದ್ದೇಹೊರತು ನೋಡಲಾರದು. ಆತ್ಮವು ಸ್ವಯಂಪ್ರಕಾಶ ವುಳ್ಳುದು. ದೇಹವು ಹಾಗಲ್ಲ. ದಹನಶಕ್ತಿಯೂ, ಪ್ರಕಾಶಗುಣವೂ ಉಳ್ಳ ಬೆಂಕಿಯು, ಆ ಶಕ್ತಿಯಿಲ್ಲದ ಕಟ್ಟಿಗೆಯಲ್ಲಿ ಅಡಗಿದ್ದರೂ, ಆ ಕಟ್ಟಿಗೆಗಿಂ ತಲೂ ತಾನು ಬೇರೆನಿಸಿಕೊಳ್ಳುವಂತೆ, ಆತ್ಮವೂ ದೇಹಕ್ಕಿಂತಲೂ ಭಿನ್ನ ವಾಗಿರುವುದು. ಆದರೆ "ದೇಹಕ್ಕಿಂತಲೂ ಆತ್ಮವು ಬೇರೆಯಾಗಿದ್ದಪಕ್ಷ ದಲ್ಲಿ, ದೇಹಮೂಲಕಗಳಾದ ಹುಟ್ಟು, ಸಾವು, ಕೃಶತೆ, ಸ್ಥೂಲತೆ, ಮುಂತಾ ದ ವ್ಯವಹಾರಗಳು ಆತ್ಮಕ್ಕುಂಟಾದುದು ಹೇಗೆ?" ಎಂದು ಕೇಳುವೆಯಾ? ಕಟ್ಟಿಗೆಯಲ್ಲಿರುವ ಬೆಂಕಿಯು, ಆ ಕಟ್ಟಿಗೆಗೆ ಸಂಭವಿಸುವ ಉತ್ಪತ್ತಿ, ವಿನಾಶ, ವಕ್ರತೆ, ಮುಂತಾದ ವಿಕಾರಗಳನ್ನು ತನ್ನಲ್ಲಿ ತೋರಿಸುವಂತೆ, ದೇಹಕ್ಕಿಂ ತಲೂ ಭಿನ್ನನಾದ ಆತ್ಮನೂಕೂಡ, ಆ ದೇಹದಲ್ಲಿದ್ದಾಗ, ಅನಾದಿಯಾಗಿ ಅನುಸರಿಸಿಬಂದ ಅಜ್ಞಾನದಿಂದ, ಆ ದೇಹದ ಗುಣಗಳನ್ನೇ ತನ್ನಲ್ಲಿ ಅನುಸಂ

ಥಿಸುವನೇಹೊರತು, ವಾಸ್ತವದಲ್ಲಿ ಈ ಗುಣಭೇದಗಳು ಆತ್ಮನಿಗೆ ಸಂಬಂಧಿಸಿದುವಲ್ಲ ಜೀವನು ಪ್ರವೇಶಿಸತಕ್ಕ ದೇಹವೆಂಬುದು, ಪ್ರಕೃತಿ ಪರಿಣಾಮರೂಪಗಳಾದ ಪೃಥಿವಿ ಮೊದಲಾದುವುಗಳಿಂದ ನಿರ್ಮಿತವಾಗಿರುವುದು. ಕೇವಲಜ್ಞಾನಸ್ವರೂಪನಾದ ಜೀವನು, ತನಗೆ ಈ ದೇಹಸಂಬಂಧವಿದ್ದಾಗ ಆ ದೇಹಗುಣಗಳನ್ನೇ ತನ್ನಲ್ಲಿ ಆರೋಪಿಸಿಕೊಳ್ಳುವನು. ಮತ್ತು ಆದೇಹವೇ ಅವನಿಗೆ ಸಂಸಾರಬಂಧಕ್ಕೂ ಮೂಲವಾಗುವುದೆಂದು ತಿಳಿ! ಆ ಸಂಸಾರಬಂಧವನ್ನು ಬಿಡಿಸುವುದಕ್ಕೆ ಪರಮಾತ್ಮೋಪಾಸನವು ಹೊರತು ಬೇರೆ ಉಪಾಯವಿಲ್ಲ. ಆದುದರಿಂದ ಸಂಸಾರಬಂಧದಿಂದ ಬಿಡುಗಡೆಹೊಂದಬೇಕೆಂದಿರುವವನು, ಆಚಾರ್ಯನಮೂಲಕವಾಗಿ ವೇದಾಂತ ವಿಚಾರವನ್ನು ತಿಳಿದು, ಅದರಿಂದ ತನ್ನ ಆತ್ಮನ, ಮತ್ತು ಆ ಆತ್ಮನಿಗೂ ಅಂತರಾತ್ಮನಾದ ಪರಮಪುರುಷನ ಸ್ವರೂಪವನ್ನು ತಿಳಿದು,ದೇಹದಲ್ಲಿಯೂ, ದೇಹಾನುಬಂಧಿಗಳಾದ ಹೆಂಡಿರುಮಕ್ಕಳಲ್ಲಿಯೂ ಮಮತೆಯನ್ನು ಕ್ರಮಕ್ರಮವಾಗಿ ತಗ್ಗಿಸುತ್ತಬರಬೇಕು. * ನಡುವೆ ಹುಲ್ಲುಕಡ್ಡಿಯನ್ನಿಟ್ಟು,ಚಕ್ಕಮುಕ್ಕಿಕಲ್ಲು (ಅರಣಿಶಿಲೆ) ಗಳನ್ನು ಹೊಡೆಯುವುದರಿಂದಲ್ಲವೇ ಬೆಂಕಿಯು ಹುಟ್ಟುವುದು? ವೇದಾಂತವಿದ್ಯೆಯನ್ನು ಸಂಪಾದಿಸಬೇಕಾದುದೂ ಹೀಗೆಯೇ! ಆಚಾರ್ಯನೇ ಮೇಲಿನ ಕಲ್ಲು! ಶಿಷ್ಯನೇ ಕೆಳಗಿನ ಕಲ್ಲು! ಇವರಿಬ್ಬರಲ್ಲಿ ನಡೆಯುವ ವೇದಾಂತಾರ್ಥವಿಚಾರವೇ ಆ ಅರಣಿಗಳನಡುವೆ ಇಟ್ಟ ಕಾಷ್ಠವು. ಆ ವಿಚಾರದಿಂದ ಪಡೆದ ಬ್ರಹ್ಮಜ್ಞಾನವನ್ನೇ ಆ ಅರಣಿಶಿಲೆಗಳಿಂದ ಹುಟ್ಟುವ ಪರಿಶುದ್ಧವಾದ ಅಗ್ನಿಯಂತೆ ತಿಳಿಯಬೇಕು. ಹೀಗೆ ಸಂಪಾದಿಸಿದ ಜ್ಞಾನವೇ ಮಾಯಾಗುಣಜನ್ಯವಾದ ಸಂಸಾರವನ್ನು ನೀಗಿಸತಕ್ಕುದೆಂದು ತಿಳಿ! ಮತ್ತು ಅಗ್ನಿಯು, ತನಗೆ ಸನ್ನಿಹಿತವಾದುದನ್ನೆಲ್ಲಾ ದಹಿಸುವಂತೆ, ಹಿಂದೆ ಹೇಳಿದಂತೆ ಸಂಪಾದಿಸಿದ ವಿದ್ಯೆಯು, ತನಗೆ ಸಂಸಾರವನ್ನು ಕಟ್ಟಿಡುವುದಕ್ಕೆ ಕಾರಣವೆನಿಸಿಕೊಂಡ ಮಾಯಾ

---

* ಇಲ್ಲಿ "ಆಚಾರ್ಯ: ಪೂರ್ವರೂಪಂ. ಅಂತೇವಾಸ್ಯುತ್ತರರೂಪಂ, ವಿದ್ಯಾ ಸಂಧಿ:, ಪ್ರವಚನಗ್ಂಸಂಧಾನಂ" ಎಂಬ ಶ್ರುತ್ಯರ್ಥಕ್ಕೆ ಅನುಗುಣವಾಗಿ ಹೇಳಿರುವಂತೆ ತಿಳಿಯಬೇಕು.

ಗುಣಗಳನ್ನೂ, ಆ ಮಾಯಾಗುಣಗಳ ಮೂಲಕವಾದ ಕರ್ಮಗಳನ್ನೂ ದಹಿಸಿ, *ಕೊನೆಗೆ ಕಟ್ಟಿಗೆಯಿಲ್ಲದಿದ್ದಾಗ ಬೆಂಕಿಯು ತನಗೆ ತಾನೇ ನಂದಿಹೋಗುವಂತೆ, ಮುಕ್ತ್ಯುಪಾಯಭೂತವಾದ ಆ ಬುದ್ಧಿಯೂ ತಾನೇ ಶಾಂತವಾಗಿ ಹೋಗುವುದು. ಉದ್ಧವಾ! ಪ್ರವೃತ್ತಿಕರ್ಮವನ್ನು ತ್ಯಜಿಸಬೇಕೆಂಬ ವಿಚಾರದಲ್ಲಿ ನಿನಗೆ ಒಂದು ಶಂಕೆಯುಂಟಾಗಬಹುದು. ಏನೆಂದರೆ, ಕರ್ಮಗಳನ್ನು ನಡೆಸುವುದಕ್ಕೂ, ಆ ಕರ್ಮಫಲಗಳನ್ನನುಭವಿಸುವುದಕ್ಕೂ ಆಶ್ರಯಗಳಾದ ದೇವಮನುಷ್ಯಾದ್ಯಾಕಾರಗಳೂ, ಅವುಗಳಿಗೆ ಬೇಕಾದ ದೇಶಕಾಲಗಳೂ, ಕರ್ಮಸಾಧನೋಪಾಯಗಳನ್ನು ಉಪದೇಶಿಸತಕ್ಕ ವೇದಗಳೂ, ಕರ್ಮಫಲಾನುಭವವನ್ನು ಮಾಡತಕ್ಕ ಜೀವಾತ್ಮನೂ, ಅವನು ಅನುಭವಿಸತಕ್ಕ ಶಬ್ದಾದಿವಿಷಯಗಳೂ, ಇವೆಲ್ಲವೂ ನಾನಾವಿಧಗಳಾಗಿದ್ದರೂ ಅನಿತ್ಯಗಳೆಂದು ಹೇಳುವುದಕ್ಕಿಲ್ಲ! ಜೀವಾತ್ಮಗಳಲ್ಲಿ ನಾನಾತ್ವವಿದ್ದರೂ ಅವು ನಿತ್ಯವೆನಿಸಿರುವಂತೆ ಇವೂ ನಿತ್ಯಗಳೇ! ಮತ್ತು ಉತ್ಪತ್ತಿಯಿದ್ದಾಗಲೇ ವಿನಾಶವು. ದೇಶಕಾಲಾದಿಗಳಿಗೆ ಉತ್ಪತ್ತಿಯಿಲ್ಲದುದರಿಂದ ವಿನಾಶವೂ ಇಲ್ಲ ಆದುದರಿಂದ ಅವೂ ನಿತ್ಯಗಳೇ ಆಗಿರುವುವು. ಇದಲ್ಲದೆ ಆಯಾದೇವಾದ್ಯಾಕಾರಗಳೂ, ಶಬ್ದಾದಿವಿಷಯಗಳೂ ಆಗಾಗ್ಗೆ ಅನಿತ್ಯವೆನಿಸಿದ್ದರೂ, ಅವುಗಳನ್ನು ಅನುಭವಿಸತಕ್ಕ ಜೀವನೂ, ಅವನಿಗುಂಟಾಗುವ ದೇಹಪರಂಪರೆಗಳೂ, ವಿಷಯಪರಂಪರೆಗಳೂ ನಿತ್ಯವಾಗಿಯೇ ಇರುವುವು. ಕರ್ಮಸಾಧನೆಗೆ ಉಪಾಯಗಳನ್ನು ನಿರೂಪಿಸತಕ್ಕ ಆಗಮಗಳೂ ನಿತ್ಯಗಳೇ! ಜೀವಗಳು ಸತ್ವಾದಿಗುಣಗಳಿಗೆ ತಕ್ಕಂತೆ ಆಕಾರಭೇದಗಳಿಂದ ಜನಿಸುವುವು. ಆ ಗುಣಗಳಿಗೆ ತಕ್ಕಂತೆ ಅವುಗಳ ಬುದ್ಧಿಯೂ, ಬೇರೆಬೇರೆಯಾಗಿ, ಆಯಾ ಸಾಧನಗಳನ್ನೂ, ಅದಕ್ಕೆ ತಕ್ಕ ಫಲಗಳನ್ನೂ, ಆಯಾದೇವತೆಗಳನ್ನೂ ಅವಲಂಬಿಸುವುದರಿಂದ ನಾನಾವಿಧವಾಗಿರುವುವು. ಹೀಗಿರುವಾಗ ಪ್ರವೃತ್ತಿಕರ್ಮಗಳನ್ನು ಬಿಡಬೇಕೆಂಬುದೇಕೆ? ಕರ್ಮಸಾಧನೆಯನ್ನೂ, ಅದಕ್ಕೆ ತಕ್ಕ ಫಲಾನುಭವವನ್ನೂ ತನಗೆ ಸಹಜವಾಗಿ ಹೊಂದಿದ ಜೀವನು, ತನಗೆ ದುಃಖಕರವೆಂದು ತೋರಿದ

---

* ಇದರಿಂದ ಆತ್ಮನಿಗೆ ಮುಕ್ತಿದಶೆಯಲ್ಲಿ, ಆ ಮುಕ್ತಿಗೆ ಉಪಾಯಭೂತವಾದ ಬುದ್ಧಿಯೂ ಶಾಂತವಾಗುವುದೆಂದು ಗ್ರಾಹ್ಯವು.

ಕರ್ಮಗಳನ್ನು ಬಿಟ್ಟು, ಅನುಕೂಲವೆಂದು ತೋರಿದ ಕರ್ಮಗಳನ್ನೇ ನಡೆಸಬಾರದೆ? ಪ್ರವೃತ್ತಿಕರ್ಮವು ಪುರುಷಾರ್ಥಸಾಧನವೇ ಎಂದು ತೋರಿದಾಗ ಅದನ್ನು ಬಿಡುವುದೇಕೆ ?" ಎಂದು ನೀನು ಆಕ್ಷೇಪಿಸಬಹುದು. ಉದ್ಧವಾ ! ಪ್ರವೃತ್ತಿಕರ್ಮವು ಮನುಷ್ಯನಿಗೆ ಪುರುಷಾರ್ಥಸಾಧನವೆಂಬುದನ್ನು ಒಪ್ಪುವಹಾಗಿದ್ದರೂ, ಅದು ಕಾಲವಿಭಾಗದಿಂದುಂಟಾದ ದೇಹಸಂಬಂಧದಿಂದ, ಆಗಾಗ ಜನ್ಮ ಜರಾ ಮರಣಾದಿ ಕ್ಲೇಶಗಳನ್ನುಂಟುಮಾಡುತ್ತಲೇ ಇರುವುದು. ಆದುದರಿಂದ ಅದರಲ್ಲಿ ದುಃಖವು ತಪ್ಪಿದುದಲ್ಲ. ಮತ್ತು ಪ್ರವೃತ್ತಿಕರ್ಮವು ಪುರುಷಾರ್ಥಸಾಧಕವಾಗಿದ್ದರೂ, ರಜಸ್ತಮೋಗುಣಗಳನ್ನೇ ಅನುಸರಿಸುತ್ತಿರುವ ಆ ಪ್ರವೃತ್ತಿಕರ್ಮಗಳನ್ನು ನಡೆಸುತ್ತ, ಅದರಿಂದ ಸುಖದುಃಖಗಳನ್ನನುಭವಿಸುವವನು, ಕರ್ಮಕ್ಕೆ ಕಟ್ಟುಬಿದ್ದವನಾದುದರಿಂದ, ಅವನಿಗೆ ಸ್ವಾತಂತ್ರ್ಯವಿಲ್ಲ. ಆ ಕರ್ಮವು ಸುಖದೊಡನೆ ದುಃಖವನ್ನೂ ತಂದಿಡುವುದು. ಹಾಗಿಲ್ಲದಪಕ್ಷದಲ್ಲಿ ಎಲ್ಲರೂ ತಮ್ಮ ಹಿತೋದ್ದೇಶದಿಂದಲೇ ಕರ್ಮವನ್ನು ನಡೆಸತಕ್ಕವರಾದುದರಿಂದ, ಲೋಕದಲ್ಲಿ ಯಾರಿಗೂ ದುಃಖವೆಂಬುದೇ ಉಂಟಾಗುವುದಕ್ಕೆ ಅವಕಾಶವಿಲ್ಲವಲ್ಲವೆ ? ಆದುದರಿಂದ ಹೀಗೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು, ಶಬ್ದಾದಿವಿಷಯಗಳನ್ನನುಭವಿಸುವುದಕ್ಕೆ ಯಾವನು ತಾನೇ ಬಯಸುವನು? ಆದರೆ ಬುದ್ಧಿಶಾಲಿಗಳಾದವರು ತಮಗೆ ಯಾವಾಗಲೂ ಸುಖಹೇತುವಾದ ಕರ್ಮಗಳನ್ನೇ ನಡೆಸಬಹುದಲ್ಲವೆ?" ಎಂದರೆ, ಉದ್ಧವಾ! ಬಳ್ಳೇವಿದ್ವಾಂಸರಿಗಾದರೂ ಕರ್ಮಾಚರಣೆಯಲ್ಲಿ ಸುಖವಿರದು. ಏಕೆಂದರೆ, ಮೊದಲು ಕರ್ಮಗಳನ್ನು ನಡೆಸುವುದಕ್ಕಾಗಿ ಎಷ್ಟೋ ಶ್ರಮಪಡಬೇಕಾಗುವುದು. ಫಲಾನುಭವಕಾಲದಲ್ಲಿಯೂ ಅವರಿಗೆ, ಕರ್ಮಫಲವು ತೀರಿದಮೇಲೆ ಅಧೋಗತಿಗೆ ಹೋಗಬೇಕಾಗುವುದೆಂಬ ಭಯವಿದ್ದೇ ಇರುವುದು. ಇದೊಂದನ್ನೂ ಯೋಚಿಸದೆ ತಾವು ಕರ್ಮನಿಪುಣರೆಂದೂ, ಅದರಿಂದ ತಾವು ಯಾವಾಗಲೂ ಸುಖಿಗಳೆಂದೂ ಹೆಮ್ಮೆಗೊಂಡಿರುವುದು ವೃಥಾಭಿಮಾನಮಾತ್ರವಲ್ಲದೆ ಬೇರೆಯಲ್ಲ. ಅಂತವರನ್ನು ಮೂಢರೆಂದೇ ತಿಳಿಯಬೇಕು. ಕೆಲವು ವಿದ್ವಾಂಸರು ಕರ್ಮಗಳಲ್ಲಿ ದುಃಖನಿವೃತ್ತಿಗೂ, ಸುಖಪ್ರಾಪ್ತಿಗೂ ಉಪಾಯಭೂತಗಳಾದುವೆಂಬುದನ್ನು ತಿಳಿದಿರಬಹು

ದಾದರೂ, ಮೃತ್ಯುವನ್ನು ಜಯಿಸುವುದಕ್ಕೆ ಯಾವುದು ಕಾರಣವೋ, ಅಂತಹ ಮೋಕ್ಷೋಪಾಯವನ್ನು ಮಾತ್ರ ತಿಳಿಯಲಾರರು. "ಅಂತವರು ತಾವು ಜೀವಿಸಿರುವವರೆಗಾದರೂ ಸತ್ಕರ್ಮಾಚರಣೆಯಿಂದ ಅದಕ್ಕೆ ಫಲರೂಪವಾದ ಭೋಗಗಳನ್ನನುಭವಿಸುತ್ತ ಸುಖದಿಂದಿರಬಹುದಲ್ಲವೆ ?" ಎಂದರೆ, ಹುಟ್ಟಿದ ಮೇಲೆ ಮೃತ್ಯುವು ಅವರ ಬೆನ್ನಮೇಲೆಯೇ ಕಾದಿದ್ದು, ಅವರನ್ನು ಕಬಳಿಸುವುದಕ್ಕಾಗಿ ನಿರೀಕ್ಷಿಸುತ್ತಿರುವಾಗ, ನಡುವೆ ಅವರಿಗೆ ಆ ಅರ್ಥಕಾಮಗಳಿಂದುಂಟಾಗತಕ್ಕ ಸುಖವೊಂದು ಸುಖವೆನಿಸುವುದೆ ? ಅಪರಾಧಿಯನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವಾಗ, ಅವನಿಗೆ ಎಷ್ಟೇ ಅಲಂಕಾರವನ್ನು ಮಾಡಿದರೂ, ರಸವತ್ತಾದ ಭಕ್ಷ್ಯಭೋಜ್ಯಗಳನ್ನು ತಂದುಮುಂದಿಟ್ಟರೂ ಅವನಿಗೆ ತುಷ್ಟಿಯುಂಟಾಗುವುದೆ ? ಕಾಮ್ಯಕರ್ಮಗಳಿಗೆ ಶ್ರುತಿಗಳಲ್ಲಿ ಹೇಳಿರುವ ಲೌಕಿಕಫಲಗಳೂ, ಸ್ವರ್ಗಾದಿಭೋಗಗಳೂ ಕೈಗೂಡಿ ಬರಬೇಕಾದರೂ, ನಡುವೆ ಪರಸ್ಪರಸ್ಪರ್ಧೆ, ಅಸೂಯೆ, ಆಯಾಕರ್ಮಗಳಲ್ಲಿ ಹೆಚ್ಚು ಕಡಿಮೆ, ಮುಂತಾಗಿ ಎಷ್ಟೋ ವಿಘ್ನಪರಂಪರೆಗಳುಂಟು. ಬಹುಕಾಲದಿಂದ ಪ್ರಯತ್ನಪಟ್ಟು ನಡೆಸಿದ ವ್ಯವಸಾಯವು, ವಿಘ್ನಗಳಿಂದ ನಿಷ್ಫಲವಾಗುವಂತೆ, ಶ್ರಮಪಟ್ಟು ನಡೆಸಿದ ಕರ್ಮಗಳೂ ಆಗಾಗ ವಿಘ್ನಗಳಿಂದ ಪ್ರತಿಹತವಾಗುವುವು. ಒಂದುವೇಳೆ ಅಂತಹ ವಿಘ್ನಗಳೊಂದಕ್ಕೂ ಅವಕಾಶಕೊಡದೆ ಆಯಾಕರ್ಮಗಳನ್ನು ಎಚ್ಚರಿಕೆಯಿಂದ ನಡೆಸಿಕೊಂಡುಬಂದರೂ, ಅದರಿಂದ ಲಭಿಸಬಹುದಾದ ಭೋಗವೂ ಸ್ಥಿರವಲ್ಲ. ಇದೇಸಂದರ್ಭದಲ್ಲಿ ಆ ಕರ್ಮಗಳಿಂದ ಲಭಿಸಬಹುದಾದ ಫಲವೇನೆಂಬುದನ್ನೂ ಸಂಕ್ಷೇಪವಾಗಿ ವಿವರಿಸುವೆನು ಕೇಳು ಯಜ್ಞಶೀಲನಾದವನು, ಯಜ್ಞಗಳಿಂದ ಇಂದ್ರಾದಿದೇವತೆಗಳನ್ನು ಕ್ರಮವಾಗಿ ಆರಾಧಿಸಿದಪಕ್ಷದಲ್ಲಿ, ಸ್ವರ್ಗಲೋಕವನ್ನು ಸೇರುವನು. ಅಲ್ಲಿ ತನ್ನ ಕರ್ಮಗಳಿಗೆ ಫಲವಾಗಿ ಇಂದ್ರಾದಿದೇವತೆಗಳೊಡನೆ ಸೇರಿ, ಅವರಿಗೆ ಸಮಾನವಾಗಿ ದಿವ್ಯಭೋಗಗಳನ್ನನುಭವಿಸುವನು. ನಿರ್ಮಲವಾದ ವಿಮಾನದಲ್ಲಿ ಅಪ್ಸರಸ್ತ್ರೀಯರನಡುವೆ ಕುಳಿತು, ದಿವ್ಯವೇಷದಿಂದೊಪ್ಪುತ್ತ, ಅವರಿಂದ ನಾನಾವಿಧವಾಗಿ ಉಪಚರಿಸಲ್ಪಡುವನು. ಗಂಧರ್ವರು ಸುತ್ತಲೂ ಸೇರಿ ಅವನ ಮನಸ್ಸಂತೋಷವಾಗುವಂತೆ ದಿವ್ಯಗಾನಗಳನ್ನು ಮಾಡುವರು.

ಕಿರುಗೆಜ್ಜೆಗಳ ಗಲ್ಗಲಧ್ವನಿಯಿಂದ ಕೂಡಿದ ಕಾಮಗಮನವುಳ್ಳ ವಿಮಾನದಲ್ಲಿ ಕುಳಿತು, ದೇವಸ್ತ್ರೀಯರ ವಿಹಾರಸ್ಥಾನಗಳಾದ ಉದ್ಯಾನಗಳಲ್ಲಿಯೂ, ಮೇರುಪರ್ವತದ ತಪ್ಪಲುಗಳಲ್ಲಿಯೂ ಯಥೇಚ್ಛವಾಗಿ ವಿಹರಿಸುತ್ತಿರುವನು. ಹೀಗೆ ಆನಂದಸಾಗರದಲ್ಲಿ ಮುಳುಗಿರುವುದರಿಂದ, ಮುಂದೆ ತನ್ನ ಪುಣ್ಯಕ್ಷಯವಾದಮೇಲೆ ತಾನು ತಿರುಗಿ ಕೆಳಗೆ ಬೀಳಬೇಕಾಗುವುದೆಂಬುದನ್ನೂ ತಿಳಿಯಲಾರದೆ, ತನ್ನ ಪುಣ್ಯಕ್ಷಯವಾಗುವವರೆಗೂ ಹಾಗೆಯೇ ಸಂತೋಷಪರವಶನಾಗಿರುವನು. ಕೊನೆಗೆ ತಾನು ಗಳಿಸಿದ ಪುಣ್ಯಫಲವು ತೀರಿವೊಡನೆ, ತಾನು ಆ ದಿವ್ಯಭೋಗಗಳನ್ನು ಬಿಟ್ಟು ಬರಲಾರದಿದ್ದರೂ, ಕಾಲದಿಂದೆಳೆಯಲ್ಪಟ್ಟು, ಅಲ್ಲಿಂದ ಕದಲಿ ಕೆಳಗೆ ಬೀಳುವನು. ಉದ್ಧವಾ! ಈ ಅಲ್ಪಕಾಲಸುಖದಿಂದ ಯಾವ ಪುರುಷಾರ್ಥವನ್ನು ಪಡೆದಂತಾಯಿತು ನೋಡು! ಸತ್ಕರ್ಮಗಳನ್ನು ನಡೆಸಿದವರ ಅವಸ್ಥೆಯೇ ಹೀಗಿರುವಾಗ, ಇನ್ನು ಪಾಪಕರ್ಮಗಳ ಫಲವನ್ನು ಹೇಳಬೇಕಾದುದೇನು? ಅಸಜ್ಜನರ ಸಹವಾಸದಲ್ಲಿ ಬಿದ್ದು, ಅಧರ್ಮಗಳನ್ನಾಚರಿಸುವವನೂ, ಇಂದ್ರಿಯಗಳನ್ನು ಜಯಿಸಲಾರದೆ ಶಬ್ದಾದಿಭೋಗಗಳಲ್ಲಿಯೇ ಆಸಕ್ತನಾದವನೂ, ಕೃಪಣನೂ, ಲುಬ್ಧನೂ, ಸ್ತ್ರೀಲೋಲನೂ, ಪ್ರಾಣಿಹಿಂಸಕನೂ, ಶಾಸ್ತ್ರವಿಧಿಗೆ ವಿರುದ್ಧವಾಗಿ ಪಶುವಧವನ್ನು ಮಾಡತಕ್ಕವನೂ, ಧನಾದಿಲೋಭದಿಂದ ಭೂತಪ್ರೇತಾದಿಗಳನ್ನು ಪೂಜಿಸತಕ್ಕವನೂ, ತನ್ನ ದುಷ್ಕರ್ಮಗಳಿಗೆ ಫಲವಾಗಿ ಅನೇಕನರಕಗಳಲ್ಲಿ ಬಿದ್ದು, ಕೊನೆಗೆ ಮಹಾತಮಸ್ಸಿನಿಂದ ತುಂಬಿದ ಸ್ಥಾವರಜನ್ಮವನ್ನು ಹೊಂದುವನು. ಆದುದರಿಂದ ಓ ಉದ್ಧವಾ! ಸತ್ಕರ್ಮಗಳಾಗಲಿ, ದುಷ್ಕರ್ಮಗಳಾಗಲಿ, ಹೇಗಿದ್ದರೂ ಅವು ಕೊನೆಗೆ ದುಃಖವನ್ನೇ ತಂದಿಡುವುವು. ದುರ್ಲಭವಾದ ಮನುಷ್ಯಜನ್ಮವನ್ನೆತ್ತಿಯೂ, ಕರ್ಮಗಳನ್ನಾಚರಿಸುವುದರಿಂದ, ಆ ಕರ್ಮಫಲವನ್ನನುಭವಿಸುವುದಕ್ಕಾಗಿ ಮುಂದೆ ಬೇರೊಂದು ಜನ್ಮವನ್ನೆತ್ತದೆ ತೀರದು. ಹೀಗಿರುವುದರಿಂದ ಮರಣಶೀಲವಾದ ಜನ್ಮವನ್ನು ಹೊಂದತಕ್ಕವನಿಗೆ ಎಂದಿದ್ದರೂ ಸುಖವಿಲ್ಲ! ಪ್ರಳಯಾಂತವಾಗಿ ಬಹುಕಾಲದವರೆಗೆ ಜೀವಿಸುವ ಲೋಕಪಾಲಕರಿಗಾಗಲಿ, ಅದಕ್ಕಿಂತಲೂ ಮೇಲೆ ದ್ವಿಪರಾರ್ಧಕಾಲದವರೆಗೆ ಜೀವಿಸುವ ಚತುರ್ಮುಖಬ್ರಹ್ಮನಿಗಾಗಲಿ, ಕಾಲರೂಪಿಯಾದ

ನನ್ನಿಂದ ಭಯವು ತಪ್ಪದು. ಈ ಲೋಕಪಾಲಾದಿಗಳೆಲ್ಲರೂ ಕೆಲವುಕಾಲದ ವರೆಗೆ ಉತ್ತಮಭೋಗದಲ್ಲಿದ್ದರೂ, ಅವರೂ ಕಾಲವಶರಾಗಿ, ತಮ್ಮ ಪದವಿ ಯಿಂದ ಕದಲಬೇಕಾಗಿಯೇ ಇರುವುದರಿಂದ, ಅವರಿಗೂ ನಿರ್ಭಯವಾದ ಸುಖವಿಲ್ಲ! ಮುಖ್ಯವಾಗಿ ಆತ್ಮನು ದೇಹಕ್ಕಿಂತಲೂ ಭಿನ್ನನು! ಕೇವಲ ಜ್ಞಾನೈಕಸ್ವರೂಪನು! ಕರ್ಮರಹಿತನು!ಹಾಗಿದ್ದರೂ,ಪ್ರಕೃತಿಗುಣಗಳು ತಮ ತಮಗೆ ಅನುಗುಣಗಳಾದ ಕರ್ಮವಾಸನೆಯಿಂದ ಅವನಿಗೆ ದೇಹಸಂಬಂಧ ವನ್ನುಂಟುಮಾಡಿ, ಆ ಮೂಲಕವಾಗಿ ಕರ್ಮಗಳನ್ನು ಮಾಡಿಸುವುವು. ಹಾಗೆಯೇ ಗುಣಪರಿಣಾಮಾತ್ಮಕವಾದ ಆ ದೇಹವೂಕೂಡ,ಆಯಾಗುಣಗಳ ನ್ನನುಸರಿಸಿ ಕರ್ಮಗಳನ್ನು ಹುಟ್ಟಿಸುವುದು. ಹೀಗೆ ಪ್ರಾಕೃತಗುಣಗಳೊಡ ಗೂಡಿ ಅವುಗಳಿಗೆ ವಶ್ಯನಾದ ಜೀವನು, ಆ ಗುಣಗಳಿಂದಲೂ, ಅದರಿಂದ ತನಗೆ ತಗುಲಿಕಟ್ಟಿದ ದೇಹದಿಂದಲೂ ಕರ್ಮಗಳನ್ನು ನಡೆಸಿ, ಆಯಾಕರ್ಮಗ ಳಿಗೆ ಫಲವಾದ ಸುಖದುಃಖಗಳನ್ನು ತಾನು ಅನುಭವಿಸುವನು. ಪ್ರಾಣಿಗಳಿಗೆ ಕಾಲಾತ್ಮಕನಾದ ನನ್ನಿಂದ ಈ ಭಯವು ಎಲ್ಲಿಯವರೆಗೆ ಅನುಸರಿಸಿ ಬರುವು ದೆಂದು ಕೇಳುವೆಯಾ? ಎಷ್ಟರವರೆಗೆ ಸತ್ವಾದಿಪ್ರಾಕೃತಗುಣಗಳಲ್ಲಿ ತಾರತ ಮ್ಯವುಂಟಾಗುತ್ತಿರುವುದೋ,ಅಷ್ಟರವರೆಗೆ ಆತ್ಮನಿಗೆ ದೇವಮನುಷ್ಯಾದಿ ದೇ ಹಪ್ರಯುಕ್ತವಾದ ನಾನಾತ್ವವು, ಎಂದರೆ ದೇಹಸಂಬಂಧವಿದ್ದೇ ಇರುವು ದು.ಆ ದೇಹಸಂಬಂಧವು ಅನುಸರಿಸಿಬರುವವರೆಗೆ ಜೀವನಿಗೆ ಪಾರತಂತ್ರ್ಯವೂ ಏರ್ಪಟ್ಟಿರುವುದು. ಎಂದರೆ ಜೀವನು ಕರ್ಮವಶ್ಯನಾಗಿರುವನು. ಆ ಪಾರ ತಂತ್ರ್ಯವಿರುವವರೆಗೆ ಕಾಲರೂಪನಾದ ನನ್ನಿಂದ ಭಯವೂ ಇದ್ದೇ ಇರು ವುದು. ಮುಖ್ಯವಾಗಿ ಪ್ರಕೃತಿಗುಣಪರಿಣಾಮರೂಪವಾದ ಈ ಶರೀರವನ್ನೇ ತಾನೆಂದು ಭ್ರಮಿಸಿ ಅಭಿಮಾನಿಸುವವರೂ, ಮತ್ತು ಅದರ ಸುಖ ಕ್ಕಾಗಿ ಯತ್ನಿಸುವವರೂ ಯಾವಾಗಲೂ ದುಃಖಕ್ಕೊಳಗಾಗಿಯೇ ಇದ್ದು,ತಮ್ಮ ಶ್ರೇಯಸ್ಸಿಗೆ ದಾರಿಯನ್ನು ಕಾಣದೆ ಕಳವಳಿಸುವರು. ಆದುದ ರಿಂದ ದೇಹೋಪಾಸನೆಯನ್ನು ಬಿಟ್ಟು ಪರಮಾತ್ಮೋಪಾಸನೆಯನ್ನು ಮಾಡುವುದೊಂದೇ ನಿರ್ಭಯವಾದ ಮಾರ್ಗವು. ಆದರೆ, ಕಾಲದೇಶಸ್ವಭಾ ವಾದಿಗಳು ಪ್ರತಿಕೂಲವಾಗಿರುವುದೇ ಭಯಕಾರಣವೆಂದು ಕೆಲವರು ತಿಳಿಯು

ವರು. ಸೃಷ್ಟಿದಶೆಯಲ್ಲಿ ಸುಖದುಃಖಗಳಿಗೆ ಕಾರಣಗಳೆಂದು ಹೇಳಿಸಿಕೊ ಳ್ಳುವ, ಕಾಲ, ದೇಶ, ಸ್ವಭಾವ, ಶರೀರ, ವಿಧಿನಿಷೇಧರೂಪವಾದ ಶಾಸ್ತ್ರ ಗಳು, ಈ ಮೊದಲಾದುವುಗಳೆಲ್ಲಾ, ಸರ್ವೇಶ್ವರನಾದ ನನ್ನ ಅಧೀನಗಳಾಗಿರು ವುವೇಹೊರತು ಬೇರೆಯಲ್ಲ! ಅವೆಲ್ಲವೂ ನಾನೇ ಎಂದು ತಿಳಿ" ಎಂದನು.

ಈನಡುವೆ ಉದ್ಧವನು ತಿರುಗಿ ಕೃಷ್ಣನನ್ನು ಕುರಿತು ಪ್ರಶ್ನೆಮಾಡು ವನು "ಓ ಪ್ರಭೂ! ಜೀವನಾದರೋ ಪ್ರಕೃತಿಗುಣಪರಿಣಾಮರೂಪಗಳಾದ ದೇಹದಲ್ಲಿಯೇ ಸೇರಿರತಕ್ಕವನು. ಅದೇ ಗುಣಜನ್ಯಗಳಾದ ಶಬ್ದಾದಿವಿಷಯಗ ಳನ್ನೂ ಅನುಭವಿಸತಕ್ಕವನು. ಆ ಗುಣಮೂಲಕಗಳಾದ ಕರ್ಮಗಳಿಗೂ ಕರ್ತ ನಾಗಿರುವನು. ಹೀಗೆ ಜೀವನು ಸತ್ವಾದಿಗುಣಗಳಲ್ಲಿಯೇ ಮರೆಸಲ್ಪಟ್ಟಿರು ವಾಗ, ಎಷ್ಟೇ ತತ್ವಜ್ಞಾನವಿದ್ದರೂ ಆ ಗುಣಗಳಿಂದ ಮುಕ್ತನಾಗು ವುದು ಹೇಗೆ? ಅಥವಾ ಈಶ್ವರನಂತೆಯೇ ಅವನೂ ಸ್ವಯಂಪ್ರಕಾಶವುಳ್ಳವ ನಾಗಿದ್ದಮೇಲೆ, ಇವನುಮಾತ್ರ ಆ ಗುಣಗಳಿಂದ ಬದ್ಧನಾಗುವುದು ಹೇಗೆ? ಆದುದರಿಂದ ಜೀವನಿಗೆ ಬಂಧಮೋಕ್ಷಗಳೆರಡೂ ಅಸಂಭವವೆಂದೇ ನನಗೆ ತೋರುವುದು. ಮೋಕ್ಷೋಪಾಯಭೂತವಾದ ನಿಪುಣಬುದ್ಧಿ ಯುಳ್ಳ ವಿದ್ವಾಂಸನು ಹೇಗೆ ನಡೆಯಬೇಕು? ಅತನಿಗೆ ತನ್ನ ದೇಹಪೋಷಣ ಕ್ಕಾಗಿ ನಿದ್ರಾಹಾರಗಳುಂಟೇ ಅಥವಾ ಇಲ್ಲವೆ? ಅಂತವನಲ್ಲಿ ಕಾಣಬಹು ದಾದ ಲಕ್ಷಣಗಳೇನು? ಅವನು ಸುಮ್ಮನೆ ಕುಳಿತಿರುವನೆ? ಸಂಚರಿಸು ತ್ತಿರುವನೆ? ಅವನ ನಡತೆಯೆಂತದು! ಈ ನನ್ನ ಪ್ರಶ್ನೆಗೆ ಸಮಾಧಾನವನ್ನು ಹೇಳಬೇಕು. ನಿತ್ಯಮುಕ್ತನಾದ ಈಶ್ವರನೊಬ್ಬನೇ ತನ್ನ ಅವಿದ್ಯೆಯಿಂದ ನಿತ್ಯಬದ್ಧನಾಗುವನೆಂದು ನನಗೆ ಭ್ರಮವುಂಟಾಗಿರುವುದು. ಈ ಭ್ರಮ ವನ್ನು ಪರಿಹರಿಸಬೇಕು" ಎಂದನು. ಇದು ಹತ್ತನೆಯ ಅಧ್ಯಾಯವು.

---

## ಜೀವಾತ್ಮ ಪರಮಾತ್ಮ ಸ್ವರೂಪವು.

ಅದಕ್ಕೆ ಕೃಷ್ಣನು ಉದ್ಧವನನ್ನು ಕುರಿತು "ಉದ್ಧವಾ! ಕೇಳು! ಪ್ರಕೃತಿಗುಣಗಳಿಂದಲೂ, ತನ್ಮೂಲಕವಾದ ಕರ್ಮಗಳಿಂದಲೂ ನನ್ನನ್ನೇ, ಬದ್ಧನೆಂದೂ, ಮುಕ್ತನೆಂದೂ ಹೇಳುವುದು ಭ್ರಮವೇಹೊರತು

ನಿರ್ದೋಷನಾದ ನನ್ನಲ್ಲಿ ಅದು ವಾಸ್ತವವಲ್ಲ. ಏಕೆಂದರೆ, ಮಾಯೆಯೆಂಬ ಪ್ರಕೃತಿಯು ನನ್ನ ನಿಯಮಕ್ಕೇ ಒಳಪಟ್ಟಿರುವುದರಿಂದ,ಆ ಮಾಯಾಗುಣಗಳು ನನ್ನನ್ನು ಕಟ್ಟಿಡಲಾರವು. ನನ್ನ ನಿಯಮಕ್ಕೊಳಪಟ್ಟ ಆ ಮಾಯೆಯಿಂದಲೇ ಜೀವನಿಗೆ, ಶೋಕ, ಮೋಹ, ಸುಖ, ದುಃಖಾದಿಗಳೂ ದೇಹಪ್ರಾಪ್ತಿಯೂ ಸಂಭವಿಸುವುವು. ಆದರೆ ಸ್ವಪ್ನದಲ್ಲಿ ಆತ್ಮನಿಗೆ ದೇಹಸಂಬಂಧವಿಲ್ಲದ ಸುಖದುಃಖಗಳು ತೋರುವಂತೆ, ಆದೂಕೂಡ, ಆಗಂತುಕವಾಗಿ ಸಂಭವಿಸುವುದೇಹೊರತು, ಆ ಸಂಸಾರವು ಆತ್ಮನಿಗೆ ಸ್ವರೂಪಸಿದ್ಧವಾದುದೂ ಅಲ್ಲ! ನಿತ್ಯವೂಅಲ್ಲ! ಅದು ಉಪಾಧಿವಶದಿಂದ ಬಂದುದಾದುದರಿಂದ ಅನಿತ್ಯವೆನಿಸುವುದು. ಉದ್ಧವಾ! ವಿದ್ಯೆ, ಅವಿದ್ಯೆ, ಎಂಬಿವೆರಡೂ ನನಗೆ ಶರೀರಗಳೆನಿಸಿಕೊಂಡು ನನ್ನ ಅಧೀನವಾಗಿರುವುವೆಂದು ತಿಳಿ! ಆ ವಿದ್ಯಾವಿದ್ಯೆಗಳೇ ಕ್ರಮವಾಗಿ ಪ್ರಾಣಿಗಳಿಗೆ ಮೋಕ್ಷವನ್ನೂ, ಬಂಧವನ್ನೂ ಉಂಟುಮಾಡತಕ್ಕವುಗಳಾಗಿರುವುವು. ಅವು ಅನಾದಿಯಾಗಿ ಅನುಸರಿಸಿ ಬಂದರೂ, ಅವುಗಳಿಗೆ ಕೊನೆಯುಂಟು. ಅವುಗಳನ್ನು ನಾನು ನನ್ನ ಸಂಕಲ್ಪರೂಪಜ್ಞಾನದಿಂದ ನಿರ್ಮಿಸಿರುವೆನು. ವಿದ್ಯೆಯೆಂದರೆ ನನ್ನ ಉಪಾಸನವು. ಅವಿದ್ಯೆಯೆಂದರೆ ಆತ್ಮಪರಮಾತ್ಮಸ್ವರೂಪವನ್ನು ತಿಳಿಯಲಾರದ ಅಜ್ಞತೆ! ನನಗೆ ಶರೀರವೆನಿಸಿಕೊಂಡು, ನನ್ನ ಅಂಶಭೂತನಾದ ಜೀವನಿಗೆ,ಆ ಅವಿದ್ಯೆಯಿಂದ ಬಂಧವೂ, ವಿದ್ಯೆಯಿಂದ ಮೋಕ್ಷವೂ ಉಂಟಾಗುವುವು. ಬದ್ಧನಾದ ಜೀವನಿಗೂ, ನಿತ್ಯಮುಕ್ತನಾದ ಈಶ್ವರನಿಗೂ ಇರುವ ವೈಲಕ್ಷಣ್ಯವನ್ನೂ ನಿನಗೆ ತಿಳಿಸುವೆನು ಕೇಳು! ಆ ಜೀವೇಶ್ವರರಿಬ್ಬರೂ ಒಂದೇ ಶರೀರದಲ್ಲಿಯೇ ಸೇರಿರತಕ್ಕವರಾದುದರಿಂದ ಅವರನ್ನು * ಒಂದೇ ಗೂಡಿನಲ್ಲಿ

---

* ಇಲ್ಲಿ "ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ" ಎಂಬ ಶ್ರುತಿವಾಕ್ಯದ ಅರ್ಥವು ಅನುಸಂಧಿಸಲ್ಪಟ್ಟಿದೆ. "ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುರವ್ಯಯಮ್" ಎಂಬುದಾಗಿ ಪ್ರಕೃತಿಯನ್ನೇ ಅಶ್ವತ್ಥರೂಪವಾಗಿ ಹೇಳಿರುವುದರಿಂದ, ಇಲ್ಲಿ ಪಿಪ್ಪಲವೆಂದರೆ ಪ್ರಕೃತಿಯೆಂದೂ, ಅದರ ಫಲವನ್ನು ಭುಜಿಸುವುದೆಂದರೆ ಶಬ್ದಾದಿವಿಷಯಗಳನ್ನನುಭವಿಸುವುದೆಂದೂ ಗ್ರಾಹ್ಯವು.

ರುವ ಎರಡುಪಕ್ಷಿಗಳಂತೆ ಭಾವಿಸಬಹುದು. ಇವೆರಡಕ್ಕೂ ಅನೇಕವಿಧ
ದಲ್ಲಿ ಸಮಾನಗುಣಗಳಿದ್ದರೂ, ಅವೆರಡೂ ಪರಸ್ಪರ ವಿರುದ್ಧಧರ್ಮವುಳ್ಳ
ಗಳು. ಇವೆರಡೂ ಸಹಜವಾಗಿ ಅನ್ಯೋನ್ಯಸ್ನೇಹವುಳ್ಳವು. ಇವೆರಡೂ
ಶರೀರವೆಂಬ ವೃಕ್ಷದಲ್ಲಿ, ಹೃದಯಕಮಲವೆಂಬ ಗೂಡಿನಲ್ಲಿ ಸೇರಿರುವುವು.
ಅವುಗಳಲ್ಲಿ ಒಂದು ಪಕ್ಷಿಯು, ಆ ಆಲದ ಮರದಹಣ್ಣುಗಳನ್ನೇ (ಪ್ರಕೃತಿ
ಫಲರೂಪಗಳಾದ ಶಬ್ದಾದಿವಿಷಯಗಳನ್ನು) ಭುಜಿಸುತ್ತಿರುವುದು. ಮತ್ತೊಂ
ದು ಪಕ್ಷಿಯು (ಈಶ್ವರನು) ಯಾವ ಫಲವನ್ನೂ ಭುಜಿಸದಿದ್ದರೂ (ಕರ್ಮ
ಪ್ರಾಪ್ತವಾದ ಸುಖದುಃಖಾದಿಭೋಗಗಳಿಲ್ಲದಿದ್ದರೂ) ಬಲಾಧಿಕವಾಗಿ,
(ಸರ್ವಜ್ಞತ್ವ ಸರ್ವಶಕ್ತತ್ವ ಮೊದಲಾದ ವಿಶೇಷಗುಣವುಳ್ಳುದಾಗಿ) ಪ್ರಕಾ
ಶಿಸುತ್ತಿರುವುದು. ಆ ಬಲಾಧಿಕವಾದ ಪಕ್ಷಿಯು, ತನ್ನನ್ನೂ, ತಾನಿರುವ ಗೂ
ಡಿನ ಸ್ಥಿತಿಯನ್ನೂ, ತನಗೆ ಪ್ರಿಯವಾದ ಮತ್ತೊಂದುಪಕ್ಷಿಯ ಸ್ವರೂಪ
ವನ್ನೂ ಚೆನ್ನಾಗಿ ತಿಳಿಯಬಲ್ಲುದು. ಮತ್ತೊಂದು ಪಕ್ಷಿಯಾದರೋ,
ತನ್ನನ್ನೂ, ತನಗೆ ಪ್ರಿಯವಾದ ಇತರಪಕ್ಷಿಯ ಸ್ವರೂಪವನ್ನೂ ತಿಳಿಯಲಾ
ರದು. ಉದ್ಧವಾ! ಜೀವೇಶ್ವರರಿಗಿರುವ ಭೇದವು ಇಷ್ಟೇ ಅಲ್ಲ! ಜೀವನು
ದೇಹವನ್ನೇ ತಾನೆಂದು ಭ್ರಮಿಸುತ್ತ, ಅವಿದ್ಯೆಯಿಂದ ನಿತ್ಯಬದ್ಧನಾಗಿರು
ವನು. ಈಶ್ವರನು ಅಂತಹ ಅವಿದ್ಯೆಗೆ ಈಡಾಗದೆ, ಸರ್ವಜ್ಞನೆನಿಸಿರುವುದರಿಂದ
ನಿತ್ಯಮುಕ್ತನು. ನಿಪುಣಬುದ್ಧಿಯುಳ್ಳ ವಿದ್ವಾಂಸನ ವರ್ತನವು ಹೇಗಿರುವು
ದೆಂದು ಕೇಳಿದೆಯಲ್ಲವೆ? ಸ್ವಪ್ನದಿಂದೆದ್ದವನಿಗೆ, ಹಿಂದೆ ತನಗೆ ಕನಸಿನಲ್ಲಿ
ಕಾಣಿಸಿದ ಸ್ವಪ್ನಶರೀರದಲ್ಲಿ ತನ್ನದೆಂಬ ಭ್ರಾಂತಿಯು ಹೇಗೆ ಹುಟ್ಟುವು
ದಿಲ್ಲವೋ, ಹಾಗೆಯೇ ವಿದ್ವಾಂಸನು, ದೇಹದಲ್ಲಿದ್ದರೂ ಆ ದೇಹದಲ್ಲಿ ಆತ್ಮ
ಬುದ್ಧಿಯನ್ನು ಎಂದಿಗೂ ಇಡಲಾರನು. ಈ ಕಾರಣದಿಂದ ಅವನು ದೇಹ
ದಲ್ಲಿ ಸೇರಿದ್ದರೂ ಅದರಲ್ಲಿಲ್ಲದಂತೆಯೇ ಇರುವನು. ದೇಹವನ್ನೇ ಆತ್ಮವೆಂದು
ಭ್ರಮಿಸತಕ್ಕ ಕುಬುದ್ಧಿಯುಳ್ಳವನಾದರೋ, ದೇಹರಹಿತನಾಗಿದ್ದಾಗಲೂ
(ಎಂದರೆ ಗರ್ಭದಶೆಯಲ್ಲಿಯೂ, ಮತ್ತು ಮಹಾಪ್ರಳಯಾದಿಕಾಲಗಳಲ್ಲಿಯೂ,
ಅವನಿಗೆ ದೇಹವು ನಿಷ್ಪನ್ನವಾಗದಿರುವಾಗಲೂ) ಕನಸನ್ನು ಕಂಡು ಕನವ
ರಿಸುವವನಂತೆ, ದೇಹಬದ್ಧನಂತೆಯೇ ಇರುವನು. ತನ್ನ ಇಂದ್ರಿಯಗಳಿಂ

ದ ಅನುಭವಿಸುವ ಶಬ್ದಾದಿವಿಷಯಗಳು ಅನುಕೂಲವಾಗಿದ್ದರೂ, ಪ್ರತಿ ಕೂಲವಾಗಿದ್ದರೂ, ವಿದ್ವಾಂಸನಾದವನು ಅದಕ್ಕಾಗಿ ತಾನು ಹರ್ಷ, ವಿಷಾದ ಮೊದಲಾದ ವಿಕಾರಗಳನ್ನು ಹೊಂದಲಾರನು. ತಾನೇ ಕರ್ತ ನೆಂದೂ, ಭೋಕ್ತನೆಂದೂ ತಿಳಿಯಲಾರನು. ಕುಬುದ್ಧಿಯುಳ್ಳವನು ತನ್ನ ಶರೀರವು ತನಗೆ ದೈವಾಧೀನವಾಗಿ ಬಂದಿರುವುದನ್ನೂ, ತನ್ನ ಪೂರ್ವಕರ್ಮಾನು ಸಾರವಾಗಿ ತಾನು ಅದರಲ್ಲಿ ಸೇರಿರುವುದನ್ನೂ ತಿಳಿಯಲಾರದೆ, ಆ ದೇಹ ವನ್ನೇ ಆತ್ಮವೆಂದು ತಿಳಿದು, ಆ ದೇಹದಲ್ಲಿ ಮಮತೆಯಿಂದಲೂ, ತಾನೇ ಕರ್ತನೆಂದೂ, ಭೋಕ್ತೃವೆಂದೂ ದುರಭಿಮಾನದಿಂದಲೂ, ತಾನಾಗಿಯೇ ಕಟ್ಟುಬೀಳುವನು. ಇಂತವನ ಸ್ಥಿತಿಯನ್ನು ನೋಡಿಯೇ ವಿದ್ವಾಂಸನು ವಿರಕ್ತ ನಾಗಿ, ನಿದ್ರೆ, ಆಹಾರ,ವಿಹಾರ, ಸ್ನಾನ, ಶಬ್ದ ರೂಪ ರಸ ಗಂಧಸ್ಪರ್ಶಾದಿ ವಿಷಯಾನುಭವಗಳು, ಇವೇ ಮೊದಲಾದ ಕಾರ್ಯಗಳಲ್ಲಿ ಮಿತವಾಗಿ ವರ್ತಿ ಸುತ್ತ, ಆಯಾ ಕರ್ತೃತ್ವಭೋಕ್ತೃತ್ವಾದಿಗಳೆಲ್ಲವೂ ದೇಹೇಂದ್ರಿಯಾದಿಗ ಳಿಗೆ ಸೇರಿದುವೆಂಬ ಭಾವವನ್ನಿಟ್ಟು, ಅವುಗಳಿಗೆ ಬದ್ಧನಾಗದೆ ಆಗಲೂ ಮುಕ್ತನಂತೆಯೇ ಇರುವನು. ಆದರೆ “ಎಷ್ಟೇ ವಿದ್ವಾಂಸನಾಗಿದ್ದರೂ ಕರ್ಮಗಳನ್ನು ನಡೆಸುತ್ತ, ಅವುಗಳ ಫಲರೂಪವಾದ ಸುಖದುಃಖಗಳನ್ನೂ ಅನುಭವಿಸುತ್ತ, ದೇಹದಲ್ಲಿ ಸೇರಿರುವಾಗಲೂ, ಆ ಕರ್ತೃತ್ವಾದಿಗಳು ದೇಹೇಂದ್ರಿಯಗಳಿಗೆ ಸೇರಿದುವೆಂದು ನೆನೆಸಿದಮಾತ್ರಕ್ಕೆ ತಾನು ವಿಕಾರ ರಹಿತನೆಂಬುದು ಹೇಗೆ?” ಎಂದು ನೀನು ಶಂಕಿಸಬಾರದು. ಆಕಾಶವೂ, ಸೂರ್ಯಪ್ರಭೆಯೂ, ವಾಯುವೂ ಎಲ್ಲಾವಸ್ತುಗಳಲ್ಲಿಯೂ ವ್ಯಾಪಿಸಿದ್ದರೂ ಅವುಗಳ ದೋಷಕ್ಕೀಡಾಗದಂತೆ, ವಿದ್ವಾಂಸನು ಪ್ರಕೃತಿಪರಿಣಾಮರೂಪ ವಾದ ದೇಹದಲ್ಲಿ ಸೇರಿದ್ದರೂ, ಅವನಿಗೆ ಆ ಅಭಿನಿವೇಶವಿಲ್ಲದಿದ್ದಾಗ, ಅದ ರಿಂದುಂಟಾಗುವ ವಿಕಾರಕ್ಕೊಳಗಾಗಲಾರನು. ಹೀಗೆ ದೇಹದಲ್ಲಿದ್ದಾಗಲೂ, ಅದರಲ್ಲಿ ಅಭಿನಿವೇಶವಿಲ್ಲದವನಿಗೆ, ನಿಸ್ಸಂಶಯವಾದ ನಿಪುಣಬುದ್ಧಿಯುಂ ಟಾಗಿ, ಸ್ವಪ್ನದಿಂದೆದ್ದವನಿಗೆ ಸ್ವಪ್ನದೇಹದಲ್ಲಿ ಹೇಗೋಹಾಗೆ, ತನ್ನ ದೇಹ ದಲ್ಲಿ ದೇವಮನುಷ್ಯತ್ವಾದಿ ಬುದ್ಧಿಯು ಬಿಟ್ಟುಹೋಗುವುದು. ಅಂತಹ ವಿದ್ವಾಂಸನ ಲಕ್ಷಣಗಳೇನೆಂದು ಕೇಳಿದೆಯಲ್ಲವೆ? ಯಾವನಿಗೆ ಪ್ರಾಣಗಳು,

ಇಂದ್ರಿಯಗ್ಗಳು, ಮನಸ್ಸು, ಬುದ್ಧಿ, ಇವುಗಳ ವ್ಯಾಪಾರಗಳು ಯಾವುದ ರಲ್ಲಿಯೂ ಉದ್ದೇಶವಿಲ್ಲದಂತಿರುವುವೋ, ಅಂತವನನ್ನು ದೇಹದೊಡಗೂಡಿದ್ದರೂ, ಆ ದೇಹದ ಗುಣಗಳಿಂದ ಮುಕ್ತನೆಂದೇ ತಿಳಿಯಬಹುದು. ಮತ್ತು ಯಾವನು, ತನ್ನ ದೇಹವನ್ನು ದುರ್ಜನರು ಪೀಡಿಸಿದರೂ, ಸಾಧುಗಳು ಸತ್ಕರಿಸಿದರೂ ಅದರಿಂದ ತಾನು ಅಷ್ಟಾಗಿ ದುಃಖಹರ್ಷಗಳೆಂಬ ವಿಕಾರಗಳನ್ನು ಹೊಂದದಿರುವನೋ ಅಂತವನೇ ವಿದ್ವಾಂಸನು. ಮತ್ತು ಯಾವನು ಮಾನಾವಮಾನಗಳಲ್ಲಿ ಸಮಬುದ್ಧಿಯುಳ್ಳವನಾಗಿದ್ದು, ಮತ್ತೊಬ್ಬರು ತನ್ನನ್ನು ಬೈದರೂ, ಸ್ತುತಿಸಿದರೂ ನಿಂದಿಸಿದವರನ್ನು ತಾನು ನಿಂದಿಸದೆ, ಸ್ತುತಿಸಿದವರನ್ನು ಸ್ತುತಿಸದೆ, ಉದಾಸೀನನಾಗಿರುವನೋ ಆತನನ್ನು ಮುನಿಯೆಂದು ತಿಳಿಯಬೇಕು. ಯಾವನು ತನ್ನ ಆತ್ಮನಲ್ಲಿಯೇ ರಮಿಸುತ್ತ, ಒಳ್ಳೆಯದಾಗಲಿ, ಕೆಟ್ಟುದಾಗಲಿ ಲೌಕಿಕಕರ್ಮಗಳಿಗೆ ಕೈಯಿಕ್ಕದೆ, ಅವುಗಳನ್ನು ಬಾಯಿಂದಾಡದೆ, ಮನಸ್ಸಿನಿಂದಲೂ ಚಿಂತಿಸದೆ, ಕೇವಲಧ್ಯಾನಶೀಲನಾಗಿ, ದೇಹದಲ್ಲಿದ್ದರೂ ತಾನು ಅದರ ಸಂಬಂಧವಿಲ್ಲದವನಂತೆ ವರ್ತಿಸುತ್ತ, ನೋಡುವವರಿಗೆ ಜಡನಂತಿರುವನೋ ಅಂತವನೇ ಮುನಿಯೆನಿಸುವನು. ಪುರುಷನಿಗೆ ಶಾಸ್ತ್ರಜನ್ಯಜ್ಞಾನವೊಂದು, ಬ್ರಹ್ಮಜ್ಞಾನವೊಂದು, ಇವೆರಡೂ ಉಪಾದೇಯಗಳೇ! ಆದರೆ ಎಷ್ಟೇ ವೇದಶಾಸ್ತ್ರಪಾರಂಗತನಾಗಿದ್ದರೂ ಬ್ರಹ್ಮಜ್ಞಾನವನ್ನು ಪಡೆಯದಿದ್ದಮೇಲೆ, ಹಾಲಿಲ್ಲದ ಹಸುವನ್ನು ಪೋಷಿಸಿದಂತೆ ಅವನ ವೇದಾಧ್ಯಯನಕ್ಕೆಲ್ಲಾ ಕೇವಲಶ್ರಮವೇ ಫಲವೆನಿಸುವುದು. ಹಾಲಿಲ್ಲದ ಹಸು, ದುಷ್ಟೆಯಾದ ಭಾರ್ಯೆ, ಪ್ರತಿಕ್ಷಣವೂ ದುಃಖಹೇತುವಾದ ದೇಹ, ದುರ್ಮಾರ್ಗನಾದ ಮಗನು, ಸತ್ಪಾತ್ರದಲ್ಲಿ ದಾನಮಾಡದ ಹಣ, ನನ್ನನ್ನು ವಿಷಯೀಕರಿಸದ ವಾಕ್ಕು ಇವುಗಳನ್ನು ಪೋಷಿಸಿದವನಿಗೆ ದುಃಖದಮೇಲೆ ದುಃಖವೇ ಪ್ರಾಪ್ತವಾಗುವುದು. ಈ ಜಗತ್ತಿನ ಉತ್ಪತ್ತಿಸ್ಥಿತಿಲಯಗಳನ್ನು ನಿರೂಪಿಸತಕ್ಕುದಾಗಿಯೂ, ಲೋಕಪಾವನವಾಗಿಯೂ ಇರುವ ನನ್ನ ಚರಿತ್ರವನ್ನೂ, ನಾನು ಲೀಲಾರ್ಥವಾಗಿ ಕೈಕೊಂಡ ರಾಮಕೃಷ್ಣಾದ್ಯವತಾರಚರಿತ್ರಗಳನ್ನೂ ಪ್ರತಿಪಾದಿಸದ ಬೇರೆ ಮಾತುಗಳೆಲ್ಲವೂ ನಿಷ್ಫಲಗಳು. ಆದುದರಿಂದ ಬುದ್ಧಿಶಾಲಿಯಾದವನು ನನ್ನ ವಿಚಾರವನ್ನು ಬಿಟ್ಟು

ಬೇರೆ ವಿಷಯಗಳಲ್ಲಿ ತನ್ನ ವಾಕ್ಕನ್ನು ವ್ಯಯಮಾಡಬಾರದು. ಉದ್ಧವಾ! ಮೇಲೆ ಹೇಳಿದ ವಿಚಾರಗಳಿಂದ, ವಿವೇಕಿಯಾದವನು ದೇಹಕ್ಕಿಂತಲೂ ಆತ್ಮವು ಬೇರೆಂಬುದನ್ನು ತಿಳಿದು. ಅದರಿಂದ ತನ್ನಲ್ಲಿ ದೇವತ್ವ ಮನುಷ್ಯತ್ವಾದಿ ಭೇದಭ್ರಾಂತಿಯನ್ನು ನೀಗಿ, ರಜೋಗುಣರಹಿತವಾಗಿ ಕೇವಲ ಸತ್ವಮಯವಾದ ಮನಸ್ಸನ್ನು ನನ್ನಲ್ಲಿಯೇ ನೆಲೆಗೊಳಿಸಿ, ಆ ಭಕ್ತಿಸಾಧನೆಯಿಂದ ಲೌಕಿಕಕರ್ಮಗಳಲ್ಲಿ ನಿವೃತ್ತನಾಗಬೇಕು. ಉದ್ಧವಾ! ಅದರೆ ಹಾಗೆ ಮನಸ್ಸನ್ನು ಬ್ರಹ್ಮಧ್ಯಾನದಲ್ಲಿಯೇ ನಿಲ್ಲಿಸಿಡುವುದು ನಿನಗೆ ಅಸಾಧ್ಯವಾಗಿ ತೋರಿದಪಕ್ಷದಲ್ಲಿ ನೀನು ನಡೆಸತಕ್ಕ ವರ್ಣಾಶ್ರಮೋಚಿತಗಳಾದ ಸಮಸ್ತಕರ್ಮಗಳನ್ನಾದರೂ, ನನ್ನಲ್ಲಿಯೇ ಅರ್ಪಿಸುತ್ತಿರು. ಮತ್ತು ಆ ಕರ್ಮಗಳಿಗೆ ನೀನೇ ಕರ್ತನೆಂಬ ಭಾವವನ್ನೂ ಇಟ್ಟುಕೊಳ್ಳದೆ, ಅದಕ್ಕೆ ಬೇರೆ ಫಲವನ್ನೂ ಅಪೇಕ್ಷಿಸದೆ ನಡೆಸುವವನಾಗು ಮತ್ತು ಆಗಾಗ! ಶ್ರದ್ಧೆಯಿಂದ, ನನ್ನ ವಿಷಯವಾದ ಕಥೆಗಳನ್ನು ಕಿವಿಯಿಂದ ಕೇಳುತ್ತ, ಬಾಯಿಂದ ಕೀರ್ತಿಸುತ್ತ, ಮನಸ್ಸಿನಿಂದ ಸ್ಮರಿಸುತ್ತ, ನಡತೆಯಿಂದ ಅಭಿನಯಿಸುತ್ತ ಕಾಲವನ್ನು ಕಳೆಯುತ್ತಿರು. ಮತ್ತು ನನ್ನನ್ನೇ ನಂಬಿ, ಧರ್ಮಾರ್ಥಕಾಮಗಳಲ್ಲಿಯೂ ನನ್ನ ಸಂಬಂಧವುಳ್ಳದನ್ನೇ ಆಶ್ರಯಿಸು. ಆಗ ನಿನಗೆ ನಿಶ್ಚಲವಾದ ಭಕ್ತಿಯು ತಾನಾಗಿ ಹುಟ್ಟುವುದು. ನನ್ನಲ್ಲಿ ಭಕ್ತಿಯು ಹುಟ್ಟುವುದಕ್ಕೆ ಸತ್ಸಹವಾಸವೂ ಒಂದು ಮುಖ್ಯಕಾರಣವು. ಮೇಲೆ ಹೇಳಿದಂತೆ ಭಕ್ತಿಯಿಂದ ಯಾವನು ನನ್ನನ್ನು ಸೇವಿಸುವನೋ ಅಂತವನು ನನ್ನ ಸ್ಥಾನವನ್ನು ಸುಖವಾಗಿ ಹೊಂದುವನೆಂದು ಸತ್ಪುರುಷರು ನಿರ್ಧರಿಸಿರುವರು." ಎಂದನು.

ಉದ್ಧವನು ತಿರುಗಿ ಪ್ರಶ್ನೆಮಾಡುವನು "ಓ ಪುಣ್ಯಕೀರ್ತೀ! ಕೃಷ್ಣಾ! ಸಾಧುಗಳ ಸಹವಾಸವೇ ಭಕ್ತಿಗೆ ಮೂಲವೆಂದು ಹೇಳಿದೆಯಲ್ಲವೆ? ನಿನಗೆ ಪ್ರಿಯತಮರಾದ ಅಂತಹ ಸಾಧುಗಳಾರು? ಮತ್ತು ಎಂತಹ ಭಕ್ತಿಯನ್ನು ಸಾಧಿಸಿದರೆ ನೀನು ಪ್ರಸನ್ನನಾಗುವೆ? ನಾರದಾದಿಗಳು ಯಾವವಿಧವಾದ ಭಕ್ತಿಯನ್ನು ಸಾಧಿಸುತಿದ್ದರೋ, ಅದನ್ನು ನನಗೆ ತಿಳಿಸಬೇಕು. ಪ್ರಕೃತಿಪುರುಷರಿಗೆ ನಿಯಾಮಕನೂ, ಲೋಕೇಶ್ವರನೂ ಆದ ಓ ಕೃಷ್ಣಾ! ನಿನ್ನ ಅವಿಚ್ಛಿನ್ನಭಕ್ತನಾಗಿ ನಿನ್ನನ್ನೇ ಸರ್ವವಿಧದಿಂದಲೂ ಮರೆಹೊಕ್ಕಿರುವ

ನನಗೆ ಈ ವಿಚಾರವನ್ನು ತಿಳಿಸಬೇಕು. ಕೃಷ್ಣಾ! ನೀನೇ ಪರಬ್ರಹ್ಮವು. ನಿರ್ಮಲಸ್ವರೂಪನು. ಪ್ರಕೃತಿಪುರುಷರಿಗಿಂತಲೂ ಪರನು! ಹಾಗಿದ್ದರೂ ಲೋಕಕ್ಷೇಮಕ್ಕಾಗಿ ಸ್ವೇಚ್ಛೆಯಿಂದಲೇ ಹೀಗೆ ರಾಮಕೃಷ್ಣಾದಿರೂಪಗಳಿಂದ ಅವತರಿಸುತ್ತಿರುವೆ! ಹೀಗೆ ಭಕ್ತೋಜ್ಜೀವನಾರ್ಥವಾಗಿ ಅವತರಿಸಿರುವ ನೀನು, ನನ್ನ ಪ್ರಶ್ನೆಗೆ ಸಮಾಧಾನವನ್ನು ಹೇಳಿ ನನ್ನನ್ನು ಉದ್ಧರಿಸಬೇಕು" ಎಂದನು ಅದಕ್ಕಾ ಕೃಷ್ಣನು. "ಉದ್ಧವಾ! ಕೇಳು! ಇತರರ ದುಃಖವನ್ನು ನೋಡಿ ಸಹಿಸದಿರುವುದು, ಯಾವಭೂತಗಳಿಗೂ ದ್ರೋಹವನ್ನು ಚಿಂತಿಸದಿರುವುದು, ಸುಖದುಃಖಾದಿದ್ವಂದ್ವಗಳನ್ನು ಸಹಿಸಿಕೊಳ್ಳುವುದು, ಸತ್ಯವನ್ನೇ ದೃಢವಾಗಿ ಹಿಡಿದಿರುವುದು, ದ್ವೇಷಾಸೂಯಾದಿ ದೋಷಗಳಿಲ್ಲದಿರುವುದು, ಇತರಪ್ರಾಣಿಗಳನ್ನೂ ತನ್ನೊಡನೆ ಸಮಬುದ್ಧಿಯಿಂದ ಭಾವಿಸುವುದು, ಎಲ್ಲರಿಗೂ ಉಪಕಾರಮಾಡುವುದು, ಕಾಮಾದಿಗಳಿಂದ ಕದಲದ ಬುದ್ಧಿಯುಳ್ಳವನಾಗಿರುವುದು, ಇಂದ್ರಿಯ ನಿಗ್ರಹಶಕ್ತಿ, ಮೃದುವಾದ ಮನಸ್ಸು, ಬಾಹ್ಯಾಭ್ಯಂತರಶುದ್ಧಿ, ಯಾವುದರಲ್ಲಿಯೂ ಆಸೆಯಿಲ್ಲದೆ ಅನನ್ಯಪ್ರಯೋಜನನಾಗಿರುವುದು, ಮಿತಭೋಜನ, ಮನೋನಿಗ್ರಹ, ಸ್ಥಿರಬುದ್ಧಿ, ಸರ್ವವಿಧದಲ್ಲಿಯೂ ನಾನೇ ತನಗೆ ರಕ್ಷಕನೆಂಬ ನಂಬಿಕೆ, ಶುಭಾಶ್ರಯವಾದ ನನ್ನ ಸ್ವರೂಪವನ್ನು ಯಾವಾಗಲೂ ಚಿಂತಿಸುತ್ತಿರುವುದು, ಸ್ವಕರ್ಮಗಳಲ್ಲಿ ಎಚ್ಚರತಪ್ಪದಿರುವುದು, ಗಂಭೀರಸ್ವಭಾವ, ಕಷ್ಟದಶೆಯಲ್ಲಿಯೂ ಧೈರ್ಯದಿಂದಿರುವುದು, ಹಸಿವು, ಬಾಯಾರಿಕೆ, ಶೋಕ, ಮೋಹ, ಜರೆ, ಮರಣಗಳೆಂಬ ಷಡೂರ್ಮಿಗಳನ್ನು ಜಯಿಸುವ ಶಕ್ತಿ, ದೇಹಾಭಿಮಾನವಿಲ್ಲದಿರುವುದು, ಇತರರನ್ನು ಗೌರವಿಸುವುದು, ಪರರಿಗೆ ಹಿತೋಪದೇಶವನ್ನು ಮಾಡುವುದು, ವಂಚನೆಯಿಲ್ಲದಿರುವುದು, ಸ್ವಾರ್ಥಪರತೆಯನ್ನು ಬಿಟ್ಟು ಕೇವಲಕರುಣೆಯಿಂದಲೇ ಪರರಿಗೆ ಉಪಕಾರಮಾಡುವುದು, ಚಿದಚಿದೀಶ್ವರರೆಂಬ ತತ್ವತ್ರಯದ ತಿಳಿವಳಿಕೆ, ಈ ಮುಂತಾದ ಗುಣಗಳುಳ್ಳವನಾಗಿ, ಇದರಂತೆಯೇ ಇನ್ನೂ ನನ್ನಿಂದ ಗೀತಾದಿಶಾಸ್ತ್ರಮುಖವಾಗಿ ಉಪದೇಶಿಸಲ್ಪಟ್ಟ ಗುಣದೋಷಗಳನ್ನು ತಿಳಿದುಕೊಂಡು, ಕಾಮ್ಯಗಳಾದ ತನ್ನ ವರ್ಣಾಶ್ರಮಧರ್ಮಗಳೆಲ್ಲವನ್ನೂ ಬಿಟ್ಟು, ಸರ್ವವಿಧದಿಂದಲೂ ನಾನೇ ತನಗೆ ಗತಿ

ಯೆಂದು ನಂಬಿ ಯಾವನು ನನ್ನನ್ನು ಭಜಿಸುವನೋ, ಅತನೇ ನನಗೆ ಬಹಳ ಪ್ರಿಯತಮನಾದ ಸಜ್ಜನನೆಂದು ತಿಳಿ! ಮತ್ತು ನನ್ನ ಸ್ವರೂಪಸ್ವಭಾವಗಳೆಂತವೆಂಬುದನ್ನೂ, ನಾನು ಎಷ್ಟು ಮಹತ್ವವುಳ್ಳವನೆಂಬುದನ್ನೂ ಯಾವನು ಆಗಾಗ ವಿಮರ್ಶಿಸಿ ತಿಳಿದು, ದೇವತಾಂತರಗಳಲ್ಲಿಯೂ, ಪ್ರಯೋಜನಾಂತರಗಳಲ್ಲಿಯೂ ದೃಷ್ಟಿಯಿಡದೆ, ಅನನ್ಯಪ್ರಯೋಜನನಾಗಿ ನನ್ನನ್ನು ಭಜಿಸುವನೋ ಅಂತವನೇ ಭಕ್ತೋತ್ತಮನು. ಉದ್ಧವಾ! ಇನ್ನು ಉತ್ತಮಭಕ್ತಿಯ ಲಕ್ಷಣಗಳನ್ನೂ ತಿಳಿಸುವೆನು ಕೇಳು! ನನ್ನ ಪ್ರತಿಮಾಮೂರ್ತಿಗಳನ್ನೂ, ನನ್ನ ಭಕ್ತರನ್ನೂ ಆಗಾಗ ದರ್ಶನಮಾಡುವುದು, ಸ್ಪರ್ಶಿಸುವುದು, ಅರ್ಚಿಸುವುದು, ಉಪಚರಿಸುವುದು, ಸ್ತುತಿಸುವುದು, ನಮಸ್ಕರಿಸುವುದು, ನನ್ನ ಗುಣಗಳನ್ನೂ ಕಾರ್ಯಗಳನ್ನೂ ಆಗಾಗ ಕೊಂಡಾಡುತ್ತಿರುವುದು, ನನ್ನ ಕಥೆಗಳನ್ನು ಕೇಳುವುದು, ನನ್ನನ್ನು ಧ್ಯಾನಿಸುವುದು, ತನಗೆ ಲಭಿಸಿದುದನ್ನೆಲ್ಲಾ ನನ್ನಲ್ಲಿ ಸಮರ್ಪಿಸುವುದು, ತನ್ನನ್ನು ನನಗೆ ಶೇಷಭೂತನೆಂದೇ ತಿಳಿದಿರುವುದು, ಶ್ರದ್ಧೆಯಿಂದ ಕೇಳತಕ್ಕವರಿಗೆ ನನ್ನ ಕಥೆಗಳನ್ನು ಹೇಳುವುದು, ಜಯಂತಿ ಮೊದಲಾದ ನನ್ನ ಜನ್ಮೋತ್ಸವದಿನಗಳಲ್ಲಿ ಮಹೋತ್ಸಾಹದಿಂದ ಹಬ್ಬಗಳನ್ನು ನಡೆಸುವುದು, ನೃತ್ಯ, ಗೀತ, ವಾದ್ಯಾದಿಗಳೊಡನೆ ನನ್ನ ಆಲಯಗಳಲ್ಲಿ ಉತ್ಸವಗಳನ್ನು ನಡೆಸುವುದು, ದಿವ್ಯದೇಶಯಾತ್ರೆ, ಏಕಾದಶಿ ಮೊದಲಾದ ಪರ್ವದಿನಗಳಲ್ಲಿ ನನಗೆ ವಿಶೇಷಪೂಜೆಗಳನ್ನರ್ಪಿಸುವುದು, ಪಾಂಚರಾತ್ರದಲ್ಲಿ ಹೇಳಿರುವಂತೆ ಪಂಚಸಂಸ್ಕಾರದೀಕ್ಷೆಯನ್ನು ಕೈಕೊಳ್ಳುವುದು, ನನ್ನ ಪ್ರೀತಿಗಾಗಿ ನಡೆಸತಕ್ಕ ಏಕಾದಶಿ ಮೊದಲಾದ ವ್ರತಗಳನ್ನು ತಪ್ಪದೆ ನಡೆಸುವುದು, ಅಲ್ಲಲ್ಲಿ ನನ್ನ ಅರ್ಚಾಮೂರ್ತಿಗಳನ್ನು ಪ್ರತಿಷ್ಠೆಮಾಡುವುದು, ತನಗೆ ಆ ಶಕ್ತಿಯಿಲ್ಲದಿದ್ದರೆ ನಾಲ್ಕಾರುಜನಗಳ ಸಹಾಯದಿಂದ ಆ ಕಾರ್ಯಕ್ಕೆ ಪ್ರಯತ್ನಿಸುವುದು, ಮತ್ತು ನನಗಾಗಿ ತೋಟಗಳನ್ನೂ, ಮಂಟಪಗಳನ್ನೂ, ದೇವಾಲಯಗಳನ್ನೂ, ಕ್ರೀಡಾಸ್ಥಳ ಮೊದಲಾದುವುಗಳನ್ನೂ ಏರ್ಪಡಿಸುವುದು, ನನ್ನ ಆಲಯಗಳನ್ನು ಗುಡಿಸಿ, ಸಾರಿಸಿ, ರಂಗೋಲೆ ಮೊದಲಾದುವುಗಳಿಂದ ಅಲಂಕರಿಸುವುದು, ಅಹಂಕಾರ, ವಂಚನೆ, ಮೊದಲಾದ ದುರ್ಗುಣಗಳಿಲ್ಲದಿರುವುದು, ತಾನು

ಮಾಡಿದ ಧರ್ಮಕಾರ್ಯಗಳನ್ನು ಹೆಮ್ಮೆಗಾಗಿ ಇತರರೊಡನೆ ಹೇಳಿಕೊಳ್ಳದಿರುವುದು, ಇವೆಲ್ಲವೂ ಭಕ್ತಿಸಾಧನೆಯ ಲಕ್ಷಣಗಳು. ಮತ್ತು ನನಗಾಗಿ ಅರ್ಪಿಸಿದ ದೀಪಧೂಪಾದಿಗಳನ್ನು ತನಗಾಗಿ ಉಪಯೋಗಿಸಿಕೊಳ್ಳಬಾರದು. ತನಗೆ ಯಾವುದು ಅತಿಪ್ರಿಯತಮವೆಂದು ತೋರುವುದೋ ಅದನ್ನು ಮೊದಲು ನನಗಾಗಿ ಅರ್ಪಿಸಬೇಕು. ಅದರಿಂದ ನಾನು ಬಹಳ ಸಂತೋಷಿಸುವೆನು. ಉದ್ಧವಾ! ಸೂರ್ಯನು, ಅಗ್ನಿ, ಬ್ರಾಹ್ಮಣರು, ಗೋವುಗಳು, ವೈಷ್ಣವರು, ಆಕಾಶ, ವಾಯು, ಜಲ, ಭೂಮಿ, ಆತ್ಮನು, ಸಮಸ್ತಭೂತಗಳು, ಈ ಸ್ಥಾನಗಳಲ್ಲಿ ನಾನು ನೆಲೆಗೊಂಡಿರತಕ್ಕವನಾದುದರಿಂದ, ಇವು ಹನ್ನೊಂದೂ ನನ್ನ ಪೂಜಾಸ್ಥಾನಗಳೆಂದು ತಿಳಿ! ಇವುಗಳಲ್ಲಿ ಸೂರ್ಯನನ್ನು "ಆಸತ್ಯೇನ" ಇತ್ಯಾದಿ ವೇದಮಂತ್ರಗಳಿಂದಲೂ, ಅಗ್ನಿಯನ್ನು ಹವಿಸ್ಸಿನಿಂದಲೂ, ಬ್ರಾಹ್ಮಣನನ್ನು ಆತಿಥ್ಯದಿಂದಲೂ, ಗೋವುಗಳನ್ನು ಹುಲ್ಲು ಮೊದಲಾದ ಆಹಾರವನ್ನು ಕೊಟ್ಟು ಪೋಷಿಸುವುದರಿಂದಲೂ, ವೈಷ್ಣವರನ್ನು ಬಂಧುವಂತೆ ಭಾವಿಸಿ ಸತ್ಕರಿಸುವುದರಿಂದಲೂ, ಹೃದಯಾಕಾಶವನ್ನು ಧ್ಯಾನನಿಷ್ಠೆಯಿಂದಲೂ, ವಾಯುವನ್ನು ಮುಖ್ಯಪ್ರಾಣವೆಂಬ ಬುದ್ಧಿಯಿಂದಲೂ, ಜಲವನ್ನು, ತೀರ್ಥ, ಗಂಧ, ಪುಷ್ಪ, ದೂರ್ವಾಕ್ಷತೆಗಳು ಮೊದಲಾದ ಪೂಜಾದ್ರವ್ಯಗಳಿಂದಲೂ, (ಶಂಖಚಕ್ರಾದಿ ಮಂಡಲಗಳಿಂದಲಂಕೃತವಾದ) ಭೂಮಿಯನ್ನು ಮೂಲಮಂತ್ರಪೂರ್ವಕವಾದ ಹೃದಯಾದ್ಯಂಗನ್ಯಾಸಮಂತ್ರಗಳಿಂದಲೂ, ತನ್ನ ಆತ್ಮವನ್ನು ಶಾಸ್ತ್ರವಿರುದ್ಧವಲ್ಲದ ಕಾಮಗಳಿಂದಲೂ, ದೇವಮನುಷ್ಯಾದಿ ಶರೀರಭೇದವಿಂದಿರುವ ಸಮಸ್ತಭೂತಗಳಲ್ಲಿಯೂ ನಾನೇ ಜೀವಶರೀರಕನೆಂಬ ಭಾವದಿಂದಲೂ, ಯಜಿಸಿದರೆ, ಆ ಪೂಜೆಗಳೆಲ್ಲವೂ ನನಗೇ ಸಲ್ಲುವುವು. ಮೇಲೆ ಹೇಳಿದ ಸೂರ್ಯಾದಿಸ್ಥಾನಗಳಲ್ಲಿ, ಶಂಖಚಕ್ರಗದಾಪದ್ಮಗಳಿಂದ ಕೂಡಿದ ಚತುರ್ಭುಜವುಳ್ಳ ನನ್ನ ಸ್ವರೂಪವನ್ನೇ ಧ್ಯಾನವಿಷಯವಾಗಿಟ್ಟು ಪೂಜಿಸಬೇಕು. ಯಾವನು ಮೇಲೆ ಹೇಳಿದಂತೆ ವೈದಿಕ ಸ್ಮಾರ್ತಕರ್ಮಗಳಿಂದ ನನ್ನನ್ನು ಆರಾಧಿಸುವನೋ, ಅವನು ನನ್ನಲ್ಲಿ ಅವಿಚ್ಛಿನ್ನವಾದ ಭಕ್ತಿಯನ್ನು ಪಡೆಯುವನು. ಉದ್ಧವಾ! ಮುಖ್ಯವಾಗಿ ಸತ್ಸಹವಾಸಲಬ್ಧವಾದ ಭಕ್ತಿಯೋಗವು ಹೊ

ರತು,ನನ್ನನ್ನು ಸೇರುವುದಕ್ಕೆ ಬೇರೆ ಉತ್ತಮವಾದ ಉಪಾಯವಿಲ್ಲ! ಮತ್ತು ನನ್ನನ್ನು ಸೇರುವುದಕ್ಕೆ ನಾನುಹೊರತು, ಬೇರೆ ಉಪಾಯವೂ ಇಲ್ಲ! ಓ ಯದೂತ್ತಮಾ! ಪರಮರಹಸ್ಯವಾದ ಮತ್ತೊಂದು ವಿಚಾರವುಂಟು. ಅದು ಬಹಳಗೋಪ್ಯವಾಗಿದ್ದರೂ, ನೀನು ನನಗೆ ಪರಮಭಕ್ತನೂ, ಪರಮ ಪ್ರಿಯನೂ, ಪರಮಾಪ್ತನೂ ಆಗಿರುವುದರಿಂದ ನಿನ್ನಲ್ಲಿ ತಿಳಿಸುವೆನು."ಇದು ಹನ್ನೊಂಡನೆಯ ಅಧ್ಯಾಯವು.

---

## ಪ್ರಪತ್ತಿಯೋಗವು

"ಉದ್ಧವಾ! ಮೇಲೆ ಹೇಳಿದಂತೆ ಸತ್ಸಹವಾಸವು ನನ್ನನ್ನು ವಶೀ ಕರಿಸುವಷ್ಟು ಸುಲಭವಾಗಿ, ಬೇರೆ ವರ್ಣಾಶ್ರಮಧರ್ಮರೂಪವಾದ ಕರ್ಮ ಯೋಗವಾಗಲಿ, ಆತ್ಮೋಪಾಸನರೂಪವಾದ ಸಾಂಖ್ಯಯೋಗವಾಗಲಿ, ಅ ಹಿಂಸಾದಿರೂಪವಾದ ಧರ್ಮಗಳಾಗಲಿ, ಅಧ್ಯಯನ, ದಾನ, ತಪಸ್ಸು, ಇ ಷ್ಟಾಪೂರ್ತಗಳು, ದಕ್ಷಿಣೆಗಳು, ಉಪವಾಸಾದಿವ್ರತಗಳು, ಪಂಚಮಹಾ ಯಜ್ಞಗಳು, ಮಂತ್ರರಹಸ್ಯಗಳು, ಗಂಗಾದಿತೀರ್ಥಗಳು, ಶೌಚಾದಿನಿಯಮ ಗಳು, ಇಂದ್ರಿಯನಿಗ್ರಹಶಕ್ತಿ, ಇವುಗಳಲ್ಲಿ ಯಾವುದೊಂದಾಗಲಿ ನನ್ನನ್ನು ವಶೀಕರಿಸಿ ಹೃದಯದಲ್ಲಿ ಸ್ಥಿರವಾಗಿ ನಿಲ್ಲಿಸಲಾರವು. ಏಕೆಂದರೆ, ಸತ್ಸಹವಾ ಸವೆಂಬುದು ಮನಸ್ಸಿಗೆ ಬೇರೆವಿಧವಾದ ಸಂಗಗಳೆಲ್ಲವನ್ನೂ ತಪ್ಪಿಸಿ,ನನ್ನನ್ನೇ ವಿಷಯೀಕರಿಸುವಂತೆ ಮಾಡುವುದು. ಯೋಗಾದಿಗಳು ಹಾಗಲ್ಲ. ಸತ್ಸಹ ವಾಸಬಲದಿಂದಲೇ, ಹಿಂದೆ ಬೇರೆಬೇರೆ ಯುಗಗಳಲ್ಲಿ,ಅನೇಕದೈತ್ಯರೂ, ರಾಕ್ಷ ಸರೂ, ಮೃಗಪಕ್ಷಿಗಳೂ, ಸಿದ್ಧಚಾರಣ ಗಂಧರ್ವಾಪ್ಸರಸ್ಸುಗಳೂ, ಗುಹ್ಯ ಕರೂ, ನಾಗರೂ, ವಿದ್ಯಾಧರರೂ, ಮನುಷ್ಯವರ್ಗದಲ್ಲಿ ಹೀನಕುಲದವ ರಾದ ಅಂತ್ಯಜರೂ, ಸ್ತ್ರೀಶೂದ್ರಾದಿಗಳೂ, ವೈಶ್ಯರೂ ಇನ್ನೂ ರಜಸ್ತ ಮೋಗುಣಗಳಿಂದ ತುಂಬಿದವರನೇಕರೂ,ನನ್ನ ಸ್ಥಾನವನ್ನು ಸೇರಿರುವರು ಇ ದಕ್ಕೆ ನಿದರ್ಶನವಾಗಿ ದೈತ್ಯಕುಲದವರಲ್ಲಿ ವೃತ್ರ,ಪ್ರಹ್ಲಾದ,ವೃಷಪರ್ವ,ಬಲಿ, ಬಾಣ, ಮಯ, ವಿಭೀಷಣ,ಮೊದಲಾದವರು, ಎಂತಹ ಉತ್ತಮಗತಿಯನ್ನು ಹೊಂದಿದರೆಂಬುದನ್ನು ನೀನೂ ಕೇಳಿರಬಹುದು. ಪಶುಪಕ್ಷಿಮೃಗಾದಿಗಳಲ್ಲಿ

ಸುಗ್ರೀವ, ಜಾಂಬವಂತ, ಹನುಮಂತನೇ ಮೊದಲಾದವರೂ, ಗಜೇಂದ್ರ ನೂ, ಜಟಾಯುವೆಂಬ ಗೃಧ್ರವೂ ಉತ್ತಮಗತಿಯನ್ನು ಹೊಂದಲಿಲ್ಲವೆ? ಹಾಗೆಯೇ ತುಲಾಧಾರನೆಂಬ ವೈಶ್ಯನೂ, ಧರ್ಮವ್ಯಾಧನೆಂಬ ಬೇಡನೂ, ಕುಬ್ಜೆಯೆಂಬ ವೇಶ್ಯೆಯೂ, ಗೋಪಸ್ತ್ರೀಯರೂ, ಮುನಿಪತ್ನಿಯರೂ, ಬ್ರಾಹ್ಮಣಸ್ತ್ರೀಯರೂ ನನ್ನ ಸ್ಥಾನವನ್ನು ಹೊಂದಿದವರು. ಇವರೆಲ್ಲರೂ ವೇದವನ್ನೋದಿದವರಲ್ಲ! ಮಹಾತ್ಮರನ್ನು ಉಪಾಸಿಸಿದವರೂ ಅಲ್ಲ! ವ್ರತಗಳ ನ್ನಾಚರಿಸಿದವರಲ್ಲ! ತಪಸ್ಸುಮಾಡಿದವರಲ್ಲ! ಹಾಗಿದ್ದರೂ ಇವರಿಗೆ ಸತ್ಸ ಹವಾಸಬಲದಿಂದಲೇ ನನ್ನ ಸ್ಥಾನವು ಲಭಿಸಿತು. ಇದಲ್ಲದೆ ಮೇಲೆ ಹೇಳಿದ ವರಲ್ಲಿ, ಗೋಪಸ್ತ್ರೀಯರು ಕೇವಲ ಕಾಮಭಾವದಿಂದಲೇ ನನ್ನನ್ನು ಅನವರ ತವೂ ಧ್ಯಾನಿಸುತ್ತ, ಅದರಿಂದಲೇ ಮುಕ್ತಿಯನ್ನು ಪಡೆದರು. ಹಾಗೆಯೇ ಗೋಕುಲದಲ್ಲಿದ್ದ ಪಶುಗಳೂ, ವೃಕ್ಷರೂಪದಿಂದಿದ್ದ ಯಮಳಾರ್ಜುನರೂ, ಕಾಳಿಯನೇ ಮೊದಲಾದ ಸರ್ಪಗಳೂ, ಕೇವಲ ತಮೋಗುಣಪ್ರಚುರಗಳಾ ಗಿದ್ದರೂ, ಭಯದಿಂದಲೋ, ದ್ವೇಷದಿಂದಲೋ, ಅಸೂಯೆಯಿಂದಲೋ ನನ್ನನ್ನು ಸ್ಮರಿಸುತಿದ್ದು, ಅದರಿಂದಲೇ ಸಿದ್ಧಿಹೊಂದಿ, ಅನಾಯಾಸವಾಗಿ ನನ್ನ ಸ್ಥಾನವನ್ನು ಸೇರಿದರಲ್ಲವೆ? ಯೋಗ, ಸಾಂಖ್ಯ, ತಪಸ್ಸು, ದಾನ, ಧರ್ಮ, ಯಜನ, ಯಾಜನ, ಅಧ್ಯಯನ, ಸನ್ಯಾಸಾದಿಗಳಿಂದ ಎಷ್ಟೇ ಪ್ರ ಯತ್ನಿಸಿದರೂ ಸುಲಭನಲ್ಲದ ನನ್ನನ್ನು, ಅವರು ಬಹುಸುಲಭವಾಗಿ ಸೇರಿಬಿಟ್ಟ ರು. ಉದ್ಧವಾ! ಅದರೇನು? ಆ ಗೋಪಸ್ತ್ರೀಯರಿಗೆ ನನಲ್ಲಿದ್ದ ಅನುರಾಗವು ಮಾತ್ರ ಸಾಧಾರಣವಲ್ಲ! ಹಿಂದೆ ಅಕ್ರೂರನು ನನ್ನನ್ನೂ, ನನ್ನಣ್ಣನಾದ ಬಲ ರಾಮನನ್ನೂ ಮಥುರೆಗೆ ಕರೆದುಕೊಂಡುಹೋದಾಗ, ಆ ಗೋಪಿಯರ ವ್ಯಸ ನವನ್ನು ಕೇಳಬೇಕೆ? ನನ್ನಲ್ಲಿ ಅವರಿಗಿದ್ದ ದೃಢಾನುರಾಗದಿಂದ, ಬೇರೆ ಯಾವ ವಿಧದಿಂದಲೂ ಅವರ ಮನಸ್ಸಿಗೆ ನೆಮ್ಮದಿಯಿಲ್ಲದಂತಾಯಿತು. ಬೃಂದಾ ವನದಲ್ಲಿ ನನ್ನೊಡನಿದ್ದಾಗ ಯಾವರಾತ್ರಿಗಳು ಅವರಿಗೆ ಅರ್ಧಕ್ಷಣದಂತೆ ಕಳೆದುಹೋದುವೋ, ಆ ರಾತ್ರಿಗಳೇ ನನ್ನ ವಿಯೋಗಕಾಲದಲ್ಲಿ ಅವರಿಗೆ ಕಲ್ಪಪ್ರಾಯವಾಗಿ ತೋರುತಿದ್ದುವು. ಆ ಗೋಪಿಯರ ಮನಸ್ಸು ನನ್ನಲ್ಲಿ ಯೇ ನಟ್ಟಿದ್ದುದರಿಂದ, ಸಮಾಧಿಯಲ್ಲಿರುವ ಯೋಗಿಗಳಿಗೂ, ಸಮು

ದ್ರದಲ್ಲಿ ಪ್ರವೇಶಿಸಿದ ನದಿಗಳಿಗೂ, ತಮ್ಮ ನಾಮರೂಪಗಳ ತೋರಿಕೆಯೇ ಇಲ್ಲದಿರುವಂತೆ, ಅವರೂ ಆಗ ತಮ್ಮ ದೇಹವನ್ನಾಗಲಿ, ಸಮೀಪದಲ್ಲಿರುವುದನ್ನಾಗಲಿ, ದೂರದಲ್ಲಿರುವುದನ್ನಾಗಲಿ ತಿಳಿಯದೆ ಪರವಶರಾಗಿರುತಿದ್ದರು. ಆ ಸ್ತ್ರೀಯರು ಅಜ್ಞರಾದುದರಿಂದ, ನನ್ನ ನಿಜಸ್ವರೂಪವನ್ನು ಸ್ವಲ್ಪಮಾತ್ರವೂ ತಿಳಿಯಲಾರದಿದ್ದರೂ, ನನ್ನನ್ನು ಜಾರನೆಂದೂ, ತಮಗೆ ರತಿಸುಖವನ್ನು ಕೊಡತಕ್ಕವನೆಂದೂ ಭ್ರಮಿಸಿ, ಆ ಭಾವದಿಂದಲೇ ಪರಬ್ರಹ್ಮಸ್ವರೂಪನಾದ ನನ್ನನ್ನು ಸೇರಿದರು. ಹೀಗೆ ಸತ್ಸಹವಾಸದಿಂದ ಇನ್ನೂ ಸಾವಿರಾರುಜನರು. ನನ್ನನ್ನು ಸೇರಿರುವರು. ಆದುದರಿಂದ ಉದ್ಧವಾ ! ನೀನೂ ವಿಧಿನಿಷೇಧರೂಪಗಳಾದ ಶಾಸ್ತ್ರನಿರ್ಬಂಧಗಳನ್ನೂ ಗಮನಿಸದೆ, ಹಿಂದೆ ಶಾಸ್ತ್ರೀಯವಾಗಿ ನೀನು ಕೇಳಿದುದನ್ನೂ, ಮುಂದೆ ಕೇಳಬೇಕೆಂಬುದನ್ನೂ ಮರೆತು, ಸಮಸ್ತಪ್ರಾಣಿಗಳಿಗೂ ಆತ್ಮಭೂತನಾದ ನನ್ನೊಬ್ಬನನ್ನೇ ಸರ್ವವಿಧದಿಂದಲೂ ನಂಬುವನಾಗು! ನಾನೇ ನಿನಗೆ ಪ್ರಾಪ್ಯನೂ, ಪ್ರಾಪಕನೂ, ರಕ್ಷಕನೂ ಆಗಿರುವೆನೆಂಬ ದೃಢಭಾವದಿಂದ ನನ್ನಲ್ಲಿ ಶರಣಾಗತಿಯನ್ನು ಮಾಡು? ಆದರಿಂದ ನಿನಗೆ ಸಮಸ್ತಭಯವೂ ನಿವೃತ್ತವಾಗಿ, ನನ್ನ ಸಾನ್ನಿಧ್ಯವು ಲಭಿಸುವುದು" ಎಂದನು.

ತಿರುಗಿ ಉದ್ಧವನು "ಕೃಷ್ಣಾ ! ನೀನು ಇದುವರೆಗೆ ಉಪದೇಶಿಸಿದ ವಿಷಯಗಳಿಂದ, ನನಗೆ ಮೋಕ್ಷೋಪಾಯವಿಚಾರವಾದ ಸಂದೇಹವು ನೀಗಿತು. ಆದರೆ ಆತ್ಮತತ್ವವಿಚಾರವಾಗಿ ಇನ್ನೂ ನನ್ನ ಸಂದೇಹವು ಸಂಪೂರ್ಣವಾಗಿ ನೀಗಲಿಲ್ಲ. ಆದರಿಂದ ನನ್ನ ಮನಸ್ಸು ಇನ್ನೂ ಭ್ರಮಿಸುತ್ತಿರುವುದು ನನ್ನ ಸಂಶಯಗಳೇನೆಂದರೆ, ಪ್ರಾಣಗಳನ್ನೂ, ಇಂದ್ರಿಯಗಳನ್ನೂ ನಡೆಸತಕ್ಕ ಕಾರ್ಯವು ಜೀವನಿಂದಾಗುವುದೆ ? ಅಥವಾ ನಿನ್ನಿಂದ ನಡೆಯುವುದೆ ? ದೇವಮನುಷ್ಯಾದಿರೂಪವಾದ ಸಂಸಾರವು ಆತ್ಮನಿಗೆ ಸಂಬಂಧಿಸಿದುದೇ ಅಲ್ಲವೆ? ಪ್ರಾಣೇಂದ್ರಿಯಾದಿಗಳಿಗೆ ಆಧಾರವೆನಿಸಿರುವುದು ಜೀವಾತ್ಮನೇ ಅಥವಾ ಶರೀರವೆ ? ಸುಖದುಃಖಕಾರಣಗಳಾದ ಪುಣ್ಯಾಪುಣ್ಯಗಳಿಗೆ ಕರ್ತನಾರು? ಅವುಗಳನ್ನು ಅನುಭವಿಸತಕ್ಕವನಾರು? ಆ ಸಂಸಾರನಿವೃತ್ತಿಗೆ ಮಾರ್ಗವಾವುದು ? ಇವೇ ಮೊದಲಾದ ಸಂಶಯಗಳು ನನ್ನನ್ನು

ಭ್ರಮೆಗೊಳಿಸುತ್ತಿರುವುದರಿಂದ, ಅವುಗಳನ್ನು ನೀನು ನೀಗಿಸಬೇಕು" ಎಂದನು. ಅದಕ್ಕಾ ಕೃಷ್ಣನು "ಉದ್ಧವಾ! ಕೇಳು" ಜೀವಾತ್ಮನು ಶರೀರದಲ್ಲಿರುವಾಗ ಪ್ರಾಣದೊಡನೆಯೂ, ಅದರ ಘೋಷದೊಡನೆಯೂ ಕೂಡಿದವನಾಗಿ, ಹೃದಯಗುಹೆಯಲ್ಲಿ ಪ್ರಕಾಶಿಸುತ್ತಿರುವನು. ಆದರೆ ಆ ಘೋಷವು ಮನಸ್ಸಿಗೆಮಾತ್ರ ಗ್ರಾಹ್ಯವಾಗುವ ಅತಿಸೂಕ್ಷ್ಮರೂಪದಿಂದಿರುತ್ತ, ಕೊನೆಗೆ ತಾಲ್ವಾದಿಸ್ಥಾನಗಳ ಪ್ರಯತ್ನವಶದಿಂದ, ಹ್ರಸ್ವಾದಿಮಾತ್ರೆಗಳು, ಅಕಾರಾದಿವರ್ಣಗಳು, ಉದಾತ್ತಾದಿಸ್ವರಗಳು, ಈ ರೂಪವಾಗಿ ಸ್ಥೂಲತ್ವವನ್ನು ಹೊಂದುವುದು. ಅರಣಿಕಾಷ್ಠದಲ್ಲಿರುವ ಅಗ್ನಿಯು, ಮೊದಲು ಯಾರಿಗೂ ಗೋಚರಿಸದೆ ಸೂಕ್ಷ್ಮರೂಪದಲ್ಲಿರುವುದಷ್ಟೆ! ಆ ಅರಣಿಯನ್ನು ಮಥಿಸುವುದಕ್ಕೆ ತೊಡಗಿದಾಗ ಉಷ್ಣರೂಪದಿಂದ ತಲೆದೋರುವುದು. ಇನ್ನೂ ಬಲವಾಗಿ ಉಜ್ಜಿದಾಗ ಕಿಡಿಗಳು ಹೊರಡುವುವು. ಆಮೇಲೆ ಕ್ರಮವಾಗಿ ವಾಯುವಿನ ಸಹಾಯದಿಂದ ಹತ್ತಿಕೊಳ್ಳುವುದು. ಹವಿಸ್ಸಿನಿಂದ ಮತ್ತಷ್ಟು ಪ್ರಬಲವಾಗಿ ಜ್ವಾಲೆಗಳನ್ನು ಕೆದರುವುದಲ್ಲವೆ? ಹಾಗೆಯೇ ಜೀವನೊಡನೆ ಸೇರಿದ ಪ್ರಾಣಘೋಷವು, ಮೊದಲು ಸೂಕ್ಷ್ಮವಾಗಿದ್ದು, ಕೊನೆಗೆ ವಾಗ್ರೂಪದಿಂದ ಸ್ಥೂಲವಾಗಿ ಕಾಣುವುದು. ವಾಗಿಂದ್ರಿಯವ್ಯಾಪಾರವಾದ ಈ ವಾಕ್ಕೆಂಬುದು, ನನಗೆ ಶರೀರವೆನಿಸಿ ನನ್ನ ಅಧೀನವಾಗಿಯೇ ಇರುವುದರಿಂದ, ಅದರ ಪ್ರೇರಣೆಯಲ್ಲಿ ಜೀವನಿಗೇನೂ ಸಾಮರ್ಥ್ಯವಿಲ್ಲ. ಹೀಗೆಯೇ ಕೈ, ಕಾಲು, ಪಾಯು, ಉಪಸ್ಥ, ಮೊದಲಾದ ಕರ್ಮೇಂದ್ರಿಯಗಳ ಗಮನಾದಿವ್ಯಾಪಾರಗಳೂ, ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಜ್ಞಾನೇಂದ್ರಿಯಗಳ ದರ್ಶನಾದಿವ್ಯಾಪಾರಗಳೂ, ಮನೋವ್ಯಾಪಾರವಾದ ಸಂಕಲ್ಪವೂ, ಅಹಂಕಾರವ್ಯಾಪಾರವೆನಿಸಿದ ಅಭಿಮಾನವೂ, ಅನೇಕಕಾರ್ಯಗಳಿಗೆ ಸೂತ್ರದಂತೆ ಆಧಾರವಾದ ಮಹತ್ತತ್ವದ ವ್ಯಾಪಾರವೆನಿಸಿದ ಅಧ್ಯವಸಾಯವೂ, ಇನ್ನೂ ಸತ್ವಾದಿಗುಣತ್ರಯಪರಿಣಾಮಾತ್ಮಕಗಳಾದ ದೇಹೇಂದ್ರಿಯಾದಿಗುಣಗಳೂ, ಇವೆಲ್ಲವೂ ನನ್ನ ಪ್ರೇರಣೆಯಿಂದಲೇ ನಡೆಯುವುವು. ಜೀವನಾದರೋ ಈ ಸತ್ವರಜಸ್ತಮೋಗುಣಗಳಿಗೆ ವಶನಾಗಿ, ಅದರಿಂದ ಬ್ರಹ್ಮಾಂಡದೊಳಗೆ ಜನನಮರಣಗಳನ್ನು ಹೊಂದುತ್ತ, ತನ್ನ ಸ್ವರೂಪದಲ್ಲಿಮಾ

ತ್ರ ವೃದ್ಧಿಕ್ಷಯಾದಿ ವಿಕಾರಗಳಿಲ್ಲದೆ ಏಕರೂಪನಾಗಿ ನಿತ್ಯನಾಗಿರುವನು. ಆದರೆ ಒಂದೇಜಾತಿಯ ಬೀಜಗಳಾಗಿದ್ದರೂ, ಕ್ಷೇತ್ರ (ಭೂಮಿಯ)ಗುಣದಿಂದ ಗುಣಭೇದವನ್ನು ಹೊಂದುವಂತೆ, ಜೀವನು ಏಕರೂಪನಾಗಿದ್ದರೂ, ಕಾಲವಶದಿಂದ ಜಡರಿದ ಚೈತನ್ಯಶಕ್ತಿಯುಳ್ಳವನಾಗಿ,ಆಯಾ ಶರೀರಸಂಬಂಧಕ್ಕೆ ತಕ್ಕಂತೆ ದೇವಮನುಷ್ಯಾದಿಭೇದಗಳುಳ್ಳವನಂತೆ ತೋರುವನು. ನೂಲೆಳೆಗಳಿಂದ ವಸ್ತ್ರವು ಹೇಗೋಹಾಗೆ, ಪ್ರಾಣೇಂದ್ರಿಯಸಮೂಹಗಳೆಲ್ಲವೂ ಓತಪ್ರೋತವಾಗಿ (ಹಾಸುಹೊಕ್ಕಾಗಿ) ಸೇರಿ, ಸಂಸಾರವೆಂಬ ವೃಕ್ಷವು ಏರ್ಪಟ್ಟಿರುವುದು. ಸಂಸಾರವೆಂದರೆ ದೇಹಸಂಬಂಧವೇಹೊರತು ಬೇರೆಯಲ್ಲ! ಈ ಸಂಸಾರವೃಕ್ಷವು ಅನಾದಿಯಾಗಿ ಬಂದಿರುವುದು. ಇದು ಕೇವಲ ಕರ್ಮಾತ್ಮಕವೆನಿಸಿರುವುದು. ಕರ್ಮಗಳೇ ಇದರ ಹೂಗಳು. ಸುಖದುಃಖಗಳೇ ಇದರಫಲಗಳು. ಇದಕ್ಕೆ ಪುಣ್ಯಪಾಪಗಳೆರಡೂ ಬೀಜಗಳು ರಾಗದ್ವೇಷಭಯಾದಿಗಳೇ ಇದರ ನೂರಾರುಬೇರುಗಳು. ಸತ್ವರಜಸ್ತಮೋಗುಣಗಳು ಮೂರೂ ಇದರ ಅಡಿದಿಂಡುಗಳು! ಪಂಚಭೂತಗಳೇ ಇದರ ಐದು ಕವಲುಗಳು. ಶಬ್ದಾದಿವಿಷಯಗಳೈದೂ ಇದರಿಂದ ಹೊರಡುವ ಐದುಬಗೆಯ ಅಂಟುಗಳು. ಏಕಾದಶೇಂದ್ರಿಯಗಳು ಇದರ ಹನ್ನೊಂದುಶಾಖೆಗಳು. ಹೃದಯಗುಹೆಯೆಂಬುದೇ ಇದರ ಪೊಟ್ಟರೆ! ಜೀವಾತ್ಮಪರಮಾತ್ಮರೆಂಬ ಎರಡುಪಕ್ಷಿಗಳು ಅದರಲ್ಲಿ ವಾಸಮಾಡುತ್ತಿರುವುವು. ವಾತ ಪಿತ್ತ ಶ್ಲೇಷ್ಮಗಳು ಮೂರೂ ಇದರ ವಲ್ಕಲ (ಸಟ್ಟೆ) ಗಳು. ಭೋಗಮೋಕ್ಷಗಳೆಂಬಿವೆರಡೂ ಇದರಲ್ಲಿ ಹುಟ್ಟುವ ಎರಡುಜಾತಿಯ ಫಲಗಳು.ಈಸಂಸಾರವೃಕ್ಷಕ್ಕೆ ಆಧ್ಯಾತ್ಮಿಕಾದಿ ತಾಪತ್ರಯವೇ ಪಾತಿಯಾಗಿರುವುದು. ಈ ಸಂಸಾರವೃಕ್ಷದ ಎರಡು ಬಗೆಯಫಲಗಳಲ್ಲಿ,ಒಂದು ಜಾತಿಯಹಣ್ಣನ್ನು ಎಂದರೆ ಭೋಗವೆಂಬ ಫಲವನ್ನು, ಗ್ರಾಮವಾಸಿಗಳಾಗಿ ವಿಷಯಾಭಿಲಾಷೆಯಲ್ಲಿ ಬಿದ್ದ (ಜೀವಗಳೆಂಬ) ಹದ್ದುಗಳು ಭಕ್ಷಿಸುವುವು. ಮೋಕ್ಷವೆಂಬ ಮತ್ತೊಂದು ಜಾತಿಯ ಹಣ್ಣುಗಳನ್ನು, ಅರಣ್ಯವಾಸಿಗಳಾದ ಹಂಸಗಳು (ಪರಮಹಂಸರು ಅಥವಾ ಯೋಗಿಗಳು) ಭುಜಿಸುವರು. ಆದುದರಿಂದ ಉದ್ಧವಾ! ಸ್ಥಿರಭಕ್ತಿಯಿಂದ ಗುರೂಪಾಸನೆಯನ್ನು ಮಾಡಿ, ಮೋಕ್ಷೋಪಾಯಭೂತವಾದ ವಿದ್ಯೆಯನ್ನು

ಪಡೆದು, ಆ ವಿದ್ಯೆಯೆಂಬ ತೀಕ್ಷ್ಣವಾದ ಕೊಡಲಿಯಿಂದ ಆತ್ಮನಿಗೆ ಬಂಧಕವಾದ ಶರೀರಸಂಬಂಧವೆಂಬ ಸಂಸಾರವೃಕ್ಷವನ್ನು ಕಡಿದು, ನನ್ನನ್ನು ಸೇರಿದ ಮೇಲೆ, ನೀನು ಆ ಕೊಡಲಿಯನ್ನೂ ಬಿಸುಟು ನಿಶ್ಚಿಂತನಾಗಿರಬಹುದು. ಇದು ಹನ್ನೆರಡನೆಯ ಅಧ್ಯಾಯವು.

---

## ಸತ್ವಾದಿಗುಣಗಳನ್ನು ಜಯಿಸುವುದು

ಉದ್ಧವಾ ! ಸತ್ವಾದಿಗುಣಗಳಿಗೆ ವಶನಾಗುವುದರಿಂದಲೇ ಜೀವನಿಗೆ ಸಂಸಾರಬಂಧವೆಂದು ಹೇಳಿದೆನಲ್ಲವೆ? ಇದರೆ, “ಆ ಗುಣಗಳು ಜೀವನಿಗೆ ಸಹಜವಾಗಿರುವುವೆ? ಅಥವಾ ಆಗಂತುಕಗಳೆ ! ಅವು ಜೀವನಿಗೆ ಸ್ವಾಭಾವಿಕಗಳಾಗಿದ್ದಪಕ್ಷದಲ್ಲಿ, ಅವುಗಳನ್ನು ಜಯಿಸುವುದು ಹೇಗೆ?” ಎಂದು ನೀನು ಶಂಕಿಸಬಹುದು. ಈ ಸತ್ವಾದಿಗುಣಗಳು ಜೀವನ ಮನಸ್ಸಿಗೆ ಸಂಬಂಧಪಟ್ಟುವೇಹೊರತು ಜೀವಾತ್ಮನಿಗಲ್ಲ! ಅವು ಜೀವನಿಗೆ ಔಪಾಧಿಕವಾಗಿ ಬಂದಕ್ಕವುಗಳಾದುದರಿಂದ ಅವುಗಳನ್ನು ನೀಗಿಸುವುದೂ ಅಸಾಧ್ಯವಲ್ಲ. ಅವುಗಳನ್ನು ನೀಗಿಸುವ ಉಪಾಯವೇನೆಂದು ಕೇಳುವೆಯಾ ! ತನ್ನಲ್ಲಿ ಸತ್ವಗುಣವನ್ನು ಹೆಚ್ಚಿಸಿಕೊಂಡಹಾಗೆಲ್ಲಾ ರಜಸ್ತಮೋಗುಣಗಳು ತಗ್ಗುತ್ತ ಬರುವುವು. ಸಂಪೂರ್ಣವಾಗಿ ಸತ್ವಗುಣವು ತಲೆಯೆತ್ತಿದಾಗ, ಬೇರೆ ಎರಡುಗುಣಗಳೂ ನಾಶಹೊಂದುವುವು ಇದರೆ, “ಸತ್ವಗುಣವೊಂದೇ ನಿಂತರೂ ಜೀವನು ಗುಣಕ್ಕೆ ವಶನಾದಂತೆಯೇ ಆಯಿತಲ್ಲವೆ ?” ಎಂದರೆ, ಆ ಸತ್ವಗುಣದ ಅಭಿವೃದ್ಧಿಯಿಂದುಂಟಾದ ಜ್ಞಾನವು ಕೊನೆಗೆ ಆ ಸತ್ವಗುಣವನ್ನೂ ಅಡಗಿಸಿ, ಜೀವನನ್ನು ಗುಣತ್ರಯರಹಿತನನ್ನಾಗಿ ಮಾಡುವುದು. ಸತ್ವಗುಣವು ಹೆಚ್ಚುತ್ತ ಬಂದಹಾಗೆಲ್ಲಾ ಮನಸ್ಸಿನಲ್ಲಿ ಭಕ್ತಿಯೋಗವನ್ನು ಹೆಚ್ಚಿಸಿ, ಆ ಭಕ್ತಿಯೋಗದ ಮೂಲಕವಾಗಿ ರಜಸ್ತಮೋಗುಣಗಳನ್ನಡಗಿಸುವುದು. ಈ ರಜಸ್ತಮೋಗುಣಗಳು ಅಡಗುವುದರಿಂದ, ಅನಾದಿಯಾಗಿ ಅನುಸರಿಸಿಬರುತ್ತಿರುವ, ಮತ್ತು ಆ ರಜಸ್ತಮಸ್ಸುಗಳಿಗೆ ಮೂಲಗಳಾದ ಪುಣ್ಯಾಪಾಪಕರ್ಮಗಳೂ ಅದರೊಡನೆ ನಾಶಹೊಂದುವುವು ಆದುದರಿಂದ ಮುಕ್ತಿಗೆ, ಸತ್ವಾಭಿವೃದ್ಧಿಗಿಂತಲೂ ಉತ್ತಮವಾದ ಬೇರೆ ಉಪಾಯವಿಲ್ಲ. “ಆದರೆ, ಸತ್ವಗುಣವನ್ನು ಹೆಚ್ಚಿಸಿಕೊಳ್ಳು.

ವುದಕ್ಕೆ ಉಪಾಯವೇನು?" ಎಂದರೆ,ಜಾತಿಯಿಂದಲೂ, ಆಶ್ರಯದಿಂದಲೂ, ನಿಮಿತ್ತದಿಂದಲೂ ದುಷ್ಟವಲ್ಲದ ಸಾತ್ವಿಕಾಹಾರಗಳನ್ನೇ ಸೇವಿಸುತ್ತ ಬರುವುದರಿಂದ ಸತ್ವಗುಣವನ್ನು ಹೆಚ್ಚಿಸಿಕೊಳ್ಳಬಹುದು. ಸತ್ವಗುಣಾಭಿವೃದ್ಧಿಗೆ ಆಹಾರನಿಯಮವೊಂದು ಮಾತ್ರವೇ ಅಲ್ಲ! ನಾವು ಅಧ್ಯಯನಮಾಡತಕ್ಕ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ತೀರ್ಥಗಳು, ಸಹವಾಸಿಗಳಾದ ಜನರು, ದೇಶ, ಕಾಲ, ಜನ್ಮ, ಕರ್ಮ, ಧ್ಯಾನ, ಮಂತ್ರ, ಸಂಸ್ಕಾರಗಳೆಂಬ ಈ ಹತ್ತರಲ್ಲಿಯೂ ಸಾತ್ವಿಕ ರಾಜಸ ತಾಮಸಗಳೆಂಬ ಮೂರು ಭೇದಗಳುಂಟು. ಇವುಗಳಲ್ಲಿ ರಾಜಸ ತಾಮಸಗಳನ್ನು ಬಿಟ್ಟು, ಸಾತ್ವಿಕವೆನಿಸಿರುವುಗಳನ್ನೇ ಸೇವಿಸುವುದರಿಂದ ಸತ್ವಗುಣವು ಹೆಚ್ಚುವುದು. ಭಗವದ್ಭಕ್ತರಾದ ಮಹರ್ಷಿಯರು ಯಾವಯಾವುದನ್ನು ಉತ್ತಮವೆಂದು ಹೇಳಿರುವರೋ ಅವೆಲ್ಲವೂ ಸಾತ್ವಿಕಗಳೆಂದೂ, ಯಾವಯಾವುದನ್ನು ನಿಂದಿಸಿರುವರೋ ಅವೆಲ್ಲವೂ ತಾಮಸಗಳೆಂದೂ, ಯಾವಯಾವುದನ್ನು ನಿಂದಿಸದೆಯೂ ಸ್ತುತಿಸದೆಯೂ ಬಿಟ್ಟಿರುವರೋ, ಅವುಗಳನ್ನು ರಾಜಸಗಳೆಂದೂ ತಿಳಿಯಬೇಕು. ಸತ್ವವೃದ್ಧಿಯನ್ನಪೇಕ್ಷಿಸತಕ್ಕವನು, ಮೇಲೆ ಹೇಳಿದುವುಗಳಲ್ಲಿ ಸಾತ್ವಿಕವಾದುವುಗಳನ್ನೇ ಸೇವಿಸಬೇಕು. ಸತ್ವಾಭಿವೃದ್ಧಿಯಿಂದ ಭಕ್ತಿರೂಪವಾದ ಧರ್ಮವೂ, ಅದರಿಂದ ನನ್ನ ವಿಷಯವಾದ ಜ್ಞಾನವೂ,ಆಜ್ಞಾನಬಲದಿಂದ ನನ್ನ ನಿರಂತರಸ್ಮರಣೆಯೂ, ಈ ನಿರಂತರಸ್ಮರಣೆಯಿಂದ ಶಬ್ದಾದಿವಿಷಯಗಳ ವಿಸ್ಮೃತಿಯೂ ಉಂಟಾಗುವುದು. ಎಂದರೆ ಪರಿಪಾಕದಶೆಯಲ್ಲಿ ಮನುಷ್ಯನ ಮನಸ್ಸು, ಬೇರೆ ಯಾವ ಲೌಕಿಕ ವಿಷಯಗಳನ್ನೂ ಗಮನಿಸದೆ, ಮದೇಕಧ್ಯಾನದಲ್ಲಿ ನಿಲ್ಲುವುದು ಆದರೆ ಸತ್ವಾದಿಗುಣಗಳಿಂದಲೇ ಏರ್ಪಟ್ಟಿರುವ ದೇಹವು,ತನಗೆ ಮೂಲಭೂತವಾದ ಆ ಗುಣತ್ರಯವನ್ನೂ ಅಡಗಿಸಿ,ತಾನೂ ನಷ್ಟವಾಗುವುದು ಹೇಗೆಂದು ನೀನು ಶಂಕಿಸಬಹುದು. ಕಾಡಿನಲ್ಲಿ ಬಿದುರುಗಳು ಒಂದಕ್ಕೊಂದು ಉಜ್ಜುವುದರಿಂದುಂಟಾದ ಬೆಂಕಿಯು, ತನಗೆ ಉತ್ಪತ್ತಿಸ್ಥಾನವಾದ ಆ ಬಿದುರುಮೆಳೆಯನ್ನೇ ದಹಿಸಿ, ಕೊನೆಗೆ ತಾನೂ ಶಾಂತವಾಗುವುದಲ್ಲವೆ? ಹಾಗೆಯೇ ಸತ್ವಾದಿಗುಣಗಳ ವೈಷಮ್ಯದಿಂದ ಹುಟ್ಟಿದ ದೇಹವು, ತನಗೆ ಮೂಲವಾದ ಆ ಗುಣತ್ರಯವನ್ನೂ ನೀಗಿಸಿ, ಕೊನೆಗೆ ತಾನೂ ನಿವೃತ್ತವಾಗುವುದು " ಎಂದನು.

ತಿರುಗಿ ಉದ್ಧವನು ಕೃಷ್ಣನನ್ನು ಕುರಿತು “ಕೃಷ್ಣಾ! ಪ್ರಾಯಕವಾಗಿ ಮನುಷ್ಯರು, ಶಬ್ದಾದಿವಿಷಯಗಳೆಲ್ಲವೂ ಹಾನಿಕರಗಳೆಂಬುದನ್ನು ತಿಳಿದೇ ಇರುವರು. ಹಾಗೆ ತಿಳಿದಿದ್ದರೂ, ಕತ್ತೆ, ನಾಯಿ, ಆಡು ಮುಂತಾದ ಅಜ್ಞಜಂತುಗಳಂತೆ ಅಂತಹ ಕಾಮಸುಖಕ್ಕಾಗಿಯೇ ಆಸೆಪಡುತ್ತಿರುವರಲ್ಲವೆ? ಇದರ ಕಾರಣವೇನು!” ಎಂದು ಕೇಳಲು, ಅದಕ್ಕೆ ಕೃಷ್ಣನು “ಉದ್ಧವಾ! ಕೇಳು! ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿಯದ ಮನುಷ್ಯನಿಗೆ, ದೇಹವೇ ಆತ್ಮವೆಂಬ ತಪ್ಪುತಿಳಿವಳಿಕೆಯುಂಟಾಗುವುದು. ದೇಹಕ್ಕೆ ಸಂಬಂಧಿಸಿದ ಸ್ಥೂಲತ್ವ, ಕೃಶತ್ವ ಮೊದಲಾದ ವಿಕಾರಗಳನ್ನೆಲ್ಲಾ, ಆತ್ಮನಿಗೆಂದೇ ಭ್ರಮಿಸುವನು. ಈ ಭ್ರಾಂತಿಯುದಿಸಿದುದರಿಂದ, ಸಾತ್ವಿಕಾಹಂಕಾರಜನ್ಯವಾದ ಅವನ ಮನಸ್ಸು, ರಜೋಗುಣಕಾರ್ಯಗಳೆನಿಸಿ ಮಹಾಪಾಪಹೇತುಗಳಾದ ಕಾಮಕ್ರೋಧಗಳನ್ನು ಹೊಂದುವುದು. ಎಂದರೆ, ಮನಸ್ಸಿನಲ್ಲಿ ಯಾವಾಗ ರಜೋಗುಣವು ಸೇರುವುದೋ, ಆಗ ಬೇರೆಬೇರೆವಸ್ತುಗಳು ಬೇರೆಬೇರೆ ವಿಧವಾಗಿ ತನಗೆ ಭೋಗಾರ್ಹಗಳೆಂಬ ಬುದ್ಧಿಯು ಮೊದಲು ಹುಟ್ಟುವುದು. ಈ ಸಂಕಲ್ಪವು ಹುಟ್ಟಿದಮೇಲೆ, ಅವುಗಳನ್ನನುಭವಿಸಬೇಕೆಂಬ ಆಸೆಯೂ ಹುಟ್ಟುವುದು. ಇದೇ ಕಾಮವು. ಈ ಕಾಮವು ಯಾವಾಗ ಅಂಕುರಿಸುವುದೋ, ಆಗ ದೇಹಾಭಿಮಾನವುಳ್ಳ ಜೀವನು, ಆಯಾ ಭೋಗ್ಯವಸ್ತುಗಳಲ್ಲಿರುವ ಮಾಧುರ್ಯ ಸೌಂದರ್ಯಾದಿಗುಣಗಳನ್ನೇ ಎಡೆಬಿಡದೆ ಚಿಂತಿಸುತ್ತಿರುವನು. ಈ ಚಿಂತೆಯು ಜೀವನಿಗೆ ಆ ಭೋಗ್ಯವಸ್ತುಗಳನ್ನು ಅನುಭವಿಸದೆ ತೀರದಷ್ಟು ದುಸ್ಸಹವಾಗುವುದು. ಹೀಗೆ ಕಾಮವಶನಾದವನು, ಇಂದ್ರಿಯಗಳನ್ನು ಜಯಿಸಲಾರದೆ, ಆಯಾ ಇಷ್ಟವಸ್ತುಗಳನ್ನು ಪಡೆಯುವುದಕ್ಕಾಗಿ ಕರ್ಮಗಳಲ್ಲಿ ಪ್ರವರ್ತಿಸುವನು. ಈ ಕರ್ಮಗಳು ಮುಂದೆ ತನಗೆ ದುಃಖಹೇತುಗಳೆಂಬುದನ್ನು ತಿಳಿದಿದ್ದವರೂಕೂಡ, ರಜೋಗುಣದ ವೇಗದಿಂದ ಮೋಹಿತರಾಗಿ, ಮುಂದುಗಾಣದೆ, ಅವುಗಳಲ್ಲಿ ಪ್ರವರ್ತಿಸುವರು. ಆದರೆ ವಿಷಯಸುಖಗಳು ದುಃಖಹೇತುವೆಂಬುದನ್ನು ತಿಳಿದವರೂ ಅವುಗಳಿಗಾಗಿ ಪ್ರಯತ್ನಿಸುತಿದ್ದಮೇಲೆ, ಅವುಗಳಲ್ಲಿ ವಿರಕ್ತಿಯಿಂದ ಮೋಕ್ಷೋಪಾಯವನ್ನು ಸಾಧಿಸತಕ್ಕವರೇ ಇಲ್ಲದೆ ಹೋಗಬೇಕಲ್ಲವೆ?” ಎಂದು ನೀನು ಶಂಕಿಸಬಾರದು. ರಜ

ಸ್ತಮೋಗುಣಗಳು ಎಂತವರ ಮನಸ್ಸನ್ನಾದರೂ ಮೋಹಗೊಳಿಸುವುದೇ ನೋ ವಾಶ್ಯವಲ್ಲವೆ! ಹಾಗಿದ್ದರೂ ವಿವೇಕಿಯಾದವನು, ಶಬ್ದಾದಿಭೋಗಗ ಳಲ್ಲಿರುವ ದೋಷಗಳನ್ನು ತಿಳಿದು, ಎಚ್ಚರಿಕೆಯಿಂದ ಅಂತಹ ವಿಷಯಾನು ಭವಗಳಿಗೆ ಪ್ರವರ್ತಿಸದಂತೆ ಮನಸ್ಸನ್ನು ತಡೆಯಬಹುದು. ಆದುದರಿಂದ ಸ್ರಕ್ಚಂದನಾದಿಗಳಲ್ಲಿ ಭೋಗ್ಯತಾಬುದ್ಧಿಯು ಹುಟ್ಟುವುದರಿಂದ ಅದನ್ನ ನುಭವಿಸಬೇಕೆಂಬ ಇಚ್ಛೆಯೂ, ಆ ಇಚ್ಛೆಯಿಂದ ಆವಸ್ತುಗಳಲ್ಲಿ ಗುಣಾ ನುಸಂಧಾನವೂ ಉಂಟಾಗುವುದು. ಹಾಲು ರುಚಿಯಾಗಿದ್ದರೂ ಅದು ವಿಷ ಮಿಶ್ರವೆಂದು ತೋರಿಬಂದಾಗ, ವಿವೇಕಿಯಾದವನು ಅದನ್ನು ಹೇಗೆ ಕುಡಿ ಯಲಾರನೋ, ಹಾಗೆಯೇ ಶಬ್ದಾದಿವಿಷಯಗಳಲ್ಲಿರುವ ದೋಷವನ್ನು ತಿಳಿದ ವನು ಅದಕ್ಕೆ ಆಸೆಪಡದಿರಬಹುದು. ಹೀಗೆ ದೋಷದೃಷ್ಟಿಯಿಂದ ವಿಷ ಯಸುಖಗಳಲ್ಲಿ ವಿರಕ್ತನಾದವನು, ತ್ರಿಸಂಧ್ಯಾಕಾಲಗಳಲ್ಲಿಯೂ ಎಚ್ಚರ ತಪ್ಪದೆ, (ಅಭ್ಯಾಸಬಲದಿಂದ ಸ್ಥಿರವಾಗಿ ಕದಲದೆ ಕುಳಿತಿರತಕ್ಕ) ಆಸನಜಯ ವನ್ನೂ, (ಪೂರಕಾದ್ಯಭ್ಯಾಸಾಯಗಳಿಂದ) ಶ್ವಾಸಜಯವನ್ನೂ ಸಾಧಿಸಿ, ಶುಭಾ ಶ್ರಯವಾದ ನನ್ನ ಸ್ವರೂಪಧ್ಯಾನದಲ್ಲಿ ಮೆಲ್ಲಗೆ ಮನಸ್ಸನ್ನು ನೆಲೆಗೊಳಿಸಿ, ಅದೇ ಸಮಾಧಿಯಲ್ಲಿ ಬೇಸರವಿಲ್ಲದೆ ನಿಲ್ಲಬೇಕು. ಉದ್ಧವಾ! ಇದೇ ಯೋಗ ವೆಂಬುದು! ಹಿಂದೆ ನಾನು ಹಂಸರೂಪದಿಂದವತರಿಸಿದ್ದಾಗ, ನನ್ನ ಶಿಷ್ಯ ರಾದ ಸನಕಾದಿಗಳಿಗೆ ನಾನು ಉಪದೇಶಿಸಿದ ಯೋಗಕ್ರಮವೂ ಇಷ್ಟೇ! ಆ ಉಪದೇಶವನ್ನನುಸರಿಸಿಯೇ ಸನಕಾದಿಗಳೂಕೂಡ "ಸಮಸ್ತ ವಿಷಯ ಗಳಿಂದಲೂ ಮನಸ್ಸನ್ನಾಕರ್ಷಿಸಿ ನನ್ನಲ್ಲಿ ಸಿಕ್ಕಿಸಿಡುವುದೇ ಯೋಗ"ವೆಂಬು ದನ್ನು ಇತರರಿಗೂ ಉಪದೇಶಿಸಿರುವರು." ಎಂದನು.

## ಹಂಸ ಸನಕಾದಿ ಸಂವಾದವು

ಉದ್ಧವನು ತಿರುಗಿ ಕೃಷ್ಣನನ್ನು ಕುರಿತು "ಓ ಕೇಶವಾ! ನೀನು ಯಾವಾಗ, ಯಾವರೂಪದಿಂದ, ಸನಕಾದಿಗಳಿಗೆ ಯೋಗವನ್ನುಪದೇಶಿಸಿದೆ ಯೆಂಬುದನ್ನೂ, ಆ ಉಪದೇಶದ ರೀತಿಯನ್ನೂ ನನಗೆ ತಿಳಿಸಬೇಕು" ಎಂ ದನು. ಅದಕ್ಕಾ ಕೃಷ್ಣನು "ಉದ್ಧವಾ ಕೇಳು! ಬ್ರಹ್ಮನಿಗೆ ಮಾನಸ ಪುತ್ರರಾದ ಸನಕಾದಿಗಳು, ಹಿಂದೊಮ್ಮೆ ತಮಗೆ ಯೋಗದ ಸೂಕ್ಷ್ಮಗತಿ

ಯನ್ನು ತಿಳಿಸಬೇಕೆಂದು ಅವನನ್ನು ಪ್ರಾರ್ಥಿಸುತ್ತ "ಓ ಜನಕಾ! ಮನಸ್ಸು ಯಾವಾಗಲೂ ಶಬ್ದಾದಿವಿಷಯಗಳಲ್ಲಿಯೇ ಪ್ರವೇಶಿಸುವುದು. ಆ ವಿಷಯಗಳೂಕೂಡ ಮನಸ್ಸಿಗೆ ಅಂಟಿದಮೇಲೆ ಅದನ್ನು ಬಿಟ್ಟು ಹೋಗಲಾರವು. ಹೀಗಿರುವಾಗ ಮೋಕ್ಷಾರ್ಥಿಯು ಅವುಗಳಿಗಿರುವ ಪರಸ್ಪರಬಂಧವನ್ನು ತಪ್ಪಿಸುವುದು ಹೇಗೆ? ಈ ಸಂದೇಹವನ್ನು ನೀಗಿಸಬೇಕು" ಎಂದರು. ಆಗ ಬ್ರಹ್ಮನು, ತಾನೇ ಸೃಷ್ಟಿಕರ್ತನಾದುದರಿಂದ ಎಲ್ಲಾ ಜೀವರಾಶಿಗಳಿಗಿಂತಲೂ ಅಧಿಕವಾದ ಜ್ಞಾನಶಕ್ತ್ಯಾದಿಗಳುಳ್ಳವನಾಗಿದ್ದರೂ, ತಾನೂ ಕರ್ಮಬದ್ಧನಾಗಿ ಜ್ಞಾನಸಂಕೋಚವುಳ್ಳವನಾದುದರಿಂದ,ಎಷ್ಟುಯೋಚಿಸಿದರೂ ಆ ಪ್ರಶ್ನೆಗೆ ಉತ್ತರವನ್ನು ಹೇಳಲಾರದೆ, ನನ್ನನ್ನು ಸ್ಮರಿಸಿದನು. ಆಗ ನಾನು ಹಂಸರೂಪದಿಂದ ಬಂದು ಅವರ ನಡುವೆ ನಿಂತೆನು. ನನ್ನನ್ನು ಕಂಡು ಅಲ್ಲಿದ್ದ ಸನಕಾದಿಗಳೆಲ್ಲರೂ ವಿಸ್ಮಿತರಾಗಿ, ಬ್ರಹ್ಮನೊಡನೆ ಥಟ್ಟನೆ ಇದಿರೆದ್ದು,ನನಗೆ ಪಾದಾಭಿವಂದನವನ್ನು ಮಾಡಿ, ತಾವು ಕೇಳಬೇಕಾದುದನ್ನು ಕೇಳದೆ "ನೀನು ಯಾ"ರೆಂದು ನನ್ನನ್ನು ಪ್ರಶ್ನೆಮಾಡಿದರು. ಆಗ ನಾನು ಅವರನ್ನು ಕುರಿತು "ಓ ಬ್ರಾಹ್ಮಣರೆ! ನಾನು ಯಾರೆಂದು ಕೇಳಿದಿರಲ್ಲವೆ? ಚರಾಚರಗಳಾದ ಸಮಸ್ತವಸ್ತುಗಳೂ ನಾನೇ ಎಂದು ತಿಳಿಯಿರಿ! ಏಕೆಂದರೆ, ಈ ಜಗತ್ತೆಲ್ಲವೂ ನನ್ನ ಶರೀರವೆನಿಸಿರುವುದು, ನನಗಿಂತಲೂ ಭಿನ್ನವಾದ ಬೇರೆ ವಸ್ತುವೇ ಇಲ್ಲವು. ಎಲ್ಲವೂ ನಾನೇ ಆಗಿರುವಾಗ, ನೀವು ನನ್ನನ್ನು ಯಾರೆಂದು ಕೇಳಿದರೆ ನಾನೇನು ಹೇಳಲಿ! ಪ್ರಶ್ನೆಮಾಡತಕ್ಕ ನೀವೂ, ಈ ಪ್ರಶ್ನೆಗೆ ಉತ್ತರವನ್ನು ಕೊಡಬೇಕಾದ ನಾನೂ, ನೀವು ಕೇಳಿದ ಪ್ರಶ್ನೆಯ ಉತ್ತರಗಳೂ ನಾನೇ ಆಗಿರುವೆನು. ಆದುದರಿಂದ ಪ್ರಶ್ನೆಮಾಡತಕ್ಕವನೂ, ಉತ್ತರವನ್ನು ಹೇಳಬೇಕಾದವನೂ, ಉತ್ತರ ಹೇಳತಕ್ಕ ವಿಷಯವೂ ಒಂದೇ ಆಗಿರುವಾಗ ಈ ಉತ್ತರಪ್ರತ್ಯುತ್ತರಗಳಿಗೇ ಅವಕಾಶವಿಲ್ಲವಲ್ಲವೆ?ಜಗತ್ತೆಲ್ಲವೂ ಪರಮಾತ್ಮಸ್ವರೂಪವೇ ಎಂಬುದನ್ನು ತಿಳಿದ ನಿಮ್ಮಂತವರ ಬಾಯಿಂದ ಈ ಪ್ರಶ್ನವು ಹೊರಡುವುದೇ ಯುಕ್ತವಲ್ಲ. "ಅಥವಾ ಮೇಲಿನ ಶರೀರವನ್ನು ಮಾತ್ರ ನಾವು ಬಲ್ಲೆವೇಹೊರತು, ಎಲ್ಲವೂ ಬ್ರಹ್ಮಾತ್ಮಕವೆಂಬುದನ್ನು ನಾವು ಕಾಣೆವು." ಎಂದು ಹೇಳುವಿರೇನು? ಹಾಗೆ ಮೇ

ಲಿನ ಶರೀರವನ್ನು ಮಾತ್ರ ಬಲ್ಲವರೂ ಇಲ್ಲಿ ಪ್ರಶ್ನೆ ಮಾಡಿ ತಿಳಿಯಬೇಕಾದು ದೇನೂ ಇಲ್ಲ. ಹಂಸರೂಪದಿಂದ ನಿಮ್ಮ ಮುಂದೆ ನಿಂತಿರುವ ನನ್ನನ್ನು ನೋಡಿದಾಗಲೇ ನಾನು ಯಾವಜಾತಿಗೆ ಸೇರಿದವನೆಂದು ಗೊತ್ತಾಗುವುದು. ನನಗೆ ಈ ರೂಪವು ಹೇಗೆ ಬಂತೆಂದು ಕೇಳುವುದಕ್ಕೂ ಸಂಭವವಿಲ್ಲ. ಏಕೆಂದರೆ, ಇಂತಹ ಶರೀರಗಳೆಲ್ಲವೂ ಪಂಚಭೂತಗಳಿಂದೇರ್ಪಟ್ಟಿರುವುವೆಂಬುದು ಎಲ್ಲರಿಗೂ ತಿಳಿದೇ ಇರುವುದು. ಆದುದರಿಂದ ಇಲ್ಲಿ ನಿಮ್ಮ ಪ್ರಶ್ನೆಗೇ ಅವಕಾಶವಿಲ್ಲ. ಓ ಮುನಿಗಳೇ! ಇದರಿಂದ ನೀವು ತಿಳಿಯಬೇಕಾದುದೇನೆಂದು ಬಲ್ಲಿರಾ ! ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ, ಬೇರೆ ಇಂದ್ರಿಯಗಳಿಂದಲೂ ಗ್ರಹಿಸಲ್ಪಡುವ ಸಮಸ್ತವೂ ನಾನೊಬ್ಬನೇ ಅಲ್ಲದೆ, ಲೋಕದಲ್ಲಿ ನನಗಿಂತಲೂ ಭಿನ್ನವಾದುದೊಂದೂ ಇಲ್ಲವೆಂಬುದನ್ನು ನೀವು ನಿಶ್ಚಯವಾಗಿ ತಿಳಿಯಬೇಕು. ಇದಕ್ಕೆ ಮೊದಲು ನೀವು ನಿಮ್ಮ ಜನಕನಾದ ಈ ಚತುರ್ಮುಖಬ್ರಹ್ಮನನ್ನು ಕುರಿತು ಒಂದು ಪ್ರಶ್ನವನ್ನು ಕೇಳಿದಿರಲ್ಲವೆ? ಆ ಪ್ರಶ್ನೆಗೆ ಸಮಾಧಾನವನ್ನು ಹೇಳುವುದಕ್ಕಾಗಿಯೇ ನಾನು ಇಲ್ಲಿಗೆ ಬಂದವನು. ಓ ಪುತ್ರರೆ ! ಸಮುಸ್ತಜೀವಗಳಿಗೂ ನಾನು ಅಂತರಾತ್ಮನು. ಹೀಗೆ ಮದಾತ್ಮಕವಾದ ಜೀವನಿಗೆ ಯಾವಾಗ ಶರೀರಸಂಬಂಧವುಂಟಾಗುವುದೋ, ಆಗ ಅವನ ಮನಸ್ಸು ಶಬ್ದಾದಿವಿಷಯಗಳಲ್ಲಿ ತಗುಲುವುದು. ಆ ಶಬ್ದಾದಿವಿಷಯಗಳೂ ಅವನ ಮನಸ್ಸಿನಲ್ಲಿ ತಗುಲಿಕೊಳ್ಳುವುವು. ಇವು ಒಂದನ್ನೊಂದು ಬಿಟ್ಟುಹೋಗುವುದೇನೋ ಕಷ್ಟವೇ ! ಇವೆರಡನ್ನೂ ಹೀಗೆ ಗಂಟುಹಾಕಿಡುವುದಕ್ಕೆ ದೇಹವೇ ಮೂಲವು.ದೇಹಸಂಬಂಧವಿದ್ದಾಗ, ಮನಸ್ಸು ಬಾರಿಬಾರಿಗೂ ವಿಷಯಗಳಲ್ಲಿ ಪ್ರವೇಶಿಸುವುದರಿಂದ, ಆ ವಿಷಯಗಳೂ ಬಲವಾಗಿ ಮನಸ್ಸಿನಲ್ಲಿ ತಗುಲಿಕೊಳ್ಳುವುವು. ಆದರೆ "ಮನಸ್ಸೆಂಬುದು ದೇಹದೊಳಗಿನದು, ವಿಷಯಗಳು ಹೊರಗಿನವು. ಇವೆರಡೂ ಒಂದಕ್ಕೊಂದು ತಗುಲಿಕೊಳ್ಳುವುದು ಹೇಗೆ?" ಎಂದು ಕೇಳುವಿರಾ ? ಪೂರ್ವವಾಸನೆಯಿಂದ ವಿಷಯಗಳು ಮನಸ್ಸಿನಲ್ಲಿ ತನಗೆತಾನೇ ತೋರುತ್ತಿರುವುವು. ಇದಕ್ಕಾಗಿ ವಿಷಯಚಿಂತೆಯನ್ನು ತಪ್ಪಿಸಿ, ನನ್ನರೂಪವನ್ನು ಚಿಂತಿಸುವಹಾಗೆ ಮನಸ್ಸನ್ನು ತಿರುಗಿಸಿದರೆ, ಆಗ ವಿಷಯಗಳು ತಾವಾಗಿ ಬಿಟ್ಟುಹೋಗುವುವು.

ಆ ವಿಷಯಚಿಂತೆಯನ್ನು ಬಿಡಿಸುವುದರಿಂದ ದೇಹಸಂಬಂಧವೂ ನಿವರ್ತಿಸು ವುದು. ಹೀಗೆ ಮನಸ್ಸಿನಿಂದ ಶಬ್ದಾದಿವಿಷಯಗಳನ್ನು ಬಿಡಿಸುವುದಕ್ಕೆ ಪರಮಾತ್ಮಧ್ಯಾನವೊಂದು ಮಾತ್ರವಲ್ಲದೆ, ದೇಹಕ್ಕಿಂತಲೂ ತಾನು ವಿಲ ಕ್ಷಣನೆಂಬುದನ್ನು ತಿಳಿಯುವುದೂ ಒಂದು ಉಪಾಯವಾಗಿದೆ. ಅದಕ್ಕಾಗಿ ಮೊದಲು ಜೀವಾತ್ಮನ ಸ್ವರೂಪವೆಂತದೆಂಬುದನ್ನು ತಿಳಿಯಬೇಕು. ಜೀವ ನಿಗೆ, ಎಚ್ಚರ, ಕನಸು, ಸುಷುಪ್ತಿಯೆಂಬ ಈ ಮೂರವಸ್ಥೆಗಳು, ಕ್ರಮವಾಗಿ ಸತ್ವರಜಸ್ತಮೋಗುಣಗಳಿಂದುಂಟಾಗುವ ಬುದ್ಧಿವ್ಯಾಪಾರಗಳು. ಆದುದರಿಂ ದ ಮೇಲಿನ ಅವಸ್ಥಾತ್ರಯವೂ ಪ್ರಕೃತಿಸಂಬಂಧಪ್ರಯುಕ್ತವಾದುದೇ ಹೊರತು ಜೀವನಿಗೆ ಸ್ವಾಭಾವಿಕವಲ್ಲ. ಜೀವನು ಈ ಮೂರವಸ್ಥೆಗಳಿಗಿಂ ತಲೂ ಭಿನ್ನನಾಗಿ, ಅವುಗಳನ್ನು ನೋಡತಕ್ಕವನುಮಾತ್ರ ತಾನಾಗಿರು ವನು. ಜೀವನಿಗೆ ದೇಹಸಂಬಂಧವೇ ಮನಸ್ಸಿನಲ್ಲಿ ಶಬ್ದಾದಿವಿಷಯಗಳು ಭೋಗ್ಯವೆಂಬ ಬುದ್ಧಿಯನ್ನುಂಟುಮಾಡುವುದು. ಸತ್ವಾದಿಗುಣಗಳ ಮೂಲಕವಾದ ಜಾಗರಾದ್ಯವಸ್ಥೆಗಳೂ ಜೀವನಿಗೆ ಸಹಜವಲ್ಲ. ಅಂತಹ ಜೀವಸ್ವರೂಪವನ್ನು ಯಥಾಸ್ಥಿತವಾಗಿ ಅನುಸಂಧಾನಮಾಡುತಿದ್ದಪಕ್ಷ ದಲ್ಲಿ,ವಿಷಯಗಳಲ್ಲಿ ಭೋಗ್ಯತಾಬುದ್ಧಿಯು ಬಿಟ್ಟುಹೋಗುವುದು. ಆ ಬುದ್ಧಿ ಯು ಬಿಟ್ಟುಹೋದಮೇಲೆ, ವಿಷಯಗಳಲ್ಲಿ ಮನಸ್ಸು ಪ್ರವೇಶಿಸಲಾರದು. ಆದರಿಂದ ದೇಹಸಂಬಂಧವೂ ತಪ್ಪುವುದು. ಕೊನೆಗೆ ವಿಷಯಾನುಭವಸಂ ಬಂಧವಾದ ಸುಖದುಃಖಗಳೆಲ್ಲವೂ ನೀಗಿ, ನಿರತಿಶಯಾನಂದವು ಪ್ರಾಪ್ತ ವಾಗುವುದು. ಆದರೆ, ಮೇಲೆಹೇಳಿದಂತೆ ಜಾಗರಾದ್ಯವಸ್ಥೆಗಳಿಗಿಂತಲೂ ವಿಲ ಕ್ಷಣವಾದ ಜಿವಾತ್ಮಸ್ವರೂಪವನ್ನು ಅನುಸಂಧಾನಮಾಡುವಾಗ, ಆ ಜೀವ ನಿಗೂ ನಾನು ಅಂತರಾತ್ಮನೆಂಬ ಭಾವದಿಂದಲೇ ಅನುಸಂಧಿಸಬೇಕು. ಜೀವ ನಿಗೆ ಅನಾದಿಯಾಗಿ ಅನುಸರಿಸಿಬರುವ ದೇಹಾಭಿಮಾನ, ಸ್ವತಂತ್ರಾಭಿಮಾನ ರೂಪವಾದ ಅಹಂಕಾರವೇ ಸಂಸಾರಬಂಧಕ್ಕೆ ಕಾರಣವಾಗಿ, ಆಸಂಸಾರಬಂ ಧವು ಮೋಕ್ಷಪ್ರಾಪ್ತಿಗೆ ವಿಘಾತವನ್ನುಂಟುಮಾಡುವುದು. ವಿವೇಕಿಯಾದ ವನು ಈ ತತ್ವವನ್ನು ತಿಳಿದು, ಸಂಸಾರದಲ್ಲಿ ನಿರ್ವೇದವನ್ನುಹೊಂದಿ, ಆತ್ಮ ಸ್ವರೂಪವನ್ನೇ ಚಿಂತಿಸುತಿದ್ದರೆ, ಆಗ ಸಂಸಾರಬಂಧದ ಭಯವು ಬಿಟ್ಟು

ಹೋಗುವುದು. ಮೇಲೆ ಹೇಳಿದಂತೆ ದೇಹಾತ್ಮಗಳಿಗೆ ವೈಲಕ್ಷಣ್ಯವನ್ನು ನಿರೂಪಿಸತಕ್ಕ ಯುಕ್ತಿವಾದಗಳಿಂದ, ಮನುಷ್ಯನಿಗೆ ತನ್ನಲ್ಲಿ ದೇವಮನುಷ್ಯತ್ವಾದಿಭೇದಬುದ್ಧಿಯು ಸಂಪೂರ್ಣವಾಗಿ ನೀಗುವವರೆಗೂ, ಸ್ವಪ್ನವನ್ನು ಕಾಣುವವನಿಗೆ ಕನಸಿನ ವಿಷಯಗಳೆಲ್ಲವೂ ಎಚ್ಚರದಲ್ಲಿ ನಡೆವಹಾಗೆಯೇ ತೋರುವಂತೆ, ಅವನು ಜಾಗರಾವಸ್ಥೆಯಲ್ಲಿದ್ದರೂ ಮೈತಿಳಿಯದೆ ಮಲಗಿದವನಂತೆ ಅಜ್ಞನಾಗಿಯೇ ಇರುವನು. ಯಾವಾಗಲೂ ಜ್ಞಾನೈಕಸ್ವರೂಪನಾದ ಆತ್ಮನಿಗೆ ದೇವಮನುಷ್ಯಾದ್ಯಾಕಾರಭೇದಗಳು ನಿತ್ಯವಾಗಿ ನಿಲ್ಲತಕ್ಕವುಗಳಲ್ಲ! ಆತ್ಮಸ್ವರೂಪವನ್ನು ಯಥಾಸ್ಥಿತವಾಗಿ ತಿಳಿದುಕೊಂಡವನಿಗೆ, ಶರೀರಪ್ರಯುಕ್ತಗಳಾದ ಆ ಆಕಾರಭೇದಗಳೂ, ಆ ಶರೀರಸಂಬಂಧದಿಂದುಂಟಾಗುವ ಬುದ್ಧಿವಿಪರ್ಯಾಸಗಳೂ, ಆ ಬುದ್ಧಿಭೇದಕ್ಕೆ ಕಾರಣಗಳೂ, ಇನ್ನೂ ಆತ್ಮನಲ್ಲಿ ತೋರುವ ಕರ್ಮವಶ್ಯತ್ವಾದಿದೋಷಾಂತರಗಳೂ, ಸ್ವಪ್ನದಿಂದೆಚ್ಚರಗೊಂಡವನಿಗೆ ಸ್ವಪ್ನವಿಷಯಗಳು ಹೇಗೋ ಹಾಗೆ ಸುಳ್ಳಾಗಿಯೇ ತೋರುವುವು. ಜೀವನು ಜಾಗರಾವಸ್ಥೆಯಲ್ಲಿ, ಎಂದರೆ ಎಚ್ಚರಗೊಂಡಿರುವಾಗ, ಕ್ಷಣಕ್ಷಣಕ್ಕೂ ಸುಖದುಃಖಾತ್ಮಕವಾಗಿ ಮಾರ್ಪಡುತ್ತಿರುವ ಶಬ್ದಾದಿವಿಷಯಗಳನ್ನು ತನ್ನ ಸರ್ವೇಂದ್ರಿಯಗಳಿಂದಲೂ ಅನುಭವಿಸುತ್ತಿರುವನು. ಆ ಜಾಗರಾವಸ್ಥೆಯಲ್ಲಿ ತಾನು ಅನುಭವಿಸಿದುವುಗಳಿಗೆ ಸಮಾನವಾದ ವಿಷಯಗಳನ್ನೇ ಸ್ವಪ್ನದಲ್ಲಿಯೂ ಅನುಭವಿಸುವನು. ಸುಷುಪ್ತಿಯಲ್ಲಿ ಆ ವಿಷಯಭೋಗಗಳನ್ನು ಉಪಸಂಹರಿಸಿ ಸುಮ್ಮನಿರುವನು, ಈ ಮೂರು ಅವಸ್ಥೆಗಳಲ್ಲಿಯೂ ಜೀವನೊಬ್ಬನಾಗಿಯೇ ಇರುವನೇ ಹೊರತು ಒಂದೊಂದವಸ್ಥೆಗೆ ಒಬ್ಬೊಬ್ಬ ಜೀವನಲ್ಲ! ಹೇಗೆಂದರೆ, ನಿದ್ರೆಯಿಂದೆದ್ದವನಿಗೆ ತಾನೇ ಮಲಗಿದ್ದು ಎದ್ದವನೆಂಬ ಸ್ಮೃತಿಯು ಬಿಟ್ಟು ಹೋಗಲಾರದಲ್ಲವೆ? ಆದುದರಿಂದ ಜೀವನೊಬ್ಬನೇ ಆ ಅವಸ್ಥೆಗಳೆಲ್ಲವನ್ನೂ ಅನುಭವಿಸತಕ್ಕವನೆಂಬುದು ಸ್ಪಷ್ಟವು. ಹೀಗೆ ಜೀವನು ಕರ್ಮನಿಮಿತ್ತಗಳಾದ ಪ್ರಾಕೃತೇಂದ್ರಿಯಪ್ರವರ್ತನವುಳ್ಳವನಾಗಿ ಸತ್ವಾದಿಗುಣಗಳ ವ್ಯಾಪಾರಗಳಾದ ಜಾಗರಾದ್ಯವಸ್ಥೆಗಳನ್ನು ನೋಡತಕ್ಕವನಾಗಿರುವನು. ಆದುದರಿಂದ ಮನುಷ್ಯನು, ತನ್ನ ಮನಸ್ಸಿನ ಮೂರವಸ್ಥೆಗಳೂ ಸತ್ವಾದಿ

ಗುಣಗಳಮೂಲಕವಾಗಿ ನನ್ನ ಮಾಯೆಯಿಂದ ನನ್ನಲ್ಲಿಯೇ (ಎಂದರೆ ಮದಾತ್ಮಕನಾದ ಜೀವನಲ್ಲಿ) ಕಲ್ಪಿತಗಳೆಂಬುದನ್ನು ಚೆನ್ನಾಗಿ ವಿಮರ್ಶಿಸಿ ತಿಳಿದುಕೊಂಡು, ನನ್ನನ್ನು ಸೇರುವುದಕ್ಕೆ ಸಾಧನವೆನಿಸಿದ ನನ್ನ ಉಪಾಸನವೇ ತನಗೆ ಪರಮಪ್ರಯೋಜನವೆಂಬುದನ್ನೂ ನಿಶ್ಚಯಿಸಿ, ತನ್ನ ಹೃದಯದಲ್ಲಿರುವ ಸಂಶಯಗಳೆಂಬ ವ್ಯಾಧಿಯನ್ನು ಅನುಮಾನಪ್ರಮಾಣದಿಂದಲೂ, ವೇದಾಂತವಿಚಾರದಿಂದಲೂ, ತೀಕ್ಷ್ಣಜ್ಞಾನವೆಂಬ ಖಡ್ಗದಿಂದಲೂ ಛೇದಿಸಿ, ನನ್ನನ್ನು ಭಜಿಸಬೇಕು. ಅನುಮಾನದಿಂದ ತಿಳಿಯುವುದು ಹೇಗೆಂದರೆ, ಈ ದೇವಮನುಷ್ಯಾದಿಶರೀರಗಳಲ್ಲಿ ಆತ್ಮಭ್ರಾಂತಿಯೂ, ಶಬ್ದಾದಿವಿಷಯಗಳಲ್ಲಿ ಭೋಗ್ಯತಾಬುದ್ಧಿಯೂ ಮನೋವೃತ್ತಿಯನ್ನನುಸರಿಸಿಯೇ ಹುಟ್ಟುವುವು. ಒಂದು ಕೊಳ್ಳಿಯನ್ನು ವೇಗದಿಂದ ತಿರುಗಿಸುವಾಗ, ಅದು ಅಖಂಡವಾದ ಅಗ್ನಿಚಕ್ರದಂತೆ ತೋರಿದರೂ, ಕೊನೆಗೆ ಆ ಚಕ್ರಾಕಾರವು ಅದಕ್ಕೆ ಸ್ಥಿರವಲ್ಲದಿರುವಂತೆ, ಆತ್ಮನಲ್ಲಿ ಶರೀರಾದ್ಯಾಕಾರಭೇದಗಳೂ,ಶಬ್ದಾದಿವಿಷಯಗಳೂ ಕಾಲಕ್ರಮದಿಂದ ತಪ್ಪಿಹೋಗುವುವೇಹೊರತು ಸ್ಥಿರವಲ್ಲ. ಆದುದರಿಂದ ಆತ್ಮನಿಗೆ ಇವೆಲ್ಲವೂ ಸಹಜವಲ್ಲವೆಂಬುದನ್ನು ಅನುಮಾನಿಸಿ ತಿಳಿಯಬೇಕು. ಮತ್ತು ಜೀವನು ಜ್ಞಾನೈಕ್ಯರೂಪನಾಗಿದ್ದರೂ, ದೇವಮನುಷ್ಯಾದಿನಾನಾರೂಪದಿಂದ ತೋರುವನು. ಇದು ಶರೀರಸಂಬಂಧದಿಂದಲೇಹೊರತು ಸಹಜವಾಗಿ ಜೀವನಲ್ಲಿ ಅಂತಹ ಭೇದಗಳಿಲ್ಲ! ಜೀವನಿಗೆ ಈ ವಿಕಲ್ಪಗಳೆಲ್ಲವೂ ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳ ಮೂಲಕವಾಗಿ, ಭಗವಂತನ ಮಾಯೆಯಿಂದ ಸ್ವಪ್ನದಂತೆ ಕಲ್ಪಿಸಲ್ಪಟ್ಟಿರುವುವು. ಎಚ್ಚರಗೊಂಡಮೇಲೆ ಸ್ವಪ್ನಾನುಭವವು ಬಿಟ್ಟುಹೋಗುವಂತೆ, ಆತ್ಮಪರಮಾತ್ಮಸ್ವರೂಪವನ್ನು ತಿಳಿದುಕೊಂಡವನಿಗೆ ಶರೀರಾದ್ಯಾಕಾರಭೇದಗಳು ಆತ್ಮನಿಗೆ ಸಹಜವೆಂಬ ಭ್ರಾಂತಿಯೂ ಬಿಟ್ಟುಹೋಗುವುದು. ಆದುದರಿಂದ ವಿವೇಕಿಯಾದವನು, ಶಬ್ದಾದಿವಿಷಯಗಳ ಕಡೆಗೆ ಕಣ್ಣೆತ್ತಿಯೂ ನೋಡದೆ, ಆ ವಿಷಯಗಳನ್ನು ಮನಸ್ಸಿನಿಂದಲೂ ಸ್ಮರಿಸದೆ, ನಿರ್ವ್ಯಾಪಾರನಾಗಿ, ಆತ್ಮಾನುಭವವೆಂಬ ಸಮಾಧಿಯನ್ನು ಹಿಡಿದು, ತನ್ನ ದೇಹಸ್ಮೃತಿಯೂ ಇಲ್ಲದಿರಬೇಕು. ಹೀಗೆ ಸಮಾಧಿಯನು

ಹಿಡಿದು, ದೇಹಾದಿಗಳಲ್ಲಿ ಆತ್ಮವೆಂಬ ಬುದ್ಧಿಯನ್ನು ನೀಗಿದವನಿಗೆ ಯಾವಾಗಲೂ ಎಂದರೆ, ಆ ಸಮಾಧಿಯನ್ನು ಬಿಟ್ಟು ಭೋಜನಶಯನಾದಿಗಳಲ್ಲಿರುವಾಗಲೂ ತಿರುಗಿ ದೇಹಾತ್ಮ ಭ್ರಮವು ಹುಟ್ಟಲಾರದು. ಶರೀರಾವಸಾನದವರೆಗೂ ಭಗವದ್ಧ್ಯಾನರೂಪವಾದ ಆ ಸಮಾಧಿಯನ್ನು ಮಾತ್ರ ಬಿಡಬಾರದು. ಇಂತಹ ಸಮಾಧಿಯಲ್ಲಿರುವವನ ಮನಸ್ಸು, ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸುವುದರಲ್ಲಿಯೇ ನೆಲೆಯಾಗಿ ನಿಲ್ಲುವುದರಿಂದ, ಅವನು ನಶ್ವರವಾದ ತನ್ನ ದೇಹದ ಸ್ಥಿತಿಗತಿಗಳನ್ನೇ ತಿಳಿಯಲಾರನು. ಮದ್ಯಪಾನದಿಂದ ಮತ್ತೇರಿದವನು, ತನ್ನ ಮೈಮೇಲೆ ಬಟ್ಟೆಯಿರುವುದನ್ನೂ, ಜಾರಿಬಿದ್ದು ಹೋದುದನ್ನೂ ಹೇಗೆ ತಿಳಿಯಲಾರನೋ, ಹಾಗೆಯೇ ಸಮಾಧಿನಿಷ್ಠನಾದವನು, ತನ್ನ ದೇಹವು ಕುಳಿತಿದೆಯೋ, ನಿಂತಿದೆಯೋ ಎಂಬುದನ್ನೇ ತಿಳಿಯಲಾರನು. ಆದರೆ ಇಂತಹ ಯೋಗಸಿದ್ಧಿಯನ್ನು ಪಡೆದಾಗ, ದೇಹಕ್ಕೆ ಯಾವ ಕಾರ್ಯವೂ ಇಲ್ಲವುದರಿಂದ, ಆ ಯೋಗಿಗೆ ಆಗ ದೇಹವೂ ನಷ್ಟವಾದಂತೆ ತಿಳಿಯಬೇಕಲ್ಲವೆ? ಎಂದರೆ, ಹಾಗೆಣಿಸಬಾರದು! ಏಕೆಂದರೆ, ಪ್ರತಿಯೊಬ್ಬ ಜೀವನ ದೇಹವೂ, ಅವನಲ್ಲಿ ಅಂತರಾತ್ಮನಾದ ನನಗೆ ಅಧೀನವಾಗಿರುವುದು. ಆಯಾಜೀವನಿಗೆ ಪ್ರಾರಬ್ಧಕರ್ಮಗಳೆಲ್ಲವೂ ತೀರುವವರೆಗೆ, ಆ ದೇಹವು ಪ್ರಾಣಸಹಿತವಾಗಿ ಅವನೊಡನೆ ಇದ್ದೇ ಇರಬೇಕು. ಹಾಗೆ ಕರ್ಮಕ್ಷಯವಾಗುವವರೆಗೂ ಆಯಾದೇಹವಿದ್ದೇ ಇರುವಪಕ್ಷದಲ್ಲಿ, ಮೇಲೆ ಹೇಳಿದಂತೆ ಸಮಾಧಿನಿಷ್ಠನಾದಜ್ಞಾನಿಯಲ್ಲಿ ಇತರದೇಹಿಗಳಿಗಿಂತಲೂ ವಿಶೇಷವೇನು? ಎಂದು ಕೇಳುವೆಯಾ? ಸಮಾಧಿಯೋಗದಲ್ಲಿ ಸಿದ್ಧಿಹೊಂದಿದವನು, ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿಯುವನಾದುದರಿಂದ, ಸ್ವಪ್ನದಂತೆ ಅನಿತ್ಯವಾದ ದೇಹವನ್ನೂ, ದೇಹಾನುಬಂಧಿಗಳನ್ನೂ ತಿರುಗಿ ಹೊಂದಲಾರನು. ಅಂತಹ ಆತ್ಮಸಾಕ್ಷಾತ್ಕಾರವಿಲ್ಲದವನಿಗಾದರೋ, ಒಂದುದೇಹವು ಬಿದ್ದುಹೋದರೂ, ಮತ್ತೊಂದು ದೇಹವು ಪ್ರಾಪ್ತವಾಗದೆ ಬಿಡದು. ಓ ಬ್ರಾಹ್ಮಣರೆ! ಸಾಂಖ್ಯದಲ್ಲಿಯೂ, ಯೋಗದಲ್ಲಿಯೂ ಕ್ರಮವಾಗಿ ವಿವರಿಸಲ್ಪಟ್ಟ ಆತ್ಮಪರಮಾತ್ಮೋಪಾಸನರೂಪವಾದ ರಹಸ್ಯವೆಲ್ಲವನ್ನೂ ನಿಮಗೆ ತಿಳಿಸಿರುವೆನು. ನಿಮಗೆ ಮೋಕ್ಷಸಾಧನವಾದ ಈ ಧರ್ಮವನ್ನು ಪದೇಶಿಸುವುದ

ಕ್ಕಾಗಿಯೇ ನಾನು ಬಂದವನು! ನನ್ನನ್ನು ನೋಡಿದಾಗ ನೀವು “ನೀನು ಯಾರೆಂ”ದು ಕೇಳಿದಿರಲ್ಲವೆ? ಯಜ್ಞಸ್ವರೂಪನಾದ ಸಾಕ್ಷಾದ್ವಿಷ್ಣುವೇ ನಾನೆಂದು ತಿಳಿಯಿರಿ? ಆತ್ಮಪರಮಾತ್ಮೋಪಾಸನರೂಪಗಳಾದ ಸಾಂಖ್ಯಯೋಗಗಳಿಗೂ, ಸರ್ವಭೂತಹಿತಾಚರಣವೆಂಬ ಸತ್ಯಕ್ಕೂ, ಪುಣ್ಯಕರ್ಮಗಳೆಂಬ ಋತಕ್ಕೂ, ತೇಜಸ್ಸು, ಕೀರ್ತಿ, ಲಕ್ಷ್ಮಿ, ಮುಂತಾದ ಸರ್ವಾರ್ಥಸಿದ್ಧಿಗೂ, ಶಮಕ್ಕೂ ನಾನೇ ಮುಖ್ಯಾಶ್ರಯನೆಂದೂ, ನಾನೇ ಪ್ರವರ್ತಕನೆಂದೂ ತಿಳಿಯಿರಿ. ನಾನು ಹೇಯಗುಣವಿಲ್ಲದವನು ಪೂರ್ಣಕಾಮನು. ಸಮಸ್ತಜೀವಗಳಿಗೂ, ಪ್ರಿಯನೂ, ಸುಹೃತ್ತೂ, ಅಂತರಾತ್ಮನೂ ಆಗಿರುವೆನು. ವೈಷಮ್ಯವಿಲ್ಲದ ಸಾಮ್ಯಬುದ್ಧಿ, ನಿತ್ಯಾನಂದಾನುಭವ, ಮುಂತಾದ ಸಮಸ್ತಕಲ್ಯಾಣಗುಣಗಳೂ ನನ್ನನ್ನು ಸೇವಿಸುತ್ತಿರುವುವು.” ಎಂದೆನು. ಉದ್ಧವಾ! ಹೀಗೆ ನಾನು, ಹಂಸರೂಪದಿಂದ ಬಂದು ಆ ಸನಕಾದಿಗಳಿಗೆ ತತ್ವೋಪದೇಶವನ್ನು ಮಾಡಿದಮೇಲೆ, ಅವರಿಗಿದ್ದ ಸಂದೇಹಗಳೆಲ್ಲವೂ ನೀಗಿದುವು. ಅವರೆಲ್ಲರೂ ಪರಮಭಕ್ತಿಯಿಂದ ನನ್ನನ್ನು ಪೂಜಿಸಿ ಸ್ತುತಿಸಿದರು. ಅವರ ಸತ್ಕಾರಗಳೆಲ್ಲವನ್ನೂ ನಾನು ಸಂತೋಷದಿಂದ ಸ್ವೀಕರಿಸಿ, ಚತುರ್ಮುಖನು ನೋಡುತಿದ್ದಹಾಗೆಯೇ ಅದೇರೂಪದಿಂದ ಅಲ್ಲಿಂದ ಹಾರಿ, ನನ್ನ ಸ್ಥಾನಕ್ಕೆ ಬಂದು ಸೇರಿದೆನು” ಎಂದನು. ಇದು ಹದಿಮೂರನೆಯ ಅಧ್ಯಾಯವು.

---

ಪುರುಷಾರ್ಥಗಳಲ್ಲಿ ಮೋಕ್ಷವೇ ಪ್ರಧಾನವೆಂದೂ, ಆ ಮೋಕ್ಷವೆಂಬುದು ತನ್ನನ್ನು ಹೊರತು ಬೇರೊಂದನ್ನು ಉದ್ದೇಶಿಸದುದಲ್ಲವೆಂದೂ, ಕೃಷ್ಣನು ಉದ್ಧವನಿಗೆ ತಿಳಿಸಿದುದು.

ಉದ್ಧವನು ತಿರುಗಿ ಪ್ರಶ್ನಮಾಡುವನು “ಕೃಷ್ಣಾ! ವೇದಪಿತೃಗಳು, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾನಾಬಗೆಯ ಶ್ರೇಯಸ್ಸುಗಳನ್ನೂ, ಅದಕ್ಕೆ ಬೇರೆಬೇರೆ ಸಾಧನಗಳನ್ನೂ ಹೇಳಿರುವರು. ನೀನಾದರೋ ಈಗ ಫಲಾಪೇಕ್ಷೆಯಿಲ್ಲದ ಭಕ್ತಿಯೋಗವೊಂದೇ ಪುರುಷಾರ್ಥಸಾಧನವೆಂದು ನಿರೂಪಿಸಿರುವೆ ಹೀಗೆ ನಾನಾವಿಧಗಳಾದ ಶ್ರೇಯಸ್ಸುಗಳಲ್ಲಿ ಮನುಷ್ಯನು ಅವನವನಿಗೆ ಇಷ್ಟಬಂದ ಯಾವುದಾದರೂ ಒಂದನ್ನು ಹಿಡಿಯ

ಬಹುದೆ ? ಅಥವಾ ಅವುಗಳಲ್ಲಿ ಒಂದೊಂದೂ ಪ್ರಧಾನವಾಗಿಯೇ ಇರು ವುದೆ ? ಅಥವಾ ಅವುಗಳಲ್ಲಿ ಎಲ್ಲಕ್ಕಿಂತಲೂ ಪ್ರಧಾನವೆನಿಸಿರುವುದು ಒಂದು ಮಾತ್ರವುಂಟೆ? ನೀನು ಹೇಳಿದುದರಲ್ಲಿ ಭಕ್ತಿಯೋಗದಿಂದ ಬೇರೆ ವಿಧ ವಾದ ಸಂಗಗಳೆಲ್ಲವೂ ನೀಗಿ ನಿನ್ನಲ್ಲಿಯೇ ಮನಸ್ಸು ನೆಲೆಗೊಳ್ಳುವುದೆಂದೂ, ಆ ಭಕ್ತಿಯೊಂದೇ ಪ್ರಧಾನವೆಂದೂ ತೋರುವುದು ಅದೊಂದೇ ಮುಖ್ಯವಾಗಿದ್ದ ಪಕ್ಷದಲ್ಲಿ, ಬ್ರಹ್ಮವಾದಿಗಳು ಇತರಪುರುಷಾರ್ಥಗಳನ್ನು ನಿರೂಪಿಸಿರುವುದೇ ವ್ಯರ್ಥವಲ್ಲವೆ? ಆ ಬ್ರಹ್ಮವಾದಿಗಳೂ ಅನಾದಿಯಾಗಿ ಬಂದ ವೇದಪ್ರಾಮಾಣ್ಯವನ್ನನುಸರಿಸಿಯೇ ಆಯಾ ಇತರಪುರುಷಾರ್ಥಗ ಳನ್ನು ಹೇಳಿರುವರು. ಅವರ ಮಾತನ್ನು ನಂಬದಿರುವುದು ಹೇಗೆ ? ಈ ವಿಚಾರದಲ್ಲಿ ನನ್ನ ಸಂದೇಹವನ್ನು ನೀಗಿಸಬೇಕು" ಎಂದನು. ಅದಕ್ಕಾ ಕೃಷ್ಣನು. "ಉದ್ಧವಾ ! ವೇದವು ಅನಾದಿಯಾಗಿ ಬಂದುದೆಂಬುದೇನೋ ನಿಜವೆ? ಪ್ರಳಯಕಾಲದಲ್ಲಿ ಸಮಸ್ತಪ್ರಾಣಿಗಳೂ ನಷ್ಟವಾದಾಗ, ವೇದ ವಾಕ್ಯೆಂಬುದು ನಿರಾಶ್ರಯವಾಗಿ ನಷ್ಟವಾಗಿ ಹೋದರೂ, ಸೃಷ್ಟ್ಯಾರಂಭ ದಲ್ಲಿ ನಾನೇ ಅದನ್ನು ಬ್ರಹ್ಮನಿಗೆ ನನ್ನ ಬಾಯಿಂದ ಉಪದೇಶಿಸಿದೆನು. ಆ ವೇದದಲ್ಲಿ ನಿರೂಪಿಸಲ್ಪಟ್ಟಿರುವ ಪ್ರಧಾನಧರ್ಮವು ನನ್ನ ಸ್ವರೂಪವಲ್ಲದೆ ಬೇರೆಯಲ್ಲ! ನನ್ನಿಂದ ಉಪದೇಶವನ್ನು ಹೊಂದಿದಮೇಲೆ,ಬ್ರಹ್ಮನು ಅದನ್ನು ತನ್ನ ಮೊದಲನೆಯ ಪುತ್ರನಾದ ಮನುವಿಗೆ ಉಪದೇಶಿಸಿದನು. ಅವನಿಂದ ಭೃಗು ಮೊದಲಾದ ಸಪ್ತರ್ಷಿಗಳೂ, ಅವರಿಂದ ಅವರವರ ಮಕ್ಕಳೂ ಅದನ್ನು ಗ್ರಹಿಸಿದರು.ಅವರೂ ತಮ್ಮ ಮಕ್ಕಳಿಗೆ ಉಪದೇಶಿಸಿದರು.ಹೀಗೆಯೇ ಪುತ್ರಪೌತ್ರಪರಂಪರೆಯಾಗಿ ಉಪದೇಶಿಸಲ್ಪಟ್ಟ ವೇದಗಳು,ದೇವ,ದಾನವ, ಗುಹ್ಯಕ, ಮನುಷ್ಯ, ಸಿದ್ಧ, ಗಂಧರ್ವ, ವಿದ್ಯಾಧರ, ಚಾರಣ, ಕಿಂದೇವ, ಕಿನ್ನರ, ಕಿಂಪುರುಷ, ನಾಗರೇ ಮೊದಲಾಗಿ ಎಲ್ಲರಲ್ಲಿಯೂ ಹರಡುತ್ತಬಂ ದುವು. ಆದರೇನು ? ಹೀಗೆ ಉಪದೇಶಹೊಂದಿದವರ ಸ್ವಭಾವವೆಲ್ಲವೂ ಒಂ ದೇವಿಧವಾದುದಲ್ಲ! ಸತ್ವ, ರಜಸ್ಸು, ತಮಸ್ಸೆಂಬ ಮೂರುಪ್ರಕೃತಿಗುಣಗ ಳಿಂದ, ಅವರವರ ಸ್ವಭಾವಗಳೂ ಬೇರೆಬೇರೆ ವಿಧವಾಗಿರುವುವು. ಆಯಾ ಸ್ವಭಾವಕ್ಕೆ ತಕ್ಕಂತೆ ಅವರವರ ಬುದ್ಧಿಯೂ ಪ್ರವರ್ತಿಸುವುದು. ಆ ಬುದ್ಧಿ

ಗೆ ತಕ್ಕಂತೆ ಮಾತುಗಳೂ ನಾನಾವಿಧವಾಗಿ ಹೊರಡುವುವು. ಹೀಗೆ ಸ್ವಭಾವಭೇದದಿಂದಲೇ ಮತಭೇದಗಳೂ ಏರ್ಪಟ್ಟಿರುವುವು. ಇದೇಕಾರಣದಿಂದ ಕೇವಲತಾಮಸಸ್ವಭಾವವುಳ್ಳ ಕೆಲವರು, ವೇದಗಳಿಗೆ ಅಪ್ರಾಮಾಣ್ಯವನ್ನೇ ಬೋಧಿಸುತ್ತ ಬಂದುದರಿಂದ, ಅವರಿಂದ ಉಪದೇಶವನ್ನು ಹೊಂದಿದವರು, ಪಾಷಂಡಮತವನ್ನೇ ಅವಲಂಬಿಸಿರುವರು. ಹೀಗೆಯೇ ಕೆಲಕೆಲವರು ನನ್ನ ಮಾಯೆಯಿಂದ ಬುದ್ಧಿಮೋಹಗೊಂಡು, ತಮ್ಮತಮ್ಮ ಕರ್ಮಗಳಿಗೂ, ರುಚಿಗೂ ತಕ್ಕಂತೆ, ವೇದವಾಕ್ಯಗಳಿಗೆ ವಿರುದ್ಧಾರ್ಥಗಳನ್ನು ಕಲ್ಪಿಸಿ, ಮನುಷ್ಯನು ಪಡೆಯಬೇಕಾದ ಶ್ರೇಯಸ್ಸುಗಳನ್ನೂ, ಅವಕ್ಕೆ ಸಾಧನಗಳನ್ನೂ ನಾನಾವಿಧವಾಗಿ ಹೇಳುತ್ತಿರುವರು. ಕೆಲವರು ಧರ್ಮವನ್ನೂ, ಕೆಲವರು ಯಶಸ್ಸನ್ನೂ, ಕೆಲವರು ಕಾಮವನ್ನೂ, ಬೇರೆಕೆಲವರು ಸತ್ಯ, ದಮ, ಶಮಾದಿಗಳನ್ನೂ, ಕೆಲವರು ಐಶ್ವರ್ಯವನ್ನೂ, ಕೆಲವರು ಮೃಷ್ಟಾನ್ನಭೋಜನವನ್ನೂ ಕರ್ಮಗಳಿಗೆ ಫಲರೂಪವಾಗಿ ಹೇಳಿ, ಅವುಗಳೇ ಮನುಷ್ಯನಿಗೆ ಶ್ರೇಯಸ್ಸೆಂದೂ ಹೇಳುವರು. ಈ ಶ್ರೇಯಸ್ಸುಗಳನ್ನು ಪಡೆಯುವುದಕ್ಕೆ ಕೆಲವರು ಅರ್ಥವನ್ನೂ, ಕೆಲವರು ಕರ್ಮಗಳನ್ನೂ, ಕೆಲವರು ಉಪವಾಸಾದಿವ್ರತಗಳನ್ನೂ, ಬೇರೆ ಕೆಲವರು ಯಜ್ಞ, ದಾನ, ತಪಸ್ಸು, ಶೌಚ, ನಿಯಮಾದಿಗಳನ್ನೂ, ಕೆಲವರು ಇಂದ್ರಿಯನಿಗ್ರಹರೂಪವಾದ ಯಮವನ್ನೂ ಉಪಾಯಗಳನ್ನಾಗಿ ಹೇಳಿರುವರು. ಹೀಗೆ ಅವರವರು ತಮ್ಮತಮ್ಮ ಮನಸ್ಸಿಗೆ ತೋರಿದಂತೆ ಹೇಳುತ್ತಿರುವರು. ಆದರೇನು ? ಈ ಯಜ್ಞಾದಿಕರ್ಮಗಳಿಗೆ ಹೇಳಿದ ಫಲಗಳೆಲ್ಲವೂ ಅನಿತ್ಯಗಳು. ಇವು ಕೊನೆಗೆ ದುಃಖಕ್ಕೇ ಕಾರಣವಾಗಿರುವುವು. ಇವೆಲ್ಲವೂ ಅಜ್ಞಾನದಲ್ಲಿಯೇ ಪರ್ಯವಸಿತಗಳಾಗುವುವು. ಇವುಗಳನ್ನನುಭವಿಸುವಾಗ ಲಭಿಸತಕ್ಕ ಆನಂದವೂ ಅತ್ಯಲ್ಪವಾದುದು. ಸುಖಾನುಭವಕಾಲದಲ್ಲಿಯೂ ಕೂಡ, ಆ ಪುಣ್ಯಫಲವು ಎಂದಿಗೆ ತೀರಿಹೋಗುವುದೋ, ನಾವು ಯಾವಕ್ಷಣದಲ್ಲಿ ತಿರುಗಿ ಕೆಳಗೆ ಬೀಳಬೇಕಾಗುವುದೋ, ಎಂಬ ಭಯವಿದ್ದೇ ಇರುವುದರಿಂದ,ಆಗಿನ ಸುಖವೂ ದುಃಖಗರ್ಭಿತವಾಗಿಯೇ ಇರುವುದು. ಆದುದರಿಂದ ಉದ್ಧವಾ! ನಿತ್ಯಾನಂದಸ್ವರೂಪನಾದ ನನ್ನಲ್ಲಿ ಮನಸ್ಸಿಟ್ಟು, ಬೇರೆ ಎಲ್ಲಾ ವಿಷಯಗಳಲ್ಲಿಯೂ ನಿರಪೇಕ್ಷನಾದವನ ಸುಖಕ್ಕೆ ಮೇಲೆ

ಸುಖವಿಲ್ಲ ! ಎಂತಹ ವಿಷಯಸುಖವೂ ಅದರ ಮುಂದೆ ಬರಲಾರದು. ಬೇರೊಂದರಲ್ಲಿಯೂ ಆಸೆಯನ್ನಿಡದೆ, ಜಿತೇಂದ್ರಿಯನಾಗಿ, ಸಮಸ್ತಭೂತ ಗಳಲ್ಲಿಯೂ ನನ್ನನ್ನೇ ಭಾವಿಸುವ ಸಮಬುದ್ಧಿಯುಳ್ಳವನಾಗಿ, ಮದೇಕಧ್ಯಾ ನದಿಂದ ಸಂತುಷ್ಟನಾದವನಿಗೆ, ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳೂ ಸುಖಮಯವಾಗಿಯೇ ತೋರುವುವು. ಉದ್ಧವಾ ! ಹೆಚ್ಚು ಮಾತಿನಿಂದೇನು ? ನನ್ನಲ್ಲಿ ನಟ್ಟಮನಸ್ಸುಳ್ಳವನಿಗೆ ಬ್ರಹ್ಮಪಟ್ಟವಾಗಲಿ, ಮಹೇಂದ್ರಪದವಿ ಯಾಗಲಿ, ಸಮಸ್ತಭೂಮಂಡಲಾಧಿಪತ್ಯವಾಗಲಿ, ಪಾತಾಳಾಧಿಪತ್ಯವಾ ಗಲಿ, ಅಣಿಮಾದಿಯೋಗಸಿದ್ಧಿಗಳಾಗಲಿ, ಪುನರ್ಜನ್ಮವಿಲ್ಲದ ಕೈವಲ್ಯವಾಗಲಿ, ಎಷ್ಟುಮಾತ್ರವೂ ರುಚಿಸಲಾರದೆಂದು ತಿಳಿ! ಅವನು ನನ್ನನ್ನು ಬಿಟ್ಟು ಬೇ ರೊಂದನ್ನೂ ಆಶಿಸಲಾರನು. ಅವನಿಗೆ ನನ್ನಲ್ಲಿ ಹೇಗೋ,ನನಗೂ ಅಂತವನಲ್ಲಿ ಅಸಾಧಾರಣಪ್ರೇಮವುಂಟು. ನನಗೆ ಈ ನನ್ನ ದೇಹವಾಗಲಿ, ನನ್ನ ಪುತ್ರ ನಾದ ಚತುರ್ಮುಖನಾಗಲಿ, ಪೌತ್ರನಾದ ರುದ್ರನಾಗಲಿ, ಒಡಹುಟ್ಟಿದ ಬಲರಾಮನಾಗಲಿ, ಕೈಹಿಡಿದ ರುಕ್ಮಿಣಿಯಾಗಲಿ, ಆ ನನ್ನ ಭಕ್ತನಂತೆ ಪ್ರೀತಿ ಪಾತ್ರರಾಗಲಾರರು. ನನ್ನಲ್ಲಿಯೇ ಸರ್ವಭಾರವನ್ನಿಟ್ಟು, ಬೇರೊಂದನ್ನೂ ಅಪೇಕ್ಷಿಸದವನಾಗಿಯೂ, ಶುಚಿಯಾಗಿಯೂ, ಶಾಂತನಾಗಿಯೂ, ಸರ್ವತ್ರ ನನ್ನಭಾವವನ್ನಿಡುವುದರಿಂದ ಯಾರಲ್ಲಿಯೂ ವೈರಬುದ್ಧಿಯಿಲ್ಲದೆ ಸಮದ ರ್ಶನನಾಗಿಯೂ ಇರುವ ಭಕ್ತನನ್ನು, ನಾನು ಎಡೆಬಿಡದೆ ಹಿಂಬಾಲಿಸುವೆನು. ಸದಾಕಾಲದಲ್ಲಿಯೂ ಅವನನ್ನು ನನ್ನ ಪಾದರೇಣುಗಳಿಂದ ಪವಿತ್ರನನ್ನಾಗಿ ಮಾಡುತ್ತಿರುವೆನು. ನನ್ನಲ್ಲಿರುವ ಅನುರಾಗದಿಂದ ಬೇರೆ ಯಾವುದನ್ನೂ ಅಪೇಕ್ಷಿಸದೆ, ಶಾಂತರಾಗಿಯೂ, ಸರ್ವಭೂತದಯಾಪರರಾಗಿಯೂ ಇರುವ ಮಹಾತ್ಮರ ಬುದ್ಧಿಯನ್ನು, ಕಾಮವೆಂಬುದು ಎಷ್ಟುಮಾತ್ರವೂ ಕದಲಿಸಲಾ ರದು. ಅಂತವರು ಯಾವಾಗಲೂ ನನ್ನನ್ನು ಅನುಭವಿಸುವುದರಿಂದುಂಟಾದ ಪರಮಾನಂದದಲ್ಲಿ ಮಗ್ನರಾಗಿ, ಮೋಕ್ಷಸುಖಕ್ಕೂ ಆಸೆಪಡಲಾರರು. ಭಕ್ತಿ ಯೋಗವನ್ನು ಮೊದಮೊದಲು ಆರಂಭಿಸಿದವನು, ಇಂದ್ರಿಯಗಳನ್ನು ಜ ಯಿಸಲಾರದವನಾಗಿದ್ದು, ಶಬ್ದಾದಿವಿಷಯಗಳು ನಾನಾಮುಖವಾಗಿ ಅವನ ಮನಸ್ಸನ್ನು ಕದಲಿಸುತಿದ್ದರೂ, ದಿನದಿನಕ್ಕೆ ಆ ಭಕ್ತಿಯು ಪರಿ

ಪಾಕಹೊಂದುತ್ತ ಬರುವುದರಿಂದ, ಆ ವಿಷಯಗಳಿಗೆ ಈಡಾಗಲಾರನು. ಅಗ್ನಿಯು ಮೇಲೆಮೇಲೆ ಜ್ವಲಿಸುತ್ತಬಂದ ಹಾಗೆಲ್ಲಾ, ಕಟ್ಟೆಗೆಗಳನ್ನು ಶೀಘ್ರದಲ್ಲಿ ದಹಿಸಿ ಭಸ್ಮಮಾಡುವಂತೆ, ನನ್ನ ವಿಷಯದಲ್ಲಿ ಹೆಚ್ಚಿಬರುತ್ತಿರುವ ಭಕ್ತಿಯೋಗವು, ಪಾಪಗಳೆಲ್ಲವನ್ನೂ ಸಮೂಲವಾಗಿ ದಹಿಸಿಬಿಡುವುದು, ಉದ್ಧವಾ! ಪೂರ್ಣವಾದ ಭಕ್ತಿಯು ನನ್ನನ್ನು ವಶೀಕರಿಸುವಂತೆ, ಇತರಧರ್ಮಗಳಾಗಲಿ, ಸಾಂಖ್ಯಯೋಗಗಳಾಗಲಿ, ವೇದಾಧ್ಯಯನವಾಗಲಿ, ತಪಸ್ಸಾಗಲಿ, ದಾನಗಳಾಗಲಿ ನನ್ನನ್ನು ವಶೀಕರಿಸಲಾರವು. ಏಕರೂಪವಾದ ಭಕ್ತಿಯೊಂದರಿಂದಲೇ ನನ್ನನ್ನು ಹಿಡಿಯುವುದು ಶಕ್ಯವು. ನಾನು ಆತ್ಮಭೂತನಾದುದರಿಂದ ಎಲ್ಲಕ್ಕಿಂತಲೂ ಪ್ರಿಯತಮನು ನನ್ನಲ್ಲಿ ಸ್ಥಿರವಾದ ಭಕ್ತಿಯು,ಜಾತಿಯಲ್ಲಿ ಶ್ವಪಚನನ್ನೂ ಪಾವನಮಾಡುವುದು.ಧರ್ಮ,ಸತ್ಯ, ದಯೆ, ವಿದ್ಯೆ, ತಪಸ್ಸು ಮುಂತಾದ ಗುಣಗಳು ತುಂಬಿದ್ದರೂ, ನನ್ನಲ್ಲಿ ಭಕ್ತಿಯೊಂದುಮಾತ್ರ ಇಲ್ಲದಿದ್ದರೆ, ಅಂತವನ ಆತ್ಮವು ಶುದ್ಧವೆನಿಸಲಾರದು. ಆದರೆ, ಉದ್ಧವಾ! ಬರೀಬಾಯಿಮಾತಿನಿಂದ ತಾನು ಭಕ್ತನೆಂದು ಹೇಳಿಕೊಂಡರೆ ಸಾಲದು. ಮೈಯಲ್ಲಿ ರೋಮಾಂಚಗಳಿಲ್ಲದೆ, ಮದೇಕಧ್ಯಾನದಿಂದ ಮನಸ್ಸು ಕರಗದೆ, ಕಣ್ಣುಗಳಲ್ಲಿ ಆನಂದಬಾಷ್ಪವು ತುಳುಕದಿದ್ದ ಭಕ್ತಿಯು ನಿಜವಾದ ಭಕ್ತಿಯೆನಿಸಲಾರದು. ಅಂತಹ ಭಕ್ತಿಯು ಅಂತಃಕರಣವನ್ನೂ ಶುದ್ಧೀಕರಿಸಲಾರದು ಯಾವನಿಗೆ ಭಕ್ತಿಪಾರವಶ್ಯದಿಂದ ಕಂಠಸ್ವರವು ಕುಗ್ಗಿ, ಮನಸ್ಸುಕರಗಿ, ಒಮ್ಮೆ ಅಳುವುದು, ಆಗಾಗ ನಗುವುದು, ಲಜ್ಜೆಯಿಲ್ಲದೆ ಕುಣಿಯುವುದು, ಗಟ್ಟಿಯಾಗಿ ಹಾಡುವುದು, ಇಂತಹ ಚೇಷ್ಟೆಗಳನ್ನು ನಡೆಸುವನೋ, ಅಂತವನೇ ನನ್ನಲ್ಲಿ ಪೂರ್ಣಭಕ್ತಿಯುಳ್ಳವನು. ಅಂತವನು ತನ್ನ ಸಂಬಂಧದಿಂದ ಲೋಕವನ್ನೆಲ್ಲಾ ಪಾವನಮಾಡುವನು. ಬಂಗಾರವನ್ನು ಬೆಂಕಿಯಲ್ಲಿಟ್ಟು ಊದುವುದರಿಂದ, ತನ್ನಲ್ಲಿರುವ ಕಶ್ಮಲವನ್ನು ಬಿಟ್ಟು ತನ್ನ ಸಹಜವಾದ ಶುದ್ಧರೂಪವನ್ನು ಹೊಂದುವಂತೆ, ಜೀವಾತ್ಮನೂಕೂಡ ನನ್ನಲ್ಲಿ ಭಕ್ತಿಯೋಗದಿಂದ, ಕರ್ಮಶೇಷವನ್ನು ಕಳೆದು, ಶುದ್ಧವಾದ ಸಹಜಸ್ವರೂಪವನ್ನು ಹೊಂದುವನು. ರೋಗಪೀಡಿತವಾದ ಕಣ್ಣಿಗೆ ಔಷಧಾಂಜನವನ್ನಿಕ್ಕುವುದರಿಂದ, ಅದರ ದೋಷವು ನೀಗಿ, ಅತಿ

ಸೂಕ್ಷ್ಮವಸ್ತುವನ್ನೂ ಸ್ಪಷ್ಟವಾಗಿ ಕಾಣುವ ಶಕ್ತಿಯನ್ನು ಹೊಂದುವು ದಲ್ಲವೆ? ಹಾಗೆಯೇ ಜೀವನೂಕೂಡ ನನ್ನ ಕಥಾಶ್ರವಣಕೀರ್ತನಗಳನ್ನು ಮಾಡಿದಷ್ಟೂ, ತನ್ನ ಕರ್ಮದೋಷವನ್ನು ನೀಗಿ, ಶುದ್ಧನಾಗಿ, ಪ್ರಕೃತಿಸ್ವ ರೂಪವನ್ನೂ, ಅದಕ್ಕಿಂತಲೂ ಸೂಕ್ಷ್ಮವಾದ ಆತ್ಮಸ್ವರೂಪವನ್ನೂ, ಆ ಆತ್ಮನಿಗಿಂತಲೂ ಸೂಕ್ಷ್ಮವಾದ ಪರಮಾತ್ಮಸ್ವರೂಪವನ್ನೂ ಸ್ಪಷ್ಟ ವಾಗಿ ಕಾಣಬಲ್ಲವನಾಗುವನು. ಉದ್ಧವಾ! ಮುಖ್ಯವಾಗಿ ಶಬ್ದಾದಿವಿಷ ಯಗಳನ್ನು ಚಿಂತಿಸುವವನ ಮನಸ್ಸು, ವಿಷಯಗಳಲ್ಲಿಯೇ ಮಗ್ನವಾಗು ವುದು. ನನ್ನನ್ನು ಸ್ಮರಿಸತಕ್ಕ ಮನಸ್ಸು ನನ್ನಲ್ಲಿಯೇ ಲಯಿಸುವುದು. ಹೀಗೆ ಯಾವಾಗಲೂ ನನ್ನ ಕಥಾಶ್ರವಣಕೀರ್ತನಗಳೇ ಭಕ್ತಿಗೆ ಮೂಲವಾದುದ ರಿಂದ, ಸ್ವಪ್ನಮನೋರಥಗಳಂತೆ ಅಸ್ಥಿರಗಳಾದ ಶಬ್ದಾದಿವಿಷಯಗಳ ಚಿಂ ತೆಯನ್ನು ಬಿಟ್ಟು, ನನ್ನಲ್ಲಿಯೇ ನೀನು ಮನಸ್ಸನ್ನು ನೆಲೆಗೊಳಿಸಬೇಕು. ಸ್ತ್ರೀಯರನ್ನಾಗಲಿ, ಸ್ತ್ರೀಸಂಗದಲ್ಲಿರುವ ಪುರುಷರನ್ನಾಗಲಿ ಸಮೀಪಕ್ಕೆ ಹೊದ್ದಿಸದೆ, ಪ್ರಯತ್ನಪೂರ್ವಕವಾಗಿ ಇಂದ್ರಿಯಗಳನ್ನು ವಶದಲ್ಲಿರಿಸಿ ಕೊಂಡು, ನಿರ್ಭಯವಾಗಿಯೂ, ವಿವಿಕ್ತವಾಗಿಯೂ ಇರುವ ಸ್ಥಳವನ್ನು ಸೇರಿ, ಯಾವಾಗಲೂ ಬೇಸರಪಡದೆ ನನ್ನನ್ನು ಚಿಂತಿಸುತ್ತಿರಬೇಕು. ಸ್ತ್ರೀಯ ರೊಡನೆಯೂ, ಆ ಸ್ತ್ರೀಸಂಗವುಳ್ಳ ಪುರುಷರೊಡನೆಯೂ ಸಹವಾಸಮಾ ಡುವುದರಿಂದುಂಟಾಗುವಷ್ಟು ಕ್ಲೇಶವೂ, ಬಂಧವೂ ಬೇರೆ ಯಾವವಿಧದಿಂದ ಲೂ ಉಂಟಾಗಲಾರದು. ಆದುದರಿಂದ, ಈ ವಿಚಾರದಲ್ಲಿಮಾತ್ರ ಬಹಳ ಎಚ್ಚರಿಕೆಯಿಂದಿರಬೇಕು." ಎಂದನು.

### ಧ್ಯಾನಯೋಗವು.

ತಿರುಗಿ ಉದ್ಧವನು ಪ್ರಶ್ನಮಾಡುವನು. "ಕೃಷ್ಣಾ! ವಿವಿಕ್ತಸ್ಥಳ ವನ್ನು ಸೇರಿ ನಿನ್ನನ್ನು ಧ್ಯಾನಿಸುತ್ತಿರಬೇಕೆಂದು ಹೇಳಿದೆಯಲ್ಲವೆ? ಆ ಧ್ಯಾನ ಕ್ರಮವು ಹೇಗೆ? ಮೋಕ್ಷಾರ್ಥಿಯಾದವನು ನಿನ್ನ ಯಾವ ರೂಪವನ್ನು ಯಾವರೀತಿಯಲ್ಲಿ ಧ್ಯಾನಿಸಬೇಕು ? ಈ ವಿಚಾರವನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಕೃಷ್ಣನು. "ಉದ್ಧವಾ! ಕೇಳು! ನನ್ನನ್ನು ಧ್ಯಾ ನಿಸತಕ್ಕವನು, ವಿವಿಕ್ತವಾದ ಸ್ಥಳದಲ್ಲಿ, ಹಳ್ಳತಿಟ್ಟಿಲ್ಲದ ಒಂದಾನೊಂದು

ಸಮಪ್ರದೇಶವನ್ನು ನೋಡಿ, ಅಲ್ಲಿ ದರ್ಭೆಗಳಿಂದಾಗಲಿ, ಕೃಷ್ಣಾಜಿನದಿಂದಾಗಲಿ, ಆಸ್ತರಣವನ್ನು ಕಲ್ಪಿಸಿ, ಸ್ವಸ್ತಿಕಾಸನ, ಪದ್ಮಾಸನ ಮೊದಲಾದ ಯಾವುದಾದರೂ ಒಂದಾಸನಕ್ರಮದಿಂದ ನಿಶ್ಚಲನಾಗಿ ಮೈಯನ್ನು ನೆಟ್ಟಗೆ ನಿಲ್ಲಿಸಿ ಕುಳ್ಳಿರಬೇಕು. ತೊಡೆಯಮೇಲೆ ಕೈಗಳನ್ನಿಟ್ಟು, ಬೇರೊಂದನ್ನೂ ನೋಡದ ಹಾಗೆ ದೃಷ್ಟಿಯನ್ನು ಮೂಗಿನ ತುದಿಯಲ್ಲಿ ನಿಲ್ಲಿಸಿಡಬೇಕು. ಪೂರಕ, ಕುಂಭಕ, ರೇಚಕಗಳೆಂಬ ಪ್ರಾಣಾಯಾಮಕಾರ್ಯಗಳನ್ನು ಕ್ರಮವಾಗಿಯೂ, ವಿಲೋಮವಾಗಿಯೂ ನಡೆಸುತ್ತ, ಅದರಿಂದ ಪ್ರಾಣವಾಯುವಿನ ಸಂಚಾರಮಾರ್ಗಗಳಾದ ಇಡೆ ಮತ್ತು ಪಿಂಗಳೆಯೆಂಬ ನಾಡೀರಂಧ್ರಗಳನ್ನು ಶುದ್ಧೀಕರಿಸಬೇಕು, ಧ್ಯಾನಕಾರ್ಯವು ಸರಿಯಾಗಿಯೂ ಸುಲಭವಾಗಿಯೂ ನಡೆಯುವುದಕ್ಕೆ ಮನೋಜಯವು ಅತ್ಯವಶ್ಯವು. ಆ ಮನಸ್ಸನ್ನು ಜಯಿಸಬೇಕಾದರೆ ಮೊದಲು ಪ್ರಾಣವನ್ನು ಜಯಿಸಬೇಕು.ಆದುದರಿಂದ ಮೊದಲು ಪ್ರಾಣಾಯಾಮಗಳನ್ನು ಅಭ್ಯಸಿಸುವುದರಿಂದಲೇ ಇಂದ್ರಿಯಗಳನ್ನು ಜಯಿಸಬೇಕು. ಒಂದೊಂದಾವರ್ತಿಯೂ ಈ ಪ್ರಾಣಾಯಾಮವನ್ನು ಓಂಕಾರೋಚ್ಚಾರಣಪೂರ್ವಕವಾಗಿಯೇ ನಡೆಸಬೇಕು. ಆ ಓಂಕಾರವು ಹೃದಯದಲ್ಲಿ ಘಂಟಾನಾದದಂತೆ ಅವಿಚ್ಛಿನ್ನವಾಗಿ ಧ್ವನಿಮಾಡುತ್ತ, ತಾವರೆದಂಟಿನ ನೂಲಿನಂತೆ ಅತಿಸೂಕ್ಷ್ಮವಾಗಿರುವುದೆಂದೂ, ಉಚ್ಚಾರಣಕಾಲದಲ್ಲಿ ಅದನ್ನು ಪ್ರಾಣವಾಯುವಿನೊಡನೆ ಮೇಲಕ್ಕೆ ತಂದು, ತಿರುಗಿ ಅದನ್ನು ಹೃದಯದಲ್ಲಿಯೇ ಅಡಗಿಸಿಟ್ಟಂತೆಯೂ ಭಾವಿಸುತ್ತಬರಬೇಕು. ಈ ವಿಧವಾದ ಪ್ರಣವಾನುಸಂಧಾನದೊಡನೆ ತ್ರಿಸಂಧ್ಯಾಕಾಲಗಳಲ್ಲಿಯೂ ಹತ್ತಾವರ್ತಿಯಂತೆ ಪ್ರಾಣಾಯಾಮವನ್ನು ಅಭ್ಯಸಿಸುತ್ತಬರಬೇಕು, ಹೀಗೆ ಮಾಡುತ್ತ ಬಂದರೆ, ಒಂದು ತಿಂಗಳೊಳಗಾಗಿಯೇ ಪ್ರಾಣವಾಯುವನ್ನು ಜಯಿಸಬಹುದು. ಉದ್ಧವಾ! ಇದುವರೆಗೆ ಹೇಳಿದುದೆಲ್ಲವೂ ಧ್ಯಾನಕ್ಕೆ ಪೂರ್ವಾಂಗಗಳು. ಇನ್ನು ಧ್ಯಾನಪ್ರಕಾರವನ್ನೂ, ಧ್ಯೇಯವಸ್ತುವಿನ ಸ್ಥಾನವೇನೆಂಬುದನ್ನೂ ತಿಳಿಸುವೆನು ಕೇಳು. ಧ್ಯಾನಕ್ಕೆ ಕುಳಿತವನು, ತನ್ನ ಶರೀರದೊಳಗಿನ ಹೃದಯಕಮಲವು, ಬಾಳೆಯ ಮೊಗ್ಗಿನಂತೆ ಮುಕುಳಿತವಾಗಿ, ವುಷ್ಪವು ಕೆಳಮುಖವಾಗಿಯೂ, ಕಾವು ಮೇಲಾಗಿಯೂ ತೂಗಾ

ಡುತ್ತಿರುವುದೆಂದೂ, ಧ್ಯಾನಕಾಲದಲ್ಲಿ ಅದನ್ನು ಮೇಲುಮುಖವಾಗುವಂತೆ ಸರಿಯಾಗಿ ತಿರುಗಿಸಿಟ್ಟು, ಚೆನ್ನಾಗಿ ವಿಕಾಸಗೊಳಿಸಿದಂತೆಯೂ, ಅದು ಅಷ್ಟಪತ್ರಗಳಿಂದಲೂ, ಕರ್ಣಿಕೆಯಿಂದಲೂ ಶೋಭಿಸುತ್ತಿರುವುದೆಂದೂ ಭಾವಿಸಿಕೊಳ್ಳಬೇಕು. ಮತ್ತು ಅದರ ಕರ್ಣಿಕೆಯನ್ನು ಸುತ್ತಿ, ಹೊರಗಿನಿಂದ ಕ್ರಮವಾಗಿ ಸೂರ್ಯಚಂದ್ರಾಗ್ನಿಮಂಡಲಗಳು ಆವರಿಸಿರುವಂತೆ ಧ್ಯಾನಿಸಬೇಕು. ಆ ಅಗ್ನಿಮಂಡಲದ ನಡುವೆ ಶುಭಾಶ್ರಯವಾದ ನನ್ನ ಸ್ವರೂಪವನ್ನು ಧ್ಯಾನಿಸಬೇಕು. ಅಲ್ಲಿ ಧ್ಯಾನವಿಷಯವಾದ ನನ್ನ ಸ್ವರೂಪವೆಂತದೆಂದು ಕೇಳಿದೆಯಲ್ಲವೆ? ಅದನ್ನು ಹೇಳುವೆನು ಕೇಳು! ಶ್ಯಾಮಲವಾದ ಮೈ! ಶಾಂತಮೂರ್ತಿ! ಅಂದವಾದ ಮುಖ! ಸುಂದರವಾಗಿ ನೀಡಿದ ನಾಲ್ಕುಭುಜಗಳು! ಪರಮಸುಂದರವಾದ ಕೊರಲು! ನುಣುಪಾದ ಕಪೋಲಗಳು! ಶುಭ್ರವಾದ ಮುಗುಳ್ನಗೆ! ಒಂದೇ ಅಳತೆಯುಳ್ಳ ಎರಡು ಕಿವಿಗಳಲ್ಲಿಯೂ ತೂಗಾಡುತ್ತಿರುವ ಮಕರಕುಂಡಲಗಳು! ಮೈಮೇಲೆ ಹೊಂಬಣ್ಣದ ಪಟ್ಟೆಮಡಿ! ಮೇಘಶ್ಯಾಮಲವಾದ ಮೈ! ಶ್ರೀವತ್ಸವೆಂಬ ಮಚ್ಚೆಯಿಂದಲೂ, ಶ್ರೀದೇವಿಯಿಂದಲೂ ಶೋಭಿತವಾದ ಎದೆ! ಶಂಖಚಕ್ರಗದಾಪದ್ಮಗಳಿಂದ ಶೋಭಿತಗಳಾದ ಚತುರ್ಭುಜಗಳು. ಕಂಠದಲ್ಲಿ ವನಮಾಲಿಕೆ! ಕಾಲಿನಲ್ಲಿ ಅಂದುಗೆಗಳು! ಕೌಸ್ತುಭರತ್ನಕಾಂತಿಯಿಂದ ತುಂಬಿದ ಮೈ! ಕಾಂತಿಯಿಂದ ಝುಗಝುಗಿಸುತ್ತಿರುವ ಕಿರೀಟ, ಕೇಯೂರ, ಕಟಕ, ಕಟಿಸೂತ್ರಾದ್ಯಾಭರಣಗಳಿಂದ ಕೂಡಿದ ಸರ್ವಾಂಗಸುಂದರವಾದ ಮೂರ್ತಿ! ಪ್ರಸನ್ನದೃಷ್ಟಿ! ಇಂತಹ ಸುಕುಮಾರವಾದ ನನ್ನ ದಿವ್ಯಾಕೃತಿಯಲ್ಲಿ, ಪಾದದಿಂದ ತಲೆಯವರೆಗೆ ಒಂದೊಂದವಯುವದ ಸೌಂದರ್ಯವನ್ನೂ ಪ್ರತ್ಯೇಕವಾಗಿ ಮನಸ್ಸಿಗೆ ತಂದುಕೊಂಡು ಧ್ಯಾನಿಸಬೇಕು. ಈ ಧ್ಯಾನಕಾಲದಲ್ಲಿ ಧೀರನಾದವನು, ಮನಸ್ಸೆಂಬ ಹಗ್ಗದಿಂದ, ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳೆಂಬ ಕುದುರೆಗಳನ್ನು, ಶಬ್ದಾದಿವಿಷಯಗಳ ಕಡೆಗೆ ಹೋಗದಂತೆ ಬಂಧಿಸಿ, ಬುದ್ಧಿಯೆಂಬ ಸಾರಥಿಯ ಸಹಾಯದಿಂದ ಆ ಮನಸ್ಸನ್ನು ನನ್ನಲ್ಲಿ ತಗುಲಿಸಿಡಬೇಕು. ಹೀಗೆ ಮದೇಕಧ್ಯಾನದಿಂದ ನನ್ನ ಸರ್ವಾಂಗಸೌಂದರ್ಯವನ್ನೂ ಅನುಭವಿಸುತ್ತ ಬಂದಮೇಲೆ, ಬೇರೆ

ಬೇರೆ ಅಂಗಸೌಂದರ್ಯದಲ್ಲಿ ವ್ಯಾಪಿಸಿದ ಆ ಮನಸ್ಸನ್ನೆಳೆದು, ಮಂದಹಾಸವಿಶಿಷ್ಟವಾದ ಮುಖಸೌಂದರ್ಯವೊಂದನ್ನುಮಾತ್ರ ಚಿಂತಿಸುವಂತೆ ಮಾಡಬೇಕು. ಬಹಳಹೊತ್ತಿನವರೆಗೆ ಆ ಮುಖಸೌಂದರ್ಯವನ್ನನುಭವಿಸಿದ ಮೇಲೆ ಅಲ್ಲಿಂದ ಆ ಮನಸ್ಸನ್ನೆಳೆದು, ವ್ಯೋಮದಲ್ಲಿ (ಎಂದರೆ, ವ್ಯೋಮದಂತೆ ನಿರ್ಮಲವಾಗಿಯೂ, ಅಪರಿಚ್ಛಿನ್ನವಾಗಿಯೂ ಇರುವ ನನ್ನ ದಿವ್ಯಾತ್ಮಸ್ವರೂಪದಲ್ಲಿ) ನೆಲೆಗೊಳಿಸಬೇಕು. ಕೊನೆಗೆ ಆ ದಿವ್ಯಾತ್ಮಸ್ವರೂಪಧಾರಣವನ್ನೂ, ತನ್ನನ್ನೂ ಮರೆತು, ತನಗೆ ಧ್ಯೇಯವಾದ ಪರಮಾತ್ಮಸ್ವರೂಪವೊಂದರಲ್ಲಿಹೊರತು ಬೇರೊಂದರ ಚಿಂತೆಯಿಲ್ಲದಿರುವುದೇ ಸಮಾಧಿಯೆನಿಸುವುದು. ಹೀಗೆ ಸಮಾಧಿಯಲ್ಲಿರುವವನಿಗೆ, ಒಂದು ಬೆಳಕಿನಲ್ಲಿ ಮತ್ತೊಂದು ಬೆಳಕು ಹೇಗೋಹಾಗೆ, ತನ್ನ ಆತ್ಮವು ನನ್ನಲ್ಲಿಯೂ, ನಾನು ಆತ್ಮನಲ್ಲಿಯೂ ಕೂಡಿರುವ ಸಂಗತಿಯು ವ್ಯಕ್ತವಾಗಿ ತೋರುವುದು. ಇಂತಹ ಸಮಾಧಿಯಲ್ಲಿ ನಿರ್ವಿಘ್ನವಾಗಿ ಸಿದ್ಧಿಯನ್ನು ಪಡೆದ ಯೋಗಿಗೆ, ದೇಹವೇ ಆತ್ಮವೆಂಬ ಭ್ರಮವೂ, ಆತ್ಮವು ಸ್ವತಂತ್ರವೆಂಬ ಭ್ರಮವೂ ನಿರ್ಮೂಲವಾಗಿ ನಾಶಹೊಂದುವುದು. ಇದು ಹದಿನಾಲ್ಕನೆಯ ಅಧ್ಯಾಯವು.

---

### ಧ್ಯಾನಯೋಗದಿಂದುಂಟಾಗುವ ಅಣಿಮಾದಿಸಿದ್ಧಿಗಳು

“ಉದ್ಧವಾ! ಹಿಂದೆ ಹೇಳಿದಂತೆ ಪ್ರಾಣೇಂದ್ರಿಯಗಳನ್ನು ಜಯಿಸಿ ಸ್ಥಿರಚಿತ್ತನಾಗಿ, ನನ್ನಲ್ಲಿಯೇ ಮನಸ್ಸನ್ನು ಧಾರಣಮಾಡಿದಯೋಗಿಗೆ, ಮೋಕ್ಷಸಿದ್ಧಿಯುಂಟಾಗುವುದು ಮಾತ್ರವೇ ಅಲ್ಲದೆ,ನಡುವೆ ಇನ್ನೂ ಅನೇಕ ಸಿದ್ಧಿಗಳೂ ತಾವಾಗಿ ಕೈಗೂಡಿಬರುವುದುಂಟು. ಆದರೆ ಮೋಕ್ಷಾಪೇಕ್ಷೆಯುಳ್ಳವನು, ಅವುಗಳಿಂದ ತೃಪ್ತನಾಗಬಾರದು” ಎಂದು ಕೃಷ್ಣನು ಹೇಳಿದ ಮಾತನ್ನು ಕೇಳಿ, ತಿರುಗಿ ಉದ್ಧವನು. “ಪ್ರಭೂ! ಯಾವವಿಧವಾದ ಧಾರಣಾಯೋಗದಿಂದ ಯಾವಸಿದ್ಧಿಗಳುಂಟಾಗುವುವು? ಆ ಸಿದ್ಧಿಗಳೆಷ್ಟು? ಅವು ಕೈಗೂಡಿಬರುವುದು ಹೇಗೆ? ಆ ಸಿದ್ಧಿಗಳನ್ನು ಕೊಡತಕ್ಕವನು ನೀನೇ ಆದುದರಿಂದ,ಅವೆಲ್ಲವನ್ನೂ ನನಗೆ ಚೆನ್ನಾಗಿ ವಿವರಿಸಿ ತಿಳಿಸಬೇಕು”ಎಂದನು.

ಅದಕ್ಕಾ ಕೃಷ್ಣನು "ಉದ್ಧವಾ! ಕೇಳು! ಯೋಗಪಾರಂಗತ ರಾದವರು, ಹದಿನೆಂಟು ಸಿದ್ಧಿಗಳುಂಟೆಂದು ಹೇಳಿರುವರು. ಅವುಗಳಲ್ಲಿ ಮೊದ ಲನೆಯ ಎಂಟು ಸಿದ್ಧಿಗಳಿಗೆ ನನ್ನನ್ನು ಪಡೆಯುವುದೇ ಮುಖ್ಯಪ್ರಯೋಜ ನವು. ಉಳಿದ ಹತ್ತು ಸಿದ್ಧಿಗಳಿಗೆ ವಿಷಯಸುಖಾನುಭವವೇ ಪ್ರಯೋಜನ ವಾಗಿರುವುದು. ನನ್ನ ಪ್ರಾಪ್ತಿಯನ್ನೇ ಮುಖ್ಯಪ್ರಯೋಜನವಾಗಿ ಉಳ್ಳ ಮೊದಲಿನ ಎಂಟು ಸಿದ್ಧಿಗಳಿಗೆ, ಕ್ರಮವಾಗಿ, ಅಣಿಮಾ, ಮಹಿಮಾ, ಲಘಿ ಮಾ, ಪ್ರಾಪ್ತಿ, ಪ್ರಾಕಾಶ್ಯ, ಈಶತ್ವ, ವಶಿತ್ವ, ಅತ್ಯಂತಿಕಸುಖವೆಂದು ಹೆಸರು. ಈ ಎಂಟರಲ್ಲಿ ಮೊದಲನೆಯ ಮೂರುಸಿದ್ಧಿಗಳು ದೇಹಕ್ಕೆ ಸಂಬಂ ಧಪಟ್ಟುವು. ಎಂದರೆ, ದೇಹವನ್ನು ಇಷ್ಟಬಂದಹಾಗೆ ಅತಿಸೂಕ್ಷ್ಮವಾಗಿ, ಯಾಗಲಿ, ಅತಿಮಹತ್ತಾಗಿಯಾಗಲಿ, ಅತಿಲಘು (ಹಗುರ) ವಾಗಿಯಾಗಲಿ ಮಾಡಿಕೊಳ್ಳತಕ್ಕ ಶಕ್ತಿ. ಪ್ರಾಪ್ತಿಯೆಂದರೆ ತಾನಿದ್ದಕಡೆಯಲ್ಲಿಯೇ ಇಂದ್ರಿಯಗಳಿಂದ ಪರೋಕ್ಷವಿಷಯಗಳನ್ನೂ ಅನುಭವಿಸತಕ್ಕ ಶಕ್ತಿ. ಪ್ರಾ ಕಾಶ್ಯವೆಂದರೆ ಐಹಿಕಾಮುಷ್ಮಿಕಭೋಗಾನುಭವಗಳಲ್ಲಿ ಬೇರೆ ಯವರಿಗಿಂ ತಲೂ ತಾನೇ ಮೇಲೆನಿಸಿರುವುದು. ಈಶತ್ವವೆಂದರೆ ಸಮಸ್ತವಿಷಯಗ ಳಲ್ಲಿಯೂ ತನ್ನ ಶಕ್ತಿಯನ್ನು ಪ್ರೇರಿಸುವುದು, ವಶಿತ್ವವೆಂದರೆ ವಿಷಯಾ ನುಭವಕಾಲದಲ್ಲಿಯೂ ಅವುಗಳಿಗೆ ವಶನಾಗದಿರುವುದು, ಅತ್ಯಂತಿಕಸುಖವೆಂ ದರೆ ಯಾವಸುಖದಲ್ಲಿ ಇತರಕಾಮಗಳೆಲ್ಲವೂ ಸಮುದ್ರದಲ್ಲಿ ಜಲಬಿಂದುಗ ಳು ಹೇಗೋಹಾಗೆ ಲಯಹೊಂದಿರುವುವೋ, ಅಂತಹ ಉತ್ತಮಸುಖವು. ಈ ಎಂಟುಸಿದ್ಧಿಗಳೂ, ಸಮಾಧಿಯೋಗಸಿದ್ಧನಿಗೆ ಸ್ವಭಾವಸಿದ್ಧಗಳು. ಉಳಿದ ಹತ್ತು ಸಿದ್ಧಿಗಳಿಗೂ ಕ್ರಮವಾಗಿ, ಅನೂರ್ಮಿಮತ್ವ (ಎಂದರೆ, ದೇಹಧರ್ಮಗ ಳಾದ ಹಸಿವು, ಬಾಯಾರಿಕೆ, ಮುಂತಾದುವುಗಳಿಲ್ಲದಿರುವುದು.) ದೂರಶ್ರ ವಣದರ್ಶನ, (ಎಂದರೆ, ಪರೋಕ್ಷವಾಗಿ ನಡೆದ ಶಬ್ದಗಳನ್ನೂ ರೂಪಗಳ ನ್ನೂ ಗ್ರಹಿಸುವ ಶಕ್ತಿ, ಮನೋವೇಗ, ಕಾಮರೂಪ, ಪರಕಾಯ ಪ್ರವೇಶ, ಸ್ವೇಚ್ಛಾಮರಣ, ದೇವತೆಗಳೊಡನೆ ಸೇರಿ ಅವರೊಡನೆ ಸಮಾ ನಭೋಗಗಳನ್ನನುಭವಿಸುವುದು, ಮನಸ್ಸಿಗೆ ತೋರಿದ ಕೋರಿಕೆಗಳನ್ನೆಲ್ಲಾ ಪಡೆಯುವುದು, ನಿರಂಕುಶವಾದ ಆಜ್ಞೆ, ಮತ್ತು ಗತಿ, ಎಂಬಿವು ಹತ್ತೂ, ಇತರ

ಸಿದ್ಧಿಗಳು. ಇವಲ್ಲದೆ ಭೂತಭವಿಷ್ಯದ್ವರ್ತಮಾನಗಳನ್ನು ಸಾಕ್ಷಾತ್ಕರಿಸತಕ್ಕ ಶಕ್ತಿ, ಶೀತೋಷ್ಣಾದಿದ್ವಂದ್ವಗಳನ್ನು ಜಯಿಸುವುದು. ಇತರರ ಮನಸ್ಸನ್ನು ಕಂಡುಕೊಳ್ಳುವ ಶಕ್ತಿ,ಬೆಂಕಿ, ಬಿಸಿಲು, ಮಳೆ, ಗಾಳಿ, ನೀರು,ವಿಷ, ಮುಂತಾದುವುಗಳನ್ನು ತಡೆಯತಕ್ಕ (ಅಗ್ನಿಸ್ತಂಭ, ಜಲಸ್ತಂಭ) ಮುಂತಾದುವು, ಎಲ್ಲಿಯೂ ಪರಾಜಯವಿಲ್ಲದಿರುವುದು, ಇವೂಕೂಡ ಆ ಯೋಗಧಾರಣ ದಿಂದಲೇ ಉಂಟಾಗುವ ಸಿದ್ಧಿಗಳಾಗಿರುವುವು. ಯಾವವಿಧವಾದ ಮನೋಧಾರಣೆಯಿಂದ ಯಾವ ಸಿದ್ಧಿಯುಂಟಾಗುವುದೆಂಬುದನ್ನೂ ತಿಳಿಸುವೆನು ಕೇಳು! ಭೂತಸೂಕ್ಷ್ಮಶರೀರಕನಾದ ನನ್ನನ್ನು ಅದೇಭಾವದಿಂದ ಮನಸ್ಸಿನಲ್ಲಿ ಧಾರಣಮಾಡಿ ಉಪಾಸಿಸತಕ್ಕವನು, ಅಣಿಮಾಸಿದ್ಧಿಯನ್ನು ಹೊಂದುವನು. ಮಹತ್ತೆಂಬ ತತ್ವವನ್ನು ಶರೀರವಾಗಿ ಉಳ್ಳ ನನ್ನನ್ನು ಆ ಮಹತ್ತತ್ವರೂಪದಿಂದಲೇ ಮನಸ್ಸಿನಲ್ಲಿ ಧಾರಣಮಾಡತಕ್ಕವನು, ಆಕಾಶಾದಿ ಭೂತಗಳಿಗೆ ಬೇರೆಬೇರೆಯಾದ ಯಾವ ಮಹತ್ವವುಂಟೋ ಅದನ್ನು ಪಡೆಯತಕ್ಕ ಮಹಿಮಾಸಿದ್ಧಿಯನ್ನು ಹೊಂದುವನು. ಪರಮಾಣುಗಳೆನಿಸಿದ ಭೂತಗಳ ಸೂಕ್ಷ್ಮಾವಯವಗಳಲ್ಲಿಯೂ, ಸೂಕ್ಷ್ಮಕಾಲದಲ್ಲಿಯೂ ವ್ಯಾಪಿಸಿದ ನನ್ನನ್ನು ಅದೇ ಪರಮಾಣುಶರೀರಕನೆಂಬ ಭಾವದಿಂದ ಮನಸ್ಸಿನಲ್ಲಿ ಧಾರಣ ಮಾಡುವವನು ಲಘಿಮಾಸಿದ್ಧಿಯನ್ನು ಹೊಂದುವನು. ವೈಕಾರಿಕವೆಂಬ ಅಹಂಕಾರತತ್ವವೇ ಶರೀರವಾಗಿ ಉಳ್ಳ ನನ್ನನ್ನು ಅದೇಭಾವದಿಂದ ಮನಸ್ಸಿನಲ್ಲಿಟ್ಟು ದೃಢವಾಗಿ ಧ್ಯಾನಿಸಿದವನು, ಎಲ್ಲಾಪ್ರಾಣಿಗಳ ಇಂದ್ರಿಯಗಳಲ್ಲಿ ಅಧಿಷ್ಠಾನಶಕ್ತಿಯನ್ನು ಹೊಂದುವನು. ಅವ್ಯಕ್ತವೆನಿಸಿದ ಪ್ರಧಾನದಿಂದ ಹುಟ್ಟಿದ ಮಹತ್ತತ್ವವು ಸಮಸ್ತಕಾರ್ಯಗಳಿಗೂ ಸೂತ್ರರೂಪವಾಗಿರುವುದೆಂದೂ, ಆ ಮಹತ್ತತ್ವವು ನನಗೆ ಶರೀರವೆಂದೂ ತಿಳಿದು, ಅದೇಭಾವದಿಂದ ನನ್ನಲ್ಲಿ ಮನಸ್ಸನ್ನಿಟ್ಟು ಧಾರಣಮಾಡುವವನು, ಸಕಲವ್ಯಾಪಾರೋಪಯುಕ್ತವಾದ ಜ್ಞಾನಾತಿಶಯವನ್ನೂ, ಬ್ರಹ್ಮನಂತೆ ಸರ್ವೋತ್ತಮಸಾಮರ್ಥ್ಯವನ್ನೂ ಪಡೆಯುವನು. ನಾನು ಸರ್ವವ್ಯಾಪಕನೆಂದೂ, ಸೃಷ್ಟಿ ಸ್ಥಿತಿ ಸಂಹಾರಗಳೆಂಬ ವ್ಯಾಪಾರತ್ರಯಕ್ಕೂ ನಿರ್ವಾಹಕನೆಂದೂ, ಕಾಲಶರೀರಕನೆಂದೂ ಮನಸ್ಸಿನಲ್ಲಿಟ್ಟು ಧಾರಣಮಾಡುವವನು, ಸಮಸ್ತದೇಹಗಳ ಮ

ತ್ತು ಆತ್ಮಗಳ ಪ್ರೇರಣರೂಪವಾದ ಈಶತ್ವಸಿದ್ಧಿಯನ್ನು ಪಡೆಯುವನು. ಷಡ್ಗುಣಪರಿಪೂರ್ಣನೂ, ಸಮಸ್ತಜೀವಗಳಿಗೂ ಪ್ರಾಪ್ಯನೂ ಪ್ರಾಪಕನೂ ಆದ ನಾನು, ಸಮಸ್ತ ಜೀವಶರೀರಕನೆಂಬುದನ್ನು ತಿಳಿದು, ಅದೇಭಾವದಿಂದ ಮನಸ್ಸಿನಲ್ಲಿ ಧಾರಣಮಾಡತಕ್ಕವನು, ನನ್ನಂತೆಯೇ ಗುಣಗಳ ಸಂಬಂಧವಿಲ್ಲದರುವಿಕೆಯೆಂಬ ವಶಿತ್ವಸಿದ್ಧಿಯನ್ನು ಹೊಂದುವನು. ಹೇಯಗುಣರಹಿತನಾಗಿಯೂ, ಸಮಸ್ತ ಕಲ್ಯಾಣಗುಣಪೂರ್ಣನಾಗಿಯೂ ಇರುವ ನನ್ನನ್ನು ಪರಬ್ರಹ್ಮಭಾವದಿಂದ ಮನಸ್ಸಿನಲ್ಲಿ ಧಾರಣಮಾಡಿದವನು, ಸಮಸ್ತ ಕಾಮಗಳಿಗೂ ಎಲ್ಲೆಯಾದ ಪರಮಾನಂದವನ್ನು ಹೊಂದುವನು. ನನ್ನನ್ನು ಶ್ವೇತದ್ವೀಪಪತಿಯೆಂದೂ, ಶುದ್ಧಸತ್ವಮೂರ್ತಿಯೆಂದೂ ಧರ್ಮನಿರ್ವಾಹಕನೆಂದೂ ಮನಸ್ಸಿನಲ್ಲಿ ಧಾರಣಮಾಡುವವನು, ಹಸಿವು ಬಾಯಾರಿಕೆ ಮುಂತಾದ ಷಡೂರ್ಮಿಗಳನ್ನೂ ಬಾಟಿದವನಾಗಿ, ಶ್ವೇತರೂಪತ್ವವನ್ನು ಹೊಂದುವನು. ನನ್ನನ್ನು ಆಕಾಶದಂತೆ ನಿರ್ಮಲನೆಂದೂ, ಸರ್ವವ್ಯಾಪಕನೆಂದೂ, ಪ್ರಾಣಶರೀರಕನೆಂದೂ ಮನಸ್ಸಿನಲ್ಲಿಟ್ಟು ಧಾರಣಮಾಡುವವನು, ದೂರದಲ್ಲಿರುವ ಭೂತಗಳ ಶಬ್ದವನ್ನೂ ಕೇಳಬಲ್ಲವನಾಗುವನು. ಚಕ್ಷುರಿಂದ್ರಿಯವನ್ನು ಅದಕ್ಕಧಿಷ್ಠಾನದೇವತೆಯಾದ ಸೂರ್ಯನಲ್ಲಿಯೂ ಆ ಸೂರ್ಯನನ್ನು ನನ್ನ ಚಕ್ಷುರಿಂದ್ರಿಯದಲ್ಲಿಯೂ ಸೇರಿರುವಂತೆ ಭಾವಿಸಿ, ನನ್ನನ್ನು ಧ್ಯಾನಿಸತಕ್ಕವನು, ದೂರಸ್ಥಪದಾರ್ಥಗಳನ್ನೂ ನೋಡಬಲ್ಲವನಾಗುವನು. ನನ್ನಲ್ಲಿ ಮೊದಲು ಮನಸ್ಸೂ, ಆಮೇಲೆ ಪ್ರಾಣವಾಯುವಿನೊಡನೆ ತನ್ನ ದೇಹವೂ ಸಂಯುಕ್ತವಾದಂತೆ ಭಾವಿಸಿ, ಅದೇವಿಧವಾಗಿ ನನ್ನನ್ನು ಮನಸ್ಸಿನಲ್ಲಿಟ್ಟು ಧಾರಣಮಾಡುವವನಿಗೆ, ಆ ಧಾರಣಾಶಕ್ತಿಯಿಂದ, ಮನಸ್ಸುಹೋದ ಕಡೆಗೆ ದೇಹವು ಹೋಗುವುದು. ನನ್ನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿದ್ದು, ತನಗೆ ಯಾವಯಾವ ರೂಪವನ್ನು ಕೋರುವನೋ, ಧಾರಣಾಯೋಗಬಲದಿಂದ ಆಯಾರೂಪವನ್ನು ಹೊಂದುವನು. ಪರಕಾಯಪ್ರವೇಶವನ್ನು ಮಾಡಬೇಕೆಂದೆಳಸುವವನು, ನನ್ನನ್ನು ಮನಸ್ಸಿನಲ್ಲಿ ದೃಢವಾಗಿಟ್ಟುಕೊಂಡು, ತಾನು ಪ್ರವೇಶಿಸಬೇಕಾದ ದೇಹದಲ್ಲಿ ತನ್ನ ಆತ್ಮವಿರುವಂತೆ ಭಾವಿಸಿದರೆ, ಆಗ ಆ ಆತ್ಮವು. ಪ್ರಾಣೇಂದ್ರಿಯಗಳೊ

ಡನೆ ಸೇರಿ, ಭ್ರಮರವು ಹೂವಿನಿಂದ ಹೂವಿಗೆ ಹಾರುವಂತೆ, ಈ ದೇಹವನ್ನು ಬಿಟ್ಟು ಇತರದೇಹದಲ್ಲಿ ವಾಯುರೂಪವಾಗಿ ಪ್ರವೇಶಿಸುವುದು. ಸ್ವಚ್ಛಂದಮರಣವನ್ನಪೇಕ್ಷಿಸುವವನು, ನನ್ನನ್ನೇ ಧ್ಯಾನಿಸುತ್ತ, ತನ್ನ ಹಿಮ್ಮಡಿಯಿಂದ ಗುದಸ್ಥಾನವನ್ನು ಬಲವಾಗಿ ಒತ್ತಿ ಹಿಡಿದು, ತನ್ನ ಪ್ರಾಣವಾಯುವನ್ನು ಕ್ರಮವಾಗಿ ಮೇಲೇರಿಸಿ, ಹೃದಯ, ಎದೆ, ಕಂಠ, ಮೂರ್ಧವೆಂಬ ಸ್ಥಾನಗಳಲ್ಲಿ ನಿಲ್ಲಿಸುತ್ತಬಂದು, ಕೊನೆಗೆ ನಡುನೆತ್ತಿಯು ಸೀಳಿ ಹೋಗುವುದರಿಂದುಂಟಾಗುವ ಬ್ರಹ್ಮರಂಧ್ರದಮೂಲಕವಾಗಿ, ಆತ್ಮವನ್ನು ಬ್ರಹ್ಮದಲ್ಲಿ ಸೇರಿಸಿ ದೇಹತ್ಯಾಗವನ್ನು ಮಾಡಬೇಕು. ದೇವತೆಗಳೊಡನೆ ಸೇರಿ ದೇವೋದ್ಯಾನಗಳಲ್ಲಿ ವಿಹರಿಸಬೇಕೆಂದು ಕೋರುವವನು, ಶುದ್ಧಸತ್ವಮಯವಾದ ನನ್ನ ಮೂರ್ತಿಯನ್ನು ಧ್ಯಾನಿಸುತ್ತಿರಬೇಕು. ಈ ಧಾರಣಾಬಲದಿಂದ ಆತನ ಸಮೀಪಕ್ಕೆ ದೇವಸ್ತ್ರೀಯರೇ ವಿಮಾನಾರೂಢರಾಗಿ ಬರುವರು. ಧ್ಯಾನಯೋಗದಿಂದ ನನ್ನಲ್ಲಿಯೇ ನಟ್ಟ ಮನಸ್ಸುಳ್ಳವನು, ಯಾವಾಗ, ಯಾವವಿಧವಾಗಿ ತನ್ನ ಬುದ್ಧಿಯಿಂದ ಸಂಕಲ್ಪಿಸುವನೋ, ಆಗಾಗಲೇ ಆಯಾಸಂಕಲ್ಪಾನುಸಾರವಾದ ಅಭೀಷ್ಟಗಳನ್ನು ಹೊಂದುವರು, ಸರ್ವನಿಯಾಮಕನೂ, ಸರ್ವಸ್ವತಂತ್ರನೂ ಆದ ನನ್ನನ್ನು ಧ್ಯಾನಿಸುತ್ತ. ಆಧಾರಣಾಬಲದಿಂದ ತನ್ನಲ್ಲಿಯೂ ಅದೇಗುಣವನ್ನು ಹೊಂದಿದವನಿಗೆ ಯಾವುದರಿಂದಲೂ ವಿಪತ್ತು ಸಂಭವಿಸದು. ಮತ್ತು ನನ್ನ ಆಜ್ಞೆಗೂ ಗತಿಗೂ ಹೇಗೆ ತಡೆಯಿಲ್ಲವೋ, ಹಾಗೆಯೇ ಅವನ ಆಜ್ಞೆಗೂ ಗತಿಗೂ ಎಲ್ಲಿಯೂ ತಡೆಯಿರದು. ನನ್ನಲ್ಲಿ ದೃಢಭಕ್ತಿಯಿಂದ ಶುದ್ಧಮನಸ್ಕನಾಗಿ ಧಾರಣಾಯೋಗವನ್ನು ಚೆನ್ನಾಗಿ ಬಲ್ಲಯೋಗಿಗೆ, ಆ ಭಕ್ತಿಪ್ರಭಾವದಿಂದ, ತ್ರಿಕಾಲಜ್ಞಾನವುಂಟಾಗುವುದು. ನನ್ನ ಧ್ಯಾನದಿಂದ ಶಾಂತಚಿತ್ತನಾದವನ ಶರೀರವು ಯೋಗಮಯವೆನಿಸಿರುವುದರಿಂದ, ಅದು, ಬೆಂಕಿ, ನೀರು ಮೊದುವುಗಳಿಂದ ಹಾನಿಯನ್ನು ಹೊಂದಲಾರದು. ಆ ದೇಹವು ಅಗ್ನಿ ಜಲಾದಿಗಳನ್ನೇ ಸ್ತಂಭಿಸುವುದು. ಅಂತಹ ಯೋಗಿಗೆ, ಜಲಜಂತುಗಳಿಗೆ ಸಮುದ್ರವು ಹೇಗೋಹಾಗೆ, ಆ ಅಗ್ನಿಜಲಾದಿಗಳೇ ವಿಹಾರಸ್ಥಾನವಾಗುವುವು. ಶ್ರೀವತ್ಸವೆಂಬ ಅಸಾಧಾರಣಚಿಹ್ನದಿಂದಲೂ, ಶಂಖಚಕ್ರಾದಿದಿವ್ಯಾಯು

ಧಗಳಿಂದಲೂ, ಛತ್ರಚಾಮರಧ್ವಜಾದಿಗಳಿಂದಲೂ ಶೋಭಿತವಾದ ನನ್ನ ವಿಭೂತಿಗಳನ್ನು ಧಾರಣಾಯೋಗದಿಂದ ಧ್ಯಾನಿಸುವವನಿಗೆ ಎಲ್ಲಿಯೂ ಪರಾಜಯವಿರದು ಹೀಗೆ ಯೋಗಧಾರಣೆಯಿಂದ ನನ್ನನ್ನು ಉಪಾಸಿಸ ತಕ್ಕವರಿಗೆ, ಮೇಲೆ ಹೇಳಿದ ಸಿದ್ಧಿಗಳೆಲ್ಲವೂ ಲಭಿಸುವುವು. ಮನಸ್ಸನ್ನೂ, ಬಾಹ್ಯೇಂದ್ರಿಯಗಳನ್ನೂ ಪ್ರಾಣವಾಯುವನ್ನೂ ಜಯಿಸಿ, ಯೋಗಧಾರಣೆ ಯಿಂದ ನನ್ನಲ್ಲಿ ಮನಸ್ಸಿಟ್ಟವನಿಗೆ ಯಾವ ಸಿದ್ಧಿಯೂ ದುರ್ಲಭವಲ್ಲವು ಆದರೇನು ? ನನ್ನ ಉಪಾಸನಾರೂಪವಾದ ಉತ್ತಮಯೋಗವನ್ನು ಸಾಧಿಸ ಬೇಕೆಂಬ ಉದ್ದೇಶವುಳ್ಳ ಯೋಗಿಗೆ, ಮೇಲೆ ಹೇಳಿದ ಅನೂರ್ಮಿಮತ್ವಾದಿಗ ಳೆಲ್ಲವೂ, ಆ ಯೋಗಸಿದ್ಧಿಗೆ ಭಂಗವನ್ನುಂಟುಮಾಡುವ ವಿಘ್ನಗಳೆಂದೇ ಯೋಗವಿದರ ಅಭಿಪ್ರಾಯವು. ಏಕೆಂದರೆ, ಇವೆಲ್ಲವೂ ತಿರುಗಿ ಸಂಸಾರ ಬಂಧಕ್ಕೇ ಕಾರಣಗಳೆನಿಸುವುವು. ಆದರೆ ಅಣಿಮಾದ್ಯಷ್ಟ ಸಿದ್ಧಿ ಗಳುಮಾತ್ರ ಭಗವತ್ಪ್ರಾಪ್ತಿಗೆ ವಿಘ್ನಗಳಲ್ಲವೆಂಬುದು ಹೇಗೆ? ಎಂದರೆ, ಯೋಗಿಯು ತನ್ನ ಪ್ರಾರಬ್ಧಕರ್ಮವು ಕಳೆದಮೇಲೆಯೇ ಪರಮಪುರು ಷಾರ್ಥರೂಪನಾದ ನನ್ನನ್ನು ಹೊಂದಬೇಕಾದುದರಿಂದ, ಅದುವರೆಗೆ ಕಾಲವನ್ನು ಕಳೆಯುವುದಕ್ಕಾಗಿ ಈ ಯೋಗಗಳೆಂದು ತಿಳಿಯಬೇಕು. ಉದ್ಧವಾ! ಜಲಚರಪ್ರಾಣಿಗಳಿಗೆ ಜಲಸ್ತಂಭವೂ, ಪಕ್ಷಿಗಳಿಗೆ ಗಗನಸಂಚಾ ರವೂ ಹೇಗೋ ಹಾಗೆ, ಕೆಲವುಸಿದ್ಧಿಗಳು ಜನ್ಮಸಿದ್ಧವಾಗಿಯೇ ಬರುವುವು. ಇದಲ್ಲದೆ ಮಣಿಮಂತ್ರೌಷಧಿಗಳಿಂದಲೂ, ತಪಸ್ಸಿನಿಂದಲೂ ಕೆಲವು ಸಿದ್ಧಿ ಗಳು ಕೈಗೂಡಿಬರುವುದುಂಟು. ಈ ಸಮಸ್ತಸಿದ್ಧಿಗಳನ್ನೂ ಯೋಗಬಲದಿಂ ದಲೇ ಪಡೆಯಬಹುದು, ಹೀಗೆ ದೇವಾದಿಜನ್ಮಗಳಿಂದಲೇ ಸುಲಭವಾಗಿ ಪಡೆಯಬಹುದಾದ ಆ ಅಲ್ಪಸಿದ್ಧಿಗಳಿಗಾಗಿ ಆ ಯೋಗವನ್ನು ಪಯೋಗಿಸಿ, ನನ್ನ ಸಾಲೋಕ್ಯಾದಿರೂಪವಾದ ಉತ್ತಮಪುರುಷಾರ್ಥವನ್ನು ಪಡೆಯುವ ವಿಷಯದಲ್ಲಿ ಉಪೇಕ್ಷಿಸಬಾರದು. ಉದ್ಧವಾ ! ಸಮಸ್ತಸಿದ್ಧಿಗಳಿಗೂ ನಾನೇ ಪ್ರಾಪಕನೂ, ಪಾಲಕನೂ, ನಿರ್ವಾಹಕನೂ ಆಗಿರುವೆನು. ಆತ್ಮೋಪಾಸನ ರೂಪವಾದ ಸಾಂಖ್ಯಕ್ಕೂ, ಪರಮಾತ್ಮೋಪಾಸನರೂಪವಾದ ಯೋ ಗಕ್ಕೂ, ಸ್ವರ್ಗಾದಿಸುಖಗಳಿಗೆ ಸಾಧನಗಳಾದ ಕರ್ಮಗಳಿಗೂ, ನಾನೇ ಪ್ರೇರ

ಕನೂ ನಿರ್ವಾಹಕನೂ ಆಗಿರುವೆನು. ಏಕೆಂದರೆ,ಆಕಾಶಾದಿಭೂತಗಳು ಎಲ್ಲಾ ದೇವಮನುಷ್ಯಾದಿಶರೀರಗಳ ಒಳಗೂ ಹೊರಗೂ ವ್ಯಾಪಿಸಿರುವಂತೆ ನಾನು ಎಲ್ಲಾವಸ್ತುಗಳ ಮತ್ತು ಪ್ರಾಣಿಗಳ ಒಳಗೂ ಹೊರಗೂ ವ್ಯಾಪಿಸಿರತಕ್ಕವ ನಾದುದರಿಂದ, ನನ್ನನ್ನು ಬಿಟ್ಟ ವಸ್ತುವೊಂದೂ ಇಲ್ಲವೆಂದುತಿಳಿ !"ಎಂದನು. ಇದು ಹದಿನೈದನೆಯ ಅಧ್ಯಾಯವು.

---

## ಭಗವದ್ವಿಭೂತಿಗಳು.

ಉದ್ಧವನು ತಿರುಗಿ ಕೃಷ್ಣನನ್ನು ಕುರಿತು "ಓ ಪ್ರಭೂ! ನೀನು ಸಾಕ್ಷಾತ್ಪರಬ್ರಹ್ಮನು. ಆದ್ಯಂತವಿಲ್ಲದವನು. ಕರ್ಮಗಳಿಂದ ಆವರಿಸಲ್ಪಡ ದವನು. ಜಗತ್ತಿನ ಉತ್ಪತ್ತಿಸ್ಥಿತಿಲಯಗಳು ನಿನ್ನಿಂದಲೇ ನಡೆಯುವುವು. ಮೋಕ್ಷೋಪಯುಕ್ತವಾದ ಜ್ಞಾನಪ್ರದಾನದಿಂದ ಸಕಲಜೀವಾತ್ಮರ ಉಜ್ಜೀವನಕ್ಕೂ ನೀನೇ ಆಧಾರಭೂತನಾಗಿರುವೆ! ಇಂದ್ರಿಯಜಯವಿಲ್ಲದವ ರಿಗೆ ನಿನ್ನ ಸ್ವರೂಪವು ಯಾವವಿಧದಿಂದಲೂ ತಿಳಿಯದಿದ್ದರೂ, ಬ್ರಹ್ಮ ಜ್ಞಾನವುಳ್ಳವರು, ಉಚ್ಚಾವಚಗಳಾದ ಸಮಸ್ತಭೂತಗಳಲ್ಲಿಯೂ ಯಥಾ ವಸ್ಥಿತವಾಗಿ ನಿನ್ನನ್ನು ಕಂಡುಕೊಂಡು, ಆ ಮೂಲಕವಾಗಿಯೇ ಉಪಾಸಿಸ ಬಲ್ಲರು. ಹೀಗೆ ಮಹರ್ಷಿಗಳು ತಮ್ಮ ಭಕ್ತಿವೃದ್ಧಿಗಾಗಿ ನಿನ್ನನ್ನು ಯಾವ ಯಾವ ವಸ್ತುಗಳಲ್ಲಿ ಯಾವಯಾವ ವಿಭೂತಿವಿಶಿಷ್ಟನಾಗಿರುವುದಾಗಿ ತಿಳಿದು ಉಪಾಸನೆಮಾಡಿ ಭಕ್ತಿಪರಿಪಾಕವನ್ನು ಹೊಂದುವರೋ, ಆ ನಿನ್ನ ವಿಭೂತಿರೂಪವಾದ ಒಂದೊಂದುವಸ್ತುವನ್ನೂ ನನಗೆ ತಿಳಿಸಬೇಕು. ಸಮಸ್ತವಸ್ತುಗಳಲ್ಲಿಯೂ ಗೂಢವಾಗಿದ್ದುಕೊಂಡು, ಅವುಗಳಿಗೆ ಸ್ಥಿತಿಗತಿಗ ಳನ್ನು ಕಲ್ಪಿಸತಕ್ಕವನು ನೀನೇ ಆಗಿದ್ದರೂ, ನಿನ್ನ ಮಾಯೆಯಿಂದ ಮೋಹಿ ತಗಳಾದ ಭೂತಗಳು ನಿನ್ನನ್ನು ತಿಳಿಯಲಾರವು. ಆದುದರಿಂದ ಕೃಷ್ಣಾ! ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲಿಯೂ, ದಿಕ್ಕುಗಳಲ್ಲಿಯೂ ನಿನಗೆ ವಿ ಭೂತಿರೂಪವಾಗಿರುವ ವಸ್ತುಗಳಲ್ಲಿ ಉತ್ಕೃಷ್ಟವಾದುವುಗಳನ್ನು ನನಗೆ ತಿಳಿಸಬೇಕು! ಕೃಷ್ಣಾ! ಪಾದಪ್ರಣಾಮಪೂರ್ವಕವಾಗಿ ನಿನ್ನನ್ನು ಪ್ರಾ ರ್ಥಿಸುವೆನು" ಎಂದನು.

ಅದಕ್ಕಾ ಕೃಷ್ಣನು ''ಉದ್ಧವಾ! ಹಿಂದೆ ಕುರುಕ್ಷೇತ್ರದ ಯುದ್ಧಾರಂಭದಲ್ಲಿ, ಅರ್ಜುನನು ಕೇವಲರಾಜ್ಯದಾಸೆಗಾಗಿ ತಾನು ತನ್ನ ಜ್ಞಾತಿಗಳನ್ನು ಕೊಲ್ಲುವುದು ಪಾಪಹೇತುವೆಂದೆಣಿಸಿ, ಯಾವ ಕಾರ್ಯಕ್ಕೂ ತಾನು ಅಸ್ವತಂತ್ರನೆಂಬುದನ್ನು ತಿಳಿಯದೆ, ತಾನೇ ಕೊಲ್ಲತಕ್ಕವನೆಂದೂ, ಶತ್ರುಗಳು ತನ್ನಿಂದಲೇ ಕೊಲ್ಲಲ್ಪಡತಕ್ಕವರೆಂದೂ ತಪ್ಪುತಿಳುವಳಿಕೆಯುಳ್ಳವನಾಗಿ ಯುದ್ಧಮಾಡುವುದಕ್ಕೆ ಹಿಂಜರಿದನು. ಆಗ ನಾನು ಅವನಿಗೆ ಅನೇಕತತ್ವಬೋಧೆಗಳನ್ನು ಮಾಡತೊಡಗಿದನು ಈಗ ನೀನು ಪ್ರಶ್ನೆಮಾಡುವಂತೆಯೇ ಅವನೂ ಆಗ ನನ್ನ ವಿಭೂತಿಗಳಾವುವೆಂಬುದನ್ನು ಕೇಳಿದನು. ನಾನು ಆ ವಿಚಾರಗಳೆಲ್ಲವನ್ನೂ ಅವನಿಗೆ ವಿವರವಾಗಿ ತಿಳಿಸಿ ಬೋಧಿಸಿದಮೇಲೆ ಯುದ್ಧೋದ್ಯುಕ್ತನಾದನು. ಆಗ ನಾನು ಹೇಳಿದ ವಿಷಯಗಳನ್ನೇ ಈಗಲೂ ನಿನಗೆ ತಿಳಿಸುವೆನು ಕೇಳು! ಸಮಸ್ತಭೂತಗಳಿಗೂ ಅಂತರಾತ್ಮನಾಗಿ, ಅವುಗಳನ್ನು ಆಯಾ ಕಾರ್ಯಗಳಲ್ಲಿ ನಿಯಮಿಸತಕ್ಕವನು ನಾನೇಹೊರತು, ಬೇರೆ ಯಾರಿಗೂ ಯಾವವಿಧದಲ್ಲಿಯೂ ಸ್ವಾತಂತ್ರ್ಯವಿಲ್ಲ. ಸಮಸ್ತಭೂತಗಳಿಗೂ ನಾನು ಸುಹೃತ್ತಾಗಿಯೂ ಇರುವೆನು. ಎಲ್ಲವೂ ಮದಾತ್ಮಕವಾದುದರಿಂದ, ಸಮಸ್ತಭೂತಗಳೂ ನಾನೇ ಎಂದು ತಿಳಿ! ಎಲ್ಲಾವಸ್ತುಗಳ ಉತ್ಪತ್ತಿಸ್ಥಿತಿನಾಶಗಳೆಲ್ಲವೂ ನನ್ನಿಂದಲೇ ನಡೆಯುವುವು. ಉತ್ತಮಗತಿಯುಳ್ಳವರಲ್ಲಿ ನಾನೇ ಗತಿರೂಪನಾಗಿಯೂ, ಕೊಲ್ಲತಕ್ಕವರಲ್ಲಿ ನಾನೇ ಕಾಲರೂಪನಾಗಿಯೂ ಇರುವೆನು ಸತ್ವಾದಿಗುಣಗಳ ಸಾಮ್ಯವೂ ನಾನೇ! ಈ ಗುಣಗಳಲ್ಲಿ ಯಾರಿಗೆ ಯಾವುದು ಸ್ವಭಾವಸಿದ್ಧವಾದುದೋ, ಆಗುಣರೂಪದಿಂದಿರುವವನೂ ನಾನೇ! ಈ ಗುಣಪರಿಣಾಮರೂಪಗಳಾದ ಸಮಸ್ತವಸ್ತುಗಳಿಗೂ ಸೂತ್ರರೂಪವಾದ ಮಹತ್ತತ್ವವೂ ನಾನೇ! ಮಹತ್ತೆನಿಸಿಕೊಂಡ ವಸ್ತುಗಳಲ್ಲಿರುವ ಮಹತ್ವವೆಂಬ ಗುಣವೂ ನಾನೇ! ಸೂಕ್ಷ್ಮವಸ್ತುಗಳಲ್ಲಿಯೂ ಅತಿಸೂಕ್ಷ್ಮವಾದ ಜೀವನೂ ನಾನೇ! ದುರ್ಜಯರಾದವರಲ್ಲಿ ಅವರ ಮನೋರೂಪದಿಂದಿರುವವನೂ ನಾನೇ! ದೇವತೆಗಳಲ್ಲಿ ಹಿರಣ್ಯಗರ್ಭನೂ, ಮಂತ್ರಗಳಲ್ಲಿ ಮೂರಕ್ಷರಗಳುಳ್ಳ ಪ್ರಣವಮಂತ್ರವೂ ನಾನಾಗಿರುವೆನು. ಅಕ್ಷರಗಳಲ್ಲಿ ಅಕಾರವೂ, ವೇದಗಳಲ್ಲಿ ಗಾಯತ್ರಿಯೂ ನಾನಾ

ಗಿರುವೆನು. ದೇವತೆಗಳಲ್ಲಿ ಇಂದ್ರನೂ, ಅಷ್ಟವಸುಗಳಲ್ಲಿ ಹವ್ಯವಾಹನನೂ, ದ್ವಾದಶಾದಿತ್ಯರಲ್ಲಿ ವಿಷ್ಣುವೂ, ಏಕಾದಶರುದ್ರರಲ್ಲಿ ನೀಲಲೋಹಿತನೂ, ಬ್ರಹ್ಮರ್ಷಿಗಳಲ್ಲಿ ಭೃಗುವೂ, ರಾಜರ್ಷಿಗಳಲ್ಲಿ ಮನುವೂ, ದೇವರ್ಷಿಗಳಲ್ಲಿ ನಾರದನೂ, ಧೇನುಗಳಲ್ಲಿ ಕಾಮಧೇನುವೂ ನಾನೇ ಆಗಿರುವೆನು. ಯೋಗಸಿದ್ಧರಲ್ಲಿ ಕಪಿಲನೂ, ಪಕ್ಷಿಗಳಲ್ಲಿ ಗರುಡನೂ, ಪ್ರಜಾಪತಿಗಳಲ್ಲಿ ದಕ್ಷನೂ, ಪಿತೃಗಳಲ್ಲಿ ಅರ್ಯಮನೂ ನಾನೇ! ಉದ್ಧವಾ! ದೈತ್ಯರಲ್ಲಿ ನನ್ನನ್ನೇ ಪ್ರಹ್ಲಾದನೆಂದು ತಿಳಿ! ನಕ್ಷತ್ರಗಳಿಗೂ, ಓಷಧಿಗಳಿಗೂ ಅಧಿಪತಿಯಾದ ಚಂದ್ರನೂ, ಯಕ್ಷರಾಕ್ಷಸರಲ್ಲಿ ಕುಬೇರನೂ ನಾನೇ! ಆನೆಗಳಲ್ಲಿ ಐರಾವತವೂ ನಾನೇ! ಜಲಜಂತುಗಳಿಗೆ ಪ್ರಭುವಾದ ವರುಣನೂ ನಾನಾಗಿರುವೆನು. ಕಾಂತಿಯುಳ್ಳ ಮತ್ತು ತಾಪಜನಕಗಳಾದ ವಸ್ತುಗಳಲ್ಲಿ ಸೂರ್ಯನೂ, ಮನುಷ್ಯರಲ್ಲಿ ರಾಜನೂ, ಕುದುರೆಗಳಲ್ಲಿ ಉಚ್ಚೈಶ್ರವಸ್ಸೂ, ಧಾತುಗಳಲ್ಲಿ ಬಂಗಾರವೂ ನಾನಾಗಿರುವೆನು. ದಂಡಿಸತಕ್ಕವರಲ್ಲಿ ಯಮನೂ, ಸರ್ಪಗಳಲ್ಲಿ ವಾಸುಕಿಯೂ ನಾನೇ! ಅನೇಕಫಣೆಗಳುಳ್ಳ ನಾಗಶ್ರೇಷ್ಠರಲ್ಲಿ ನಾನೇ ಆದಿಶೇಷನು. ಕೊಂಬುಗಳೂ, ಕೋರೆಹಲ್ಲುಗಳೂ ಉಳ್ಳ ಮೃಗಗಳಲ್ಲಿ ನಾನು ಸಿಂಹವು! ವರ್ಣಗಳಲ್ಲಿ ಬ್ರಾಹ್ಮಣವರ್ಣವೂ, ಆಶ್ರಮಗಳಲ್ಲಿ ಸನ್ಯಾಸಾಶ್ರಮವೂ ನಾನೇ ಆಗಿರುವೆನು. ತೀರ್ಥನದಿಗಳಲ್ಲಿ ಗಂಗೆಯೂ, ಮಡುಗಳಲ್ಲಿ ಸಮುದ್ರವೂ, ಆಯುಧಗಳಲ್ಲಿ ಧನುಸ್ಸೂ, ಧನುಷ್ಮಂತರಲ್ಲಿ ತ್ರಿಪುರಹರನೂ, ವಾಸಗೃಹಗಳಲ್ಲಿ ಮೇರುವೂ, ದುರ್ಗಮಸ್ಥಾನಗಳಲ್ಲಿ ಹಿಮಾಲಯವೂ, ವೃಕ್ಷಗಳಲ್ಲಿ ಅಶ್ವತ್ಥವೂ, ಓಷಧಿಗಳಲ್ಲಿ ಯವವೂ (ಜವೆಗೋಧಿ) ನಾನಾಗಿರುವೆನು. ಪುರೋಹಿತರಲ್ಲಿ ವಸಿಷ್ಠನೂ, ವೇದನಿಷ್ಠರಲ್ಲಿ ಬೃಹಸ್ಪತಿಯೂ, ಸೇನಾಪತಿಗಳಲ್ಲಿ ಷಣ್ಮುಖನೂ, ಸನ್ಮಾರ್ಗಪ್ರವರ್ತಕರಲ್ಲಿ ಭಗವಂತನಾದ ಬ್ರಹ್ಮನೂ ನಾನೇ! ಯಜ್ಞಗಳಲ್ಲಿ ಬ್ರಹ್ಮಯಜ್ಞವೂ, ವ್ರತಗಳಲ್ಲಿ ಅಹಿಂಸೆಯೂ ನಾನಾಗಿರುವೆನು. ಶುದ್ಧಿಕಾರವಸ್ತುಗಳಲ್ಲಿ, ಬೆಂಕಿಯೂ ನೀರೂ, ಗಾಳಿಯೂ, ಸೂರ್ಯನೂ, ಆಕಾಶವೂ ನಾನೇ ಆಗಿರುವೆನು. ಅಷ್ಟಾಂಗಯೋಗಗಳಲ್ಲಿ ಸಮಾಧಿಯೆಂಬ ಯೋಗವೂ ನಾನೇ! ಶತ್ರುಜಯಾಕಾಂಕ್ಷಿಗಳಲ್ಲಿ ಜಯೋಪಾಯಮಂತ್ರವೂ ನಾನೇ! ವಿದ್ಯಾನೈಪುಣ್ಯದಲ್ಲಿ

ಆತ್ಮಾನಾತ್ಮ ವಿವೇಕವಿದ್ಯೆಯೂ, ತಾರ್ಕಿಕರಲ್ಲಿ ವಿಕಲ್ಪವೂ ನಾನಾಗಿರು ವೆನು. ಮತ್ತು ಸ್ತ್ರೀಯರಲ್ಲಿ ಶತರೂಪೆಯೂ, ಪುರುಷರಲ್ಲಿ ಸ್ವಾಯಂಭುವ ಮನುವೂ. ಮುನಿಗಳಲ್ಲಿ ನಾರಾಯಣಮುನಿಯೂ, ಜಿತೇಂದ್ರಿಯರಲ್ಲಿ ಸನ ತ್ಕುಮಾರನೂ, ಧರ್ಮಗಳಲ್ಲಿ ಫಲಾಪೇಕ್ಷೆಯಿಲ್ಲದ ಆತ್ಮಭರನ್ಯಾಸವೆಂಬ ಧರ್ಮವೂ,ಯಾವ ಭಯವೂ ಇಲ್ಲದಂತೆ ಮಾಡುವ ಕ್ಷೇಮಕಾರ್ಯಗಳಲ್ಲಿ ಪ್ರತ್ಯ ಗಾತ್ಮಸ್ವರೂಪಾನುಸಂಧಾನವೆಂಬ ಕಾರ್ಯವೂ ನಾನೇ! ರಹಸ್ಯಗೋಪನ ದಲ್ಲಿ ಪ್ರಿಯವಚನವೂ, ಮೌನವೂ ನಾನಾಗಿರುವೆನು. ಮಿಥುನಗಳಲ್ಲಿ ಪತಿ ಪತ್ನಿಯರೇ ಅರ್ಧಾರ್ಧದೇಹವಾಗಿ ಉಳ್ಳ ಪ್ರಜಾಪತಿಯೂ ನಾನೇ! ಅಪ್ರ ಮತ್ತರಲ್ಲಿ ಸಂವತ್ಸರವೂ, ಋತುಗಳಲ್ಲಿ ವಸಂತವೂ, ಮಾಸಗಳಲ್ಲಿ ಮಾರ್ಗ ಶೀರ್ಷವೂ, ನಕ್ಷತ್ರಗಳಲ್ಲಿ ಅಭಿಜಿತ್ತೂ, ಯುಗಗಳಲ್ಲಿ ಕೃತಯುಗವೂ ನಾನಾ ಗಿರುವೆನು. ಶೀತೋಷ್ಣಾದಿದ್ವಂದ್ವಗಳನ್ನು ಜಯಿಸಿದ ಧೀರರಲ್ಲಿ ಅಸಿತ ದೇವ ಲರೂ, ವೇದವಿಭಾಗಕರ್ತರಲ್ಲಿ ವ್ಯಾಸನೂ, ಸೂಕ್ಷ್ಮಬುದ್ಧಿಯುಳ್ಳವರಲ್ಲಿ ಶುಕ್ರಾಚಾರ್ಯನೂ ನಾನೇ ಆಗಿರುವೆನು. ಜ್ಞಾನೈಶ್ವರ್ಯಾದಿಷಡ್ಗುಣಪರಿ ಪೂರ್ಣರಲ್ಲಿ ನಾನೇ ವಾಸುದೇವನು! ಭಗವದ್ಭಕ್ತರಲ್ಲಿ ಉದ್ಧವನೆಂಬ ನೀನೂ ನಾನೇ! ಮತ್ತು ಕಿಂಪುರುಷರಲ್ಲಿ ಹನುಮಂತನೂ, ವಿದ್ಯಾಧರರಲ್ಲಿ ಸುದರ್ಶನನೂ, ರತ್ನಗಳಲ್ಲಿ ಪದ್ಮರಾಗವೂ,ಸುಂದರವಸ್ತುಗಳಲ್ಲಿ ತಾವರೆಯ ಮೊಗ್ಗು, ತೃಣಜಾತಿಗಳಲ್ಲಿ ದರ್ಭವೂ,ಪುರೋಡಾಶ ಮೊದಲಾದ ಹವಿಸ್ಸು ಗಳಲ್ಲಿ ಗೋಸಂಬಂಧವಾದ ಆಜ್ಯವೂ ನಾನೇ! ಉದ್ಯೋಗಪರರಲ್ಲಿ ಸಂಪತ್ತೂ, ಧೂರ್ತರಲ್ಲಿ ಆಗ್ರಹವೂ, ಕ್ಷಮಾಶೀಲರಲ್ಲಿ ತಾಳ್ಮೆಯೂ, ಸಾತ್ವಿಕರಲ್ಲಿ ಸತ್ವಗುಣವೂ, ಓಜಸ್ವಿಗಳಲ್ಲಿ ಓಜಸ್ಸೂ, ಬಲಾಢ್ಯರಲ್ಲಿ ಬಲವೂ, ಕರ್ಮನಿಷ್ಠರಲ್ಲಿ ಪಾಂಚರಾತ್ರೋಕ್ತಕರ್ಮವೂ ನಾನೇ! ಮತ್ಸ್ಯಾವತಾರ ಮೊದಲಾದ ಒಂಬತ್ತು ಅವತಾರಗಳಿಗೆ ಮೂಲಕಾರಣವಾದ ಆದಿಮೂ ರ್ತಿಯೂ ನಾನೇ! ಗಂಧರ್ವರಲ್ಲಿ ವಿಶ್ವಾವಸುವೂ, ಅಪ್ಸರಸಿಯರಲ್ಲಿ ಪೂರ್ವ ಚಿತ್ತಿಯೂ ನಾನಾಗಿರುವೆನು. ಪರ್ವತಗಳಲ್ಲಿರುವ ಸ್ಥೈರ್ಯವೂ, ಭೂಮಿಯ ಲ್ಲಿರುವ ಗಂಧಗುಣವೂ, ಜಲದಲ್ಲಿರುವ ರಸಗುಣವೂ, ತೇಜಸ್ವಿಗಳಲ್ಲಿರುವ ಸೂರ್ಯಾಂಶವೂ,ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಪ್ರಭೆಯೂ,ಆಕಾಶದಲ್ಲಿ ಶಬ್ದ

ಗುಣವೂ ನಾನೇ ಆಗಿರುವೆನು. ಬ್ರಾಹ್ಮಣಪ್ರಿಯರಲ್ಲಿ ಬಲಿಚಕ್ರವರ್ತಿಯೂ, ವೀರರಲ್ಲಿ ಅರ್ಜುನನೂ ನಾನಾಗಿರುವೆನು. ಸಮಸ್ತಭೂತಗಳ ಉತ್ಪತ್ತಿ ಸ್ಥಿತಿ ಲಯ ರೂಪವಿಕಾರಗಳೆಲ್ಲವೂ ನಾನೇ! ದರ್ಶನ, ಸ್ಪರ್ಶನ, ಶ್ರವಣ, ಘ್ರಾಣ, ಆಸ್ವಾದನಗಳೆಂಬ ಐದುಜ್ಞಾನೇಂದ್ರಿಯಗಳ ವ್ಯಾಪಾರಗಳೂ, ಗತಿ, ಉಕ್ತಿ, ಕ್ರಿಯೆ, ವಿರೇಚನ, ರತಿಗಳೆಂಬ ಐದು ಕರ್ಮೇಂದ್ರಿಯವ್ಯಾಪಾರ ಗಳೂ, ಆ ಇಂದ್ರಿಯನಿರ್ವಾಹಕನೂ ನಾನೇ! ಪೃಥಿವಿ ಮೊದಲಾದ ಪಂಚ ಭೂತಗಳೂ, ಇವೆಲ್ಲಕ್ಕೂ ಕಾರಣವಾದ ಮಹತ್ತೂ, ಅಹಂಕಾರವೂ, ಈ ಅಹಂಕಾರವಿಕಾರಗಳಾದ ಏಕಾದಶೇಂದ್ರಿಯಗಳೂ, ಸಮಷ್ಟಿಪುರು ಷನೂ, ಅವ್ಯಕ್ತವೆಂಬ ಪ್ರಧಾನವೂ ನಾನೇ! ರಜಸ್ಸತ್ವತಮೋಗುಣಗಳೂ, ಈ ಗುಣಗಳನ್ನು ಅತಿಕ್ರಮಿಸಿದ ಮುಕ್ತಾತ್ಮಸ್ವರೂಪವೂ ನಾನೇ! ಈ ಎಲ್ಲಾ ತತ್ವಗಳ ಲಕ್ಷಣಜ್ಞಾನವೂ, ಆ ಜ್ಞಾನಕ್ಕೆ ಫಲಭೂತವಾದ ತತ್ವ ಜ್ಞಾನವೂ ನಾನೇ ಆಗಿರುವೆನು. ಉದ್ಧವಾ! ಮುಖ್ಯವಾಗಿ ಎಲ್ಲಕ್ಕೂ ಅಂತ ರ್ಯಾಮಿಯಾಗಿ ನಿಯಮಿಸತಕ್ಕ ಸರ್ವೇಶ್ವರನಾದ ನಾನೂ,ನನಗೆ ಶರೀರಭೂತ ನಾದ ಜೀವನೂ, ಸತ್ವಾದಿಗುಣಗಳೂ, ಆ ಗುಣಗಳಿಗೆ ಆಶ್ರಯವಾಗಿ ಸರ್ವ ಕಾರ್ಯಸ್ವರೂಪವಾಗಿಯೂ ಇರುವ ಅಚಿದ್ದ್ರವ್ಯಗಳೂ,ಇವುಹೊರತು ಬೇರೆ ವಸ್ತುವೇ ಇಲ್ಲ. ಎಂದರೆ ಮೊತ್ತಕ್ಕೆ ಜಗತ್ತೆಲ್ಲವೂ ಚಿತ್ತು,ಅಚಿತ್ತು, ಈ ಶ್ವರರೆಂಬ ಮೂರು ತತ್ವಗಳಾಗಿರುವುದು. ಇವುಗಳಲ್ಲಿ ಚಿದಚಿತ್ತುಗಳೆರಡೂ ಮದಾತ್ಮಕಗಳಾಗಿ ನನ್ನ ನಿಯಮಕ್ಕೆ ಒಳಪಟ್ಟಿರುವುವು. ಒಂದುವೇಳೆ ಸರ್ವಶಕ್ತನಾದ ನಾನೇ ಪ್ರವರ್ತಿಸಿದರೂ,ಭೂಮಿಯಲ್ಲಿರುವ ಪರಮಾಣುಗ ಳ ಸಂಖ್ಯೆಯನ್ನಾದರೂ ಕಂಡುಹಿಡಿಯಬಹುದೇಹೊರತು, ನನ್ನ ವಿಭೂತಿಗ ಳನ್ನು ನಾನೂ ಪ್ರತ್ಯೇಕಿಸಿ ಲೆಕ್ಕವಿಟ್ಟು ಹೇಳಲಾರೆನು. ನಾನು ಸೃಷ್ಟಿಸಿದ ಬ್ರಹ್ಮಾಂಡಗಳೇ ಕೋಟಿಕೋಟಿಸಂಖ್ಯೆಯಿಂದಿರುವುವು. ಉದ್ಧವಾ! ವರ್ಚ ಸ್ಸು,ಕಾಂತಿ,ಕೀರ್ತಿ,ಸಂಪತ್ತು, ಲಜ್ಜೆ, ತ್ಯಾಗ,ಸೌಂದರ್ಯ,ಭಾಗ್ಯ,ವೀರ್ಯ,ಕ್ಷಾಂ ತಿ, ತತ್ವಜ್ಞಾನ, ಯುಕ್ತಾಯುಕ್ತವಿವೇಚನೆ, ಈ ಗುಣಗಳೆಲ್ಲೆಲ್ಲಿ ಕಾಣುವು ವೋ,ಅವೆಲ್ಲವೂ ನನ್ನ ವಿಭೂತಿಗಳೆಂದೂ,ಅಲ್ಲಿ ನನ್ನ ಅಂಶವುಂಟೆಂದೂ ತಿಳಿ! ನಿನಗೆ ನನ್ನ ವಿಭೂತಿಗಳನ್ನು ಸಂಕ್ಷೇಪವಾಗಿ ತಿಳಿಸಿದುದಾಯಿತು. ಇವೆಲ್ಲವೂ

ನನ್ನ ಸಂಕಲ್ಪಮಾತ್ರದಿಂದಲೇ ಉಂಟಾದುವುಗಳೆಂಬುದು ವೇದವಾಕ್ಯಗಳಿಂದ ವ್ಯಕ್ತವಾಗುವುದು. ಉದ್ಧವಾ! ಇಂತಹ ಅನಂತವಿಭೂತಿವಿಶಿಷ್ಟನಾದ ನನ್ನನ್ನು ನೀನು ಉಪಾಸನೆಮಾಡಬೇಕಾದರೆ, ಮೊದಲು ದುರ್ಭಾಷೆಗಳಿಗೆ ಹೋಗದಂತೆ ವಾಕ್ಕನ್ನು ನಿಗ್ರಹಿಸಬೇಕು. ದುರಾಲೋಚನೆಗೆ ಹೋಗದಂತೆ ಮನಸ್ಸನ್ನು ನಿಗ್ರಹಿಸಬೇಕು. ದುರ್ವಿಷಯುಗಳಲ್ಲಿ ಬೀಳದಂತೆ ಇಂದ್ರಿಯಗಳನ್ನು ನಿಗ್ರಹಿಸಬೇಕು. ಅಪಾಯಕ್ಕೆ ಪ್ರವರ್ತಿಸದಂತೆ ನಿನ್ನ ಆತ್ಮವನ್ನು ನಿನ್ನಿಂದ ನೀನೇ ನಿಗ್ರಹಿಸಬೇಕು. ಈ ವಿಧವಾಗಿ ನನ್ನನ್ನು ಉಪಾಸನೆಮಾಡಿದರೆ,ತಿರುಗಿ ನೀನು ಸಂಸಾರಮಾರ್ಗವನ್ನು ಸೇರಲಾರೆ! ಮನಸ್ಸನ್ನೂ, ವಾಕ್ಕನ್ನೂ ಚೆನ್ನಾಗಿ ನಿಗ್ರಹಿಸಲಾರದವನು,ಎಷ್ಟೇ ಬುದ್ಧಿವಂತನಾದರೂ,ಯತಿಯಾಗಿದ್ದರೂ, ಅವನು ಕಷ್ಟಪಟ್ಟು ಗಳಿಸಿದ ತಪಸ್ಸು, ದಾನ, ವ್ರತ ಮೊದಲಾದುವುಗಳೆಲ್ಲವೂ, ಹಸೀಮಣ್ಣಿನ ಮಡಕೆಯಲ್ಲಿ ತುಂಬಿದ ನೀರಿನಂತೆ ನಿಷ್ಫಲವಾಗಿ ಹೋಗಿಬಿಡುವುವು. ಆದುದರಿಂದ, ಮೋಕ್ಷಾರ್ಥಿಯು ನನ್ನಲ್ಲಿ ದೃಢಭಕ್ತಿಯುಳ್ಳವನಾಗಿ ಮನೋವಾಕ್ಪ್ರಾಣಗಳನ್ನು ನಿಗ್ರಹಿಸಿಟ್ಟರೆ, ಅವನ ಉದ್ದೇಶವು ಪೂರ್ಣಸಾಫಲ್ಯವನ್ನು ಹೊಂದುವುದು. ಇದು ಹದಿನಾರನೆಯ ಅಧ್ಯಾಯವು.

---

## ವರ್ಣಾಶ್ರಮನಿಯಮಗಳು.

ಉದ್ಧವನು ತಿರುಗಿ ಕೃಷ್ಣನನ್ನು ಕುರಿತು "ಕೃಷ್ಣಾ! ವರ್ಣಾಶ್ರಮಧರ್ಮಗಳುಳ್ಳ ಎಲ್ಲಾಮನುಷ್ಯರೂ, ಅವರವರ ವರ್ಣಾಶ್ರಮಧರ್ಮಗಳನ್ನು ಭಕ್ತಿಯೋಗಕ್ಕೆ ಅಂಗವಾಗಿ ನಡೆಸಬೇಕೆಂದು ಹೇಳಿದೆಯಲ್ಲವೆ? ಓ ಪುಂಡರೀಕಾಕ್ಷಾ! ಆ ಧರ್ಮಗಳನ್ನು ಯಾವವಿಧದಿಂದ ಅನುಷ್ಠಿಸಿದರೆ ಭಕ್ತಿಗೆ ಸಾಧಕವಾಗುವುದು? ಈ ವಿಚಾರವನ್ನು ನನಗೆ ತಿಳಿಸಬೇಕು. ಬಹಳ ಕಾಲಕ್ಕೆ ಹಿಂದೆಯೇ ನೀನು ಹಂಸರೂಪಿಯಾಗಿ ಬಂದು, ಬ್ರಹ್ಮನಿಗೂ, ಸನಕಾದಿಗಳಿಗೂ ಆ ಧರ್ಮಗಳನ್ನುಪದೇಶಿಸಿದ್ದರೂ,ಅದು ನಡೆದು ಬಹುಕಾಲವಾದುದರಿಂದ, ಈಗೀಗ ಮನುಷ್ಯಲೋಕದಲ್ಲಿ ಅದರ ಪ್ರಚಾರವೇ ಬಹಳ ಕಡಿಮೆಯಾಗುತ್ತ ಬಂದಿರುವುದು. ಈಗ ಭೂಲೋಕದಲ್ಲಿ ಆ ಧರ್ಮ

ಗಳನ್ನುಪದೇಶಿಸತಕ್ಕವನೂ, ನಡೆಸತಕ್ಕವನೂ, ಅದನ್ನು ಕಾಪಾಡತಕ್ಕವನೂ ನಿನಗಿಂತಲೂ ಬೇರೊಬ್ಬನು ದೊರೆಯಲಾರನು. ಭೂಲೋಕದ ಮಾತು ಹಾಗಿರಲಿ! ವಿದ್ಯೆಗಳೆಲ್ಲವೂ ಶರೀರವತ್ತಾಗಿ ನೆಲೆಗೊಂಡಿರುವ ಬ್ರಹ್ಮಸಭೆಯಲ್ಲಿಯಾದರೂ, ನಿನಂತೆ ಧರ್ಮೋಪದೇಶಕನು ಮತ್ತೊಬ್ಬನು ಸಿಕ್ಕಲಾರನು. ಹೀಗೆ ಸಮಸ್ತಧರ್ಮಗಳಿಗೂ ಉಪದೇಶಕನೂ, ನಿರ್ವಾಹಕನೂ, ರಕ್ಷಕನೂ ಆದ ನೀನೇ ಈ ಲೋಕವನ್ನು ಬಿಟ್ಟು ಹೊರಟುಹೋದಮೇಲೆ, ನಿನ್ನೊಡನೆ ಆ ಧರ್ಮಗಳೂ ನಷ್ಟವಾದಂತೆಯೇ ಹೊರತು, ಅವುಗಳನ್ನುಪದೇಶಿಸತಕ್ಕವನಾವನುಂಟು? ಆದುದರಿಂದ ನಿನ್ನ ಭಕ್ತಿಗೆ ಅಂಗಗಳಾದ ಆ ಧರ್ಮಗಳು ಯಾವಯಾವ ವರ್ಣಾಶ್ರಮಿಗಳಿಗೆ, ಯಾವಯಾವ ರೀತಿಯಿಂದ ವಿಧಿಸಲ್ಪಟ್ಟಿರುವುವೋ, ಅದನ್ನು ನೀನೇ ಈಗ ನನಗೆ ಉಪದೇಶಿಸಬೇಕು"? ಎಂದನು. ಉದ್ಧವನ ಪ್ರಶ್ನೆಯನ್ನು ಕೇಳಿ ಕೃಷ್ಣನು ಸಂತೋಷಗೊಂಡವನಾಗಿ, ಲೋಕಕ್ಷೇಮಕ್ಕಾಗಿ ಆ ಸನಾತನಧರ್ಮಗಳನ್ನೆಲ್ಲಾ ಹೀಗೆಂದು ವಿವರಿಸತೊಡಗಿದನು.

"ಉದ್ಧವಾ! ಈಗ ನೀನು ಕೇಳಿದ ಪ್ರಶ್ನವು ಧರ್ಮಯುಕ್ತವಾದುದು. ಇದರಿಂದ ಆಯಾವರ್ಣಾಶ್ರಮಧರ್ಮಗಳಲ್ಲಿರತಕ್ಕ ಸಮಸ್ತಜನರಿಗೂ ಶ್ರೇಯಸ್ಸುಂಟು. ಆದುದರಿಂದ ಅವುಗಳನ್ನೆಲ್ಲಾ ವಿವರಿಸುವೆನು ಕೇಳು! ಮೊಟ್ಟಮೊದಲಿನ ಕೃತಯುಗದಲ್ಲಿ, ಈಗಿನಂತೆ ವರ್ಣಭೇದಗಳಿಲ್ಲದೆ, ಮನುಷ್ಯರೆಲ್ಲರೂ ಹಂಸವೆಂಬ ಒಂದೇ ವರ್ಣದವರಾಗಿದ್ದರು. ಹಂಸವೆಂಬುದು ಬ್ರಾಹ್ಮಣ್ಯವೇಹೊರತು ಬೇರೆಯಲ್ಲ! ಆಗಿನ ಜನರೆಲ್ಲರೂ ಆ ವರ್ಣಮಾತ್ರದಿಂದಲೇ ಕೃತಕೃತ್ಯರಾಗಿದ್ದುದರಿಂದ, ಆ ಯುಗಕ್ಕೆ ಕೃತಯುಗವೆಂದು ಹೆಸರಾಯಿತು. ಆಗಿನ ವೇದವು ಪ್ರಣವವೊಂದೇಹೊರತು, ಋಗ್ಯಜುಸ್ಸಾಮಗಳೆಂಬ ವಿಭಾಗಗಳಿಲ್ಲ! ನನ್ನ ಉಪಾಸನವೊಂದೇ ಆಗಿನ ಧರ್ಮವಾಗಿತ್ತೇ ಹೊರತು ಯಜ್ಞಾದಿಕರ್ಮಗಳಿಲ್ಲ. ಆಗ ಧರ್ಮಮಯವಾದ ನನ್ನರೂಪವು ನಾಲ್ಕುಪಾದಗಳಿಂದ ನಿಂತ ವೃಷಭಾಕೃತಿಯಿಂದಿದ್ದಿತು. ಆದುದರಿಂದ ಆಗಿನವರೆಲ್ಲರೂ ಕೇವಲಯೋಗನಿಷ್ಠರಾಗಿ, ಹಂಸ(ಶುದ್ಧ) ನಾದ ನನ್ನನ್ನು ಉಪಾಸಿಸುತಿದ್ದರು. ಆದರಿಂದ ಅವರೂ ನನ್ನಂತೆಯೇ ಹಂಸ (ಶುದ್ಧ) ರೆನಿ

ಸಿದ್ಧರು. ಆಮೇಲೆ ತ್ರೇತಾಯುಗಾರಂಭಗಲ್ಲಿ, ನನ್ನ ಹೃದಯಸ್ಥಿತವಾಗಿದ್ದ ಪ್ರಣವದಿಂದ, ಋಗ್ಯಜುಸ್ಸಾಮಗಳೆಂಬ ಮೂರು ವಿಭಾಗವುಳ್ಳ ತ್ರಯಿಯು ಎಂದರೆ, ವೇದವಿದ್ಯೆಯು ಹೊರಬಿದ್ದಿತು. ಆ ತ್ರಯೀವಿದ್ಯೆಯಿಂದ, ಋಗ್ಯಜುಸ್ಸಾಮಮಂತ್ರಪೂರ್ವಕಗಳಾದ ಯಜ್ಞಗಳು ಏರ್ಪಟ್ಟುವು. ಉದ್ಧವಾ! ನಾನೇ ಆ ಯಜ್ಞಸ್ವರೂಪನೆಂದು ತಿಳಿ! ಇದರಿಂದ, ತ್ರೇತಾಯುಗವು ಆರಂಭಿಸಿದುದುಮೊದಲು, ಯಜ್ಞಾದಿಕರ್ಮಗಳೂ, ಅವುಗಳಿಗೆ ವಿಧಾಯಕಗಳಾದ ವೇದಶಾಖೆಗಳೂ, ಬ್ರಾಹ್ಮಣಾದಿವರ್ಣಭೇದಗಳೂ, ಆಶ್ರಮಭೇದಗಳೂ ಏರ್ಪಟ್ಟುದಾಗಿ ತಿಳಿಯಬೇಕು. ಇನ್ನು ಆ ವರ್ಣಾಶ್ರಮವಿಭೇದಗಳನ್ನೂ ತಿಳಿಸುವೆನು ಕೇಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣಗಳೂ ಕ್ರಮವಾಗಿ, ವಿರಾಟ್ಪುರುಷನೆನಿಸಿದ ಅನಿರುದ್ಧನಿಂದ ಹುಟ್ಟಿದ ಚತುರ್ಮುಖನ, ಮುಖ, ತೋಳು, ತೊಡೆ, ಕಾಲುಗಳೆಂಬ ಅವಯವಗಳಿಂದ ಹುಟ್ಟಿದುವು. ಅವರವರ ಧರ್ಮಗಳೇ ಆಯಾವರ್ಣಗಳನ್ನು ತಿಳಿಸತಕ್ಕ ಲಕ್ಷಣಗಳಾಗಿರುವುವು. ಹೀಗೆಯೇ ಆಶ್ರಮಗಳಲ್ಲಿಯೂ ಕೂಡ, ಚತುರ್ಮುಖನ ಜಘನದಿಂದ ಗೃಹಸ್ಥಾಶ್ರಮವೂ, ಅವನ ಹೃದಯದಿಂದ ಬ್ರಹ್ಮಚರ್ಯವೂ, ವಕ್ಷಸ್ಥಲದಿಂದ ವಾನಪ್ರಸ್ಥವೂ, ಶಿರಸ್ಸಿನಿಂದ ಸನ್ಯಾಸಾಶ್ರಮವೂ ಏರ್ಪಟ್ಟಿತು. ಮೇಲೆ ಹೇಳಿದ ವರ್ಣಗಳ ಮತ್ತು ಆಶ್ರಮಗಳ ಸ್ವಭಾವಗಳು, ಅವು ಹುಟ್ಟಿದ ಸ್ಥಾನಗುಣಗಳಿಗೆ ತಕ್ಕಂತೆ ಉತ್ಕರ್ಷಾಪಕರ್ಷವನ್ನು ಹೊಂದಿರುವುವು. ಆಯಾವರ್ಣಾಶ್ರಮಗಳನ್ನನುಸರಿಸತಕ್ಕವರ ಸ್ವಭಾವವೂ ಅದಕ್ಕೆ ತಕ್ಕಂತೆಯೇ ಉತ್ಕರ್ಷಾಪಕರ್ಷವನ್ನು ಹೊಂದಿರುವುವು. ಎಂದರೆ, ಬ್ರಾಹ್ಮಣಾದಿವರ್ಣಗಳು ಕ್ರಮವಾಗಿ ಚತುರ್ಮುಖನ ಬಾಯಿ, ತೋಳು, ತೊಡೆ, ಕಾಲುಗಳೆಂಬ ಕೆಳಕೆಳಗಿನ ಅವಯವಗಳಲ್ಲಿ ಹುಟ್ಟಿರುವುದರಿಂದ ಒಂದಕ್ಕೊಂದು ಕೀಳಾಗಿರುವುದು. ಗೃಹಸ್ಥ, ಬ್ರಹ್ಮಚರ್ಯ, ವಾನಪ್ರಸ್ಥ,ಸನ್ಯಾಸಗಳೆಂಬ ನಾಲ್ಕಾಶ್ರಮಗಳೂ ಕ್ರಮವಾಗಿ, ಜಘನ, ಹೃದಯ, ವಕ್ಷಸ್ಸು, ಶಿರಸ್ಸು ಎಂಬೀ ಮೇಲುಮೇಲಿನ ಅವಯವಗಳಲ್ಲಿ ಹುಟ್ಟಿದುದರಿಂದ ಒಂದಕ್ಕೊಂದು ಉತ್ಕೃಷ್ಟವೆನಿಸಿರುವುದು.

ಮೇಲೆ ಹೇಳಿದ ನಾಲ್ಕುವರ್ಣಗಳ ಸ್ವಭಾವಧರ್ಮಗಳಾವುವೆಂದರೆ, ಶಮ, ದಮ, ತಪಸ್ಸು, ಶೌಚ, ಸಂತೋಷ, ತಾಳ್ಮೆ, ಋಜುತ್ವ, ಭಗವದ್ಭಕ್ತಿ, ದಯೆ, ಸತ್ಯ, ಇವೆಲ್ಲವೂ ಬ್ರಾಹ್ಮಣರಿಗಿರಬೇಕಾದ ಸ್ವಭಾವಧರ್ಮಗಳು. ತೇಜಸ್ಸು, ಬಲ, ಧೈರ್ಯ, ಶೌರ್ಯ, ಕಷ್ಟಸಹಿಷ್ಣುತೆ, ಔದಾರ್ಯ, ಉದ್ಯಮ,ಸ್ಥೈರ್ಯ, ಬ್ರಾಹ್ಮಣರಲ್ಲಿ ಪ್ರೀತಿ,ಅಧಿಕಾರಶಕ್ತಿಯೆಂಬಿವು ಕ್ಷತ್ರಿಯರ ಸ್ವಭಾವವು. ಆಸ್ತಿಕತೆ, ದಾನಶೀಲತೆ, ವಂಚನೆಯಿಲ್ಲದಿರುವಿಕೆ, ಬ್ರಾಹ್ಮಣರನ್ನು ಸಂತೋಷಪಡಿಸುವುದು, ಎಷ್ಟೇ ಧನವು ಕೈಗೂಡಿ ಬರುತ್ತಿದ್ದರೂ ಅದರಲ್ಲಿ ತೃಪ್ತಿಹೊಂದದಿರುವುದು, ಇವೆಲ್ಲವೂ ವೈಶ್ಯರಲ್ಲಿರಬೇಕಾದ ಸ್ವಭಾವಗಳು. ದೇವತೆಗಳಿಗೂ ಗೋಬ್ರಾಹ್ಮಣರಿಗೂ ನಿಷ್ಕಪಟವಾಗಿ ಸೇವೆಮಾಡುವುದು, ಅದರಿಂದ ತನಗೆ ಲಭಿಸಿದುದರಲ್ಲಿ ತೃಪ್ತನಾಗಿರುವುದು, ಇವೆರಡೂ ಶೂದ್ರರಲ್ಲಿರಬೇಕಾದ ಸ್ವಭಾವಗಳು. ಅಶುಚಿಯಾಗಿರುವುದು, ಸುಳ್ಳು, ಕಳವು, ನಾಸ್ತಿಕತೆ, ನಿಷ್ಕಾರಣವಾದ ಕಲಹವನ್ನು ತೆಗೆಯುವುದು, ಕಾಮಕ್ರೋಧಗಳು, ಹಣದಾಸೆ, ಇವೆಲ್ಲವೂ ಮೇಲೆ ಹೇಳಿದ ನಾಲ್ಕುವರ್ಣಾಶ್ರಮಗಳಿಂದಲೂ ಹೊರಗಾದ ಅಂತ್ಯಜರ ಸ್ವಭಾವಗಳು. ಅಹಿಂಸೆ, ಸತ್ಯ, ಕಳ್ಳತನಮಾಡದಿರುವುದು, ಕಾಮಕ್ರೋಧಲೋಭಾದಿಗಳಿಗೆ ವಶನಾಗದಿರುವುದು, ಸಮಸ್ತಭೂತಗಳಿಗೂ ಹಿತವನ್ನುಂಟುಮಾಡುವುದರಲ್ಲಿಯೇ ಆಸಕ್ತಿ, ಇವೆಲ್ಲವೂ ಸರ್ವವರ್ಣದವರಲ್ಲಿಯೂ ಇರಬೇಕಾದ ಸಾಧಾರಣಸುಗುಣಗಳು.

ಉದ್ಧವಾ! ಇನ್ನು ಆಯಾ ಆಶ್ರಮಗಳಲ್ಲಿ ನಡೆಸಬೇಕಾದ ಧರ್ಮಗಳನ್ನು ತಿಳಿಸುವೆನು ಕೇಳು. ಬ್ರಹ್ಮಚರ್ಯೆಯನ್ನು ನಡೆಸತಕ್ಕ ದ್ವಿಜನು, ಕ್ರಮವಾಗಿ ಗರ್ಭಾಧಾನ ಮೊದಲಾದ ಸಂಸ್ಕಾರಗಳು ನಡೆದು, ಉಪನಯನವೆಂಬ ಎರಡನೆಯ ಜನ್ಮವನ್ನು ಹೊಂದಿದಮೇಲೆ, ಗುರುಕುಲವನ್ನು ಸೇರಿ, ಅಲ್ಲಿ ಜಿತೇಂದ್ರಿಯನಾಗಿ, ವೇದವನ್ನು ಅಧ್ಯಯನಮಾಡುತ್ತಿರಬೇಕು. ಆಗ ತನ್ನ ಬ್ರಹ್ಮಚರ್ಯಾಶ್ರಮಕ್ಕೆ ವಿಧಿಸಲ್ಪಟ್ಟ ವ್ರತಗಳನ್ನು ಎಚ್ಚರದಿಂದನುಸರಿಸುತ್ತಿರಬೇಕು. ಮುಂಜಿ, ಕೃಷ್ಣಾಜಿನ, ದಂಡ, ಕಮಂಡಲು,ಅಕ್ಷಮಾಲಿಕೆ, ಯಜ್ಞೋಪವೀತವೆಂಬಿವುಗಳನ್ನು ಧರಿಸಿ, ಅಭ್ಯಂಗನಾದಿಸಂಸ್ಕಾರಗಳಿಲ್ಲದೆ

ಜಟೆಯನ್ನು ಬೆಳೆಸಬೇಕು. ಹಲ್ಲುಗಳನ್ನಾಗಲಿ, ವಸ್ತ್ರಗಳನ್ನಾಗಲಿ ವಿಶೇಷ ವಾಗಿ ಬೆಳಗಬಾರದು. ಆಶೆಗಾಗಿ, ಹಳದಿ, ಕೆಂಪು, ಮೊದಲಾದ ರಂಗಿನ ಬಟ್ಟೆಗಳನ್ನುಡಬಾರದು. ದರ್ಭೆಗಳನ್ನು ಧರಿಸಬೇಕು. ಸ್ನಾನ, ಭೋಜನ, ಜಪ, ಹೋಮಾದಿಕಾಲಗಳಲ್ಲಿ ಇತರರೊಡನೆ ಮಾತಾಡದೆ, ಮೌನದಿಂದ ನಡೆಸಬೇಕು. ಮಲಮೂತ್ರೋತ್ಸರ್ಜನಕಾಲಗಳಲ್ಲಿಯೂ ಮೌನಿಯಾಗಿರ ಬೇಕು. ತನ್ನ ದೇಹದಲ್ಲಿರುವ ಕೂದಲುಗಳನ್ನಾಗಲಿ, ಉಗುರುಗಳನ್ನಾಗಲಿ ಕಿತ್ತುಹಾಕಬಾರದು. ಯಾವಾಗಲೂ, ಯಾವ ಕಾರಣದಿಂದಲೂ, ತನ್ನ ರೇತಸ್ಸನ್ನು ಚೆಲ್ಲಬಾರದು. ಒಂದುವೇಳೆ ಆಕಸ್ಮಿಕವಾಗಿ ಅಂ ತಹ ಸಂದರ್ಭವು ತಾನಾಗಿ ನಡೆದು ಹೋದರೆ, ಒಡನೆಯೇ ಸ್ನಾನಮಾಡಿ, ಪ್ರಾಣಾಯಾಮಪೂರ್ವಕವಾಗಿ, ಸಾವಿರದೆಂಟಾವರ್ತಿ ಗಾಯತ್ರಿಯನ್ನು ಜಪಿಸಬೇಕು. ಬ್ರಹ್ಮಚಾರಿಯು ಪ್ರಾತಸ್ಸಾಯಂಕಾಲಗಳೆಂಬ ಎರಡು ಸಂಧ್ಯೆಗಳಲ್ಲಿಯೂ ಸ್ನಾನಮಾಡಿ ಶುಚಿಯಾಗಿ, ಅಗ್ನಿಯನ್ನೂ, ಸೂರ್ಯನ ನ್ನೂ, ಆಚಾರ್ಯನನ್ನೂ, ಗೋವುಗಳನ್ನೂ, ಬ್ರಾಹ್ಮಣರನ್ನೂ ಗುರುವೃದ್ಧ ರನ್ನೂ, ಇಷ್ಟದೇವತೆಗಳನ್ನೂ ಉಪಾಸಿಸಬೇಕು. ಎರಡುಸಂಧ್ಯೆಗಳಲ್ಲಿ ಯೂ ಮನಸ್ಸಮಾಧಾನದಿಂದಲೂ, ಮೌನದಿಂದಲೂ ಗಾಯತ್ರಿಯನ್ನು ಜಪಿಸಬೇಕು. ಬ್ರಹ್ಮಚಾರಿಯು ಆಚಾರ್ಯನನ್ನು ನನ್ನ ರೂಪದಿಂದಲೇ ಭಾ ವಿಸಬೇಕು. ಎಂತಹ ಸಂದರ್ಭದಲ್ಲಿಯೂ ಆ ಆಚಾರ್ಯನನ್ನು ತಿರಸ್ಕರಿಸ ಬಾರದು. ಗುರುವು ಸರ್ವದೇವಮಯನಾದುದರಿಂದ, ಅವನನ್ನು ಸಾಮಾನ್ಯ ಮನುಷ್ಯಭಾವದಿಂದಲೂ ತಿಳಿಯಬಾರದು. ಪ್ರಾತಸ್ಸಾಯಂಕಾಲಗಳೆರಡ ರಲ್ಲಿಯೂ ಗುರುವನ್ನು ಉಪಾಸಿಸುತ್ತ,ತಾನು ಭಿಕ್ಷೆಬೇಡಿ ತಂದ ಅನ್ನವನ್ನಾ ಗಲಿ, ಇತರ ಪದಾರ್ಥವನ್ನಾಗಲಿ, ಮೊದಲು ಆ ಗುರುವಿನ ಮುಂದಿಟ್ಟು, ಅವನ ಅನುಜ್ಞೆಯನ್ನು ಪಡೆದಮೇಲೆ, ತಾನು ಅದನ್ನುಪಯೋಗಿಸಿಕೊಳ್ಳ ಬೇಕು. ಗುರುವಿನಮುಂದೆ ಬಹಳ ಮಾತಾಡದೆ, ದಾಸನಂತೆ ಅವನನ್ನು ಯಾವಾಗಲೂ ಉಪಚರಿಸುತ್ತಿರಬೇಕು. ಆಚಾರ್ಯನು ಬೇರೆಕಡೆಗಾದರೂ ಹೊರಟಾಗಲೂ, ಅವನು ಮಲಗಿದಾಗಲೂ, ನಿಂತಾಗಲೂ; ಕುಳಿತಾಗಲೂ ಅವನ ಆಜ್ಞೆಯನ್ನು ನಿರೀಕ್ಷಿಸುತ್ತ, ಅವನ ಹಿಂದೆ ಕೈಕಟ್ಟಿಕೊಂಡು ಸ್ವಲ್ಪ

ದೂರವಾಗಿ ನಿಂತಿರಬೇಕು. ಬ್ರಹ್ಮಚಾರಿಯು ಈ ವಿಧವಾದ ವ್ರತವನ್ನು ಹಿಡಿದು, ಭೋಗಾಪೇಕ್ಷೆಯನ್ನು ಬಿಟ್ಟು, ತನ್ನ ವೇದಾಧ್ಯಯನವು ಮುಗಿಯುವವರೆಗೂ ಗುರುಕುಲದಲ್ಲಿಯೇ ವಾಸಮಾಡುತ್ತಿರಬೇಕು. ಉದ್ಧವಾ! ಈ ಬ್ರಹ್ಮಚರ್ಯಾಶ್ರಮದಲ್ಲಿ ನಡೆಸತಕ್ಕ ಅಧ್ಯಯನಾದಿವ್ರತಗಳಿಗೆ ಬ್ರಹ್ಮಲೋಕಪ್ರಾಪ್ತಿಯೇ ಫಲವೆನಿಸಿರುವುದು. ಬ್ರಹ್ಮಚಾರಿಯು ಆ ಫಲವನ್ನೇ ಅಪೇಕ್ಷಿಸತಕ್ಕವನಾಗಿದ್ದರೆ, ಸಾಯುವವರೆಗೂ ಇದೇವ್ರತವನ್ನು ಹಿಡಿದು, ತನ್ನ ದೇಹವನ್ನು ಆಚಾರ್ಯನಿಗೇ ಅಧೀನವಾಗಿ ಮಾಡಬೇಕು. ಅಂತವನೇ ನೈಷ್ಠಿಕಬ್ರಹ್ಮಚಾರಿಯೆನಿಸುವನು. ಇಂತಹ ನೈಷ್ಠಿಕಬ್ರಹ್ಮಚಾರಿಯು ಅಗ್ನಿಯಲ್ಲಿಯೂ, ಗುರುವಿನಲ್ಲಿಯೂ, ತನ್ನ ಆತ್ಮನಲ್ಲಿಯೂ, ಇತರ ಸಮಸ್ತಭೂತಗಳಲ್ಲಿಯೂ ನನ್ನನ್ನು ಅಂತರಾತ್ಮನೆಂದು ತಿಳಿದು, ಭೇದಬುದ್ಧಿಯಿಲ್ಲದೆ ಉಪಾಸಿಸುತ್ತಬಂದರೆ, ಆದರಿಂದ ಸರ್ವಪಾಪವಿಮುಕ್ತನಾಗಿ, ಬ್ರಹ್ಮವರ್ಚಸ್ಸಿನಿಂದ ಬೆಳಗುವನು.ಇಂತವನು ಸ್ತ್ರೀಯರನ್ನು ಕಣ್ಣೆತ್ತಿಯೂ ನೋಡಬಾರದು. ಅವರನ್ನು ಯಾವಕಾರಣದಿಂದಲೂ ಮುಟ್ಟಬಾರದು. ಅವರೊಡನೆ ಸಂಭಾಷಣವನ್ನಾಗಲಿ, ಪರಿಹಾಸ್ಯವನ್ನಾಗಲಿ ನಡೆಸಬಾರದು. ರತಿಕ್ರೀಡೆಯಲ್ಲಿರುವ ಪಶುಪಕ್ಷಿಮೃಗಾದಿಗಳನ್ನು ತಾನು ಕಣ್ಣಿಂದ ನೋಡಬಾರದು. ಸ್ನಾನ, ಶೌಚ, ಆಚಮನ, ಸಂಧ್ಯಾವಂದನ, ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿಯೂ ಏಕರೂಪವಾಗಿರುವುದು, ಪೂಜ್ಯರನ್ನು ಸೇವಿಸುವುದು, ಜಪಮಾಡುವುದು, ಮುಟ್ಟಬಾರದುದನ್ನೂ, ಭುಜಿಸಬಾರದುದನ್ನೂ, ಬಾಯಿಂದ ನುಡಿಯಬಾರದುದನ್ನೂ ವರ್ಜಿಸುವುದು, ಸಮಸ್ತಭೂತಗಳನ್ನೂ ನನ್ನ ಭಾವದಿಂದ ನೋಡುವುದು, ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ಅಸತ್ಪ್ರವರ್ತನಕ್ಕೆ ಹೋಗದಂತೆ ತಡೆದಿಡುವುದು, ಎಂಬಿವು, ಎಲ್ಲಾ ಆಶ್ರಮದವರೂ ಸಾಧಾರಣವಾಗಿ ಅನುಸರಿಸಬೇಕಾದ ನಿಯಮಗಳಾಗಿರುವುವು. ಉದ್ಧವಾ! ಮೇಲೆ ಹೇಳಿದಂತೆ ಬ್ರಹ್ಮಚರ್ಯೆಯನ್ನು ಕ್ರಮವಾಗಿ ನಡೆಸುತ್ತ ಬಂದು, ವೇದಾಧ್ಯಯನವನ್ನು ಮುಗಿಸಿದವನು, ಬ್ರಹ್ಮತೇಜಸ್ಸಿನಿಂದ ಅಗ್ನಿಯಂತೆ ಜ್ವಲಿಸುತ್ತ, ಆ ವೇದಾಧ್ಯಯನವೆಂಬ ತೀವ್ರತಪಸ್ಸಿನಿಂದ ಭಕ್ತಿಯೋಗವನ್ನು ಪಡೆದು, ಅದರಿಂದ ಕರ್ಮವಿ

ಮುಕ್ತನಾಗಿ ಮೋಕ್ಷವನ್ನೂ ಹೊಂದಬಹುದು. ಹೀಗೆ ಜೀವಾವಧಿಯಾಗಿ ಬ್ರಹ್ಮಚರ್ಯವನ್ನು ನಡೆಸಲಾರದೆ, ಬೇರೆ ಆಶ್ರಮವನ್ನು ಅವಲಂಬಿಸಬೇಕೆಂಬ ಅಭಿಲಾಷೆಯುಳ್ಳವನು, ತನ್ನ ವೇದಾಧ್ಯಯನವು ಪೂರ್ಣವಾಗಿ ಮುಗಿದಮೇಲೆ, ಆಚಾರ್ಯನಿಗೆ ಯಥೋಚಿತವಾದ ಗುರುದಕ್ಷಿಣೆಯನ್ನು ಸಮರ್ಪಿಸಿ, ಅವನ ಅನುಜ್ಞೆಯನ್ನು ಪಡೆದು, ವ್ರತಸಮಾವರ್ತನರೂಪವಾದ ಸ್ನಾನವನ್ನು ಮಾಡಬೇಕು. ಆಮೇಲೆ ಗೃಹಸ್ಥಾಶ್ರಮವನ್ನಾದರೂ ಅವಲಂಬಿಸಬಹುದು. ವಾನಪ್ರಸ್ಥಾಶ್ರವನ್ನು ಹಿಡಿದು ವನಕ್ಕಾದರೂ ಹೋಗಬಹುದು. ಬ್ರಾಹ್ಮಣನಾಗಿದ್ದಪಕ್ಷದಲ್ಲಿ, ಬ್ರಹ್ಮಚರ್ಯಾಶ್ರಮದಿಂದ ಸನ್ಯಾಸಾಶ್ರಮವನ್ನಾದರೂ ಅವಲಂಬಿಸಬಹುದು. ಮುಖ್ಯವಾಗಿ ತ್ರೈವರ್ಣಿಕನೊಬ್ಬೊಬ್ಬನೂ, ಒಂದಿಲ್ಲದಿದ್ದರೆ ಮತ್ತೊಂದಾಶ್ರಮವನ್ನು ಅವಲಂಬಿಸಿರಬೇಕೇಹೊರತು, ಯಾವ ಆಶ್ರಮವೂ ಇಲ್ಲದೆ ಕ್ಷಣಮಾತ್ರವೂ ಇರಬಾರದು. ಮತ್ತು ಯಾವ ಆಶ್ರಮದಲ್ಲಿದ್ದರೂ ನನ್ನಲ್ಲಿ ಭಕ್ತಿಯನ್ನು ಮಾತ್ರ ಬಿಡಬಾರದು.

ಇನ್ನು ಗೃಹಸ್ಥಧರ್ಮಗಳನ್ನು ಹೇಳುವೆನು ಕೇಳು. ಗೃಹಸ್ಥಾಶ್ರಮವನ್ನು ಹಿಡಿಯತಕ್ಕವನು, ತನಗೆ ಅನುರೂಪಳಾಗಿಯೂ, ವಯಸ್ಸಿನಲ್ಲಿ ತನಗಿಂತಲೂ ಚಿಕ್ಕವಳಾಗಿಯೂ, ತನಗೆ ಸಮಾನವರ್ಣದವಳಾಗಿಯೂ, ನಿರ್ದುಷ್ಟಳಾಗಿಯೂ ಇರುವ ಸ್ತ್ರೀಯನ್ನು ವಿಧ್ಯುಕ್ತವಾಗಿ ವಿವಾಹಮಾಡಿಕೊಂಡು, ಅವಳೊಡನೆ ಕುಟುಂಬಧರ್ಮವನ್ನು ನಡೆಸಬೇಕು. ತನಗೆ ಸಮಾನವರ್ಣದಲ್ಲಿ ಕನ್ಯೆಯು ದೊರೆಯದಿದ್ದಾಗಮಾತ್ರ, ಕ್ರಮವಾಗಿ ಕೆಳಕೆಳಗಿನ ವರ್ಣದವಳನ್ನು ವಿವಾಹವಾಗಬಹುದು. ಈ ಗೃಹಸ್ಥಾಶ್ರಮದಲ್ಲಿ, ಯಜ್ಞಮಾಡುವುದು, ವೇದಾಧ್ಯಯನ, ದಾನವೆಂಬೀ ಮೂರುಕರ್ಮಗಳು ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಮೂರುವರ್ಣದವರಿಗೂ ಸಾಧಾರಣವು. ಯಾಗಮಾಡಿಸುವುದು, ಅಧ್ಯಯನಮಾಡಿಸುವುದು, ಇತರರು ಕೊಟ್ಟದಾನವನ್ನು ಪ್ರತಿಗ್ರಹಿಸುವುದು, ಈ ಮೂರುಕರ್ಮಗಳಿಗೆ ಬ್ರಾಹ್ಮಣನಿಗೆಮಾತ್ರ ಅಧಿಕಾರವುಂಟು. ಅಲ್ಲಲ್ಲಿ ಹೋಗಿ ಯಾಚಿಸುತ್ತ ಪ್ರತಿಗ್ರಹದಿಂದಲೇ ಜೀವನಮಾಡುವುದು ತನ್ನ ತಪಸ್ಸಿಗೂ, ತೇಜಸ್ಸಿಗೂ, ಕೀರ್ತಿಗೂ ವಿಘಾತಕಗ

ಳಿಂದು ತೋರಿಬಂದಾಗ, ಬ್ರಾಹ್ಮಣನು, ಯಾಜನ, ಮತ್ತು ಅಧ್ಯಾಪನಕಾ ರ್ಯಗಳಿಂದ ಜೀವಿಸಬಹುದು. ಅದರಲ್ಲಿಯೂ ದೋಷವು ಕಂಡುಬಂದರೆ, ಕಣ ಗಳಲ್ಲಿ ಚೆಲ್ಲಿಹೋದ ಧಾನ್ಯಗಳನ್ನು ಆಯ್ದುತಂದು ಅವುಗಳಿಂದಲೇ ಜೀವಿಸ ಬೇಕು. ಉದ್ಧವಾ! “ಇಂತಹ ಜೀವನವು ಬಹಳ ಕಷ್ಟವಲ್ಲವೆ”ಎಂದರೆ,ಬ್ರಾ ಹ್ಮಣ್ಯವೆಂಬುದೇ ಕಷ್ಟಜೀವನವು. ಬ್ರಾಹ್ಮಣಜನ್ಮವು ಲಭಿಸಿದಾಗ, ಅತ್ಯಲ್ಪ ಗಳಾದ ಐಹಿಕಸುಖಗಳಿಗಾಗಿ ಆಸೆಪಡಲೇಬಾರದು. ಇಲ್ಲಿ ಕಠಿನವಾದ ತಪ ಸ್ಸುಗಳಿಂದ ದೇಹವನ್ನು ದಂಡಿಸಿದಾಗಲೇ, ಮುಂದೆ ದೇಹಾವಸಾನ ದಲ್ಲಿ ಮೋಕ್ಷರೂಪವಾದ ಅನಂತಸುಖವನ್ನು ಹೊಂದಬಹುದು. ಆದುದರಿಂ ದ ಗೃಹಸ್ಥಾಶ್ರಮವನ್ನು ಹಿಡಿದ ಬ್ರಾಹ್ಮಣನು, ವಿಶೇಷವಾಗಿ ತನ್ನ ದೇಹ ಸೌಖ್ಯವನ್ನಪೇಕ್ಷಿಸದೆ, ಭಿಕ್ಷಾಟನದಿಂದಲೋ,ಇಲ್ಲವೇ ಕಣಗಳಲ್ಲಿ ಚೆಲ್ಲಿಹೋ ದಧಾನ್ಯಗಳನ್ನು ಆಯ್ದುತರುವುದರಿಂದಲೋ,ತನ್ನ ಜೀವನವನ್ನು ನಡೆಸುತ್ತ, ಅದರಿಂದಲೇ ತೃಪ್ತನಾಗಿ, ತನ್ನ ವರ್ಣಾಶ್ರಮಧರ್ಮಗಳನ್ನು ಲೋಪವಿಲ್ಲ ದೆ ನಡೆಸುತ್ತ, ನನ್ನಲ್ಲಿ ನಟ್ಟಮನಸ್ಸುಳ್ಳವನಾಗಿದ್ದರೆ, ಅದರಿಂದ ಮುಕ್ತಿಯನ್ನು ಹೊಂದಬಹುದು. ಉದ್ಧವಾ! ಹೀಗೆ ದೇಹಸೌಖ್ಯದಲ್ಲಿ ಯೂ, ಹಣದಲ್ಲಿಯೂ ಆಸೆಯನ್ನು ಬಿಟ್ಟು, ಸ್ವಧರ್ಮವೊಂದನ್ನೇ ಹಿಡಿದು, ನನ್ನಲ್ಲಿ ಭಕ್ತಿಯುಳ್ಳವನಾಗಿರುವ ಬ್ರಾಹ್ಮಣನು, ಮೇಲೆ ಹೇಳಿದ ಭಿಕ್ಷಾದಿ ವೃತ್ತಿಗಳಿಂದ ಜೀವನಕ್ಕೆ ಸಾಲದೆ ಕಷ್ಟಪಡುತ್ತಿದ್ದಾಗ, ಅವನಿಗೆ ಯಾರು ಯಾರು ಸಹಾಯಮಾಡುವರೋ ಅಂತವರನ್ನು ನಾನು, ಹಡಗು ಸಮುದ್ರ ದಿಂದ ಹೇಗೋಹಾಗೆ ವಿಪತ್ತುಗಳಿಂದ ದಾಟಿಸುವೆನು. ಪ್ರಜೆಗಳನ್ನು ಪಾಲಿಸತಕ್ಕ ರಾಜನೂಕೂಡ, ತನ್ನ ಪ್ರಜೆಗಳನ್ನೂ, ವಿಶೇಷವಾಗಿ ಬ್ರಾಹ್ಮ ರನ್ನೂ ವ್ಯಸನದಿಂದ ತಪ್ಪಿಸುತ್ತ, ತಂದೆಯು ಮಕ್ಕಳನ್ನು ಹೇಗೋಹಾಗೆ ಪ್ರೀತಿಯಿಂದ ಕಾಪಾಡಬೇಕು. ರಾಜನು ಪ್ರಜೆಗಳನ್ನು ವಿಪತ್ತಿನಿಂದ ತಪ್ಪಿ ಸುವುದಲ್ಲದೆ,ಆನೆಯ ಸಲಗವು ಇತರಗಜಗಳನ್ನು ಕಾಪಾಡುತ್ತ ಆತ್ಮರಕ್ಷಣ ವನ್ನೂ ಮಾಡಿಕೊಳ್ಳುವಂತೆ, ತನ್ನನ್ನು ತಾನೇ ರಕ್ಷಿಸಿಕೊಳ್ಳಬೇಕು. ಇಂ ತಹ ಧೀರನಾದ ರಾಜನು, ಈ ಲೋಕದಲ್ಲಿ ಸಂಭವಿಸಬಹುದಾದ ಅಶುಭಗ ಳೆಲ್ಲವನ್ನೂ ದಾಟಿ, ಕೊನೆಗೆ ಸೂರ್ಯತೇಜಸ್ಸುಳ್ಳ ವಿಮಾನದಿಂದ ಇಂದ್ರ

ಲೋಕಕ್ಕೆ ಹೋಗಿ, ಅಲ್ಲಿ ದೇವೇಂದ್ರನೊಡಗೂಡಿ ಭೋಗಗಳನ್ನನುಭವಿಸುವನು. ಬ್ರಾಹ್ಮಣನು ಶಿಲೋಂಛಾದಿಸ್ವವೃತ್ತಿಯಿಂದ ಜೀವನವನ್ನು ನಡೆಸಲಾರದೆ ಹೋದಾಗ, ವೈಶ್ಯವೃತ್ತಿಯಾದ ವರ್ತಕತನದಿಂದಾಗಲಿ, ಖಡ್ಗವನ್ನು ಹಿಡಿದು ಕ್ಷತ್ರಿಯವೃತ್ತಿಯಿಂದಾಗಲಿ ಜೀವಿಸಬಹುದು. ಎಷ್ಟೇ ಕಷ್ಟದಲ್ಲಿದ್ದರೂ, ನೀಚಸೇವೆಯೆಂಬ ಶ್ವವೃತ್ತಿಯನ್ನು ಮಾತ್ರ ಅವಲಂಬಿಸಬಾರದು. ಕ್ಷತ್ರಿಯನೂ ಹೀಗೆಯೇ ತನ್ನ ವೃತ್ತಿಯಿಂದ ಜೀವನವು ನಡೆಯದಿದ್ದಾಗ, ವೈಶ್ಯವೃತ್ತಿಯಿಂದಾಗಲಿ, ಬೇಟೆಯಿಂದಾಗಲಿ, ಅದೂ ಸಾಕಾಗದಿದ್ದರೆ, ಬ್ರಾಹ್ಮಣವೃತ್ತಿಯಿಂದಾಗಲಿ ಜೀವಿಸಬಹುದೇಹೊರತು, ನೀಚಸೇವೆಯನ್ನು ಮಾಡಬಾರದು. ಅನಿವಾರ್ಯವಾದ ಸಂದರ್ಭದಲ್ಲಿ ವೈಶ್ಯನು ಮಾತ್ರ ಶೂದ್ರವೃತ್ತಿಯನ್ನು ಹಿಡಿಯಬಹುದು. ಶೂದ್ರನು ಸೇವಾವೃತ್ತಿಯೊಂದನ್ನು ಮಾತ್ರವಲ್ಲದೆ, ಬಟ್ಟೆಗಳನ್ನು ನೇಯುವುದು, ಚಾಪೆಗಳನ್ನು ಹೆಣೆಯುವುದು ಮುಂತಾದ ಕೈಕೆಲಸಗಳನ್ನು ಮಾಡಿ ಜೀವಿಸಬಹುದು. ತನ್ನ ತನ್ನ ವರ್ಣಾನುಗುಣವಾದ ವೃತ್ತಿಯಿಂದಲೇ ತನ್ನ ಜೀವನವು ನಡೆಯುತ್ತಿದ್ದಾಗಮಾತ್ರ, ಇತರವರ್ಣದವರ ವೃತ್ತಿಯನ್ನವಲಂಬಿಸುವುದು ಬಹಳ ದೋಷಾಸ್ಪದವು. ಉದ್ಧವಾ! ಇವಿಷ್ಟೂ ತ್ರೈವರ್ಣಿಕರಿಗೆ ಇಹಲೋಕದ ಜೀವನಕ್ಕೆ ಬೇಕಾದ ವೃತ್ತಿಗಳು. ಅವರಿಗೆ ಪರಲೋಕಸಾಧನಗಳಾದ ಕೆಲವು ಧರ್ಮಗಳನ್ನೂ ತಿಳಿಸುವೆನು ಕೇಳು. ಗೃಹಸ್ಥನು, ಅಧ್ಯಯನ, ಬ್ರಹ್ಮಯಜ್ಞ, ಶ್ರಾದ್ಧ, ಬಲಿ, ಹೋಮಾದಿಕಾರ್ಯಗಳಿಂದ ತನ್ನ ಶಕ್ತ್ಯನುಸಾರವಾಗಿ ದೇವತೆಗಳನ್ನೂ, ಋಷಿಗಳನ್ನೂ, ಪಿತೃದೇವತೆಗಳನ್ನೂ ನನ್ನ ರೂಪದಿಂದಲೇ ಭಾವಿಸಿ ಪ್ರತಿದಿನವೂ ಉಪಾಸಿಸಬೇಕು. ದೈವಿಕವಾಗಿಯಾಗಲಿ, ಸ್ವವೃತ್ತಿಯಿಂದಾಗಲಿ ಲಭಿಸಿದುದರಲ್ಲಿ ತೃಪ್ತನಾಗಿ, ತನ್ನ ಪೋಷ್ಯವರ್ಗದವರಿಗೂ ಕಷ್ಟವಿಲ್ಲದಹಾಗೆ, ಅದರಿಂದಲೇ ಯಜ್ಞಗಳನ್ನೂ ನಡೆಸುತ್ತ ನನ್ನನ್ನು ಆರಾಧಿಸಬೇಕು. ಗೃಹಸ್ಥನು ಹೆಂಡಿರು ಮಕ್ಕಳು ಮೊದಲಾದ ಕುಟುಂಬದಲ್ಲಿ ಬಹಳ ಮಮತೆಯನ್ನು ತೋರಿಸಬಾರದು. ತನ್ನ ದೇಹದಲ್ಲಿಯೂ ಮಮತೆಯನ್ನಿಡಬಾರದು. ಇಹಲೋಕಸುಖಗಳೂ ಸ್ವರ್ಗಾದಿಸುಖಗಳಂತೆಯೇ ಅಶಾಶ್ವತಗಳೆಂದೂ, ಮೋಕ್ಷವೊಂದೇ ನಿತ್ಯಸು

ಖವೆಂದೂ, ತತ್ವಜ್ಞಾನದಿಂದ ತಿಳಿಯಬೇಕು. ಹೆಂಡಿರು, ಮಕ್ಕಳು, ನಂಟರು, ಇಷ್ಟರು, ಎಂಬೀ ಕೂಡಾಟಗಳೆಲ್ಲವೂ, ಅನ್ನಸತ್ರಗಳಲ್ಲಿ ಸೇರಿದ ಪ್ರಯಾಣಿಕರ ಸ್ನೇಹದಂತೆ, ಅಲ್ಪಕಾಲದ ಕೂಡಾಟಗಳೇಹೊರತು ಬೇರೆಯಲ್ಲ. ಈ ಕೂಡಾಟಗಳು. ಆಯಾದೇಹವಿರುವವರೆಗೆಮಾತ್ರವೇ! ನಿದ್ರೆ ಬಂದಾಗಲೇ ಕನಸು! ಆ ನಿದ್ರೆಯು ಬಿಟ್ಟು ಹೋದಮೇಲೆ ಕನಸಿಲ್ಲವಷ್ಟೆ! ಹಾಗೆಯೇ ದೇಹವಿದ್ದಾಗಲೇ ಈಸಂಬಂಧಗಳು! ದೇಹವು ಹೋದಮೇಲೆ ಅವೂ ಬಿಟ್ಟುಹೋಗುವುವು. ಗೃಹಸ್ಥನು ಈ ವಿಚಾರವನ್ನು ಚೆನ್ನಾಗಿ ಪರಿಶೀಲಿಸಿ ತಿಳಿದು, ತನ್ನ ಮನೆಯಲ್ಲಿಯೂ ತಾನೊಬ್ಬ ಆಗಂತುಕನಂತೆಯೇ ಉದಾಸೀನನಾಗಿರಬೇಕು. ಅಹಂಕಾರಮಮಕಾರಗಳನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಗೃಹಸ್ಥನಿಗೆ ವಿಹಿತಗಳಾದ ಯಜ್ಞಾದಿಕರ್ಮಗಳಿಂದ ನನ್ನನ್ನಾರಾಧಿಸುತ್ತ, ಯಾವಜ್ಜೀವವೂ ಆ ಗೃಹಾಶ್ರಮದಲ್ಲಿಯೇ ಇದ್ದರೂ ಇರಬಹುದು. ಇಲ್ಲವೇ ಪುತ್ರವಂತನಾದವನು ವಾನಪ್ರಸ್ಥಾಶ್ರಮವನ್ನಾಗಲಿ, ಸನ್ಯಾಸವನ್ನಾಗಲಿ ಸ್ವೀಕರಿಸಬಹುದು. ಯಾವನು ಕುಟುಂಬಿಯಾಗಿರುವಾಗ, ಮನೆಮುಂದಿಮಕ್ಕಳಲ್ಲಿ ಮೋಹಾತುರನಾಗಿ, ಸ್ತ್ರೀವಶ್ಯನಾಗಿರುವನೋ, ಅವನು ಅಹಂಕಾರಮಮಕಾರಗಳಿಂದ ಬುದ್ಧಿಗೆಟ್ಟು ಸಂಸಾರಬಂಧದಲ್ಲಿ ಕ್ಲೇಶಪಡುವನು. ಇಂತವನು ಆಗಾಗ ತನ್ನ ಮನಸ್ಸಿನಲ್ಲಿ "ಅಯ್ಯೋ! ನಾನು ಹೋದಮೇಲೆ ಈ ಮಕ್ಕಳ ಗತಿಯೇನು? ಈ ಹೆಂಡತಿಯ ಗತಿಯೇನು? ವೃದ್ಧರಾದ ಈ ತಂದೆತಾಯಿಗಳ ಗತಿಯೇನು? ನಾನಿಲ್ಲದಮೇಲೆ ಇವರು ಬದುಕುವ ಬಗೆಯೇನು? ಇವರೆಲ್ಲರೂ ದಿಕ್ಕಿಲ್ಲದೆ ಅಲೆಯುವರಲ್ಲಾ!" ಎಂದು ಸಂಕಟದಿಂದ ಕೊರಗುತ್ತ, ಬುದ್ಧಿಗೆಟ್ಟು, ಎಷ್ಟೆಷ್ಟು ಅನುಭವಿಸಿದರೂ ವಿಷಯಭೋಗಗಳಲ್ಲಿ ತೃಪ್ತಿಯಿಲ್ಲದೆ, ಸಾಯುವಾಗಲೂ ಆ ಗೃಹಾದಿಗಳನ್ನೇ ಸ್ಮರಿಸುವುದರಿಂದ, ಮೃತನಾದಮೇಲೆಯೂ ತಿರುಗಿ ತಾಮಸಜನ್ಮವನ್ನೇ ಹೊಂದುವನು. ಇದು ಹದಿನೇಳನೆಯ ಅಧ್ಯಾಯವು.

## ವಾನಪ್ರಸ್ಥ ಸನ್ಯಾಸಾಶ್ರಮಗಳು.

ಉದ್ಧವಾ ! ವಾನಪ್ರಸ್ಥಧರ್ಮವನ್ನು ಹಿಡಿಯತಕ್ಕವನು, ತನ್ನ ಪತ್ನಿಯನ್ನು ತನ್ನ ಪುತ್ರರ ವಶದಲ್ಲಿ ಬಿಟ್ಟಾಗಲಿ, ಇಲ್ಲವೇ ಅವಳನ್ನೂ ತನ್ನೊಡನೆ ಕರೆದುಕೊಂಡಾಗಲಿ ವನಕ್ಕೆ ಹೋಗಿ, ತನ್ನ ನೂರುವರ್ಷಗಳ ಆಯುಃ ಪರಿಮಿತಿಯಲ್ಲಿ ಮೂರನೆಯ ಭಾಗವನ್ನೆಲ್ಲಾ ಎಂದರೆ, ಎಪ್ಪತ್ತೈದುವರ್ಷಗಳ ವರೆಗೂ ಆ ವನದಲ್ಲಿಯೇ ಜಿತೇಂದ್ರಿಯನಾಗಿ ಕಾಲವನ್ನು ಕಳೆಯಬೇಕು. ಅದರಿಂದಾಚೆಗೆ ವಿರಕ್ತನಾಗಿ ಸನ್ಯಾಸವನ್ನು ಪರಿಗ್ರಹಿಸಬಹುದು. ವಾನಪ್ರಸ್ಥವನ್ನು ಹಿಡಿದವನು, ಕಾಡಿನಲ್ಲಿ ಬೆಳೆದ,ಮತ್ತು ಶಾಸ್ತ್ರನಿಷಿದ್ಧಗಳಲ್ಲದ, ಗಡ್ಡೆ, ಗೆಣಸು, ಹಣ್ಣು ಮೊದಲಾದುವುಗಳಿಂದಲೇ ಜೀವನಮಾಡಬೇಕು. ನಾರುಬಟ್ಟೆಯನ್ನಾಗಲಿ, ಅದು ಸಿಕ್ಕದಿದ್ದರೆ, ಹುಲ್ಲು, ಎಲೆ, ಕೃಷ್ಣಾಜಿನಗಳನ್ನಾಗಲಿ ವಸ್ತ್ರವಾಗಿ ಧರಿಸಬೇಕು. ತಲೆಕೂದಲು, ಮೈಕೂದಲು, ಉಗುರು, ಮೀಸೆ, ಮುಂತಾದ ಮಲಗಳನ್ನು ಮೈಯಿಂದ ಕಿತ್ತು ಹಾಕಬಾರದು. ಹಲ್ಲುಗಳನ್ನುಜ್ಜಬಾರದು. ತ್ರಿಕಾಲಸ್ನಾನಮಾಡುತ್ತ ಹುಲ್ಲುನೆಲದ ಮೇಲೆಯೇ ಮಲಗಬೇಕು. ಬೇಸಗೆಯಲ್ಲಿ ಪಂಚಾಗ್ನಿಮಧ್ಯದಲ್ಲಿ ಕುಳಿತು ತಪಸ್ಸುಮಾಡಬೇಕು. ಮಳೆಗಾಲದಲ್ಲಿ ಮಳೆಯಲ್ಲಿಯೇ ಕುಳಿತಿರಬೇಕು. ಚಳಿಗಾಲದಲ್ಲಿ ಕಂಠಪರ್ಯಂತವಾಗಿ ಕೊಳದಲ್ಲಿಳಿದು ತಪಸ್ಸುಮಾಡಬೇಕು. ಬೆಂಕಿಯಲ್ಲಿ ಪಕ್ವಮಾಡದ ಕಂದಮೂಲಗಳನ್ನಾಗಲಿ, ಕಾಲದಿಂದ ತಾನಾಗಿ ಮಾಗಿಬಿದ್ದ ಹಣ್ಣುಗಳನ್ನಾಗಲಿ ಭುಜಿಸಬೇಕು. ಧಾನ್ಯದ ಕಾಳುಗಳನ್ನು ಒರಳಿನಲ್ಲಿಯಾಗಲಿ, ಬೇರೆ ಕಲ್ಲುಗಳಿಂದಾಗಲಿ ಪುಡಿಮಾಡಿ ಭುಜಿಸಬೇಕು. ಯಾವ ಸಾಧನಗಳೂ ದೊರೆಯದಿದ್ದಾಗ ಹಲ್ಲುಗಳಿಂದಲೇ ಹಿಟ್ಟುಮಾಡಿ ತಿನ್ನಬೇಕು. ತನ್ನ ಜೀವನಕ್ಕೆ ಬೇಕಾದ ಕಂದಮೂಲಾದಿಗಳನ್ನು ತಾನೇ ಹೋಗಿ ಸಂಪಾದಿಸಿಕೊಂಡು ಬರಬೇಕು. ಆಗಾಗಿನ ಆಹಾರಗಳನ್ನು ಆಗಾಗಲೇ ಸಂಗ್ರಹಿಸಿತಂದು ಭುಜಿಸಬೇಕೇಹೊರತು, ದೇಶಕಾಲಸ್ಥಿತಿಯ ಬಲಾಬಲವನ್ನು ತಿಳಿದು ಮುಂದಾಗಿ ಸಂಗ್ರಹಿಸಿಟ್ಟುಕೊಳ್ಳಬಾರದು. ಕಾಲಾಂತರದಲ್ಲಿ ತಂದುದನ್ನು ಭುಜಿಸಲೇಬಾರದು. ವಾನಪ್ರಸ್ಥದಲ್ಲಿರುವವನು, ಕಾಡಿನಲ್ಲಿ ಬೆಳೆದ ನೀವಾರಾದಿಗಳಿಂದಲೇ ಕಾಲೋಚಿತಗ

ಳಾದ ಚರುಪುರೋಡಾಶಾದಿಗಳನ್ನು ಕಲ್ಪಿಸಿ ನನ್ನನ್ನು ಯಜಿಸಬೇಕಲ್ಲದೆ, ಶ್ರುತಿಪ್ರೋಕ್ತವಾದ ಪಶುಯಾಗದಿಂದ ಯಜಿಸಬಾರದು.

ವೇದವಾಕ್ಯಗಳಲ್ಲಿ ಮುನಿಗಳಿಗೂ ಅವಶ್ಯಕರ್ತವ್ಯಗಳೆಂದು ವಿಧಿಸಲ್ಪಟ್ಟಿರುವ, ಅಗ್ನಿಹೋತ್ರ, ದರ್ಶ, ಪೌರ್ಣಮಾಸ, ಚಾತುರ್ಮಾಸ್ಯ, ಮೊದಲಾದ ಕರ್ಮಗಳನ್ನು ವಾನಪ್ರಸ್ಥನೂ ತಪ್ಪದೆ ನಡೆಸುತ್ತಬರಬೇಕು. ಹೀಗೆ ವಾನಪ್ರಸ್ಥಾಶ್ರಮಿಯಾದ ಮುನಿಯು, ಮೈಯಲ್ಲಿ ನರಗಳೇಳುವಂತೆ ದೇಹವನ್ನು ದಂಡಿಸಿ, ಜೀವಾವಧಿ ದೃಢತಪಸ್ಸಿನಿಂದ ನನ್ನನ್ನಾರಾಧಿಸಿದರೆ, ಋಷಿಲೋಕವನ್ನೂ ದಾಟಿ, ನನ ಸಾನ್ನಿಧ್ಯವನ್ನು ಹೊಂದುವನು. ಇದೇ ವ್ರತವನ್ನು ಫಲಾಪೇಕ್ಷೆಯಿಂದ ಮಾಡಿದವನು, ಋಷಿಲೋಕದಲ್ಲಿಯೇ ನಿಂತುಹೋಗುವನು. ಬಹಳ ಕಷ್ಟಸಾಧ್ಯವಾದ ಈ ತಪಸ್ಸು ಉತ್ತಮಪುರುಷಾರ್ಥವಾದ ಮೋಕ್ಷಕ್ಕೇ ಸಾಧನವಾಗಿರುವಾಗ, ಅಲ್ಪಫಲಕ್ಕಾಗಿ ಅದನ್ನುಪಯೋಗಿಸುವವನಿಗಿಂತಲೂ ಮೂಢನಾವನುಂಟು? ವಾನಪ್ರಸ್ಥದಲ್ಲಿರುವವನು, ಜರೆಯಿಂದ ಜೀರ್ಣನಾಗಿ, ಮೈಯಲ್ಲಿ ನಡುಕವುಂಟಾಗುವುದರಿಂದ ಸ್ವಧರ್ಮಗಳನ್ನು ನಡೆಸುವುದಕ್ಕೆ ಅಶಕ್ತನಾದಾಗ, ಆಹವನೀಯವೇ ಮೊದಲಾದ ಅಗ್ನಿಗಳನ್ನು ಹೃದಯದಲ್ಲಿ ಆತ್ಮಸಮಾರೋಪಣ ಮಾಡಿಕೊಂಡು, ಅಗ್ನಿಪ್ರವೇಶವನ್ನು ಮಾಡಿ ದೇಹವನ್ನು ತ್ಯಜಿಸಬೇಕು.

ಉದ್ಧವಾ! ಇನ್ನು * ಸನ್ಯಾಸಧರ್ಮಗಳನ್ನು ತಿಳಿಸುವೆನು ಕೇಳು. ಸ್ವರ್ಗಾದಿಲೋಕಗಳು ಕರ್ಮಫಲದಿಂದಲೇ ಲಭಿಸತಕ್ಕವುಗಳಾದುದರಿಂದ ಅವೂ ನರಕಪ್ರಾಯಗಳೇ! ಏಕೆಂದರೆ, ಇವೆಲ್ಲವೂ ಮೋಕ್ಷಕ್ಕೆ ಪ್ರತಿಬಂಧಕಗಳು. ಈ ತತ್ವವನ್ನು ತಿಳಿದು, ಸ್ವರ್ಗಾದಿಸುಖಗಳಲ್ಲಿ ವಿರಕ್ತಿಹೊಂದಿದವನು, ಒಡನೆಯೇ ಸನ್ಯಾಸಾಶ್ರಮವನ್ನು ಪರಿಗ್ರಹಿಸಿ, ಸರ್ವಸಂಗಪರಿತ್ಯಾಗಮಾಡಿ ಹೊರಡಬೇಕು. ಹೀಗೆ ಸನ್ಯಾಸಾಶ್ರಮವನ್ನು ಪರಿಗ್ರಹಿ

---

* ಇಲ್ಲಿ ಕುಟೀಚಕ, ಬಹೂದಕ, ಹಂಸ, ಪರಮಹಂಸರೆಂಬ ನಾಲ್ಕುಬಗೆಯ ಯತಿಗಳೂ, ಅವರು ಅನುಸರಿಸಬೇಕಾದ ಸಾಧಾರಣಧರ್ಮಗಳೂ ನಿರೂಪಿಸಲ್ಪಡುವುವೆಂದು ಗ್ರಾಹ್ಯವು.

ಸತಕ್ಕವನು, ಮೊದಲು ಯಥಾವಿಧಿಯಾಗಿ ಅಷ್ಟಶ್ರಾದ್ಧಗಳನ್ನು ಮಾಡಿ, ಪ್ರಾಜಾಪತ್ಯವೆಂಬ ಇಷ್ಟಿಯಿಂದ ನನ್ನನ್ನು ಆರಾಧಿಸಿ, ಸರ್ವಸ್ವವನ್ನೂ ಋತ್ವಿಕ್ಕುಗಳಿಗೆ ಹಂಚಿಕೊಟ್ಟು, ಗೃಹಸ್ಥನಾಗಿದ್ದರೆ ಅಗ್ನಿಗಳನ್ನು ಆತ್ಮ ಸಮಾರೋಪಣಮಾಡಿಕೊಂಡು, ನನ್ನನ್ನು ಹೊರತು ಬೇರೆಯಾವ ಚಿಂತೆ ಯನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ, ಸನ್ಯಾಸಿಯಾಗಿ ಹೊರಡಬೇಕು. ಸ ನ್ಯಾಸಿಯಾಗಿ ಸ್ವಧರ್ಮವನ್ನು ತಪ್ಪದೆ ನಡೆಸುವವನಿಗೆ ಮೋಕ್ಷವು ಕರಗತ ಪ್ರಾಯವು. ಇಂತವನನ್ನು ಕಂಡಾಗ ದೇವತೆಗಳಿಗೂ ಅಸೂಯೆ ಹುಟ್ಟು ವುದು. ಆದುದರಿಂದ ಬ್ರಾಹ್ಮಣನು ಸನ್ಯಸಿಸುವಾಗ, ದೇವತೆಗಳೇ ಪುತ್ರ ಕಳತ್ರಬಾಂಧವಾದಿರೂಪದಿಂದ ಕಾಣಿಸಿಕೊಂಡು, ಅವನನ್ನು ನಿರ್ಬಂಧಿಸಿ, ಅವನ ಪ್ರಯತ್ನಕ್ಕೆ ವಿಘ್ನಗಳನ್ನು ಮಾಡುವರು. ನಿಜವಾದ ಸನ್ಯಾಸಿ ಯಾಗಿದ್ದರೆ, ಅವೊಂದನ್ನೂ ಗಮನಿಸದೆ, ಕೌಪೀನವೊಂದೇ ತನ್ನ ಸರ್ವಸ್ವ ವೆಂದು ತಿಳಿದು, ಅದನ್ನು ಮಾತ್ರ ಧರಿಸಿ ಹೊರಡಬೇಕು. ಯತಿಯು ತನಗೆ ಆ ಪತ್ತಿನ ಸಂದರ್ಭದಲ್ಲಿ ಹೊರತು, ದಂಡವೊಂದು, ಕಮಂಡಲುವೊಂದು ಇವೆ ರಡನ್ನಲ್ಲದೆ ಉಳಿದುದನ್ನೆಲ್ಲಾ ಬಿಟ್ಟುಬಿಡಬೇಕು. ಮೊದಲು ಚೆನ್ನಾಗಿ ದೃ ಷ್ಟಿಯಿಟ್ಟು ನೋಡಿ ಶುದ್ಧವಾದ ಸ್ಥಳದಲ್ಲಿ ಕಾಲಿಡಬೇಕು. ಬಟ್ಟೆಯಿಂ ದ ಸೋಸಿದ ನೀರನ್ನೇ ಕುಡಿಯಬೇಕು. ಸತ್ಯವಾದ ಮಾತನ್ನೇ ನುಡಿಯಬೇ ಕು. ಮನಸ್ಸಿನಿಂದ ಯೋಚಿಸಿ ನಿಷ್ಕಲ್ಮಷವಾದ ಕಾರ್ಯವನ್ನೇ ನಡೆಸಬೇ ಕು. ಉದ್ಧವಾ! ಮನಸ್ಸು, ವಾಕ್ಕು, ಕಾಯಗಳೆಂಬ ತ್ರಿಕರಣಗಳಿಗೂ ಕ್ರಮವಾಗಿ, ಪ್ರಾಣಾಯಾಮ, ಮೌನ, ಕಾಮ್ಯಕರ್ಮತ್ಯಾಗಗಳೆಂಬಿವು ಮೂರೂ ದಂಡನಗಳೆನಿಸುವುವು. ಈ ವಿಧವಾದ ದಂಡನಗಳಿಂದ ತ್ರಿಕರಣ ಗಳನ್ನೂ ಸ್ವಾಧೀನದಲ್ಲಿಡದವನು ಯತಿಯೆನಿಸಲಾರನು. ಬಿದಿರುಕೋಲನ್ನು ಕೈಯಲ್ಲಿ ಹಿಡಿದಮಾತ್ರದಿಂದಲೇ ಸನ್ಯಾಸಿಯೆನಿಸಲಾರನು. ಸನ್ಯಾಸಿಯು ನಾಲ್ಕುವರ್ಣದವರಲ್ಲಿಯೂ ಭಿಕ್ಷೆಯನ್ನಾಚರಿಸಬಹುದು. ಆದರೆ ಅವರಲ್ಲಿ ಪತಿತರಾದವರಿಂದಮಾತ್ರ ಸ್ವೀಕರಿಸಬಾರದು. ಒಂದೊಂದುವೇಳೆಗೆ ತನಗೆ ತೋರಿದ ಏಳುಮನೆಗಳಲ್ಲಿಮಾತ್ರ ಭಿಕ್ಷೆಯನ್ನು ಯಾಚಿಸಬಹುದು. ತಾನು ಭಿಕ್ಷೆಗೆ ಹೋಗತಕ್ಕ ಮನೆಗಳನ್ನು ಮುಂದಾಗಿ ನಿರ್ಣಯಿಸಿಕೊಳ್ಳ

ಬಾರದು. ಆ ಏಳುಮನೆಗಳಲ್ಲಿ ತನಗೆ ಎಷ್ಟು ಲಭಿಸುವುದೋ ಅಷ್ಟರಲ್ಲಿ ತೃಪ್ತನಾಗಬೇಕು. ಪ್ರತಿದಿನವೂ ಊರಹೊರಗಿನ ಜಲಾಶಯಕ್ಕೆ ಹೋಗಿ, ಅಲ್ಲಿ ಆಚಮನಮಾಡಿ, ತಾನು ತಂದ ಭಿಕ್ಷಾನ್ನವನ್ನು ಮೌನದಿಂದ ಭುಜಿಸಬೇಕು.! ಇಷ್ಟರಲ್ಲಿ ಯಾರಾದರೂ ಬಂದು ಯಾಚಿಸಿದರೆ, ಅವರಿಗೂ ವಿಭಾಗಿಸಿಕೊಟ್ಟು ಶೇಷಾನ್ನವನ್ನು ಮಾತ್ರ ತಾನು ಭುಜಿಸಬೇಕೇಹೊರತು, ತನಗೆ ಸಾಲದುದಕ್ಕಾಗಿ ತಿರುಗಿ ಭಿಕ್ಷೆಗೆ ಹೊರಡಬಾರದು. ಯತಿಯಾದವನು ಸಮಸ್ತಸಂಗಗಳನ್ನೂ ಬಿಟ್ಟು, ಇಂದ್ರಿಯಗಳನ್ನು ಜಯಿಸಿ, ಪರಮಾತ್ಮಧ್ಯಾನದಿಂದಲೇ ತುಷ್ಟನಾಗಿ, ಸಮಸ್ತವೂ ಬ್ರಹ್ಮಾತ್ಮಕವೆಂಬ ಸಮದೃಷ್ಟಿಯುಳ್ಳವನಾಗಿ, ಏಕಾಕಿಯಾಗಿಯೇ ಭೂಮಿಯನ್ನು ಸುತ್ತಬೇಕು ನಿರ್ಜನವಾಗಿಯೂ, ನಿರ್ಭಯವಾಗಿಯೂ ಇರುವ ಸ್ಥಳವನ್ನು ಸೇರಿ, ನನ್ನಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ತನ್ನ ಆತ್ಮವನ್ನು ನನ್ನೊಡನೆ ಅಭೇದಜ್ಞಾನದಿಂದ ಚಿಂತಿಸುತ್ತಿರಬೇಕು. ತನ್ನ ಬಂಧಕ್ಕೂ, ಮುಕ್ತಿಗೂ ಕಾರಣವೇನೆಂಬುದನ್ನು ತತ್ವಜ್ಞಾನದಿಂದ ತನ್ನಲ್ಲಿಯೇ ಪರ್ಯಾಲೋಚಿಸುತ್ತಿರಬೇಕು. ಉದ್ಧವಾ! ಇಂದ್ರಿಯಗಳನ್ನು ಯಥೇಚ್ಛವಾಗಿ ಬಿಟ್ಟುಬಿಡುವುದೇ ಜೀವಾತ್ಮನಿಗೆ ಬಂಧವು. ಅವುಗಳನ್ನು ಅಡಗಿಸಿಟ್ಟುಕೊಳ್ಳುವುದೇ ಮೋಕ್ಷವೆಂದು ತಿಳಿ! ಆದುದರಿಂದ ಸನ್ಯಾಸಿಯು, ಮನಸ್ಸನ್ನೂ, ಐದು ಜ್ಞಾನೇಂದ್ರಿಯಗಳನ್ನೂ ವಶಪಡಿಸಿಕೊಂಡು, ನನ್ನಲ್ಲಿ ಪೂರ್ಣಭಕ್ತಿಯನ್ನಿಟ್ಟು, ಶಬ್ದಾದಿವಿಷಯಗಳಲ್ಲಿ ವಿರಕ್ತನಾಗಿ, ಆತ್ಮಾನುಭವವೆಂಬ ಆನಂದದಿಂದ ಸುಖಿಸುತ್ತ ಸಂಚರಿಸಬೇಕು. ಮತ್ತು ಭಿಕ್ಷಾರ್ಥವಾಗಿ ಅಲ್ಲಲ್ಲಿ ಪಟ್ಟಣಗಳನ್ನೂ, ಗ್ರಾಮಗಳನ್ನೂ, ಹಳ್ಳಿಗಳನ್ನೂ, ಸಾತ್ವಿಕರಾದ ಜನರು ಗುಂಪುಕೂಡಿದ ಸ್ಥಳಗಳನ್ನೂ ಪ್ರವೇಶಿಸುತ್ತ, ಅಲ್ಲಲ್ಲಿ ಪವಿತ್ರಗಳಾದ ಕ್ಷೇತ್ರಗಳನ್ನೂ, ಪರ್ವತಗಳನ್ನೂ, ನದಿಗಳನ್ನೂ, ಆಶ್ರಮಗಳನ್ನೂ ಸುತ್ತುತ್ತಿರಬೇಕು. ಸನ್ಯಾಸಿಯು ವಿಶೇಷವಾಗಿ ವಾನಪ್ರಸ್ಥರಿರುವ ಆಶ್ರಮಪ್ರದೇಶಗಳಿಗೆ, ಆಗಾಗ ಹೋಗಿ ಭಿಕ್ಷೆಯನ್ನೆತ್ತುವುದು ಉತ್ತಮಪಕ್ಷವು. ಏಕೆಂದರೆ, ವಾನಪ್ರಸ್ಥರು, ಕಣಗಳಲ್ಲಿ ಚೆಲ್ಲಿ ಹೋದ ಧಾನ್ಯಗಳನ್ನೇ ಆಯ್ದುತಂದು ಭುಜಿಸತಕ್ಕವರು. ಆದುದರಿಂದ ಅವರಿಂದ ತಂದ ಭಿಕ್ಷಾನ್ನವು ಬಹಳ ಪರಿಶುದ್ಧ

ವಾದುದು, ಅದನ್ನು ಭುಜಿಸಿದ ಸನ್ಯಾಸಿಯೂ ಶುದ್ಧನಾಗುವನು. ಸನ್ಯಾಸಿಯು ಪ್ರಾಪಂಚಿಕವಾದ ಶಬ್ದಾದಿವಿಷಯಗಳನ್ನು ವಾಸ್ತವವೆಂದು ತಿಳಿಯಬಾರದು. ಇವೆಲ್ಲವೂ ನಶ್ವರಗಳು. ಆದುದರಿಂದ ಇಹಲೋಕದ ಮತ್ತು ಪರಲೋಕದ ಸುಖಗಳಿಗೆ ಸಾಧನವಾದ ಕರ್ಮದಲ್ಲಿ ಸನ್ಯಾಸಿಯು ಮನಸ್ಸಿಡಬಾರದು. ವಿವೇಕಜ್ಞಾನದಿಂದ ಈ ವಿಷಯಗಳಲ್ಲಿ ದೃಢವಾದ ವೈರಾಗ್ಯವನ್ನೇ ಹಿಡಿಯಬೇಕು. ಮತ್ತು, ಬುದ್ಧಿ, ಇಂದ್ರಿಯಗಳು, ಮನಸ್ಸು, ಪ್ರಾಣಗಳು, ಪಂಚಭೂತಗಳು, ಇವುಗಳ ಸಮುದಾಯದಿಂದೇರ್ಪಟ್ಟ ತನ್ನ ಶರೀರವು, ಪ್ರಕೃತಿಯ ಪರಿಣಾಮವೆಂದು ತಿಳಿದು, ಆ ಶರೀರಚಿಂತೆಯನ್ನು ಬಿಟ್ಟು, ಆತ್ಮಸ್ವರೂಪವನ್ನೇ ಚಿಂತಿಸುತ್ತಿರಬೇಕು. ಶರೀರದಲ್ಲಿ ಆತ್ಮವೆಂಬ ಭ್ರಾಂತಿಯನ್ನು ಸಂಪೂರ್ಣವಾಗಿ ತ್ಯಜಿಸಬೇಕು. ಉದ್ಧವಾ! ಇವಿಷ್ಟೂ ಸನ್ಯಾಸನಿಯಮಗಳು. ಹಿಂದೆ ಹೇಳಿದ ನಾಲ್ಕುಬಗೆಯ ವರ್ಣಾಶ್ರಮಧರ್ಮಗಳನ್ನು ಸರಿಯಾಗಿ ನಡೆಸುತ್ತ ಬರುವುದರಿಂದ, ಆತ್ಮಪರಮಾತ್ಮಸ್ವರೂಪಜ್ಞಾನವೂ, ವೈರಾಗ್ಯವೂ, ನನ್ನಲ್ಲಿ ಭಕ್ತಿಯೂ ತಾನಾಗಿ ಹುಟ್ಟುವುದು. ಮೋಕ್ಷದಲ್ಲಿ ಪಡೆಯತಕ್ಕ ವಸ್ತುವೂ, ಮೋಕ್ಷವನ್ನು ಹೊಂದಿಸತಕ್ಕವನೂ, ಮತ್ತು ಮನೋರಥಕ್ಕೆ ವಿಷಯವಾದ ಸಮಸ್ತವೂ, ಆ ಭಗವಂತನೊಬ್ಬನೇ ಎಂಬ ತಿಳಿವಳಿಕೆಯೇ ವೈರಾಗ್ಯಪೂರ್ಣವಾದ ಜ್ಞಾನವೆನಿಸುವುದು. ಹೀಗೆ ವಿರಕ್ತನಾದ ಜ್ಞಾನನಿಷ್ಠನಿಗಾಗಲಿ, ಫಲಾಪೇಕ್ಷೆಯಿಲ್ಲದೆ ನನ್ನನ್ನೇ ಭಜಿಸತಕ್ಕ ಭಕ್ತನಿಗಾಗಲಿ, ಆ ಭಕ್ತಿಜ್ಞಾನವೈರಾಗ್ಯಗಳು ಹುಟ್ಟಿದಮೇಲೆ, ಆಯಾ ಆಶ್ರಮಧರ್ಮಗಳಿಂದ ಸಾಧಿಸಬೇಕಾದುದೇನೂ ಇಲ್ಲ. ಅಂತವರಿಗೆ ಮೋಕ್ಷೋಪಾಯವು ಕೈಗೂಡಿದಂತೆಯೇ ಇರುವುದರಿಂದ, ಅವರು ತಮ್ಮ ವರ್ಣಾಶ್ರಮನಿಯಮಗಳನ್ನೆಲ್ಲಾ, ಶಾಸ್ತ್ರೀಯವಾದ ವಿಧಿನಿಷೇಧಗಳ ನಿರ್ಬಂಧವೆಂದು ಭಾವಿಸದೆ, ಎಲ್ಲವನ್ನೂ ಭಗವತ್ಕೈಂಕರ್ಯವೆಂದೇ ತಿಳಿದು ನಡೆಸುವರು. ಈ ಭಕ್ತಿವೈರಾಗ್ಯಗಳು ಹುಟ್ಟಿ ಪರಿಪಕ್ವವಾದಮೇಲೆ, ಅಂತಹ ಜ್ಞಾನನಿಷ್ಠನಿಗೆ, ಲೌಕಿಕವಿಷಯಗಳ ಸ್ಮರಣೆಯೇ ಬಿಟ್ಟುಹೋಗುವುದರಿಂದ, ಅವನು ವಿವೇಕಿಯಾಗಿದ್ದರೂ ಮಗುವಿನಂತೆ ಮಾನಾವಮಾನಗಳಲ್ಲಿ ದೃಷ್ಟಿಯಿಲ್ಲದೆ ಕ್ರೀಡಿಸುವನು. ಬುದ್ಧಿ

ಶಾಲಿಯಾಗಿದ್ದರೂ ಮಂಕನಂತೆ ನಡೆಯುತ್ತಿರುವನು. ವಿದ್ವಾಂಸನಾಗಿ ದ್ದರೂ ಹುಚ್ಚನಂತೆ ಮಾತಾಡುವನು. ವೇದಾರ್ಥನಿಷ್ಠನಾಗಿದ್ದರೂ ಪಶು ವಿನಂತೆ ಆಚರಿಸುವನು. ಜ್ಞಾನಿಯು, ಕರ್ಮಪ್ರಾಧಾನ್ಯವನ್ನು ಹೇಳತಕ್ಕ ವೇದ ವಾದಗಳನ್ನು ಹಿಡಿದು ವಾದಿಸಬಾರದು. ಪಾಷಂಡಿಯಾಗಿಯೂ ಇರಬಾರದು. ಕೇವಲತರ್ಕನಿಷ್ಠನೂ ಆಗಬಾರದು. ಕೆಲಸಕ್ಕೆ ಬಾರದ ವಾದಗಳಲ್ಲಿ ಸೇರಿ ಒಬ್ಬರ ಪಕ್ಷವನ್ನು ಹಿಡಿದು ನಿಲ್ಲಬಾರದು ಇತರಜನರಿಗೆ ಭಯಪಡಬಾರ ದು. ಮತ್ತೊಬ್ಬರನ್ನು ಭಯಪಡಿಸಲೂ ಬಾರದು. ಮತ್ತೊಬ್ಬರು ತನ್ನ ನ್ನು ಕುರಿತು ಕೆಟ್ಟಮಾತುಗಳನ್ನಾಡಿದರೂ ಸಹಿಸಿಕೊಳ್ಳಬೇಕು. ಯಾ ರನ್ನೂ ಅವಮಾನಪಡಿಸಬಾರದು ತನ್ನ ದೇಹದಮೇಲಿನ ಅಭಿಮಾನದಿಂದ ಪಶುಬುದ್ಧಿಯುಳ್ಳವನಾಗಿ, ಮತ್ತೊಬ್ಬರೊಡನೆ ವೈರವನ್ನೂ ಬೆಳೆಸಬಾರದು. ಏಕೆಂದರೆ, ಒಂದೇ ಚಂದ್ರಬಿಂಬವು ಅನೇಕಜಲಪಾತ್ರಗಳಲ್ಲಿ ಪ್ರತಿಬಿಂಬಿ ಸುವಂತೆ, ಎಲ್ಲಾ ಶರೀರಗಳೊಳಗಿನ ಜೀವಾತ್ಮನಲ್ಲಿಯೂ ಇರುವ ಪರ ಮಾತ್ಮನೊಬ್ಬನೇ ! ಹೀಗೆ ಎಲ್ಲಾ ಶರೀರಗಳಿಗೂ ಪರಮಪುರುಷನೇ ಆತ್ಮ ಭೂತನಾದುದರಿಂದ, ಭೂತದ್ವೇಷದಿಂದ ಪರಮಾತ್ಮನನ್ನೇ ದ್ವೇಷಿಸಿ ದಂತಾಗುವುದು. ಸಕಾಲಕ್ಕೆ ತನಗೆ ಅನ್ನವು ಸಿಕ್ಕದಿದ್ದರೂ ಅದಕ್ಕಾಗಿ ದುಃಖಿಸಬಾರದು. ಹೆಚ್ಚಾಗಿ ಸಿಕ್ಕಿದಾಗ ಸಂತೋಷಪಡಲೂ ಬಾರದು. ಈ ಲಾಭಾಲಾಭಗಳೆರಡೂ ದೈವಾಧೀನಗಳು. "ಹಾಗಿದ್ದರೆ ಆಹಾರಕ್ಕಾಗಿ ಶ್ರಮಪಡುವುದೇ ತಪ್ಪಲ್ಲವೆ?" ಎಂದರೆ, ಹಾಗಲ್ಲ ! ಆಹಾರಕ್ಕಾಗಿ ಪ್ರಯ ತ್ನಿಸಿಯೇ ತೀರಬೇಕು. ಏಕೆಂದರೆ, ಪ್ರಾಣಧಾರಣೆಗೆ ಆಹಾರವಿಲ್ಲದಿದ್ದರೆ ಸಾಗದು. ಪ್ರಾಣಧಾರಣೆಯಿಂದಲೇ ತತ್ವಜ್ಞಾನವನ್ನು ಪಡೆದು, ಅದ ರಿಂದ ಮುಕ್ತಿಯನ್ನು ಹೊಂದಬಹುದು. ಆದುದರಿಂದ ಪ್ರಾಣಧಾರಣೆಗೆ ಉಪಯುಕ್ತವಾದಷ್ಟು ಅನ್ನವನ್ನು ಮಾತ್ರ ಪಡೆಯುವುದಕ್ಕೆ ಯತ್ನಿಸಬಹುದು. ಆದರೆ ಪ್ರಯತ್ನವಿಲ್ಲದೆ ದೈವಿಕವಾಗಿ ದೊರೆತ ಅನ್ನವು ಅತ್ಯುತ್ತಮವೆನಿಸು ವುದು. ಹಾಗಿಲ್ಲದುದೇನೋ ನಿಕೃಷ್ಟವೇ ! ಆದರೂ ಬೇರೆ ವಿಧಿಯಿಲ್ಲದಿದ್ದಾಗ ಪ್ರಯತ್ನಪಟ್ಟಾದರೂ ಸಂಪಾದಿಸಿ ಭುಜಿಸಬೇಕು. ಹೀಗೆಯೇ ವಸ್ತ್ರವ ನ್ನಾಗಲಿ, ಹಾಸಿಗೆಯನ್ನಾಗಲಿ, ಆಗಾಗ ದೈವಿಕವಾಗಿ ಲಭಿಸಿದುದನ್ನು

ಕೈಕೊಳ್ಳಬೇಕು. ಉದ್ಧವಾ ! ನಾನೂ ಕೂಡ ಶೌಚ, ಸ್ನಾನ, ಮೊದಲಾದ ನಿಯಮಗಳನ್ನು ನಡೆಸುವುದುಂಟು.ಇದು ಕೇವಲಲೀಲೆಗಾಗಿಯೇಹೊರತು ಶಾಸ್ತ್ರನಿರ್ಬಂಧದಿಂದಲ್ಲ. ಇದರಂತೆಯೇ ಜ್ಞಾನಿಯಾದ ವಿರಕ್ತನೂಕೂಡ, ಅವುಗಳನ್ನು ತಾನು ಶಾಸ್ತ್ರನಿರ್ಬಂಧಕ್ಕಾಗಿ ಮಾಡುವುದಾಗಿ'ಭಾವಿಸದೆ, ಭಗವತ್ಕೈಂಕರ್ಯವೆಂಬ ಭಾವದಿಂದಲೇ ನಡೆಸಬೇಕು. ಉದ್ಧವಾ! ಈ ವಿಧವಾದ ನಡತೆಯುಳ್ಳವನಿಗೆ,ಎಲ್ಲವೂ ಮದಾತ್ಮಕವೆಂಬ ಬುದ್ಧಿಯು ಸ್ಥಿರಪಡುವುದರಿಂದ,ಬ್ರಹ್ಮಾತ್ಮಕವಲ್ಲದ ಸ್ವತಂತ್ರವಸ್ತುವುಂಟೆಂಬ ಭೇದಭ್ರಾಂತಿಯುಬಿಟ್ಟು ಹೋಗುವುದು ಆದರೆ ದೇಹಾವಸಾನದೊಳಗಾಗಿ ಎಂದಾದರೂ ಒಮ್ಮೆ ಅಕಸ್ಮಾತ್ತಾಗಿ ಆ ಭೇದಭ್ರಾಂತಿಯು ತೋರಿದರೂ, ನನ್ನ ವಿಷಯವಾದ ದೃಢಧ್ಯಾನದಿಂದ, ಅವನಿಗೆ ದೇಹಾಂತದಲ್ಲಿ ಆ ಭ್ರಾಂತಿಯು ನಿಶ್ಶೇಷವಾಗಿ ತೊಲಗಿ, ಅವನು ನನ್ನ ಸಾನ್ನಿಧ್ಯವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಕಾಮೋಪಭೋಗಗಳಿಗೆಲ್ಲಾ ಕೊನೆಗೆ ದುಃಖವೇ ಫಲವೆಂಬುದನ್ನು ತಿಳಿದು, ಅವುಗಳನ್ನು ಹೇಯಭಾವದಿಂದ ಬಿಟ್ಟುಬಿಟ್ಟವನು, ನನ್ನ ಪ್ರಾಪ್ತಿಗೆ ಸಾಧನವೇನೆಂದು ತಿಳಿಯದವನಾಗಿದ್ದರೆ, ಅವನು ಬ್ರಹ್ಮನಿಷ್ಠನಾದ ಆಚಾರ್ಯನಲ್ಲಿಗೆ ಹೋಗಿ, ಭಕ್ತಿಯಿಂದಲೂ, ಶ್ರದ್ಧೆಯಿಂದಲೂ, ನಿಷ್ಕಪಟಭಾವದಿಂದಲೂ ಅವನ ಸೇವೆಮಾಡುತ್ತ, ಬ್ರಹ್ಮಜ್ಞಾನವನ್ನು ಪಡೆಯುವವರೆಗೂ ಅಲ್ಲಿಯೇ ಇರಬೇಕು. ಆ ಗುರುವನ್ನು ನನ್ನ ಭಾವದಿಂದಲೇ ಗೌರವಿಸುತ್ತಿರಬೇಕು ಇಂದ್ರಿಯಗಳನ್ನು ಜಯಿಸಲಾರದೆ, ವಿಷಯಾಸಕ್ತವಾದ ಬುದ್ಧಿಯುಳ್ಳವನಾಗಿ, ಜ್ಞಾನವೈರಾಗ್ಯಗಳೆರಡೂ ಇಲ್ಲದವನು,ತ್ರಿದಂಡವೇ ಮೊದಲಾದ ಆಶ್ರಮಚಿಹ್ನಗಳನ್ನು ಧರಿಸುವುದು ಹೊಟ್ಟೆಹೊರೆಯುವುದಕ್ಕಾಗಿಯೇಹೊರತು ಬೇರೆಯಲ್ಲ. ಇಂತವನು, ತನಗೂ,ತನಗೆ ಅಂತರಾತ್ಮನಾದ ನನಗೂ ಇರುವ ಶೇಷಶೇಷಿಭಾವವನ್ನು ತಿಳಿಯದೆ, ತಾನೇ ಸ್ವತಂತ್ರನೆಂದು ತಿಳಿದಿರುವುದರಿಂದ,ತನ್ನ ಆತ್ಮವನ್ನೂ, ನನ್ನನ್ನೂ ವಂಚಿಸಿದವನಾಗುವನು. ಆಶ್ರಮಧರ್ಮಗಳಿಗೂ ಲೋಪವನ್ನು ತರುವನು. ಅವನ ಪಾಪವೂ ನಿವೃತ್ತವಾಗಲಾರದು. ಇದರಿಂದ ಅವನು ಇಹಲೋಕಪರಲೋಕಗಳೆರಡರಿಂದಲೂ ಬಹಿಷ್ಕರಿಸಲ್ಪಡುವನು. ಉದ್ಧವಾ ! ಮೇಲೆಹೇಳಿದ

ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿ ನಡೆಸಬೇಕಾದ ಪ್ರಧಾನಧರ್ಮಗಳನ್ನು ಮಾತ್ರ ತಿಳಿಸುವೆನು ಕೇಳು. ಸನ್ಯಾಸಿಗೆ ಇಂದ್ರಿಯನಿಗ್ರಹವೂ, ಅಹಿಂಸೆಯೂ ಮುಖ್ಯಧರ್ಮಗಳು. ವಾನಪ್ರಸ್ಥನಿಗೆ, ಕಾಯಕ್ಲೇಶರೂಪವಾದ ತಪಸ್ಸೂ, ಆತ್ಮಪರಮಾತ್ಮವಿಮರ್ಶೆಯೂ ಪ್ರಧಾನಧರ್ಮಗಳು. ಗೃಹಸ್ಥನಿಗೆ ಭೂತ ರಕ್ಷಣೆಯೂ, ಪಂಚಮಹಾಯಜ್ಞಗಳೂ ಮುಖ್ಯಧರ್ಮಗಳು. ಬ್ರಹ್ಮಚಾರಿಗೆ ಆಚಾರ್ಯಸೇವೆಯೇ ಪ್ರಧಾನಧರ್ಮವು. ಗೃಹಸ್ಥನಾಗಿದ್ದಾಗಲೂ ಋತುಕಾಲ ಗಳಲ್ಲಿಮಾತ್ರ ಪತ್ನೀಸಮಾಗಮವನ್ನು ಮಾಡತಕ್ಕವನಿಗೆ ಬ್ರಹ್ಮಚರ್ಯೆಯ ಫಲವುಂಟು. ಹೀಗೆಯೇ ಗೃಹಸ್ಥನಿಗೆ ತಪಸ್ಸು, ಶೌಚ, ಸಂತೋಷ, ಭೂ ತಸೇವನೆ, ಮೊದಲಾದ ಕೆಲವು ಆಶ್ರಮಾಂತರಧರ್ಮಗಳೂ ವಿಧಿಸಲ್ಪಟ್ಟಿರುವು ವು. ಮೇಲೆ ಹೇಳಿದ ನಾಲ್ಕಾಶ್ರಮದವರೂ ನಡೆಸಬೇಕಾದ ಅತಿಪ್ರಧಾನ ಧರ್ಮವಾದರೋ ನನ್ನ ಉಪಾಸನವೇ! ಉದ್ಧವಾ! ಮೇಲೆ ಹೇಳಿದರೀತಿ ಯಾಗಿ ಯಾವನು ತನ್ನ ವರ್ಣಾಶ್ರಮಧರ್ಮಗಳನ್ನು ಬೇರೆ ಫಲಾಪೇಕ್ಷೆಯಿ ಲ್ಲದೆ ನನ್ನ ಆರಾಧನರೂಪವಾಗಿಯೇ ನಡೆಸುತ್ತ, ಸಮಸ್ತಭೂತಗಳನ್ನೂ ನನ್ನ ಸ್ವರೂಪದಿಂದಲೇ ಭಾವಿಸುತ್ತಬರುವನೋ, ಅವನಿಗೆ ಶೀಘ್ರಕಾಲದ ಲ್ಲಿಯೇ ಭಕ್ತಿಯೋಗವು ಕೈಗೂಡಿಬರುವುದು. ಆ ದೃಢಭಕ್ತಿಯಿಂದ ಅವನು ಸೃಷ್ಟಿಸ್ಥಿತಿಲಯಕಾರಣನೂ, ಸರ್ವೇಶ್ವರನೂ; ಪರಬ್ರಹ್ಮವೂ ಆದ ನನ್ನನ್ನು ಹೊಂದಬಹುದು. ಮನುಷ್ಯನಿಗೆ ತನ್ನ ವರ್ಣಾಶ್ರಮಧರ್ಮಗಳನ್ನು ಕ್ರಮ ವಾಗಿ ಅನುಸರಿಸುವುದರಿಂದ ಮನಸ್ಸು ಸತ್ವಮಯವಾಗುವುದು. ಆದ ರಿಂದ ನನ್ನ ಯಾಥಾತ್ಮ್ಯವನ್ನು ತಿಳಿಯಬಹುದು. ಶಾಸ್ತ್ರಜನ್ಯಜ್ಞಾನದಿಂದ ಲೂ, ನನ್ನ ಉಪಾಸನಾರೂಪವಾದ ಜ್ಞಾನದಿಂದಲೂ, ತತ್ವವನ್ನು ತಿಳಿ ದು ವಿರಕ್ತನಾದವನು, ಕೊನೆಗೆ ಭಕ್ತಿಪರಿಪಾಕವನ್ನು ಹೊಂದಿ, ಅದರ ಬಲ ದಿಂದ ನನ್ನ ಸಾನ್ನಿಧ್ಯವನ್ನು ಸೇರಬಹುದು. ವರ್ಣಾಶ್ರಮಗಳಿಗೆ ಬೇಕಾದ ಧರ್ಮಗಳೆಲ್ಲವನ್ನೂ ನಿನಗೆ ಹೇಳಿದುದಾಯಿತು. ಈ ಧರ್ಮಗಳೇ ನನ್ನಲ್ಲಿ ಭಕ್ತಿ ಪೂರ್ವಕವಾಗಿ ನಡೆಸಲ್ಪಡುವುದರಿಂದ ಮೋಕ್ಷಸಾಧನವಾಗುವುದು. ಮು ಕ್ತಿಗೆ ಭಕ್ತಿಗಿಂತಲೂ ಬೇರೆ ಉಪಾಯವಿಲ್ಲ. ಉದ್ಧವಾ! ಮುಖ್ಯವಾಗಿ ಮನುಷ್ಯನು, ತನ್ನ ವರ್ಣಾಶ್ರಮಧರ್ಮಗಳನ್ನು ತಪ್ಪದೆ ನಡೆಸುತ್ತ, ನನ್ನಲ್ಲಿ ಭ

ಕ್ತಿಯುಕ್ತನಾಗಿದ್ದರೆ, ಅವನು ನನ್ನ ಸ್ಥಾನವನ್ನು ಹೊಂದುವನೆಂದು ತಿಳಿ ! ಇದು ಹದಿನೆಂಟನೆಯ ಅಧ್ಯಾಯವು.

---

ಭಗವಂತನಲ್ಲಿ ಆತ್ಮಭರನ್ಯಾಸವು ಮೋಕ್ಷಕ್ಕೆ ಅತಿ ಸುಲಭೋಪಾಯವೆಂದು ಕೃಷ್ಣನು ಉದ್ಧವನಿಗೆ ತಿಳಿಸಿದುದು.

ಉದ್ಧವಾ ! ಶಾಸ್ತ್ರಾಭ್ಯಾಸದಿಂದಲಾಗಲಿ, ಶಾಸ್ತ್ರಾಧಿಕಾರವಿಲ್ಲದಿದ್ದಾಗ ಗುರೂಪದೇಶದಿಂದಲಾಗಲಿ, ಸ್ವರೂಪಜ್ಞಾನವನ್ನು ಪಡೆದು, ಶಾಸ್ತ್ರವಿರುದ್ಧವಲ್ಲದ ಊಹಾಪೋಹಗಳಲ್ಲಿಯೂ ಚತುರನಾದವನು, ಈ ಶರೀರಾದಿಗಳನ್ನು ಭಗವನ್ಮಾಯೆಯಿಂದ ಕಲ್ಪಿತಗಳಾದ ಪ್ರಕೃತಿಯ ಪರಿಣಾಮರೂಪಗಳೆಂದೂ, ಕೇವಲಜ್ಞಾನಾತ್ಮಕನಾದ ತನ್ನ ಆತ್ಮವೂ ಭಗವಂತನಿಗೇ ಅಧೀನನೆಂದೂ ಇಷ್ಟುಮಾತ್ರತಿಳಿದು, ಆ ಆತ್ಮವನ್ನೂ ನನ್ನಲ್ಲಿಯೇ ಒಪ್ಪಿಸಬೇಕು ಹೀಗೆ ನನ್ನನ್ನೇ ಪರಮಪ್ರಾಪ್ಯವೆಂದು ತಿಳಿದವನಿಗೆ, ನಾನುಹೊರತು ಬೇರೊಂದುವಸ್ತುವೂ ಅಭಿಮತವಾಗಲಾರದು. ಅಂತಹ ಜ್ಞಾನಿಗೆ ನಾನು ಅತ್ಯಂತಪ್ರಿಯತಮನೂ, ಪ್ರಾಪ್ಯನೂ, ಪ್ರಾಪಕನೂ, ಸಮ್ಮತನೂ ಆಗಿರುವೆನು. ಅವನಿಗೆ ನಾನುಹೊರತು ಸ್ವರ್ಗವಾಗಲಿ, ಕೈವಲ್ಯವಾಗಲಿ, ಬೇರೆ ಯಾವುದಾಗಲಿ ಇಷ್ಟವಾಗಲಾರದು. ಮೇಲೆ ಹೇಳಿದಂತೆ, ಶರೀರವು ಪ್ರಕೃತಿಪರಿಣಾಮವೆಂದೂ, ಜ್ಞಾನಸ್ವರೂಪವಾದ ಆತ್ಮವು ಪರಮಾತ್ಮನಿಗೆ ಶೇಷಭೂತವೆಂದೂ ತಿಳಿದ ಜ್ಞಾನಿಗಳಿಗೆ ಮಾತ್ರವೇ ಪ್ರಕೃತಿಪುರುಷರಿಗಿಂತಲೂ ಪರನಾಗಿ, ಸರ್ವೋತ್ತಮನೆನಿಸಿಕೊಂಡ ನನ್ನ ಸ್ವರೂಪಜ್ಞಾನವು ಸ್ಥಿರಪಡುವುದು. ಆದುದರಿಂದ ಅಂತಹ ಜ್ಞಾನಿಯು ನನಗೂ ಪ್ರಿಯತಮನಾಗುವನು. ಮತ್ತು ಅವನು ಅಂತಹ ಜ್ಞಾನದಿಂದ ನನಗೂ ಆತ್ಮದಂತೆ ಧಾರಕನೆನಿಸಿರುವನು. ಉದ್ಧವಾ ! ಮೇಲೆ ಹೇಳಿದ ಜ್ಞಾನಲೇಶಮಾತ್ರದಿಂದ ಎಂತಹ ಶುದ್ಧಿಯುಂಟಾಗುವುದೋ, ಅಂತಹ ಶುದ್ಧಿಯು, ತಪಸ್ಸು, ತೀರ್ಥಯಾತ್ರೆ, ಜಪ, ದಾನ, ಶೌಚ, ಆಚಮನ, ಮೊದಲಾದ ಬೇರೆ ಯಾವವಿಧದಿಂದಲೂ ಉಂಟಾಗಲಾರದು. ಆದುದರಿಂದ ನೀನೂ ಈಗ,ನಿರತಿಶಯ ಶುದ್ಧಿಯನ್ನುಂಟುಮಾಡತಕ್ಕ ಆಜ್ಞಾನವನ್ನೇ

ಅವಲಂಬಿಸಿ, ಅಂತರಾತ್ಮನಾದ ನಾನೇ ನಿನಗೆ ಪ್ರಾಪ್ಯನೂ, ಪ್ರಾಪಕನೂ ಎಂಬ ನಂಬಿಕೆಯನ್ನಿಟ್ಟು, ನನ್ನನ್ನಾರಾಧಿಸುತ್ತಿರು. ಹಿಂದಿನ ಅನೇಕಮಹ ರ್ಷಿಗಳೂಕೂಡ, ಜ್ಞಾನವಿಜ್ಞಾನಗಳೆಂಬ ಈ ಎರಡುಬಗೆಯ ಯಜ್ಞಗಳಿಂ ದಲೇ ತಮ್ಮ ಆತ್ಮನಲ್ಲಿ ಅಂತರಾತ್ಮನಾದ ನನ್ನನ್ನಾರಾಧಿಸಿ ಸಿದ್ಧಿಯನ್ನು ಹೊಂದಿರುವರು. ಉದ್ಧವಾ! ಈಗ ಪ್ರಕೃತಿಪರಿಣಾಮರೂಪವಾದ ಈ ಶರೀರವನ್ನವಲಂಬಿಸಿರುವ ನಿನ್ನಲ್ಲಿ, ಉತ್ಪತ್ತಿ ಸ್ಥಿತಿ ಲಯಗಳೆಂಬ ವಿಕಾರ ಗಳು ಶರೀರಸಂಬಂಧಕ್ಕೆ ಮೊದಲೂ ಇದ್ದುವಲ್ಲ! ಮುಂದೆಯೂ ಉಂಟಾ ಗತಕ್ಕವುಗಳಲ್ಲ! ಆ ವಿಕಾರಗಳೆಲ್ಲವೂ ಶರೀರಕ್ಕೆ ಸಂಬಂಧಪಟ್ಟವುಗಳೇ ಹೊರತು ನಿನಗಲ್ಲ. ಆತ್ಮಸ್ವರೂಪವೆಂಬುದು,ಶರೀರಸಂಬಂಧಕ್ಕೆ ಮೊದಲೂ, ಶರೀರವಿಯೋಗವಾದ ಮೇಲೆಯೂ ಇರುವಂತೆಯೇ, ಅವುಗಳ ಮಧ್ಯಕಾಲ ದಲ್ಲಿಯೂ ವೃದ್ಧಿಕ್ಷಯಾದಿವಿಕಾರಗಳಿಲ್ಲದೆ ಏಕರೂಪವಾಗಿರುವುದು. ಆದು ದರಿಂದ ಈ ವಿಕಾರಗಳು ಶರೀರಕ್ಕೇಹೊರತು ಆತ್ಮನಿಗಲ್ಲವೆಂದು ತಿಳಿ" ಎಂದನು.

ತಿರುಗಿ ಉದ್ಧವನು "ಕೃಷ್ಣಾ! ಓ ವಿಶ್ವೇಶ್ವರಾ! ವಿಶ್ವಮೂರ್ತೀ! ನೀನು ಹೇಳಿದ ಜ್ಞಾನವೆಂಬುದು ಅತಿಪುರಾತನವಾಗಿ, ಉಪದೇಶಪರಂಪರೆ ಯಿಂದ ಬರತಕ್ಕುದು. ವೈರಾಗ್ಯವನ್ನೂ, ಮೋಕ್ಷಜ್ಞಾನವನ್ನೂ ಹುಟ್ಟಿಸ ತಕ್ಕುದಾಗಿಯೂ, ಆತ್ಮಶುದ್ಧಿಗೆ ಕಾರಣವಾಗಿಯೂ ಇರುವ ಆ ಜ್ಞಾನ ವಿಚಾರವನ್ನು ನನಗೆ ಇನ್ನೂ ವಿಸ್ತರಿಸಿ ತಿಳಿಸಬೇಕು. ಮತ್ತು ಮಹನೀಯ ರಿಗೂ ಸುಲಭವಾಗಿ ತಿಳಿಯದ ಪರಮಗೋಪ್ಯವಾದ ಭಕ್ತಿಯೋಗವನ್ನೂ ನನಗೆ ವಿವರಿಸಿ ತಿಳಿಸಬೇಕು ಭಯಂಕರವಾದ ಸಂಸಾರವೆಂಬ ಕಾಡುಮಾ ರ್ಗದಲ್ಲಿ, ತಾಪತ್ರಯವೆಂಬ ಬಿಸಿಲಿಗೆ ಸಿಕ್ಕಿ ತಪಿಸುತ್ತಿರುವ ನನಗೆ, ಅಮೃತ ಧಾರೆಯನ್ನು ವರ್ಷಿಸುವಂತೆ ಮೋಕ್ಷಸುಖವನ್ನು ತೋರಿಸತಕ್ಕ ನಿನ್ನ ಪಾ ದಾರವಿಂದವೆಂಬ ಕೊಡೆಯೇ ಆಶ್ರಯವಾಗಬೇಕಲ್ಲದೆ ಬೇರೆ ಗತಿಯಿಲ್ಲ! ಸಂಸಾರವೆಂಬ ಹಾಳುಬಾವಿಯಲ್ಲಿ ಬಿದ್ದು, ಕಾಲವೆಂಬ ಕ್ರೂರಸರ್ಪದಿಂದ ದಷ್ಟನಾಗಿ, ವಿಷಯಾಭಿಲಾಷೆಯೆಂಬ ದಾಹದಿಂದ ತಪಿಸುತ್ತಿರುವ ನನ್ನ ನ್ನು, ಮೋಕ್ಷಜ್ಞಾನಬೋಧಕಗಳಾದ ನಿನ್ನ ವಾಕ್ಯಾಮೃತವರ್ಷದಿಂದ

ಅಪ್ಯಾಯನಮಾಡಿ ಉದ್ಧರಿಸಬೇಕು." ಎಂದನು. ಅದಕ್ಕಾ ಕೃಷ್ಣನು, "ಉದ್ಧವಾ ! ಕೇಳು! ಹಿಂದೆ ಅಜಾತಶತ್ರುವಾದ ಧರ್ಮರಾಜನು, ಧರ್ಮಜ್ಞನಾದ ಭೀಷ್ಮಾಚಾರ್ಯನನ್ನು ನಾವೆಲ್ಲರೂ ಕೇಳುತ್ತಿರುವಹಾಗೆಯೇ ಇದೇ ವಿಚಾರವಾಗಿ ಪ್ರಶ್ನೆಮಾಡಿದನು. ಭಾರತಯುದ್ಧವು ಮುಗಿದಮೇಲೆ, ಅದರಲ್ಲಿ ತನ್ನ ಬಂಧುಗಳನ್ನು ತಾನು ಕೊಲ್ಲಿಸಿದೆನೆಂಬ ನಿರ್ವೇದದಿಂದ, ಧರ್ಮರಾಜನು ಬಹಳವಾಗಿ ಮನಸ್ಸಿನಲ್ಲಿ ಕೊರಗುತ್ತ, ಶರತಲ್ಪದಲ್ಲಿ ಮಲಗಿದ್ದ ಭೀಷ್ಮಾಚಾರ್ಯನಲ್ಲಿಗೆ ಬಂದು,ಅವನಿಂದ ಅನೇಕಧರ್ಮಗಳನ್ನು ಕೇಳಿ ತಿಳಿದಮೇಲೆ, ಮೋಕ್ಷಧರ್ಮವನ್ನೂ ತನಗೆ ಉಪದೇಶಿಸಬೇಕೆಂದು ಪ್ರಾರ್ಥಿಸಿದನು ಆಗ ಭೀಷ್ಮಾಚಾರ್ಯನು ಉಪದೇಶಿಸಿದ ಧರ್ಮಗಳನ್ನೇ ಈಗ ನಾನೂ ನಿನಗೆ ತಿಳಿಸುವೆನು ಕೇಳು ! ಅವು ಜ್ಞಾನ, ವಿಜ್ಞಾನ, ವೈರಾಗ್ಯ, ಶ್ರದ್ಧೆ, ಭಕ್ತಿ, ಇವೆಲ್ಲವುಗಳಿಂದ ಕೂಡಿರುವುವು. ಈ ಕಣ್ಣಿಗೆ ಕಾಣುವ ದೇವಮನುಷ್ಯಾದಿಶರೀರಗಳಲ್ಲಿ, ಶಬ್ದ, ರೂಪ, ರಸ, ಗಂಧ, ಸ್ಪರ್ಶ, ಕಾರ್ಯ, ಗತಿ, ವಾಕ್ಕು, ಮಲಮೂತ್ರ ವೀರ್ಯ ವಿಸರ್ಜನೆಗಳೆಂಬ ಇಂದ್ರಿಯವ್ಯಾಪಾರಗಳೊಂಭತ್ತೂ, ಏಕಾದಶೇಂದ್ರಿಯಗಳೂ, ಪಂಚಭೂತಗಳೂ, ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳೂ ಕಲೆತಿರುವುದನ್ನೂ, ಜ್ಞಾನವೊಂದೇ ಆಕಾರವಾಗಿ ಉಳ್ಳ ಆತ್ಮವಸ್ತುವು ನನ್ನೊಡಗೂಡಿಯೇ ಅದರಲ್ಲಿ ನೆಲೆಗೊಂಡಿರುವುದನ್ನೂ ವಿವೇಚನೆಯಿಂದ ತಿಳಿದುಕೊಳ್ಳುವುದೇ ಜ್ಞಾನವೆನಿಸುವುದು. ಎಂದರೆ ಪ್ರಕೃತಿಪುರುಷಸ್ವರೂಪಾದಿವಿವೇಚನವೇ ಜ್ಞಾನವು. ಅಂತಹ ಪ್ರಕೃತಿಪುರುಷರಿಗಿಂತಲೂ ವಿಲಕ್ಷಣನಾದ ನನ್ನನ್ನೇ ಉಪಾಯವಾಗಿ ಹಿಡಿದು, ಅದರಿಂದ ಹೊಂದಬೇಕಾದ ಯಾವ ನನ್ನ ಸ್ವರೂಪವುಂಟೋ ಅದನ್ನು ತಿಳಿಯುವುದೇ ವಿಜ್ಞಾನವೆನಿಸುವುದು ತ್ರಿಗುಣಾತ್ಮಕವಾದ ಪ್ರಕೃತಿಯ ಪರಿಣಾಮಗಳೆನಿಸಿಕೊಂಡ ದೇವಮನುಷ್ಯಾದಿದೇಹಗಳಿಗೆಮಾತ್ರವೇ ಉತ್ಪತ್ತಿಸ್ಥಿತಿಲಯಗಳೆಂಬ ವಿಕಾರಗಳುಂಟೆಂದೂ, ಆತ್ಮವೆಂಬುದು ದೇಹದಿಂದ ದೇಹಕ್ಕೆ ಪ್ರವೇಶಿಸುತ್ತ, ಆಯಾದೇಹಪ್ರಾಪ್ತಿಗೆ ಮೊದಲೂ, ದೇಹಸಂಬಂಧವಿದ್ದಾಗಲೂ,ದೇಹವು ಬಿದ್ದುಹೋದಮೇಲೆಯೂ ತಾನುಮಾತ್ರ ಒಂದೇವಿಧವಾಗಿ ನಿಲ್ಲತಕ್ಕುದೆಂದೂ, ಹೀಗೆ ದೇಹಾತ್ಮವಿವೇಚನವೇ ಜ್ಞಾನವೆಂ

ದು ತಿಳಿ! ಹೀಗೆ ದೇಹಾತ್ಮವಿವೇಚನೆಯಿಂದ ತಿಳಿವಳಿಕೆಯುಳ್ಳವನಿಗೆ, ಶ್ರುತಿ, ಪ್ರತ್ಯಕ್ಷ, ಐತಿಹ್ಯ, ಅನುಮಾನಗಳೆಂಬ ನಾಲ್ಕು ಬಗೆಯ ಪ್ರಮಾಣಗಳಿಂದ ನಿಷ್ಕರ್ಷಿಸಲ್ಪಟ್ಟ ಎಲ್ಲಾ ಕರ್ಮಫಲಗಳಲ್ಲಿಯೂ ಜಿಹಾಸೆ ಹುಟ್ಟುವುದು. ಇದೇ ವೈರಾಗ್ಯವು. ಎಲ್ಲಾ ಕರ್ಮಗಳಿಗೂ ಫಲವು ಒಂದೇ ರೂಪವಾಗಿರುವುದಿಲ್ಲ. ಅವುಗಳಲ್ಲಿ ಎಷ್ಟೋ ತಾರತಮ್ಯವುಂಟು. ಮತ್ತು ಆಗಾಗ ಅದರಲ್ಲಿ ವಿಕಾರಗಳೂ ಉಂಟಾಗುತ್ತಿರುವುವು. ಕೊನೆಗೆ ಅವು ನಷ್ಟವಾಗಿಯೂ ಹೋಗುವುವು. ಆದುದರಿಂದ ಪ್ರತ್ಯಕ್ಷದಲ್ಲಿ ನಮಗೆ ಕಾಣುವ ಕೃಷ್ಯಾದಿ ಫಲಗಳು ಹೇಗೋಹಾಗೆ, ಪರೋಕ್ಷದಲ್ಲಿ ಬ್ರಹ್ಮಾಧಿಪತ್ಯದವರೆಗೆ ಶ್ರುತ್ಯಾದಿಗಳಲ್ಲಿ ನಿರೂಪಿಸಲ್ಪಟ್ಟ ಕರ್ಮಫಲಗಳೂ ನಶ್ವರಗಳೆಂದೇ ತಿಳಿ! ಆದುದರಿಂದ ಜ್ಞಾನಿಯಾದವನು, ಈ ಕರ್ಮಫಲಗಳೆಲ್ಲವೂ ಕೇವಲದುಃಖಗರ್ಭಗಳಾಗಿಯೇ ಇರುವುದರಿಂದ ತನಗೆ ಅಶ್ರೇಯಸ್ಕರಗಳೆಂದೇ ತಿಳಿಯಬೇಕು. ಉದ್ಧವಾ! ಭಕ್ತಿಯೋಗದ ಸ್ವರೂಪವನ್ನು ವಿವರಿಸಿ ತಿಳಿಸಬೇಕೆಂದು ಕೇಳಿದೆಯಲ್ಲವೆ? ನಾನು ಹಿಂದೆಯೇ ಅದನ್ನು ನಿನಗೆ ಹೇಳಿರುವೆನು ಆದರೂ ಈಗ ಆಭಕ್ತಿಯೋಗಕ್ಕೆ ಉತ್ತಮಸಾಧನವೇನೆಂಬುದನ್ನು ಮಾತ್ರ ಹೇಳುವೆನು ಕೇಳು. ಅಮೃತಪ್ರಾಯವಾದ ನನ್ನ ಕಥೆಯನ್ನು ಆಗಾಗ ಕೇಳುವುದರಲ್ಲಿ ಅಕ್ಕರೆ, ಆಗಾಗ ನನ್ನ ಗುಣಗಳನ್ನು ಕೊಂಡಾಡುವುದು, ಆಗಾಗ ನನ್ನನ್ನು ಪೂಜಿಸುತ್ತಿರುವುದು, ನನ್ನ ಜನ್ಮಕರ್ಮಗಳನ್ನು ಪ್ರತಿಪಾದಿಸುವ ಸ್ತುತಿವಾಕ್ಯಗಳಿಂದ ಆಗಾಗ ನನ್ನನ್ನು ಸ್ತುತಿಸುವುದು, ನನ್ನ ಮಂದಿರಗಳನ್ನು ಸಾರಿಸುವುದು, ಗುಡಿಸುವುದು ಮುಂತಾದ ಪರಿಚರ್ಯೆಗಳಲ್ಲಿ ಶ್ರದ್ಧೆ, ನನಗೆ ಸಾಷ್ಟಾಂಗಪ್ರಣಾಮಮಾಡುವುದು, ನನ್ನ ಭಕ್ತರನ್ನು ವಿಶೇಷವಾಗಿ ಆದರಿಸುವುದು, ಸಮಸ್ತಭೂತಗಳೂ ಮದಾತ್ಮಕಗಳೆಂಬ ಬುದ್ಧಿ, ನನ್ನ ಆರಾಧನೆಗೆ ಬೇಕಾದ ತುಳಸಿ, ಹೂ, ಮೊದಲಾದುವುಗಳನ್ನು ಸಂಗ್ರಹಿಸುವುದರಲ್ಲಿ ದೇಹವ್ಯಾಪಾರವನ್ನೂ, ನನ್ನ ಗುಣಕೀರ್ತನದಲ್ಲಿ ವಾಕ್ಕನ್ನೂ, ನನ್ನ ಸ್ಮರಣೆಯಲ್ಲಿ ಮನಸ್ಸನ್ನೂ ಉಪಯೋಗಿಸುವುದು, ಇತರ ಕಾಮಗಳಲ್ಲಿ ಆಸೆಯನ್ನು ತೊರೆಯುವುದು, ನನ್ನ ವಿಷಯದಲ್ಲಿಯೇ ಧನವನ್ನು ವೆಚ್ಚ ಮಾಡುವುದು, ತನ್ನ ಭೋಗದಲ್ಲಿಯೂ ಸುಖದಲ್ಲಿಯೂ ಆಸೆಯನು

ತೊರೆಯುವುದು, ನನ್ನನ್ನುದ್ದೇಶಿಸಿಯೇ ಯಜ್ಞ, ದಾನ, ಜಪ, ತಪಸ್ಸು ಹೋಮವ್ರತಾದಿಗಳನ್ನು ನಡೆಸುವುದು, ತನ್ನ ಆತ್ಮವನ್ನೂ ನನಗೇ ಅಧೀನವಾಗಿ ಒಪ್ಪಿಸಿಬಿಡುವುದು, ಇವೆಲ್ಲವೂ ನನ್ನಲ್ಲಿ ಭಕ್ತಿಯನ್ನು ಹುಟ್ಟಿಸತಕ್ಕ ಉತ್ತಮಧರ್ಮಗಳೆನಿಸುವುವು. ಇಂತಹ ಭಕ್ತಿಯೋಗವು ಹುಟ್ಟಿದಮೇಲೆ, ಬೇರೆ ಯಾವಪುರುಷಾರ್ಥಕ್ಕೂ ಮನುಷ್ಯನು ಆಸೆಪಡುವಹಾಗಿಲ್ಲ! ಅಂತವನಿಗೆ ಸಮಸ್ತಪುರುಷಾರ್ಥಗಳೂ ಸುಲಭಗಳೇ ಆಗುವುವು. ಯಾವಾಗ ಪುರುಷನು, ರಾಗಾದಿಗಳಿಂದ ಕಲುಷಿತವಾಗದ ಸತ್ವಪ್ರಧಾನವಾದ ತನ್ನ ಮನಸ್ಸನ್ನು ಅಂತರಾತ್ಮನಾದ ನನ್ನಲ್ಲಿ ಅರ್ಪಿಸುವನೋ, ಆಗ ಅವನಿಗೆ, ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳೆಂಬೀ ಪುರುಷಾರ್ಥಗಳೆಲ್ಲವೂ ಕೈಗೂಡಿದಂತೆಯೇ ತಿಳಿ! ಹಾಗಿಲ್ಲದೆ, ರಜಸ್ತಮೋಗುಣಗಳಿಂದ ತುಂಬಿ ದೇಹಾದಿಗಳಲ್ಲಿ ಆಸಕ್ತವಾದ ಮನಸ್ಸು, ಇಂದ್ರಿಯಗಳಿಗೆ ವಶವಾಗಿ, ಶಬ್ದಾದಿವಿಷಯಗಳಕಡೆಗೇ ಓಡುತ್ತಿರುವುದು. ಅಂತಹ ಮನಸ್ಸೇ ಅಧರ್ಮಕ್ಕೆ ಮೂಲವಾಗುವುದೆಂದು ತಿಳಿ! ಮುಖ್ಯವಾಗಿ ನನ್ನಲ್ಲಿ ಭಕ್ತಿಯನ್ನು ಹೆಚ್ಚಿಸತಕ್ಕುದುಯಾವುದೋ ಅದೇಧರ್ಮವು. ಸಮಸ್ತಜೀವಗಳಲ್ಲಿಯೂ ಪರಮಾತ್ಮನು ಅಂತರಾತ್ಮನಾಗಿರುವನೆಂದು ತಿಳಿಯುವುದೇ ಜ್ಞಾನವು. ಶಬ್ದಾದಿವಿಷಯಗಳು ಅನರ್ಥಹೇತುವೆಂಬುದನ್ನು ತಿಳಿದು, ಅವುಗಳಲ್ಲಿ ಅನಾದರವನ್ನು ತೋರುವುದೇ ವೈರಾಗ್ಯವು. ಉಪಾಸನಾಯೋಗಕ್ಕೆ ಸಾಧನಗಳಾದ ಅಣಿಮಾದಿಗಳೇ ಐಶ್ವರ್ಯಗಳೆಂದು ತಿಳಿಯಬೇಕು" ಎಂದನು.

ತಿರುಗಿ ಉದ್ಧವನು ಪ್ರಶ್ನೆಮಾಡುವನು. ಕೃಷ್ಣಾ! ಮೋಕ್ಷಪ್ರಾಪ್ತಿಗೆ ಯಮನಿಯಮಾದ್ಯಂಗಗಳೊಡಗೂಡಿದ, ಶಮದಮಾದಿಗುಣಗಳು ಸಾಧಕಗಳೆಂದು ಹೇಳಿದೆಯಲ್ಲವೆ? ಯಮವೆಂದರೇನು? ನಿಯಮವೆಂದರೇನು? ಅವುಗಳಲ್ಲಿ ಎಷ್ಟುಭೇದಗಳುಂಟು? ಶಮದಮಗಳೆಂಬಿವಾವುವು? ತಿತಿಕ್ಷೆ, ಧೃತಿ, ದಾನ, ತಪಸ್ಸು, ಶೌರ್ಯ, ಸತ್ಯ, ಋತ, ತ್ಯಾಗ, ಇವುಗಳ ಸ್ವರೂಪವೆಂತಹುದು? ಮನುಷ್ಯನಿಗೆ ಸುಖಸಾಧನವಾದ ಧನವಾವುದು? ಯಜ್ಞವಾವುದು? ದಕ್ಷಿಣೆಯೆಂದರೇನು? ಬಲವಾವುದು? ಭಗ (ಮಹಿಮೆ) ಲಾಭ, ವಿದ್ಯೆ, ಹ್ರೀ, ಉತ್ತಮವಾದ ಭೂಷಣಗಳು, ಇವಾವುವು? ಸುಖದುಃಖಗ

ಳಾವುವು ? ಎಂತವನು ಪಂಡಿತನು ? ಎಂತವನು ಮೂರ್ಖನು ? ಸನ್ಮಾರ್ಗ ಗಳಾವುವು ? ಸ್ವರ್ಗನರಕಗಳ ಸ್ವರೂಪವೆಂತದು ? ಬಂಧುಗಳೆಂಬವರಾರು ? ಗೃಹವೆಂದರೆ ಯಾವುದು ? ಧನವಂತನಾರು ? ದರಿದ್ರನಾರು ? ಕೃಪಣ ನೆಂದರೆ ಎಂತವನು ? ಅಳತಕ್ಕ ಪ್ರಭುವಾರು ? ಸೇವಕನಾವನು ; ಓನಾ ಥಾ ! ಭಕ್ತಿಸಾಧಕಗಳಾದ ಈ ಯಮನಿಯಮಾದಿಗಳ ಸ್ವರೂಪವನ್ನೂ, ಇವುಗಳಿಗೆ ವಿರುದ್ಧಗುಣಗಳಾವುವೆಂಬುದನ್ನೂ ನನಗೆ ತಿಳಿಸಬೇಕು"ಎಂದನು.

ಅದಕ್ಕಾ ಕೃಷ್ಣನು "ಉದ್ಧವಾ ! ಕೇಳು ! ಇತರಭೂತಗಳಿಗೆ ದ್ರೋಹವನ್ನೆಣಿಸದಿರುವುದು. ಎಲ್ಲಾಭೂತಗಳ ವಿಷಯದಲ್ಲಿಯೂ ಹಿತ ವನ್ನೇ ನುಡಿಯುವುದು, ಮನಸ್ಸಿನಿಂದಾದರೂ ಪರಸ್ವತ್ತಿಗೆ ಆಸೆಪಡದಿರು ವುದು, ಯಾವುದರಲ್ಲಿಯೂ ಅಧಿಕಾಸಕ್ತಿಯಿಲ್ಲದಿರುವುದು, ನಿಷಿದ್ಧಕಾರ್ಯಗಳ ವಿಷಯದಲ್ಲಿ ನಾಚಿಕೆ, ಯಾವುದರಲ್ಲಿಯೂ ತನ್ನದೆಂಬ ಅಭಿಮಾನವನ್ನಿಡ ದಿರುವುದು, ವೇದಶಾಸ್ತ್ರಾದಿಗಳಲ್ಲಿ ನಂಬಿಕೆ, ಪರಸ್ತ್ರೀಸಂಗವಿಲ್ಲದಿರುವುದು, ವೃಥಾಲಾಪಗಳಿಗೆ ಬಾಯಿಕ್ಕದಿರುವುದು. ಮನಶ್ಚಾಂಚಲ್ಯವಿಲ್ಲದಿರುವುದು, ತಾಳ್ಮೆ, ಪಾಪಭೀತಿ, ಇವು ಹನ್ನೆರಡೂ ಯಮಗಳೆನಿಸುವುವು. ಇವುಗಳನ್ನೇ ಕ್ರಮವಾಗಿ ಅಹಿಂಸೆ, ಸತ್ಯ, ಅಸ್ತೇಯ, ಅಸಂಗ, ಹ್ರೀ, ಅಸಂಚಯ, ಆಸ್ತಿಕ್ಯ, ಬ್ರಹ್ಮಚರ್ಯ, ಮೌನ, ಸ್ಥೈರ್ಯ, ಕ್ಷಮೆ, ಭಯವೆಂದು ಹೇಳುವರು. ಬಾಹ್ಯಶುದ್ಧಿ, ಅಂತರ್ಯಶುದ್ಧಿ, ಜಪ, ತಪಸ್ಸು, ಹೋಮ, ಕರ್ಮಶ್ರದ್ಧೆ, ಅತಿಥಿಸತ್ಕಾರ, ನನ್ನನ್ನು ಭಕ್ತಿಯಿಂದ ಪೂಜಿಸುವುದು (ದೇವ ತಾಪೂಜೆ) ತೀರ್ಥಯಾತ್ರೆ, ಪರೋಪಕಾರಚಿಂತೆ, ಇದ್ದುದರಲ್ಲಿ ತೃಪ್ತಿ, ಆಚಾರ್ಯಸೇವೆ, ಇವು ಹನ್ನೆರಡೂ ನಿಯಮಗಳೆನಿಸುವುವು. ಇನ್ನು ಶಮದಮಾ ದಿಗಳ ನಿಷ್ಕೃಷ್ಟಲಕ್ಷಣಗಳನ್ನೂ ವಿವರಿಸುವೆನು ಕೇಳು. ಬುದ್ಧಿಯನ್ನು ಮದೇಕಧ್ಯಾನದಲ್ಲಿಡುವುದೇ ಶಮವು. ಬಾಹ್ಯೇಂದ್ರಿಯಗಳನ್ನಡಗಿಸುವುದು ದಮವೆನಿಸುವುದು. ದುಃಖವನ್ನು ಸಹಿಸಿಕೊಳ್ಳುವುದೇ ತಿತಿಕ್ಷೆ. ನಾಲಗೆ ಯನ್ನೂ, ಕಾಮಚಾಪಲ್ಯವನ್ನೂ ತಡೆದಿಡುವುದೇ ಧೃತಿಯೆನಿಸುವುದು. ಭೂತದ್ರೋಹವಿಲ್ಲದಿರುವುದೇ ದಾನವು. ಭೋಗಗಳನ್ನಪೇಕ್ಷಿಸದಿರುವುದೇ ತಪಸ್ಸು. ಹಸಿವು, ಬಾಯಾರಿಕೆ,ಮುಂತಾದ ಸ್ವಭಾವಗಳಿಗೆ ಈಡಾಗದಿರುವ

ಶಕ್ತಿಯೇ ಶೌರ್ಯವೆನಿಸುವುದು. ಕೀಳುಮೇಲೆಂಬ ತಾರತಮ್ಯವಿಲ್ಲದೆ,ಸಮಸ್ತ ವನ್ನೂ ಬ್ರಹ್ಮಾತ್ಮಕವೆಂದು ತಿಳಿಯುವ ಸಮಬುದ್ಧಿಯೇ ಸತ್ಯವು. ಕಂಡು ದನ್ನು ಕಂಡಹಾಗೆ ಹೇಳುವುದೇ ಋತವೆನಿಸುವುದು ಕರ್ಮಗಳಲ್ಲಿ ತನಗೆ ಕರ್ತೃತ್ವವಿಲ್ಲವೆಂಬ ಬುದ್ಧಿಯೇ ಶೌಚವು. ಕರ್ಮಫಲಗಳಲ್ಲಿ ಆಸೆಯನ್ನು ತೋರಿಸದೆ, ಆ ಫಲಗಳನ್ನು ತ್ಯಜಿಸುವುದೇ ತ್ಯಾಗವು. ನನ್ನಲ್ಲಿ ಭಕ್ತಿವರ್ಧಕ ವಾದ ಧರ್ಮವೇ ಮನುಷ್ಯನಿಗೆ ಶ್ರೇಯಸ್ಕರವಾದ ಧನವು ಸರ್ವದೇವೋ ತ್ತಮನಾದ ನಾನೇ ಯಜ್ಞವು. ಜ್ಞಾನೋಪದೇಶವೇ ದಕ್ಷಿಣೆ ! ಪ್ರಾಣಾ ಯಾಮವೇ ಉತ್ತಮವಾದ ಬಲವು. ಮಹೈಶ್ವರ್ಯಪೀಠ್ಯಾದಿಗಳಿಂದ ಕೂಡಿದ ನನ್ನ ಈಶ್ವರಸಂಬಂಧಿಸ್ವಭಾವವವೇ ಭಗವೆನಿಸುವುದು. ನನ್ನಲ್ಲಿ ಭಕ್ತಿಯೇ ಜನರಿಗೆ ಉತ್ತಮವಾದ ಲಾಭವು. ಆತ್ಮನಲ್ಲಿ 'ದೇವಮನುಷ್ಯಾದಿಭೇದಬುದ್ಧಿ ಯಿಲ್ಲದಿರುವುದೇ ವಿದ್ಯೆ ! ನಿಷಿದ್ಧಕರ್ಮಗಳಲ್ಲಿ ಜಿಹಾಸೆಯೇ ಹ್ರೀಯೆನಿಸು ವುದು. ಯಾವುದರಲ್ಲಿಯೂ ಆಸೆಯಿಲ್ಲದಿರುವುದು, ಇದ್ದುದರಲ್ಲಿ ತೃಪ್ತಿ,ಮುಂ ತಾದ ಗುಣಗಳೇ ಮನುಷ್ಯನಿಗೆ ಭೂಷಣವು. ಸುಖದುಃಖಗಳೆರಡನ್ನೂ ಗಮನಿಸದಿರುವುದೇ ಸುಖವು. ವಿಷಯಸುಖಕ್ಕೆ ಆಸೆಪಡುವುದೇ ದುಃಖವು. ಸಂಸಾರಬಂಧಕಕ್ಕೂ, ಮೋಕ್ಷಕಕ್ಕೂ ಕಾರಣಗಳೇನೆಂಬುದನ್ನು ತಿಳಿದವನೇ ಪಂಡಿತನು. ದೇಹವನ್ನೇ ತಾನೆಂದು ತಿಳಿದವನೇ ಮೂರ್ಖನು. ನನ್ನ ವಿಷಯ ವಾದ ಜ್ಞಾನವೇ ಸನ್ಮಾರ್ಗವು. ಶಬ್ದಾದಿವಿಷಯಗಳಿಗೆ ಮನಸ್ಸನ್ನು ತಗು ಲಿಸುವುದೇ ದುರ್ಮಾರ್ಗವು. ಸತ್ವಗುಣಾಭಿವೃದ್ಧಿಯೇ ಸ್ವರ್ಗವು. ತಮೋ ಗುಣವೃದ್ಧಿಯೇ ನರಕವು. ನನ್ನ ಅಂಶಭೂತನಾದ ಗುರುವೇ ಬಂಧುವು. ಮನುಷ್ಯಶರೀರವೇ ಗೃಹವು, ಗುಣಾಢ್ಯನೇ ಐಶ್ವರ್ಯವಂತನು. ತುಷ್ಟಿಯಿಲ್ಲ ದವನೇ ಬಡವನು. ಇಂದ್ರಿಯಗಳನ್ನು ಜಯಿಸಲಾರದವನೇ ಕೃಪಣನು. ಶಬ್ದಾದಿವಿಷಯಗಳಿಗೆ ಹೋಗದಂತೆ ಮನಸ್ಸನ್ನು ನಿಗ್ರಹಿಸಬಲ್ಲವನೇ ಪ್ರಭು ! ಆ ವಿಷಯಗಳಿಗೆ ವಶನಾದವನೇ ಆಳೆಂದು ತಿಳಿ! ಉದ್ಧವಾ ! ಇವೆಲ್ಲವೂ ಮೋ ಕ್ಷಸಾಧಕಗಳಾದ ಗುಣಗಳು.ನೀನು ಕೇಳಿದ ಒಂದೊಂದು ಪ್ರಶ್ನೆಗೂ ಕ್ರಮ ವಾಗಿ ಉತ್ತರವನ್ನು ಹೇಳಿದುದಾಯಿತು. ಮೇಲೆ ಹೇಳಿದುದಕ್ಕೆ ವಿರುದ್ಧ ವಾಗಿ ನಡೆಯುವುದೇ ಮೋಕ್ಷನಿರೋಧಕಗಳಾದ ದೋಷಗಳೆಂದೂ ತಿಳಿ.

ಹೆಚ್ಚು ಮಾತಿನಿಂದೇನು ? ಮುಖ್ಯವಾಗಿ ಮುಕ್ತಿಸಾಧಕಗಳಾದ ಗುಣಗಳಿಗೂ, ಮುಕ್ತಿವಿರೋಧಿಗಳಾದ ದೋಷಗಳಿಗೂ ನಿಷ್ಕೃಷ್ಟಲಕ್ಷಣವನ್ನು ಒಂದೇವಾಕ್ಯದಿಂದ ತಿಳಿಸುವೆನುಕೇಳು. ಸಂಸಾರಿಗಳಿಗೆ ಪ್ರಾಪಂಚಿಕವಾದ ಸುಖದುಃಖಗಳಲ್ಲಿ ಗುಣದೋಷಗಳನ್ನೆಣಿಸುವುದೇ ದೋಷವು. ಸುಖದುಃಖಗಳೆರಡೂ ಹೇಯವೆಂಬ ಬುದ್ಧಿಯಿಂದ ಅವೆರಡನ್ನೂ ತ್ಯಜಿಸುವುದೇ ಗುಣವು" ಎಂದನು. ಇದು ಹತ್ತೊಂಬತ್ತನೆಯ ಅಧ್ಯಾಯವು.

---

{ ಕೃಷ್ಣನು, ಭಕ್ತಿಜ್ಞಾನಕರ್ಮಗಳಲ್ಲಿ ಭಕ್ತಿಯಮೇಲ್ಮೆಯನ್ನು ತಿಳಿಸಿದುದು. }

ಉದ್ಧವನು ತಿರುಗಿ ಪ್ರಶ್ನಮಾಡುವನು. "ಕೃಷ್ಣಾ ! ಗುಣದೋಷಭಾವನೆಯಿಲ್ಲದಿರುವುದೇ ಗುಣವೆಂದು ಹೇಳಿದೆಯಲ್ಲವೆ ?" ಈ ವಿಚಾರವಾಗಿ ನನಗೆ ಇನ್ನೊಂದು ದೊಡ್ಡಸಂದೇಹವು ಹುಟ್ಟಿರುವುದು ಏನೆಂದರೆ, ವೇದವೆಂಬುದು ಸರ್ವೇಶ್ವರನಾದ ನಿನ್ನ ಶಾಸನವಾಗಿರುವುದು. ಆ ವೇದವಾಕ್ಯಗಳೆಲ್ಲವೂ ಪ್ರಾಯಕವಾಗಿ ವಿಧಿನಿಷೇಧಗಳನ್ನೇ ಹೇಳುವುವು. ಆ ವಿಧಿನಿಷೇಧಗಳಿಂದಲೇ ಕೆಲವುಕರ್ಮಗಳಿಗೆ ಗುಣವೂ, ಕೆಲವುಕರ್ಮಗಳಿಗೆ ದೋಷವೂ ಏರ್ಪಡುವುವು. ಮತ್ತು ಆ ವೇದಗಳೇ ವರ್ಣಾಶ್ರಮಭೇದಗಳನ್ನೂ, ಅವುಗಳಿಂದೇರ್ಪಟ್ಟ ಪ್ರತಿಲೋಮವಿಲೋಮಜಾತಿಗಳನ್ನೂ, ದ್ರವ್ಯ, ದೇಶ, ಕಾಲ, ವಯಸ್ಸು ಮುಂತಾದುವುಗಳ ನ್ಯೂನಾತಿರೇಕಗಳನ್ನೂ, ಸ್ವರ್ಗನರಕಾದಿಫಲಭೇದಗಳನ್ನೂ ನಿರೂಪಿಸುವುವು. ಇದು ಗುಣವೆಂದೂ, ಇದು ದೋಷವೆಂದೂ ಗ್ರಹಿಸುವುದಕ್ಕೆ ಉಪಯೋಗಪಡದಿದ್ದಮೇಲೆ, ನಿನ್ನ ಆಜ್ಞಾರೂಪಗಳಾ ವೇದಗಳಿಂದ ಬೇರೆಯಾವ ಪ್ರಯೋಜನವುಂಟು? ವಿಧಿನಿಷೇಧರೂಪಗಳಾದ ಆ ವೇದಗಳು ಮನುಷ್ಯರಿಗೆ ಯಾವವಿಧದಿಂದ ಶ್ರೇಯಸ್ಕರಗಳೆನಿಸುವುವು. ಸ್ವರ್ಗಾದಿಫಲಗಳನ್ನೂ, ಅವುಗಳಿಗೆ ಸಾಧನಗಳನ್ನೂ ತಿಳಿಯದಿದ್ದಾಗ, ಪಿತೃಗಳಿಗೂ, ದೇವತೆಗಳಿಗೂ, ಮನುಷ್ಯರಿಗೂ ನಿನ್ನ ಆಜ್ಞಾರೂಪವಾದ ಆ ವೇದವೇ ಆ ಪರೋಕ್ಷವಿಷಯಗಳನ್ನೂ ತೋರಿಸತಕ್ಕ ಉತ್ತಮನೇತ್ರದಂತಿರುವುದು. ಆದುದರಿಂದ ಆ ವೇದಗಳಲ್ಲಿ ನಿರೂ

ಹಿಸಲ್ಪಟ್ಟ ವಿಧಿನಿಷೇಧಗಳನ್ನನುಸರಿಸಿ ಗುಣದೋಷಗಳನ್ನು ಕಂಡು ಕೊಳ್ಳುವುದು ಅತ್ಯವಶ್ಯವಾಗಿರುವಾಗ, ಗುಣದೋಷಗ್ರಹಣವೇ ದೋಷ ವೆಂದು ನೀನು ಹೇಳುವೆಯಲ್ಲವೆ? ಮನುಷ್ಯನಿಗೆ ಆ ವೇದಪ್ರಮಾಣಗಳಿಂ ದಲ್ಲದೆ ಗುಣದೋಷಜ್ಞಾನವು ಸ್ವತಃ ಜನಿಸಲಾರದು. ಹೀಗೆ ನೀನೇ ಹಿಂದೆ ವೇದಗಳ ಮೂಲಕವಾಗಿ ಗುಣದೋಷಗಳನ್ನು ತೋರಿಸಿ, ಈಗ ನನಗೆ ಪ್ರ ತ್ಯಕ್ಷವಾಗಿ ಆ ಗುಣದೋಷಪರಿಜ್ಞಾನವನ್ನು ದೋಷವೆಂದು ಹೇಳುವೆ ಯಲ್ಲವೆ? ಹೀಗೆ ಪೂರ್ವೋತ್ತರವಿರುದ್ಧವಾದ ನಿನ್ನ ಮಾತನ್ನು ಕೇಳಿ ನನಗೆ ಭ್ರಮವುಂಟಾಗಿರುವುದು. ಆ ಭ್ರಮವನ್ನು ನೀಗಿಸಬೇಕು" ಎಂದನು.

ಅದಕ್ಕಾಕೃಷ್ಣನು "ಉದ್ಧವಾ! ಕೇಳು! ವೇದಬೋಧಿತಗಳಾದ ವಿಧಿನಿಷೇಧಗಳನ್ನು ಬಿಡಬೇಕೆಂಬುದು ಸಾಮಾನ್ಯವಾಗಿ ಎಲ್ಲರಿಗೂ ಹೇಳಿದ ವಿಷಯವಲ್ಲ! ಆಯಾ ಅಧಿಕಾರಿಭೇದದಿಂದ ಪುರುಷಾರ್ಥಸಾಧನಗಳೂ ವೇದ ದಲ್ಲಿ ಬೇರೆಬೇರೆ ವಿಧವಾಗಿ ವ್ಯವಸ್ಥೆಮಾಡಲ್ಪಟ್ಟಿರುವುವು. ನರಕಕ್ಕೆ ಹೋ ಲಿಸುವಾಗ ಸ್ವರ್ಗವು ಉತ್ತಮವೆಂದು ತೋರುವುದು. ಮೋಕ್ಷದಲ್ಲಿ ದೃಷ್ಟಿ ಯುಳ್ಳವರಿಗೆ ಆ ಸ್ವರ್ಗವೇ ಅತ್ಯಂತಹೇಯವಾಗಿ ತೋರುವುದು. ಆದುದ ರಿಂದ, ಮೇಲೆಹೇಳಿದ ಗುಣದೋಷವಿಭಾಗಗಳು ಆಯಾ ಅಧಿಕಾರಿಗಳ ಸ್ವ ಭಾವಾನುಸಾರವಾಗಿ ನಿರ್ಣಯಿಸಲ್ಪಟ್ಟಿವೆ. ಮುಖ್ಯವಾಗಿ ಮನುಷ್ಯರ ಶ್ರೇ ಯಸ್ಸಿಗೆ, ಜ್ಞಾನ, ಕರ್ಮ, ಭಕ್ತಿಗಳೆಂಬ ಮೂರು ಬಗೆಯ ಯೋಗಸಾಧನೆಗ ಳು ನನ್ನಿಂದ ನಿರ್ಣಯಿಸಲ್ಪಟ್ಟಿರುವುವು ಪುರುಷನು ಯಾವ ಪುರುಷಾರ್ಥ ವನ್ನು ಪಡೆಯಬೇಕಾದರೂ ಈ ಮೂರಕ್ಕಿಂತಲೂ ಬೇರೆ ಉಪಾಯವಿಲ್ಲ! ಕರ್ಮಫಲಗಳೆಲ್ಲವೂ ದುಃಖಪಕ್ಷಿಯೇ ಮುಗಿಯುವುವೆಂಬುದನ್ನು ತಿಳಿದು, ಆ ಕರ್ಮಗಳಲ್ಲಿ ಬಿಹಾಸೆ ಹುಟ್ಟಿದವರು, ಜ್ಞಾನಯೋಗವನ್ನವಲಂಬಿಸಬಹುದು. ಸ್ವರ್ಗಾದಿಫಲಗಳಲ್ಲಿ ಆಸೆಯಿಂದ ಕರ್ಮಗಳಲ್ಲಿ ಉತ್ಸಾಹವುಳ್ಳವರು ಕರ್ಮ ಯೋಗವನ್ನೇ ಅವಲಂಬಿಸಬಹುದು. ಏನೋ ಒಂದು ಭಾಗ್ಯವಿಶೇಷದಿಂದ ಭಗವಂತನ ಕಥಾಶ್ರವಣಕೀರ್ತನಾದಿಗಳಲ್ಲಿ ಅಕ್ಕರೆ ಹುಟ್ಟಿದಾಗಲೂ, ಪೂ ರ್ವವಾಸನೆಯಿಂದ ಕರ್ಮಗಳನ್ನು ಬಿಡಲಾರದೆ, ಆ ಕರ್ಮಗಳಲ್ಲಿ ತನಗುಂಟಾದ ದೋಷದೃಷ್ಟಿಯಿಂದ ಅದರಲ್ಲಿ ಅತ್ಯಾಸಕ್ತಿಯೂ ಇಲ್ಲದವನಿಗೆ ಭಕ್ತಿ

ಯೋಗವೇ ಸಿದ್ಧಿಪ್ರದವಾಗುವುದು. ಎಷ್ಟರವರೆಗೆ ಕರ್ಮಗಳಲ್ಲಿ ವಿಶೇಷವಾಗಿ ನಿರ್ವೇದವು ಹುಟ್ಟದಿರುವುದೋ, ಮತ್ತು ಎಲ್ಲಿಯವರೆಗೆ ನನ್ನ ಕಥಾಶ್ರವಣ ಕೀರ್ತನಾದಿಗಳಲ್ಲಿ ಶ್ರದ್ಧೆಯು ಜನಿಸದಿರುವುದೋ, ಅದುವರೆಗೂ ತನ್ನ * ವರ್ಣಾಶ್ರಮಧರ್ಮಗಳನ್ನು ತಪ್ಪದೆ ನಡೆಸುತ್ತಲೇ ಬರಬೇಕು. ಆದರೆ ಆ ಕರ್ಮಗಳಲ್ಲಿ ಫಲಾಪೇಕ್ಷೆಯನ್ನಿಡದೆ ನಡೆಸುತ್ತಿರಬೇಕು. ಮೋಕ್ಷಪ್ರಾಪ್ತಿಯವರೆಗೂ ಹೀಗೆಯೇ ಫಲಾಪೇಕ್ಷೆಯಿಲ್ಲದೆ ಸ್ವಧರ್ಮಗಳನ್ನು ನಡೆಸುತ್ತ, ಪಂಚಮಹಾಯಜ್ಞಾದಿಗಳನ್ನೂ ನನ್ನ ಆರಾಧನರೂಪವಾಗಿಯೇ ನಡೆಸತಕ್ಕವನು ಸ್ವರ್ಗನರಕಗಳನ್ನು ಹೊಂದಲಾರನು. ಅಂತವನಿಗೆ ನನ್ನಲ್ಲಿ ಭಕ್ತಿಯೋಗವು ಪರಿಪಕ್ವವಾಗಿ, ಆ ಮೂಲಕವಾಗಿ ಮೋಕ್ಷವೇ ಕೈಗೂಡುವುದು. ಆದುದರಿಂದ ಕರ್ಮಗಳನ್ನು ಫಲಾಭಿಸಂಧಿಯಿಂದ ನಡೆಸಬಾರದು. ಅಂತವನು ಮನುಷ್ಯಶರೀರದಲ್ಲಿರುವಾಗ ನಿಷಿದ್ಧಕರ್ಮಗಳನ್ನು ತ್ಯಜಿಸಿ, ಸ್ವಧರ್ಮಗಳನ್ನು ನಡೆಸುವುದರಿಂದ ಶುದ್ಧನಾಗಿ,† ಪವಿತ್ರವಾದ ಜ್ಞಾನಯೋಗವನ್ನಾಗಲಿ, ಯಾವುದೋ ಒಂದು ಭಾಗ್ಯವಿಶೇಷದಿಂದ ನನ್ನಲ್ಲಿ ಆಕಸ್ಮಿಕವಾಗಿ ಜನಿಸಿದ ಭಕ್ತಿಯೋಗವನ್ನಾಗಲಿ ಹೊಂದಿ, ಆ ಮೂಲಕವಾಗಿ ಮೋಕ್ಷವನ್ನು ಪಡೆಯಬಹುದು. ಈ ವಿಧವಾಗಿ ಜ್ಞಾನಭಕ್ತಿಗಳಿಂದ ಸುಲಭವಾಗಿ ಮೋಕ್ಷವನ್ನು ಕೈಗೂಡಿಸುವುದಕ್ಕೆ ಮನುಷ್ಯದೇಹವೇ ಉತ್ತಮಸಾಧನವು. ಆದುದರಿಂದ ಸ್ವರ್ಗನರಕಗಳಲ್ಲಿರುವವರೂ ಈ ಮನುಷ್ಯದೇಹವನ್ನೇ ಕೋರುವರು. ಸ್ವರ್ಗನರಕದೇಹಗಳು ಹೀಗೆ ಮೋಕ್ಷ

---

* ಮೋಕ್ಷಪ್ರಾಪ್ತಿಯವರೆಗೂ ಕರ್ಮವಾಸನೆಯುಮಾತ್ರ ಅನುವರ್ತಿಸಿಬರುತ್ತಲೇ ಇರುವುದರಿಂದ, ಆಯಾಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ನಡೆಸುತ್ತ ಬರಬೇಕೆಂದು ಗ್ರಾಹ್ಯವು.

† ಜ್ಞಾನಯೋಗಾಧಿಕಾರಿಯೂಕೂಡ, ಆಯೋಗವು ಪರಿಪಕ್ವವಾಗುವವರೆಗೆ, ತನ್ನ ವರ್ಣಾಶ್ರಮಧರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ನಡೆಸುತ್ತಿರಬೇಕು, ಜ್ಞಾನಯೋಗವೇ ಭಕ್ತಿಯೋಗಕ್ಕೆ ಉಪಕಾರಕವೆನಿಸಿದ್ದರೂ, ಆ ಜ್ಞಾನಯೋಗಸಿದ್ಧಿಗೆ ಮೊದಲೇ ಮನುಷ್ಯನಿಗೆ ಒಂದಾನೊಂದು ಭಾಗ್ಯವಿಶೇಷದಿಂದ ಭಕ್ತಿಯೋಗವು ಲಭಿಸಬಹುದೆಂದು ಗ್ರಾಹ್ಯವು.

ಸಾಧಕಗಳಾಗಲಾರವು. ಆದುದರಿಂದ ವಿವೇಕಿಯಾದವನು ನರಕವನ್ನು ಹೇಗೋಹಾಗೆ ಸ್ವರ್ಗವನ್ನೂ ಅಪೇಕ್ಷಿಸಬಾರದು. ಆದರೆ ಮನುಷ್ಯದೇಹವು ಇಹಪರಸುಖಗಳಿಗೆ ಸಾಧನವೆಂಬುದಕ್ಕಾಗಿ,ಆ ದೇಹಕ್ಕಾದರೂ ತಿರುಗಿ ಆಸೆ ಪಡಬಾರದು. ದೇಹದಲ್ಲಿ ಆಸೆಯನ್ನಿಡುವುದರಿಂದ ಮನುಷ್ಯನು ಮೋಹವಶನಾಗಿ, ಕೊನೆಗೆ ಸ್ಥಾವರಜನ್ಮವನ್ನೇ ಹೊಂದಬೇಕಾಗಿಬರುವುದು. ಆದುದರಿಂದ ಜೀವನು ಒಮ್ಮೆ ಮನುಷ್ಯಶರೀರವನ್ನು ಪಡೆದಿರುವಾಗ, ಸಾಯುವುದಕ್ಕೆ ಮೊದಲು, ತನ್ನ ದೇಹವು ದೃಢವಾಗಿರುವಾಗಲೇ, ಮರಣಶೀಲವಾಗಿದ್ದರೂ ಉತ್ತಮಪುರುಷಾರ್ಥಸಿದ್ಧಿಗೆ ಆದೇಹವೇ ಮುಖ್ಯಸಾಧನವೆಂಬುದನ್ನು ತಿಳಿದು, ಎಚ್ಚರಿಕೆಯಿಂದ ಮೋಕ್ಷಪ್ರಾಪ್ತಿಗಾಗಿಯೇ ಯತ್ನಿಸಬೇಕು. ಅಂತವನೇ ವಿದ್ವಾಂಸನು. ಕಾಡಿನಲ್ಲಿ ಪಕ್ಷಿಯು, ಒಂದು ಮರದಲ್ಲಿ ಗೂಡು ಕಟ್ಟಿಕೊಂಡು ವಾಸಮಾಡುತ್ತಿರುವಾಗ, ಸೌದೆಕಡಿಯುವವರು ಯಮದೂತರಂತೆ ನಿರ್ಭಯರಾಗಿ ಬಂದು,ಮರವನ್ನು ಕಡಿಯುವುದಕ್ಕೆ ಯತ್ನಿಸುವುದನ್ನು ಕಂಡೊಡನೆ, ತನ್ನ ಗೂಡಿನಲ್ಲಿ ಆಸೆಯನ್ನು ಬಿಟ್ಟು, ಬೇರೊಂದು ಕಡೆಗೆ ಹೋದರಲ್ಲವೇ ಅದಕ್ಕೆ ಸುಖವುಂಟು? ಅದರಂತೆಯೇ ಶರೀರವೆಂಬ ವೃಕ್ಷದಲ್ಲಿ, ಹೃದಯವೆಂಬ ಗೂಡಿನೊಳಗೆ ಪಕ್ಷಿಯಂತಿರುವ ಜೀವನು, ತನ್ನ ನಿವಾಸಸ್ಥಾನವಾದ ಶರೀರವು ನಶ್ವರವೆಂಬುದನ್ನು ತಿಳಿದು, ಅದರಲ್ಲಿ ಆಸೆಯನ್ನು ತೊರೆದಾಗಲೇ ಕ್ಷೇಮವನ್ನು ಹೊಂದುವನು. ಅಹೋರಾತ್ರಗಳೆಂಬ ಕಾಲವಿಭಾಗಗಳು ಪ್ರತಿಕ್ಷಣವೂ ಮನುಷ್ಯನ ಆಯುಸ್ಸನ್ನು ಕತ್ತರಿಸುತ್ತಿರುವುವು. ಇದನ್ನು ತಿಳಿದು ಮರಣಭಯದಿಂದ ನಡುಗುವವನು, ಒಡನೆಯೇ ವಿಷಯಾಸಕ್ತಿಯಿಂದ ವಿಮುಖನಾಗಿ, ಕರ್ಮಫಲಗಳಲ್ಲಿಯೂ ಆಸೆಯನ್ನು ತೊರೆದು, ಪ್ರಕೃತಿಪುರುಷರಿಗಿಂತಲೂ ಪರನಾದ ನನ್ನಲ್ಲಿಯೇ ಮನಸ್ಸಿಟ್ಟು ನನ್ನನ್ನು ಉಪಾಸಿಸಬೇಕು. ಆಗ ಮಾತ್ರವೇ ಅವನಿಗೆ ತಿರುಗಿ ಎಂದೆಂದಿಗೂ ಮರಣಭಯವಿಲ್ಲದಂತೆ ಪ್ರಕೃತಿಸಂಬಂಧವು ಬಿಟ್ಟು ಹೋಗುವುದು. ಉದ್ಧವಾ! ಮನುಷ್ಯದೇಹವೆನ್ನೋ ಸಮಸ್ತಫಲಸಾಧನೆಗೂ ಮೂಲವೆನಿಸಿರುವುದು.ಇದು ಅನೇಕಪ್ರಯತ್ನಗಳಿಂದಲೂ ದುರ್ಲಭವೆನಿಸಿದ್ದರೂ,ದೈವಿಕವಾಗಿ ತನಗೆತಾನೇ ಸುಲಭವಾಗಿ ಬರತಕ್ಕುದು. ಇದು ಸಂಸಾರಸಮುದ್ರವನ್ನು

ದಾಟಿಸತಕ್ಕ ನಾವೆಯಂತಿರುವುದು. ಈ ತೆಪ್ಪವನ್ನು ಸರಿಯಾದ ಮಾರ್ಗ ದಲ್ಲಿ ನಡೆಸುವುದಕ್ಕೆ ಆಚಾರ್ಯನೇ ನಾವಿಕನು. ನಾನೇ ಅದಕ್ಕೆ ಅನುಕೂಲ ವಾದ ಗಾಳಿಯಂತಿರುವೆನು. ಇಂತಹ ಮನುಷ್ಯದೇಹವನ್ನು ಪಡೆದಿರುವಾ ಗಲೂ ಯಾವನು, ಅದರಿಂದ ಸಂಸಾರಸಮುದ್ರವನ್ನು ದಾಟದಿರುವನೋ, ಅಂತವನು ತನ್ನನ್ನು ತಾನೇ ಕೆಡಿಸಿಕೊಳ್ಳತಕ್ಕ ಆತ್ಮಘಾತುಕನಲ್ಲದೆ ಬೇರೆ ಯಲ್ಲ. ಆದುದರಿಂದ ಪುರುಷನು ಕಾಮ್ಯಕರ್ಮಗಳೆಲ್ಲವೂ ದುಃಖಹೇತುವೆಂಬು ದನ್ನು ತಿಳಿದು, ಅವುಗಳ ಫಲಗಳಲ್ಲಿ ಯಾವಾಗ ವಿರಕ್ತನಾಗುವನೋ, ಆಗ ಇಂದ್ರಿಯಗಳನ್ನು ಜಯಿಸಿ, ಅಭ್ಯಾಸಬಲದಿಂದ ತನ್ನ ಮನಸ್ಸನ್ನು ನನ್ನಲ್ಲಿ ನಿಶ್ಚಲವಾಗಿ ನೆಲೆಗೊಳಿಸಬೇಕು. ಆದರೆ ಎಷ್ಟೋಪ್ರಯತ್ನದಿಂದ ಮನಸ್ಸ ನ್ನು ತಡೆದಿಟ್ಟರೂ ಅದು ಒಂದುನೆಲೆಯಲ್ಲಿ ನಿಲ್ಲದೆ, ಬಲಾತ್ಕಾರದಿಂದ ಬೇರೆ ಬೇರೆ ಶಬ್ದಾದಿವಿಷಯಗಳಕಡೆಗೇ ಓಡುತ್ತಿರಬಹುದು. ಆಗಲೂ ಮನುಷ್ಯ ನು ಬೇಸರಪಡದೆ, ಆ ಮನಸ್ಸು ಹೋದದಾರಿಯನ್ನೇ ಅನುಸರಿಸುತ್ತ ಉಪಾಯದಿಂದ ಅದನ್ನು ತನ್ನವಶಕ್ಕೆ ತಂದುಕೊಳ್ಳಬೇಕು. ಈ ಪ್ರಯ ತ್ನದಲ್ಲಿ ಎಷ್ಟೋಶ್ರಮವಾದರೂ ಬೇಸರಪಟ್ಟು ಸುಮ್ಮನಾಗಬಾರದು. ಪ್ರಾಣೇಂದ್ರಿಯನಿಗ್ರಹದಿಂದಲೂ, ಸಾತ್ವಿಕಾಹಾರಾದಿಗಳಿಂದ ವೃದ್ಧಿಗೊ ಳಿಸಿದ ಸತ್ವಗುಣದಿಂದಲೂ, ನಿಷ್ಕಲ್ಮಷವಾದ ಬುದ್ಧಿಯಿಂದಲೂ, ಆ ಮ ನಸ್ಸನ್ನು ಮೆಲ್ಲಮೆಲ್ಲಗೆ ತನ್ನ ವಶಮಾಡಿಕೊಳ್ಳಬೇಕು. ಚತುರನಾದ ಸಾರ ಥಿಯು, ತನಗೆ ಸುಲಭವಾಗಿ ಸ್ವಾಧೀನವಾಗದ ಕುದುರೆಯನ್ನು ತನ್ನ ದಾ ರಿಗೆ ತರಬೇಕೆಂದೆಣಿಸಿದಾಗ,ಮೊದಮೊದಲು ಅದು ಹೋದದಾರಿಗೇ ಬಿಟ್ಟು, ತಾನೂ ಅದರ ಮಾರ್ಗವನ್ನೇ ಅನುಸರಿಸುತ್ತ, ಕೊನೆಗೆ ಉಪಾಯದಿಂದ ತನ್ನ ದಾರಿಗೆ ಬರಮಾಡಿಕೊಳ್ಳುವನೇಹೊರತು ಉದಾಸೀನವಾಗಿ ಸುಮ್ಮ ನಿರಲಾರನಲ್ಲವೆ? ಅದರಂತೆಯೇ ಮನಸ್ಸನ್ನೂ ಕೂಡ, ಮೊದಮೊದಲು ಅ ದು ಹೋದದಾರಿಯನ್ನೇ ಅನುಸರಿಸುತಿದ್ದು, ಕೊನೆಕೊನೆಗೆ ಉಪಾಯ ದಿಂದ ತನ್ನ ವಶಮಾಡಿಕೊಳ್ಳಬೇಕು. ಉದ್ಧವಾ! ಈ ಮನೋನಿಗ್ರಹವೇ ಒಂದು ಉತ್ತಮವಾದ ಯೋಗವೆಂದು ತಿಳಿ! ತತ್ವವಿವೇಚನೆಯಿಂದ, ಮ ಹತ್ತು ಮೊದಲಾಗಿ ಪೃಥಿವಿಯವರೆಗಿನ ಉತ್ಪತ್ತಿಕ್ರಮವನ್ನೂ, ಪೃ

ಥಿವಿ ಮೊದಲಾಗಿ ಪ್ರಕೃತಿಯವರೆಗೆ ವಿಲೋಮಕ್ರಮದಿಂದ ಎಲ್ಲಾವ ಸ್ತುಗಳ ಲಯಕ್ರಮವನ್ನೂ, ಮನುಷ್ಯನು, ತನ್ನ ಮನಸ್ಸಿನ ಕಲ್ಮಷಗಳೆಲ್ಲವೂ ನೀಗುವವರೆಗೆ ಚಿಂತಿಸುತ್ತಿರಬೇಕು. ಹೀಗೆ ಪ್ರಪಂಚದ ಸೃಷ್ಟಿಪ್ರಳಯಗಳ ನ್ನು ಪುನಃಪುನಃ ಚಿಂತಿಸುವುದರಿಂದ, ಸಂಸಾರದಲ್ಲಿ ನಿರ್ವೇದವೂ, ಅದರಿಂದ ವಿರಕ್ತಿಯೂ ಹುಟ್ಟುವುದು. ಅಂತಹ ವಿರಕ್ತಿಯು ಹುಟ್ಟಿದಮೇಲೆ, ಮನಸ್ಸು ಹಿಂದಿನಂತೆ ಶಬ್ದಾದಿವಿಷಯಗಳಕಡೆಗೆ ಪ್ರವೇಶಿಸಲಾರದು. ಮನಸ್ಸಿನ ದುಷ್ಪ್ರವರ್ತನೆಯನ್ನು ನೀಗಿಸಬೇಕಾದರೆ, ಯಮನಿಯಮಾದಿ ಯೋಗಮಾರ್ಗಗಳನ್ನು ಹಿಡಿಯುವುದೊಂದು, ತತ್ವಜ್ಞಾನವೊಂದು, ನನ್ನ ಉಪಾಸನೆಯೊಂದು, ಈ ಮೂರರಿಂದಲ್ಲದೆ ಬೇರೆಯಾವ ಉಪಾಯದಿಂದ ಲೂ ಸಾಧ್ಯವಲ್ಲ! ಯೋಗಿಯು ಪ್ರಮಾದವಶದಿಂದ ಒಂದುವೇಳೆ ನಿಷಿದ್ಧ ಕರ್ಮಗಳನ್ನು ನಡೆಸಿದರೂ, ಭಗವದ್ಧ್ಯಾನರೂಪವಾದ ಯೋಗದಿಂದಲೇ ಪಾಪವನ್ನು ನೀಗಿಸಿಕೊಳ್ಳಬೇಕೇಹೊರತು, ಬೇರೆ ವಿಧವಾದ ಕೃಛ್ರಾದಿವ್ರ ತಾಚರಣೆಗಳಿಂದ ಅದನ್ನು ದಹಿಸಲು ಸಾಧ್ಯವಲ್ಲ. ಉದ್ಧವಾ! ಹೀಗೆ ಆ ಯಾ ಅಧಿಕಾರಿಗಳ ಸ್ವಭಾವಕ್ಕೆ ತಕ್ಕಂತೆ ಪುರುಷಾರ್ಥಸಿದ್ಧಿಗೆ ಬೇರೆಬೇರೆ ಸಾ ಧನಗಳೇರ್ಪಟ್ಟಿರುವುವು. ಆದರೆ ಆಯಾ ಅಧಿಕಾರಿಗಳು ಅವಲಂಬಿಸತಕ್ಕ ಮಾರ್ಗಗಳಲ್ಲಿ ಗುಣದೋಷನಿರ್ಣಯವು ಹೇಗೆಂದು ಕೇಳಿದೆಯಲ್ಲವೆ? ತನ್ನ ತನ್ನ ವರ್ಣಾಶ್ರಮಾನುಗುಣವಾದ ಅಧಿಕಾರಧರ್ಮದಲ್ಲಿ ನಿಷ್ಠೆಯಿಂದಿರುವು ದೇ ಗುಣವು. ತನಗೆ ಅಧಿಕಾರವಿಲ್ಲದ ಇತರವರ್ಣಾಶ್ರಮಧರ್ಮಗಳಲ್ಲಿ ಪ್ರವ ರ್ತಿಸುವುದೇ ದೋಷವು. ಗುಣದೋಷಗಳೆಂಬಿವೆರಡಕ್ಕೂ ಇದೇ ಸ್ವರೂಪ ನಿರ್ಣಯವು. ನಾನು ಹಿಂದೆ ಸುಖದುಃಖಸಾಧನಗಳಾದ ಕರ್ಮಗಳಲ್ಲಿ ಗುಣ ದೋಷಗಳನ್ನೆಣಿಸುವುದೇ ದೋಷವೆಂದೂ, ಅವೆರಡರಲ್ಲಿಯೂ ದೋಷದೃಷ್ಟಿ ಯಿಂದ ತ್ಯಜಿಸುವುದೇ ಗುಣವೆಂದೂ ಹೇಳಿದುದು, ಮೋಕ್ಷಾಪೇಕ್ಷೆಯುಳ್ಳ ವರಿಗಾಗಿಯೇಹೊರತು ಭೋಗಾಪೇಕ್ಷೆಯುಳ್ಳವರಿಗಲ್ಲ. ಏಕೆಂದರೆ, ಮು ಮುಕ್ಷುಗಳು ಸ್ವಭಾವದಿಂದ ತಮಗೆ ಅಶುದ್ಧಿಹೇತುಗಳಾದ ಕಾಮ್ಯಕರ್ಮ ಗಳಲ್ಲಿಯೂ, ಸಂಸರ್ಗಗಳಲ್ಲಿಯೂ ಗುಣದೋಷಭಾವನೆಯನ್ನಿಟ್ಟು ಅವು ಗಳಲ್ಲಿ ಪ್ರವರ್ತಿಸಬಾರದೆಂಬುದಕ್ಕಾಗಿಯೇ ನಾನು ಆವಿಧವಾದ ಗುಣದೋ

ಷ ನಿರ್ಣಯವನ್ನು ವಿಧಿಸಿದೆನು. ಆದುದರಿಂದ ನಾನು ಹೇಳಿದ ಗುಣದೋಷ ನಿರ್ಣಯಕ್ಕೂ, ವೇದವಿಹಿತಗಳಾದ ವಿಧಿನಿಷೇಧಗಳಿಗೂ ವಿರೋಧವೇನೂ ಬಾರದು. ಕಾಮ್ಯಕರ್ಮಗಳಲ್ಲಿ ಬೇಸರವು ಹುಟ್ಟಿದ್ದರೂ, ಸಂಪೂರ್ಣವಾಗಿ ಅವುಗಳಲ್ಲಿ ವಿರಕ್ತಿಹೊಂದದೆ, ಕಾಮಗಳೆಲ್ಲವೂ ದುಃಖಾತ್ಮಕಗಳೆಂಬುದನ್ನು ತಿಳಿದೂ ಅವುಗಳನ್ನು ಬಿಡಲಾರದೆ ಇದ್ದವರೂಕೂಡ, ಶ್ರದ್ಧೆಯಿಂದ ನನ್ನಕಥೆಗಳನ್ನು ಕೇಳುತ್ತ, ನನ್ನನ್ನು ಭಜಿಸುವುದರಿಂದ ಶ್ರೇಯಸ್ಸನ್ನು ಪಡೆಯಬಹುದು. ನನ್ನಲ್ಲಿ ಭಕ್ತಿಯೇ ಸರ್ವಾರ್ಥಸಾಧನವೆಂಬ ದೃಢನಿಶ್ಚಯವುಳ್ಳವನು, ಕಾಮಗಳನ್ನನುಭವಿಸುತ್ತಿರುವಾಗಲೂ, ಆ ಕಾಮೋಪಭೋಗಗಳಿಗೆ ದುಃಖವೇ ಫಲವೆಂಬುದನ್ನು ಮಾತ್ರ ತಿಳಿದುಕೊಂಡು, ಅವುಗಳಲ್ಲಿ ಹೇಯಬುದ್ಧಿಯಿಂದ ನನ್ನನ್ನೇ ಭಜಿಸಬೇಕು. ಈವಿಧವಾದ ಭಕ್ತಿಯೋಗದಿಂದ ಆಗಾಗ ನನ್ನನ್ನು ಭಜಿಸತಕ್ಕವನ ಹೃದಯದಲ್ಲಿ ನಾನು ನೆಲೆಗೊಳ್ಳುವುದರಿಂದ, ಅವನ ಮನಸ್ಸಿನಲ್ಲಿರುವ ಕಾಮಗಳೆಲ್ಲವೂ ಸ್ಥಳಸಂಕೋಚದಿಂದ ತಾನಾಗಿ ಬಿಟ್ಟು ಹೋಗುವುವು. ಎಲ್ಲರ ಹೃದಯದಲ್ಲಿಯೂ ನೆಲೆಗೊಂಡಿರುವ ನನ್ನನ್ನು ಯಾವನು *ಭಕ್ತಿಯಿಂದ ಸಾಕ್ಷಾತ್ಕರಿಸುವನೋ, ಅವನಿಗೆ ಆಕ್ಷಣವೇ ದೇಹಾಭಿಮಾನಸ್ವತಂತ್ರಾಭಿಮಾನಗಳೆಂಬ ದುರ್ಭೇದ್ಯವಾದ ಹೃದಯಗ್ರಂಥಿಯೂ ಸಡಿಲಿಹೋಗುವುದು. ದೇಹಾತ್ಮಸ್ವರೂಪವಿಷಯವಾದ ಸಂಶಯಗಳೆಲ್ಲವೂ ನೀಗುವುವು. ಮೋಕ್ಷವಿರೋಧಿಗಳಾದ ಅವನ ಪುಣ್ಯಪಾಪಕರ್ಮಗಳೂ ಕ್ಷಯಿಸುವುವು. ಆದುದರಿಂದ ನನ್ನಲ್ಲಿ ಭಕ್ತಿಯುಳ್ಳವನಾಗಿ, ನನ್ನಲ್ಲಿಯೇ ನಟ್ಟಮನಸ್ಸುಳ್ಳ ಯೋಗಿಗೆ, ಜ್ಞಾನವೈರಾಗ್ಯಗಳೂ ಕೂಡ, ಭಕ್ತಿಯಂತೆ ಶ್ರೇಯಸ್ಸಾಧನಗಳೆನಿಸಲಾರವು. ಇನ್ನು ಕರ್ಮಯೋಗದಿಂದ ಅವನಿಗಾಗಬೇಕಾದುದೇನು? ಉದ್ಧವಾ! ಕರ್ಮಗಳಿಂದಲೂ, ತಪಸ್ಸಿನಿಂದಲೂ, ಜ್ಞಾನವೈರಾಗ್ಯಗಳಿಂದಲೂ, ಯೋಗಾಭ್ಯಾಸದಿಂದಲೂ, ದಾನಧರ್ಮಾದಿಗಳಿಂದಲೂ, ತೀರ್ಥಯಾತ್ರೆ, ವ್ರತ, ಮೊದಲಾದ ಬೇರೆ ಶ್ರೇಯಸ್ಸಾಧನ

* ಭಕ್ತಿಯೋಗದಲ್ಲಿ ಭಗವಂತನ ಸಾಕ್ಷಾದ್ದರ್ಶನವಿಲ್ಲದಿದ್ದರೂ, ಆ ಭಕ್ತಿಯು ತೈಲಧಾರೆಯಂತೆ ಅವಿಚ್ಛಿನ್ನವಾಗಿ ಬಂದಾಗ, ಆ ಭಗವಂತನ ಸಾಕ್ಷಾದ್ದರ್ಶನಕ್ಕೇ ಸಾಟಿಯಾಗಿರುವುದೆಂದು ಭಾವವು.

ಗಳಿಂದಲೂ ಯಾವಯಾವ ಪ್ರಯೋಜನಗಳು ಕೈಗೂಡಬಹುದೋ, ಅವೆ ಲ್ಲವನ್ನೂ ಭಕ್ತಿಯೋಗದಿಂದಲೇ ಬಹುಶೀಘ್ರವಾಗಿ ಪಡೆಯಬಹುದು. ನ ನ್ನಲ್ಲಿ ನಿಜವಾದ ಭಕ್ತಿಯುಳ್ಳವನು, ಸ್ವರ್ಗವನ್ನಾಗಲಿ, ಕೈವಲ್ಯವನ್ನಾಗಲಿ, ನನ್ನ ಸ್ಥಾನವಾದ ಮೋಕ್ಷವನ್ನಾಗಲಿ, ಇನ್ನೂ ತನಗೆ ಇಷ್ಟವಾದ ಬೇರೆ ಯಾವ ಕೋರಿಕೆಯನ್ನಾಗಲಿ ಆ ಭಕ್ತಿಯಿಂದಲೇ ಪಡೆಯಬಲ್ಲನು. ಆದರೇ ನು? ನನ್ನಲ್ಲಿ ಏಕಾಂತಭಕ್ತರಾದ ಸಾಧುಗಳು, ನನ್ನನ್ನು ಅನುಭವಿಸುವು ದೊಂದೇ ತಮಗೆ ಪರಮಪ್ರಯೋಜನವೆಂದು ತಿಳಿದಿರುವುದರಿಂದ, ನಾ ನಾಗಿ ಬಂದು, ಪುನರ್ಜನ್ಮವಿಲ್ಲದ ಕೈವಲ್ಯವನ್ನೇ ಅನುಗ್ರಹಿಸಿಕೊಟ್ಟರೂ, ಅದಕ್ಕಾಸೆಪಡಲಾರರು. ಅಷ್ಟೇಕೆ? ಅವರು ಮುಕ್ತಿಯನ್ನೂ ತಮ್ಮ ಮ ನಸ್ಸಿನಿಂದ ಅಪೇಕ್ಷಿಸಲಾರರು. ಯಾವ ಫಲಾಪೇಕ್ಷೆಯೂ ಇಲ್ಲದ ಏಕಾಂತ ಭಕ್ತಿಯೇ ಶ್ರೇಯಸ್ಸಾಧನವೆಂಬ ಒಂದೇ ನಂಬಿಕೆಯಿಂದ, ಮು ಕ್ತಿಗೂ ಆಸೆಪಡದೆ ನಿರಪೇಕ್ಷರಾಗಿದ್ದವರಿಗೆ, ಆ ನಿರಪೇಕ್ಷೆಯೇ ತಾನಾಗಿ ಮುಕ್ತಿಯನ್ನು ಕೈಗೂಡಿಸುವುದು. ಆದುದರಿಂದ ಉದ್ಧವಾ! ದೃ ಷ್ಟಾದೃಷ್ಟಫಲಗಳಲ್ಲಿಯಾಗಲಿ, ಕೊನೆಗೆ ಅಪವರ್ಗದಲ್ಲಿಯಾಗಲಿ ಅ ಪೇಕ್ಷೆಯಿಲ್ಲದಿದ್ದಾಗಮಾತ್ರವೇ ಭಕ್ತಿಯೋಗವೆಂಬುದು ನಿರ್ವಿಘ್ನವಾಗಿ ಕೊನೆಸಾಗುವುದು. ಹೀಗೆ ನನ್ನಲ್ಲಿ ಅನನ್ಯಪ್ರಯೋಜನವಾದ ಭಕ್ತಿಯ ನ್ನಿಟ್ಟು, ಗುಣದೋಷಗಳೆರಡರಲ್ಲಿಯೂ ಸಮಬುದ್ಧಿಯಿಂದ ಉದಾಸೀನರಾ ಗಿರತಕ್ಕ ಸಾಧುಗಳಲ್ಲಿ, ಆ ಗುಣದೋಷವಿಚಾರದಿಂದ ಉಂಟಾಗತಕ್ಕ ರಾ ಗದ್ವೇಷಾದಿಗಳೊಂದೂ ತಲೆಯಿಕ್ಕಲಾರವು. ಉದ್ಧವಾ! ಇದುವರೆಗೆ ನಾನು ಹೇಳಿದ ಮೋಕ್ಷೋಪಾಯಗಳನ್ನು ಅನುಷ್ಠಿಸತಕ್ಕವರು, ಪರಬ್ರ ಹ್ಮವೆಂದು ವ್ಯವಹರಿಸಲ್ಪಡುವ ನನ್ನ ಸ್ಥಾನವನ್ನು ನಿರಾಯಾಸವಾಗಿ ಹೊಂ ದುವುದರಲ್ಲಿ ಸಂದೇಹವಿಲ್ಲ! ಇದು ಇಪ್ಪತ್ತನೆಯ ಅಧ್ಯಾಯವು.

---

**{ ಕೃಷ್ಣನು ದೇಶಕಾಲಾದಿಗಳ ಶುದ್ಧತ್ವಾಶುದ್ಧತ್ವ ಗಳನ್ನು ತಿಳಿಸಿದುದು. }**

ಉದ್ಧವಾ! ಮೇಲೆ ಹೇಳಿದಂತೆ ನನ್ನನ್ನು ಸೇರುವುದಕ್ಕೆ ಉಪಾಯ ಭೂತಗಳಾದ ಕರ್ಮ ಜ್ಞಾನ ಭಕ್ತಿ ಯೋಗಗಳೆಲ್ಲವನ್ನೂ ಬಿಟ್ಟು,ಇಂದ್ರಿಯ

ಚಾಪಲ್ಯದಿಂದ ಅತ್ಯಲ್ಪಗಳಾದ ಶಬ್ದಾದಿವಿಷಯಗಳನ್ನನುಭವಿಸುವುದಕ್ಕಾಗಿ ಯಾವನು ಪ್ರಯತ್ನಿಸುವನೋ, ಅವನು ಎಂದೆಂದಿಗೂ ಸಂಸಾರದಿಂದ ಬಿಡುಗಡೆ ಹೊಂದಲಾರನು. ಮುಖ್ಯವಾಗಿ ಯಾವ ಶ್ರೇಯಸ್ಸನ್ನು ಪಡೆಯ ಬೇಕಾದರೂ, ತಮತಮಗೆ ನಿಯತಗಳಾದ ವರ್ಣಾಶ್ರಮಧರ್ಮಗಳಲ್ಲಿ ನಿಷ್ಠೆ ಯಿಂದಿರುವುದೇ ಗುಣವು. ಅದಕ್ಕೆ ವಿಪರೀತವಾಗಿ ಪ್ರವರ್ತಿಸುವುದೇ ದೋಷವು. ಇಷ್ಟೇ ಗುಣದೋಷಗಳ ಸ್ವರೂಪನಿರ್ಣಯವೆಂದು ತಿಳಿಯ ಬೇಕು. ಆದರೆ ಮುಮುಕ್ಷುಗಳಿಗಾದರೂ ಕಾಮ್ಯಗಳಲ್ಲದ ಶುದ್ಧಕರ್ಮ ಗಳೇ ಉಪಾದೇಯಗಳೆಂದು ಹಿಂದೆ ಹೇಳಿರುವೆನಷ್ಟೆ? "ಈ ಶುದ್ಧತ್ವಾ ಶುದ್ಧತ್ವಗಳನ್ನು ನಿರ್ಣಯಿಸುವುದು ಹೇಗೆ" ಎಂದು ನೀನು ಕೇಳಬಹುದು. ಉದ್ಧವಾ! ದೇಶ, ಕಾಲ, ದ್ರವ್ಯ, ಕರ್ಮ, ಮಂತ್ರ, ಕರ್ತೃಗಳೆಂಬ ಸಮ ಸ್ತವೂ ಪಂಚಭೂತಾತ್ಮಕಗಳೇ ಆಗಿರುವುದರಿಂದ, ಸಮಾನಾಕಾರವುಳ್ಳವು ಗಳಾಗಿದ್ದರೂ, "ಇದು ಯೋಗ್ಯವೆ ಅಥವಾ ಅಯೋಗ್ಯವೇ?"ಎಂಬ ಸಂದೇ ಹಮೂಲಕವಾಗಿ, ಅವುಗಳಲ್ಲಿ ಸ್ವಾಭಾವಿಕವಾದ ಪ್ರವೃತ್ತಿಯನ್ನು ನಿರ್ಬಂ ಧಿಸಿಡುವುದಕ್ಕಾಗಿ, ಈ ದೇಶಕಾಲಾದಿಸಮಸ್ತ ವಸ್ತುಗಳಲ್ಲಿಯೂ ಯೋ ಗ್ಯತಾಯೋಗ್ಯತೆಗಳು ವಿಭಾಗಿಸಿ ತೋರಿಸಲ್ಪಟ್ಟಿರುವುವು. ಈ ಯೋಗ್ಯ ತ್ವಾಯೋಗ್ಯತ್ವನಿರ್ಣಯದಿಂದ, ಅವರವರು ತಮತಮಗೆ ಶುಭಾಶುಭಕಾ ರಣಗಳಾದ ಗುಣದೋಷಗಳನ್ನು ಕಂಡುಕೊಂಡು, ತಮ್ಮತಮ್ಮ ಅಧಿಕಾ ರಕ್ಕೆ ತಕ್ಕಂತೆ ಪ್ರವರ್ತಿಸಬಹುದು. ತಮತಮಗೆ ನಿಯತವಾದ ಧರ್ಮದಲ್ಲಿ ನಡೆಯತಕ್ಕವರಿಗೆ, ಆಯಾಧರ್ಮನಿರ್ವಾಹಕ್ಕಾಗಿಯೂ, ಧರ್ಮಕ್ಕೆ ವಿರೋಧ ವಿಲ್ಲದಂತೆ ದೇಹಯಾತ್ರೆಯನ್ನು ನಡೆಸುವುದಕ್ಕಾಗಿಯೂ, ಇದು ಉಪಾ ದೇಯವು, ಇದು ಅನುಪಾದೇಯವೆಂಬ ವ್ಯವಹಾರಕ್ಕಾಗಿಯೂ, ನಾನು ಹೀಗೆ ಶುದ್ಧಾಶುದ್ಧವಿಭಾಗಪೂರ್ವಕವಾಗಿ, ಅವರವರು ಪ್ರವರ್ತಿಸತಕ್ಕ ಆ ಚಾರನಿಯಮವನ್ನು ತೋರಿಸಿರುವೆನು. ಚತುರ್ಮುಖಬ್ರಹ್ಮನಿಂದ ಹಿಡಿದು ಸ್ಥಾವರಪರ್ಯಂತವಾದ ಸಮಸ್ತಶರೀರಗಳೂ, ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಧಾತುಗಳಿಂದೇರ್ಪಟ್ಟು, ಅಂತರಾತ್ಮನಾ ದ ನನ್ನೊಡನೆಯೂ ಕೂಡಿರುವುವು. ಆದುದರಿಂದ ಸಮಸ್ತಪದಾರ್ಥಗಳೂ

ಚಿತ್ತು, ಅಚಿತ್ತು, ಈಶ್ವರನೆಂಬ ಮೂರು ತತ್ವಗಳಿಂದಲೇ ಏರ್ಪಟ್ಟಿರುವುದ ರಿಂದ, ಒಂದಕೊಂದು ಸಮಾನಗಳಾಗಿಯೇ ಇರುವುವು. ಹಾಗಿದ್ದರೂ ವಿವಿಧಪ್ರಾಣಿಶರೀರನಿರ್ಮಾಣಕ್ಕೆ ಸಾಧನಗಳಾದ ಪೃಥಿವಿ ಮೊದಲಾದ ಭೂತಗಳಿಗೆ, ಸೃಷ್ಟಿಕಾಲದಲ್ಲಿ ಚತುರ್ಮುಖನು * ವೇದದಲ್ಲಿ ಹೇಳಲ್ಪಟ್ಟಂತೆ ಬೇರೆಬೇರೆ ನಾಮರೂಪಗಳನ್ನು ಕಲ್ಪಿಸಿರುವನು. ಈ ಭೇದಕಲ್ಪನೆಯು ಸಂಸಾರಿಗಳಾದ ಚೇತನರಿಗೆ, ಅವರವರ ಇಷ್ಟಾರ್ಥಸಿದ್ಧಿಗೆ ತಕ್ಕಂತೆ ಅಧಿ ಕಾರನಿಷ್ಠೆಯನ್ನು ಕಲ್ಪಿಸುವುದಕ್ಕೆಂದೇ ಗ್ರಹಿಸಬೇಕು. ಅವರವರು ವಿಪ ರೀತಾಧಿಕಾರಗಳಿಗೆ ಹೋಗದೆ ತಮ್ಮತಮ್ಮ ಅಧಿಕಾರಗಳನ್ನೇ ಅನುಷ್ಠಿ ಸುವಹಾಗೆ ನಿಯಮವನ್ನಿಡುವುದಕ್ಕಾಗಿಯೇ ನಾನು ದೇಶಕಾಲಾದಿವಸ್ತುಗ ಳಲ್ಲಿ ಶುದ್ಧಾಶುದ್ಧಗಳೆಂಬ ಬೇರೆಬೇರೆ ವಿಭಾಗಗಳನ್ನು ತೋರಿಸಿರುವೆನು. ಈ ಶುದ್ಧಾಶುದ್ಧವಿಭಾಗಕ್ರಮವೇನೆಂದರೆ, ದೇಶಗಳಲ್ಲಿ ಕೃಷ್ಣಮೃಗಗಳ ಸಂಚಾರವಿಲ್ಲದೆಯೂ, ಬ್ರಾಹ್ಮಣಭಕ್ತಿಯಿಲ್ಲದೆಯೂ ಇರುವ ದೇಶವು ಅಶು ದ್ಧವೆಂದೂ, ಅವುಗಳನ್ನೊಳಕೊಂಡ ದೇಶವು ಶುದ್ಧವೆಂದೂ ತಿಳಿಯಬೇಕು. ಆದರೆ ಕೃಷ್ಣಮೃಗಗಳು ಹೆಚ್ಚಾಗಿ ತುಂಬಿದ್ದರೂ, ಸೌರಾಷ್ಟ್ರ, ಮಗಧ ಕಳಿಂಗಾದಿದೇಶಗಳಂತೆ ಮ್ಲೇಚ್ಛಭೂಯಿಷ್ಠಗಳಾಗಿಯೂ, ಊಷರ ಪ್ರಚುರವಾಗಿಯೂ ಇದ್ದು, ಅಸಂಸ್ಕೃತಗಳಾದ ದೇಶಗಳು ಅಶುದ್ಧದೇಶಗ ಳೆನಿಸುವುವು. ಕಾಲಗಳಲ್ಲಿ ದ್ರವ್ಯಸಂಪತ್ತಿಯುಳ್ಳುದಾಗಿಯೂ, ಪೂರ್ವಾಹ್ಣಾ ದಿರೂಪದಿಂದ ಸಹಜವಾಗಿಯೂ ಕರ್ಮಗಳಿಗೆ ಅನುಕೂಲಿಸತಕ್ಕ ಕಾಲವು ಶುಚಿಯೆನಿಸುವುದು. ದ್ರವ್ಯಾಲಾಭದಿಂದಲೋ, ರಾಷ್ಟ್ರವಿಪ್ಲವದಿಂ ದಲೋ, ಸೂತಕಾದಿಗಳಿಂದಲೋ ಯಾವಕಾಲವು ಕರ್ಮಗಳಿಗೆ ಅನುಕೂಲಿಸ ದಿರುವುದೋ ಆಕಾಲವು ಅಶುಚಿಯೆನಿಸುವುದು. ದ್ರವ್ಯಗಳಿಗೆ ಇತರದ್ರವ್ಯ ಸಂಬಂಧದಿಂದಲೂ, ಶಾಸ್ತ್ರಪ್ರಮಾಣದಿಂದಲೂ, ಹಿರಿಯರ ವಾಕ್ಯಗ ಳಿಂದಲೂ, ಸಂಸ್ಕಾರಗಳಿಂದಲೂ, ಕಾಲದಿಂದಲೂ, ಹೆಚ್ಚುಕಡಿಮೆ

---

* ಬ್ರಹ್ಮನು ಸೃಷ್ಟಿಕಾಲದಲ್ಲಿ, ತನಗೆ ಪರಮಪುರುಷನಿಂದುಪದೇಶಿಸಲ್ಪಟ್ಟ ವೇದದಲ್ಲಿರುವ ದೇವಮನುಷ್ಯಾದಿಶಬ್ದಗಳನ್ನು ಚಿಂತಿಸಿ, ಅವುಗಳಿಗೆ ತಕ್ಕಂತೆ ಬೇರೆ ಬೇರೆ ಆಕಾರಗಳನ್ನು ಸೃಷ್ಟಿಸಿದುದಾಗಿ ಶ್ರುತಿಯು.

ಯೆಂಬ ಪ್ರಮಾಣಭೇದದಿಂದಲೂ, ಅವರವರ ಶಕ್ತಿತಾರತಮ್ಯದಿಂ ದಲೂ, ಬುದ್ಧಿನಿಶ್ಚಯದಿಂದಲೂ, ಉತ್ಸವಸಂಬಂಧದಿಂದಲೂ ಶುದ್ಧ ತ್ವಾಶುದ್ಧತ್ವಗಳು ಏರ್ಪಡುವುವು. ಹೇಗೆಂದರೆ, ವಸ್ತ್ರಗಳು, ಪಾತ್ರೆ ಗಳು ಮುಂತಾದ ದ್ರವ್ಯಗಳಿಗೆ, ನೀರು, ಮಣ್ಣು ಮುಂತಾದ ದ್ರವ್ಯಾಂತರ ಗಳಿಂದ ಶುದ್ಧಿಯುಂಟಾಗುವುದು. ಅವುಗಳೇ ಮಲಮೂತ್ರಾದಿಗಳಿಂದ ಅಶುದ್ಧವಾಗುವುವು. ಒಂದುವಸ್ತುವು ಶುದ್ಧವೇ ಅಶುದ್ಧವೇ ಎಂಬ ಸಂದೇ ಹವು ತೋರಿದಾಗ, ಶಾಸ್ತ್ರವಚನದಿಂದಲೂ, ಬ್ರಾಹ್ಮಣವಾಕ್ಯದಿಂದಲೂ ಅದಕ್ಕೆ ಶುದ್ಧಿಯುಂಟು. ಪುಷ್ಪಾದಿಗಳಿಗೆ ಪ್ರೋಕ್ಷಣಾದಿಸಂಸ್ಕಾರಗಳಿಂದ ಶುದ್ಧಿಯುಂಟು. ಮಳೆಯ ನೀರಿಗೆ ಕಾಲದಿಂದ ಶುದ್ಧಿಯುಂಟು. ನದೀ ಜಲವು ಮಹತ್ತಾದುದರಿಂದ ಚಂಡಾಲಾದಿಸ್ಪರ್ಶದಲ್ಲಿಯೂ ಅದಕ್ಕೆ ದೋಷ ವಿಲ್ಲವು. ಬೀದಿಯಲ್ಲಿ ಹರಿಯುವ ನೀರು ಅಲ್ಪವಾದುದರಿಂದ ಅಶುದ್ಧ ವೆನಿಸುವುದು. ಶಕ್ತನಿಗೆ ಗ್ರಹಣಾದಿಕಾಲಗಳಲ್ಲಿ ಸ್ನಾನಮಾಡಿದಾಗಲೇ ಶುದ್ಧಿಯು! ರೋಗಿಗೆ ಸ್ನಾನಾದಿಗಳಿಲ್ಲದಿದ್ದರೂ ಅವನ ಅಶಕ್ತಿಯೇ ಅವನಿಗೆ ಶುದ್ಧಿಕಾರಣವಾಗುವುದು. ಪುತ್ರಜನ್ಮಾದಿಕಾಲಗಳಲ್ಲಿ ಸೂತಕ ಕಾಲವು ಕಳೆದ ಹೋಯಿತೆಂಬ ಬುದ್ಧಿಯೇ ಶುದ್ಧಿಕಾರಣವಾಗಿಯೂ, ಇನ್ನೂ ಕಳೆಯಲಿಲ್ಲವೆಂಬ ಬುದ್ಧಿಯೇ ಅಶುದ್ಧಿಕಾರಣವಾಗಿಯೂ ಇರುವುದು. ಭಗವದುತ್ಸವಾದಿಗಳಲ್ಲಿ ಅಸ್ಪೃಶ್ಯವಾದುದನ್ನು ಮುಟ್ಟಿದರೂ ಆ ಉತ್ಸವಸಂಬಂಧದಿಂದ ಶುದ್ಧಿಯುಂಟು. ಹೀಗೆ ಶುದ್ಧಿಕಾರಿಗಳೆನಿಸಿದ ಈ ದ್ರವ್ಯವಚನಾದಿಗಳೆಲ್ಲವೂ, ಆಯಾ ದೇಶ ಕಾಲ ಸ್ಥಿತಿ ಗತಿಗಳನ್ನನುಸರಿಸಿ ಸ್ವತಃ ಶುದ್ಧವೆನಿಸಿದ ವಸ್ತುವಿಗೆ ಅಶುದ್ಧಿಯನ್ನೂ, ಅಶುದ್ಧವಾದುದಕ್ಕೆ ಶುದ್ಧಿಯನ್ನೂ ಉಂಟುಮಾಡುವುವು. ಧಾನ್ಯಗಳು, ಮರದ ಪದಾರ್ಥಗಳು, ಗಜದಂತವೇ ಮೊದಲಾದ ಅಸ್ಥಿಗಳು, ನೂಲು, ದ್ರವಪದಾರ್ಥಗಳು, ಕಂಚು ಮೊದಲಾದ ಲೋಹಗಳು, ಚರ್ಮಗಳು, ಇತ್ಯಾದಿಗಳಿಗೆಲ್ಲಾ, ಗಾಳಿ, ಬೆಂಕಿ, ಬಿಸಿಲು, ಮಣ್ಣು, ಮುಂತಾದುವುಗಳಿಂದ ಒಂದೊಂದಕ್ಕೆ ಒಂದೊಂದು ವಿಧವಾದ ಶುದ್ಧಿಯುಂಟು. ಹೀಗೆಯೇ ಭೂಜನ್ಯವಾದ ಕೆಲಕೆಲವು ಪದಾರ್ಥ ಗಳಿಗೆ ಇತರಪದಾರ್ಥಗಳ ಸಂಯೋಗವಿಯೋಗಗಳಿಂದ ಶುಚಿತ್ವಾಶುಚಿತ್ವಗ

ಳುಂಟು. ಹೇಗೆಂದರೆ,ಅನ್ನದಲ್ಲಿ ಕೂದಲು ಸಿಕ್ಕಿದಾಗ ಅದನ್ನು ತೆಗೆದುಹಾಕಿ, ಆಜ್ಯಾದಿಗಳನ್ನು ಸೇರಿಸುವುದರಿಂದ ಆ ಅನ್ನವು ಶುದ್ಧವಾಗುವುದು. ಕಶ್ಮಲವು ಅಂಟಿದ್ದ ಪಾತ್ರೆಗಳು, ವಸ್ತುಗಳು ಮುಂತಾದುವುಗಳಿಗೆ, ಆ ಕಶ್ಮಲ ಸಂಬಂಧವೂ, ಅದರ ದುರ್ಗಂಧವೂ ಸಂಪೂರ್ಣವಾಗಿ ನೀಗಿ, ಶುದ್ಧ ರೂಪವನ್ನು ಹೊಂದುವವರೆಗೆ, ಹುಳಿ, ನೀರು ಮೊದಲಾದುವುಗಳಿಂದ ಬಾರಿಬಾರಿಗೂ ಶುದ್ಧಿಮಾಡುತ್ತಿರಬೇಕು. ಇವೆಲ್ಲವೂ ದ್ರವ್ಯಶುದ್ಧಿಕ್ರಮಗಳು. ಕರ್ತೃವಿಗೆ, ಸ್ನಾನ, ದಾನ ತಪಸ್ಸುಗಳಿಂದಲೂ, ಅನುಷ್ಠಾನಯೋಗ್ಯವಾದ ವಯಸ್ಸಿನಿಂದಲೂ, ಶಕ್ತಿಯಿಂದಲೂ ಉಪನಯನಾದಿಸಂಸ್ಕಾರಗಳಿಂದಲೂ, ಸಂಧ್ಯೋಪಾಸನಾದಿಕರ್ಮಗಳಿಂದಲೂ, ನನ್ನ ಸ್ಮರಣೆಯಿಂದಲೂ ಶುದ್ಧಿಯುಂಟು. ಹೀಗೆ ಶರೀರವನ್ನೂ ತನ್ನನ್ನೂ ಶುದ್ಧಿಮಾಡಿಕೊಂಡು, ಅಧಿಕಾರೋಚಿತಗಳಾದ ಕರ್ಮಗಳನ್ನು ನಡೆಸಬಹುದು. ಮಂತ್ರಗಳಿಗೆ ಆಚಾರ್ಯಮುಖದಿಂದ ಚೆನ್ನಾಗಿ ಪ್ರಯೋಗಜ್ಞಾನವನ್ನು ಪಡೆಯುವುದೇ ಶುದ್ಧಿಯು. ಕರ್ಮಗಳಿಗೆ ಭಗವದರ್ಪಣವೆಂಬ ಭಾವದಿಂದ ನಡೆಸುವುದೇ ಶುದ್ಧಿಯು. ಹೀಗೆ ದೇಶ, ಕಾಲ, ದ್ರವ್ಯ, ಕರ್ತೃ, ಮಂತ್ರ, ಕರ್ಮಗಳೆಂಬಿವಾರೂ, ಮೇಲೆ ಹೇಳಿದ ಕ್ರಮದಿಂದ ಶುದ್ಧಿಹೊಂದಿದಾಗಲೇ,ಪುರುಷನಿಗೆ ತನ್ನ ತನ್ನ ಅಧಿಕಾರೋಚಿತವಾದ ಧರ್ಮವು ಸಿದ್ಧಿಸುವುದು. ಹಾಗಿಲ್ಲದೆ ಅವು ಅಶುದ್ಧಗಳಾಗಿದ್ದಲ್ಲಿ ಅಧರ್ಮಹೇತುಗಳಾಗುವುವು. ಕೆಲಕೆಲವುಸಂದರ್ಭಗಳಲ್ಲಿ ವಿಶೇಷಸ್ಥಿಯನ್ನನುಸರಿಸಿ ಗುಣವೇ ದೋಷವಾಗಿಯೂ, ದೋಷವೇ ಗುಣವಾಗಿಯೂ ಆಗುವುದುಂಟು. ಹೇಗೆಂದರೆ, ಎಲ್ಲರಿಗೂ ಶುದ್ಧಿಹೇತುವಾದ ಸ್ನಾನವು ರೋಗಿಗೆ ನಿಷಿದ್ಧವೆನಿಸುವುದು. ನಿಷಿದ್ಧವಾದ ಪಶುಹಿಂಸೆಯು ಯಜ್ಞಕಾಲದಲ್ಲಿ ಪ್ರಶಸ್ತವೆನಿಸುವುದು. ಆದುದರಿಂದ ಈ ವಿಶೇಷಶಾಸ್ತ್ರನಿಯಮದಿಂದ ಸಾಮಾನ್ಯಶಾಸ್ತ್ರವಿಹಿತಗಳಾದ ಗುಣದೋಷಗಳಿಗೆ ಅಪವಾದಗಳುಂಟು. ಶುದ್ಧರಾದವರಿಗೆ ಪತಿತರೊಡನೆ ಸಹಭೋಜನ ಸಂಭಾಷಣಾದಿಗಳು ದೋಷಹೇತುವೆನಿಸಿದ್ದರೂ, ಪತಿತರಿಗೆ ಪತಿತರೊಡನೆ ಸಹಭೋಜನಾದಿಗಳು ದೋಷಾಸ್ಪದವಲ್ಲ. ಗೃಹಸ್ಥನಿಗೆ ವಿಷಯೋಪಭೋಗವು ಸ್ವಾಭಾವಿಕವಾದುದರಿಂದ, ಆದರಿಂದ ಅವನಿಗೆ ದೋಷವಿಲ್ಲ. ಯತಿಗಳಿಗೆ ಅದೇ ದೋಷಹೇ

ತುವಾಗುವುದು. ಏಕೆಂದರೆ, ಮೇಲೇರಿದವನು ಕೆಳಕ್ಕೆ ಬೀಳಬಹುದೇಹೊರತು ಮೊದಲೇ ನೆಲದಮೇಲೆ ಮಲಗಿದ್ದವನಿಗೆ ಪತನವಿಲ್ಲವಷ್ಟೆ? ಹಾಗೆಯೇ ಸಂಗಪರಿತ್ಯಾಗದಿಂದ ಉತ್ತಮಸ್ಥಿತಿಯನ್ನು ಹೊಂದಿದ್ದ ಯತಿಯು, ತಿರುಗಿ ವಿಷಯಾಭಿಲಾಷೆಗೆ ಬಿದ್ದಾಗ ಪತಿತನೆನಿಸುವನು. ಗೃಹಸ್ಥನಾದರೋ ಮೊದಲಿಂದ ವಿಷಯೋಪಭೋಗದಲ್ಲಿಯೇ ಇರುವುದರಿಂದ, ಅವನಿಗೆ ಆ ವಿಷಯೋಪಭೋಗವು ದೋಷಾಸ್ಪದವಾಗದು. ವಿಷಯಾಸಕ್ತಿಯೆಂಬುದು ಸಕಲಪ್ರಾಣಿಗಳಿಗೂ ಜನ್ಮಸಿದ್ಧವಾದುದು. ಆ ವಿಷಯಾಸಕ್ತಿಯೇ ಅಧೋಗತಿಗೆ ಕಾರಣವು. ಆದುದರಿಂದ ಮನುಷ್ಯನು ಮೆಲ್ಲಮೆಲ್ಲಗೆ ಆ ವಿಷಯಸಂಗಗಳನ್ನು ತ್ಯಜಿಸುತ್ತಬರಬೇಕು. ಆದುದರಿಂದ ಮನುಷ್ಯನು ತನಗೆ ಯಾವಯಾವ ವಿಷಯದೊಡನೆ ಸಂಬಂಧವು ದೈವಿಕವಾಗಿ ತಪ್ಪಿಹೋಗುವುದೋ, ಅವುಗಳನ್ನು ತಿರುಗಿ ಸಮೀಪಕ್ಕೆ ಹೊದ್ದಿಸದೆ, ಸಂಪೂರ್ಣವಾಗಿ ಕಡೆಗಣಿಸುತ್ತಬರಬೇಕು! ವಿಷಯಪರಿತ್ಯಾಗವೇ ಮನುಷ್ಯನಿಗೆ ಶೋಕ, ಮೋಹ, ಭಯಾದಿಗಳನ್ನು ನೀಗಿಸಿ ಶ್ರೇಯಸ್ಸನ್ನುಂಟುಮಾಡತಕ್ಕ ಉತ್ತಮಧರ್ಮವು. ಶಬ್ದಾದಿವಿಷಯಗಳಲ್ಲಿ ಗುಣಭಾವನೆಯನ್ನಿಟ್ಟು ಅದನ್ನು ಚಿಂತಿಸುತ್ತಿರುವವನಿಗೆ ಅದರಲ್ಲಿಯೇ ಮನಸ್ಸು ತಗುಲಿರುವುದು. ಅದರಿಂದ ಹೇಗಾದರೂ ಆ ಇಷ್ಟವಿಷಯಗಳನನುಭವಿಸದೆ ತೀರದೆಂಬ ಕಾಮವು ಹುಟ್ಟುವುದು. ಆ ಕಾಮದಿಂದ ಬೇರೆಯವರೊಡನೆ ದ್ವೇಷವೂ, ಅದರಿಂದ ದುಸ್ಸಹವಾದ ಕ್ರೋಧವೂ, ಆ ಕ್ರೋಧದಿಂದ ಯುಕ್ತಾಯುಕ್ತವಿವೇಚನೆಯಿಲ್ಲದ ಸಂಮೋಹವೂ ಹುಟ್ಟುವುದು. ಆ ಸಮ್ಮೋಹದಿಂದ ಪುರುಷನಿಗೆ ಸಹಜಧರ್ಮವಾದ ಜ್ಞಾನವು ಸಂಕುಚಿತವಾಗುವುದು. ಉದ್ಧವಾ! ಹೀಗೆ ಜ್ಞಾನಶೂನ್ಯನಾದ ಜೀವನು, ಮೂರ್ಛಿತನಂತೆಯೂ, ಮೃತನಂತೆಯೂ, ಸ್ವಪರವಿವೇಕಜ್ಞಾನವೂ ಇಲ್ಲದೆ ಅಸತ್ಪ್ರಾಯನೆನಿಸುವನು. ಹೀಗೆ ವಿಷಯಾತುರನಾದವನು ತನ್ನನ್ನಾಗಲಿ, ಇತರರನ್ನಾಗಲಿ ತಿಳಿಯಲಾರದೆ, ಅಚೇತನಗಳಾದ ವೃಕ್ಷಗಳಂತೆ ಜೀವಿಸುತ್ತ, ಚರ್ಮದ ತಿತ್ತಿಯಂತೆ ವ್ಯರ್ಥವಾಗಿ ಉಸಿರಾಡಿಸುತ್ತಿರುವರು. ಉದ್ಧವಾ! ಶ್ರುತಿಗಳಲ್ಲಿ ಸ್ವರ್ಗಾದಿಫಲಗಳನ್ನು ಹೇಳಿದ್ದರೂ, ಅವು ಮನುಷ್ಯನಿಗೆ ಪುರುಷಾರ್ಥಗಳೆಂದು ಬೋಧಿಸುವ ಅಭಿ

ಪ್ರಾಯದಿಂದಲ್ಲ! ಮೋಕ್ಷದಲ್ಲಿ ರುಚಿಯನ್ನು ಹೆಚ್ಚಿಸುವುದಕ್ಕಾಗಿ ಈ ಅಲ್ಪ ಫಲಗಳನ್ನು ಹೇಳಬೇಕಾಯಿತು. ಇಹಲೋಕಸುಖಕ್ಕಿಂತಲೂ ಸ್ವರ್ಗಾದಿ ಸುಖಗಳಲ್ಲಿ ಅತಿಶಯವುಂಟೆಂದೂ, ಅದಕ್ಕಿಂತಲೂ ಅಪವರ್ಗಸುಖವು ಮೇಲೆಂದೂ, ಒಂದಕ್ಕೊಂದಕ್ಕೆ ಮೇಲ್ಮೆಯನ್ನು ತೋರಿಸಿ, ಇವೆಲ್ಲಕ್ಕಿಂತಲೂ ಮೋಕ್ಷಸುಖವು ನಿರತಿಶಯಪುರುಷಾರ್ಥವೆಂದು ಬೋಧಿಸಿ, ಅವುಗಳ ಪರಸ್ಪರತಾರತಮ್ಯವನ್ನು ತೋರಿಸಬೇಕೆಂಬುದೇ ಸ್ವರ್ಗಾದಿಫಲಗಳನ್ನು ಹೇಳಿದ ಉದ್ದೇಶವೆಂದು ತಿಳಿ! ಮತ್ತು ಮಕ್ಕಳಿಗೆ ಔಷಧವನ್ನು ಕುಡಿಸುವಾಗ, ಸಕ್ಕರೆ, ಬೆಲ್ಲ,'ಮೊದಲಾದ ಮಧುರಪದಾರ್ಥಗಳನ್ನು ಮುಂದಿಟ್ಟು ಆಸೆಯನ್ನು ತೋರಿಸುವರಲ್ಲವೆ? ಅಲ್ಲಿ ಆ ಮಗುವಿಗೆ ತಿನ್ನಿಸಬೇಕಾದ ಮುಖ್ಯವಸ್ತುವು ಔಷಧವೇಹೊರತು ಸಕ್ಕರೆಬೆಲ್ಲಗಳಲ್ಲ. ಹಾಗೆಯೇ ವೇದಗಳೂ, ಜನರಿಗೆ ಮೋಕ್ಷಸುಖದಲ್ಲಿ ಹೆಚ್ಚಾಗಿ ಅಭಿರುಚಿಯನ್ನು ಹುಟ್ಟಿಸುವುದಕ್ಕಾಗಿಯೇ ಈ ಸ್ವರ್ಗಾದಿಫಲಗಳನ್ನು ಹೇಳಿರುವುವು. ಸಮಸ್ತಜನರಿಗೂ ವಿಷಯಾಸಕ್ತಿಯೆಂಬುದು ಜನ್ಮಸಿದ್ಧವಾಗಿರುವುದು. ತಮ್ಮ ಶ್ರೇಯಸ್ಸನ್ನು ತಿಳಿಯದೆ, ಬಂಧಹೇತುಗಳಾದ ಆ ಕಾಮಾದಿಗಳಲ್ಲಿ ಮನಸ್ಸಿಟ್ಟು ಒಬ್ಬೊಬ್ಬರೂ ತಾವಾಗಿಯೇ ಸಂಸಾರಮಾರ್ಗವನ್ನವಲಂಬಿಸಿ ಕೊನೆಗೆ ಸ್ಥಾವರತ್ವವನ್ನೂ ಹೊಂದುವರು. ಹೀಗೆ ಜನರು ಸಹಜವಾಗಿಯೇ ಕೆಟ್ಟುಹೋಗುತ್ತಿರುವಾಗ, ವೇದಗಳು ಅವರಿಗೆ ಮತ್ತಷ್ಟು ದುರ್ಬೋಧನೆಯನ್ನು ಮಾಡಿ, ಅನರ್ಥಹೇತುಗಳಾದ ಕಾಮಗಳಲ್ಲಿಯೇ ಪ್ರವರ್ತಿಸುವಂತೆ ಮಾಡುವುವೆ? ಎಂದಿಗೂ ಇಲ್ಲ. ಲೋಕದ ಶ್ರೇಯಸ್ಸಿಗಾಗಿಯೇ ಪ್ರವರ್ತಿಸಿರುವಶ್ರುತಿಗಳು ಹಾಗೆ ಜನರಿಗೆ ಕಾಮಮಾರ್ಗದಲ್ಲಿ ಆಸೆಹುಟ್ಟಿಸುವಹಾಗಿದ್ದರೆ ಅದರಲ್ಲಿ ಯಾರಿಗೆ ನಂಬಿಕೆ ಹುಟ್ಟುತಿತ್ತು? ಆದುದರಿಂದ ವೇದತಾತ್ಪರ್ಯವನ್ನು ತಿಳಿದವರು, ವೇದೋಕ್ತಗಳಾದ ಸ್ವರ್ಗಾದಿಫಲಗಳಿಗೆ ಪ್ರಾಧಾನ್ಯವನ್ನು ಹೇಳಲಾರರು. ಪುಷ್ಪಗಳನ್ನು ಮಾತ್ರ ತೋರಿಸಿ, ಫಲಬಿಡದೆ ಇರುವ ವೃಕ್ಷಗಳಂತೆ ಆ ಫಲಶ್ರುತಿಗಳೆಲ್ಲವೂ, ಮೇಲೆಮೇಲೆ ಕಿವಿಗಿಂಪಾಗಿಮಾತ್ರ ತೋರತಕ್ಕವುಗಳೆಂಬುದನ್ನು ತತ್ವಜ್ಞರು ಚೆನ್ನಾಗಿ ಬಲ್ಲರು. ಕಾಮಿಗಳಾದರೋ ಸ್ವರ್ಗಾದಿಫಲಗಳಲ್ಲಿಯೇ ಆಸೆಯುಳ್ಳವರಾದುದರಿಂದ, ಕೇವಲ ಪುಷ್ಪಾಡಂ

ಬರವನ್ನೇ ಫಲವೆಂದು ಭ್ರಮಿಸತಕ್ಕ ಮೂಢರಂತೆ, ಸ್ವರ್ಗಾದಿಗಳನ್ನೇ ತಮಗೆ ಪುರುಷಾರ್ಥವೆಂದು ತಿಳಿದು, ಅಗ್ನಿಮೂಲಕವಾದ ಯಜ್ಞಾದಿಕರ್ಮಗಳಲ್ಲಿ ಪ್ರವರ್ತಿಸಿ, ಅನವರತವೂ ಹೊಗೆಯನ್ನು ಕುಡಿಯುತ್ತ, ಆ ಕರ್ಮಗಳಿಗಾಗಿ ಪಡಬಾರದ ಕಷ್ಟಗಳನ್ನನುಭವಿಸುವರು. ಹೀಗೆ ಕರ್ಮವಶರಾಗಿ, ಇಂದ್ರಿಯತೃಪ್ತಿಯಲ್ಲಿಯೇ ಆತುರವುಳ್ಳರು, ಕತ್ತಲೆ ಕವಿದಕಣ್ಣುಳ್ಳವರು ಸನ್ನಿಹಿತವಾದುದನ್ನೂ ತಿಳಿಯಲಾರದಂತೆ, ತಮ್ಮ ಹೃದಯದಲ್ಲಿಯೇ ಇರುವ ನನ್ನನ್ನಾಗಲಿ ತಮ್ಮ ಆತ್ಮಸ್ವರೂಪವನ್ನಾಗಲಿ ತಿಳಿಯಲಾರರು. ಎಲ್ಲರಿಗೂ ಸುಲಭಗ್ರಾಹ್ಯವಲ್ಲದ ಈ ಮತವನ್ನು ತಿಳಿಯದೆ, ಕೇವಲವಿಷಯಪ್ರವಣರಾದ ಕೆಲವುನಾಸ್ತಿಕರು, ಯಾಗವೆಂಬ ನೆಪದಿಂದ ವ್ಯರ್ಥವಾಗಿ ಪಶುಗಳನ್ನು ಕೊಲ್ಲುವುದುಂಟು. ಅಂತವರು ಮೃತಿಹೊಂದಿದಮೇಲೆ, ಇಲ್ಲಿ ಅವರಿಂದ ಕೊಲ್ಲಲ್ಪಟ್ಟ ಪಶುಗಳೇ, ಪರಲೋಕದಲ್ಲಿ ತೋಳ ಮೊದಲಾದ ಕ್ರೂರಮೃಗಗಳ ಸ್ವರೂಪದಿಂದ ಬಂದು, ಅವರನ್ನು ಬಾಧಿಸುವುವು. ಮಾಂಸಭಕ್ಷಣದಲ್ಲಿ ಆಸೆಯಿಂದ ಯಾಗವನ್ನೇ ನೆಪವಾಗಿಟ್ಟುಕೊಂಡು ಕ್ರೂರಕೃತ್ಯವನ್ನು ಮಾಡತಕ್ಕವರಿಗೆ, ಪ್ರಾಣಿಹಿಂಸೆಯೇ ಒಂದು ಮಹೋತ್ಸವದಂತಿರುವುದು. ತಮ್ಮ ಸುಖಕ್ಕಾಗಿ ಯಾಗವೆಂಬ ನೆಪದಿಂದ ಪಶುಗಳನ್ನು ಕೊಂದು, ದೇವತೆಗಳನ್ನೂ, ಪಿತೃಗಳನ್ನೂ, ಭೂತಪತಿಗಳನ್ನೂ ಯಜಿಸತಕ್ಕವರನ್ನು ಕ್ರೂರಕರ್ಮಿಗಳೆಂದು ಹೇಳುವುದರಲ್ಲಿ ಸಂದೇಹವೇನಿದೆ ? ಹೀಗೆ ನಾಸ್ತಿಕಬುದ್ಧಿಯಿಂದ ಯಜ್ಞಗಳನ್ನು ನಡೆಸತಕ್ಕವರ ಸಂಗತಿಯು ಹಾಗಿರಲಿ ! ಒಂದುವೇಳೆ ಆಸ್ತಿಕ್ಯಬುದ್ಧಿಯಿಂದಲೇ ಯಜ್ಞಗಳನ್ನು ನಡೆಸಿದರೂ, ಅದರಿಂದ ತಾನೇ ಅವರಿಗೆ ಯಾವಸುಖವುಂಟು ? ಲೋಭಬುದ್ಧಿಯುಳ್ಳ ಒಬ್ಬವರ್ತಕನು, ಇನ್ನೂ ವಿಶೇಷವಾಗಿ ಹಣವನ್ನು ಸಂಪಾದಿಸಬೇಕೆಂಬ ದುರಾಶೆಯಿಂದ, ಮೊದಲು ತಾನು ಗಳಿಸಿಟ್ಟ ಧನವನ್ನೆಲ್ಲಾ ಹಡಗಿನ ವ್ಯಾಪಾರದಲ್ಲಿಟ್ಟು ಸಮುದ್ರದಲ್ಲಿ ಹೋಗುತ್ತಿರುವಾಗ, ಆಕಸ್ಮಿಕವಾಗಿ ಆ ಹಡಗು ಮುಳುಗಿಹೋದರೆ ಅವನ ಗತಿಯೇನು ? ಅವನ ಆಸೆಗೂ ಭಂಗವಾಗಿ, ಮೊದಲಿದ್ದ ಹಣವೂ ಹೋದುದರಿಂದ ಉಭಯಭ್ರಷ್ಟನಾದನಲ್ಲವೆ ? ಹಾಗೆಯೇ ಕರ್ಮಫಲಗಳಲ್ಲಿ ಆಸೆಯುಳ್ಳವರು, ಸ್ವಪ್ನದಂತೆ ಅನಿತ್ಯ

ಗಳಾಗಿಯೂ, ಕಿವಿಯಿಂದ ಕೇಳುವಾಗಮಾತ್ರ ಆಸೆಹುಟ್ಟಿಸತಕ್ಕವುಗಳಾ
ಗಿಯೂ, ವಾಸ್ತವದಲ್ಲಿ ಅಸತ್ಪ್ರಾಯಗಳಾಗಿಯೂ ಇರುವ ಸ್ವರ್ಗಾದಿ
ಸುಖಗಳಿಗಾಗಿಯೂ, ಇತರಕಾಮಗಳಿಗಾಗಿಯೂ ಆಸೆಪಟ್ಟು, ತಮ್ಮಲ್ಲಿ
ರುವ ಧನವನ್ನೂ ಕಾಮಸಾಧಕಗಳಾದ ಯಜ್ಞಾದಿಕರ್ಮಗಳಿಗೆ ವಿನಿಯೋ
ಗಿಸಿ, ಕೊನೆಗೆ ಉಭಯಭ್ರಷ್ಟತೆಯಿಂದ ದುಃಖಕ್ಕೇ ಪಾತ್ರರಾಗುವರು.
ಉದ್ಧವಾ ! ಮುಖ್ಯವಾಗಿ, ರಜಸ್ಸು, ಸತ್ವ, ತಮಸ್ಸುಗಳೆಂಬ ಮೂರು
ಗುಣಗಳಲ್ಲಿ ಯಾರುಯಾರಿಗೆ ಯಾವಯಾವಗುಣವು ಸಹಜವೋ, ಅವರು
ಆಯಾಗುಣಕ್ಕೆ ತಕ್ಕತಕ್ಕ ಕರ್ಮಗಳಲ್ಲಿಯೇ ನಿರತರಾಗಿ, ತಮ್ಮ ಗುಣಗಳಿಗೆ
ಅನುರೂಪರಾದ ಇಂದ್ರಾದಿದೇವತೆಗಳನ್ನೇ ಉಪಾಸಿಸುವರು. ಹಾಗೆ
ಇಂದ್ರಾದಿಗಳನ್ನು ಉಪಾಸನೆಮಾಡಿದರೂ, ಅವರನ್ನೂ ಭಗವದಾತ್ಮಕ
ರೆಂದೇ ಭಾವಿಸಿ ನಡೆಸಿದರೆ ಅದು ಸರಿಯಾದ ಉಪಾಸನವೆನಿಸಿಕೊಂಡು
ಫಲಕಾರಿಯಾಗಬಹುದು. ಹಾಗಿಲ್ಲದಿದ್ದರೆ ಅವರು ನಡೆಸತಕ್ಕ ಉಪಾಸ
ನವು ಯಥಾಯೋಗ್ಯವಾದುದಲ್ಲ. ನನ್ನನ್ನು ಸಾಕ್ಷಾತ್ತಾಗಿಯೂ ಅವರು
ಉಪಾಸಿಸತಕ್ಕವರಲ್ಲ. ಆದರೆ ಆಕಾಮ್ಯಕರ್ಮಗಳಲ್ಲಿ ಬಿದ್ದವರಮನೋರಥಗ
ಳಾದರೋ ಅಪಾರವಾಗಿರುವುವು. ಅವರು ಕರ್ಮಗಳನ್ನಾರಂಭಿಸುವಾಗಲೇ
ತಮ್ಮಲ್ಲಿ ತಾವು “ಇಲ್ಲಿ ನಾವು ಈ ಯಜ್ಞಾದಿಕರ್ಮಗಳಿಂದ ದೇವತೆಗಳ
ನ್ನಾರಾಧಿಸಿದರೆ, ಸ್ವರ್ಗಕ್ಕೆ ಹೋಗಿ ಅಲ್ಲಿ ಬೇಕಾದ ಭೋಗಗಳನ್ನನುಭವಿಸ
ಬಹುದು. ಆ ಭೋಗವು ತೀರಿದಮೇಲೆ ತಿರುಗಿ ಇಹಲೋಕಕ್ಕೆ ಬಂದರೂ
ನಮಗೆ ಕೊರತೆಯೇನೂ ಇರದು. ದೊಡ್ಡಮನೆತನದಲ್ಲಿಹುಟ್ಟಿ, ದೊಡ್ಡ
ಗೃಹಾಧಿಪತಿಗಳಾಗಿದ್ದು, ತಿರುಗಿ ಕರ್ಮಗಳನ್ನು ನಡೆಸಿ, ತಿರುಗಿ ಸ್ವರ್ಗಸುಖ
ವನ್ನನುಭವಿಸಬಹುದು.” ಎಂಬಿವೇ ಮೊದಲಾಗಿ, ಕರ್ಮಕಾಂಡದಲ್ಲಿ ಪ್ರತಿ
ಪಾದಿಕಗಳಾದ ಕರ್ಮಫಲಗಳಿಗೆ ಮರುಳಾಗಿ,ಆ ವ್ಯರ್ಥಮನೋರಥಗಳಿಂದಲೇ
ಹಿಗ್ಗುತ್ತ, ತಮಗೆ ಸಮಾನರಿಲ್ಲವೆಂದು ಹೆಮ್ಮೆಯಿಂದ ಬೀಗುತ್ತಿರುವರು.
ಇಂತವರಿಗೆ ನನ್ನ ವಿಷಯವಾದ ಮಾತೇ ರುಚಿಸದು. ಹೀಗಿರುವಾಗ ಅವರಿಗೆ
ಸಂಸಾರಬಂಧದಿಂದ ವಿಮೋಚನವಾಗುವ ಬಗೆಯೇನು ? ವೇದಗಳು ಕರ್ಮ
ಕಾಂಡ, ಜ್ಞಾನಕಾಂಡ, ಬ್ರಹ್ಮಕಾಂಡಗಳೆಂಬ ಮೂರುಬಗೆಯ ವಿಷಯ

ವಿಭಾಗಗಳನ್ನೊಳಕೊಂಡಿದ್ದರೂ, ಆ ವೇದಗಳೆಲ್ಲವೂ ಸಾಕಲ್ಯವಾಗಿ ಸರ್ವಾಂತರಾತ್ಮನಾದ ಪರಬ್ರಹ್ಮನನ್ನೇ ವಿಷಯೀಕರಿಸುತ್ತಿರುವೆಂದು ತಿಳಿಯ ಬೇಕು. ಹೇಗೆಂದರೆ, ಅವು ಮುಖ್ಯವಾಗಿ ಪರಬ್ರಹ್ಮನನ್ನುಮಾತ್ರವೇ ಅಲ್ಲದೆ, ಅವನ ಗುಣಗಳನ್ನೂ, ಅವನ ವಿಭೂತಿಗಳನ್ನೂ, ಆ ಬ್ರಹ್ಮಪ್ರಾಪ್ತಿಗೆ ಉಪಾಯಗಳನ್ನೂ, ಉಪೇಯಸ್ವರೂಪವನ್ನೂ, ಉಪೇತೃಸ್ವರೂಪವನ್ನೂ ವಿವರಿಸುವುವು. ಆದರಿಂದ ಆ ವೇದವಾಕ್ಯಗಳೆಲ್ಲವೂ ಬಹ್ಮವಿಷಯವಾದುದೆಂ ದೇಗ್ರಾಹ್ಯವು. ಆದರೆ ಆ ವೇದಗಳ ಮುಖ್ಯಾಭಿಪ್ರಾಯಗಳು ಸುಲಭವಾಗಿ ಎಲ್ಲರಿಗೂ ತಿಳಿಯಲಾರದು ಹಾಗೆ ವೇದಾರ್ಥಗಳು ಗೂಢವಾಗಿರಬೇಕೆಂಬುದೇ ನನಗೂ ಅಭಿಮತವು. ಏಕೆಂದರೆ, ಶುದ್ಧಾಂತಃಕರಣರಾದ ಸಜ್ಜನರಿಗೆಮಾತ್ರ ಅದು ತಿಳಿಯತಕ್ಕುದೇಹೊರತು ಅನಧಿಕಾರಿಗಳಿಗಲ್ಲ. ಅನಧಿಕಾರಿಗಳು ಅದನ್ನು ತಿಳಿದುಕೊಳ್ಳುವುದರಿಂದ, ಅವರು, ಅದನ್ನೇ ಪ್ರಮಾಣವಾಗಿಟ್ಟುಕೊಂಡು ಮನಶ್ಶುದ್ಧಿಯಿಲ್ಲದೆ,ಕರ್ಮತ್ಯಾಗವನ್ನು ಮಾಡಿ ಕರ್ಮಭ್ರಷ್ಟರಾಗುವರು. ಶಬ್ದ ಬ್ರಹ್ಮವೆನಿಸಿಕೊಂಡ ವೇದಸ್ವರೂಪವು ಸಮುದ್ರದಂತೆ ದುರವಗಾಹವಾ ಗಿಯೂ, ಅಪಾರವಾಗಿಯೂ ಇರುವುದು. ಮನಃಪ್ರಾಣಗಳಿಂದ ಸಹಕರಿ ಸಲ್ಪಟ್ಟ ವಾಗಿಂದ್ರಿಯದ ಉಚ್ಚಾರಣರೂಪವಾದುದು. ಯುಕ್ತಿಗಳಿಂದ ನಿರೂಪಿಸಲಸಾಧ್ಯವಾದುದು. ಅನಂತಶಕ್ತಿಯುಳ್ಳ ಪರಬ್ರಹ್ಮನಾದ ನನ್ನಿಂದಲೇ ಲೋಕಕ್ಕೆ ವಿಸ್ತರಿಸಲ್ಪಟ್ಟಿರುವುದು. ತಾವರೆದಂಟಿನಲ್ಲಿ ನೂಲೆಳೆ ಗಳು ಹೇಗೋಹಾಗೆ, ಶಬ್ದವೆಂಬುದು ಪ್ರಾಣಿಗಳಲ್ಲಿ ಪ್ರಾಣವಾಯುವಿನ ಘೋಷರೂಪದಿಂದ ಅತಿಸೂಕ್ಷ್ಮವಾಗಿ ತೋರುತ್ತಿರುವುದು. ಕಿವಿಗಳೆರಡ ನ್ನೂ ಮುಚ್ಚಿಕೊಂಡು ಗಮನಿಸಿದಾಗ ಆ ಪ್ರಾಣಘೋಷವು ಆವರವರಿಗೇ ವ್ಯಕ್ತವಾಗುವುದು. ಜೇಡರ ಹುಳುಗಳು, ತಮ್ಮ ಹೃದಯದಿಂದ ಮುಖದ್ವಾ ರದಮೂಲಕವಾಗಿ ನೂಲನ್ನು ಹೊರಕ್ಕೆ ಬಿಡುವಂತೆ, ಮನುಷ್ಯನು ಶಬ್ದೋ ಚ್ಚಾರಣಮಾಡುವಾಗ, ಘೋಷವಿಶಿಷ್ಟವಾದ ಆ ಪ್ರಾಣವಾಯುವು, ನಾಭಿ ಯಿಂದ ಎದೆಯವರೆಗಿರುವ ರಂಧ್ರದಿಂದ, ಮನಸ್ಸಿನೊಡನೆ ಮೇಲೆ ಹೊರಟು, ಎದೆ, ಕಂಠ, ಮುಂತಾದ ಸ್ಥಾನಗಳನ್ನು ಮುಟ್ಟುತ್ತ ಬಂದು ವಾಗ್ರೂಪದಿಂದ ವ್ಯಕ್ತವಾಗುವುದು. ಹೀಗೆ ದೇಹೇಂದ್ರಿಯಾದಿಗಳನ್ನು

ಥರಿಸಿರತಕ್ಕ ಪ್ರಾಣವಾಯುವೇ ವಾಗಿಂದ್ರಿಯದಮೂಲಕವಾಗಿ ಛಂದೋಮಯವಾಗಿಯೂ, ಅಮೃತಮಯವಾಗಿಯೂ ಹೊರಬಿದ್ದು, ನಾನಾಬಗೆಯ ಶ್ರೇಯೋಮಾರ್ಗಗಳನ್ನು ನಿರೂಪಿಸತಕ್ಕ ವೇದವಾಕ್ಯವನ್ನು ವ್ಯಕ್ತಗೊಳಿಸುವುದು. ಇದು, ಶಬ್ದಬ್ರಹ್ಮಾತ್ಮಕವಾದುದರಿಂದ ಬೃಹತಿಯೆನಿಸುವುದು.ಓಂಕಾರವೆಂಬ ಪ್ರಣವಾಕ್ಷರವನ್ನೇಬೀಜವಾಗಿ ಉಳ್ಳ ಸ್ವರಗಳು,ಸ್ಪರ್ಶಾಕ್ಷರಗಳು, ಊಷ್ಮವರ್ಣಗಳು, ಅಂತಸ್ಥಗಳು ಮೊದಲಾದ ಎಲ್ಲಾವರ್ಣಗಳಿಂದ ಭೂಷಿತವಾಗಿಯೂ,ನಾನಾಬಗೆಯ ಶ್ರುತಿಭೇದಗಳಿಂದ ವಿಸ್ತೃತವಾಗಿಯೂ, ಕೊನೆಮೊದಲಿಲ್ಲದುದಾಗಿಯೂ, ನಾಲ್ಕುನಾಲ್ಕು ವರ್ಣಗಳಿಂದ ಕ್ರಮವಾಗಿ ಹೆಚ್ಚುತ್ತಿರುವ ಗಾಯತ್ರಿ ಮೊದಲಾದ ವಿವಿಧಛಂದಸ್ಸುಗಳುಳ್ಳುದಾಗಿಯೂ ಇರುವ ವೇದವನ್ನು, ಪ್ರಾಣವಾಯುವೇ ಹೀಗೆ ತನ್ನ ವ್ಯಾಪಾರದಿಂದ ಆಗಾಗ ಹೊರಕ್ಕೆ ಕಾಣಿಸುತ್ತ, ಆಗಾಗ ತನ್ನಲ್ಲಿಯೇ ಉಡುಗಿಸಿಟ್ಟುಕೊಳ್ಳುವುದು. ಉದ್ಧವಾ! ಮೇಲೆ ಹೇಳಿದಂತೆ ಚತುರ್ವರ್ಣೋತ್ತರಗಳಾದ ಛಂದಸ್ಸುಗಳಲ್ಲಿ,ಗಾಯತ್ರಿ, ಉಷ್ಣಿಕು, ಅನುಷ್ಟುಭ್, ಬೃಹತಿ, ಪಙ್ಕ್ತಿ, ತ್ರಿಷ್ಟುಭ್, ಜಗತಿ, ಅತಿಚ್ಛಂದಸ್ಸು, ಅತ್ಯಷ್ಟಿ, ಅತಿಜಗತಿ, ವಿರಾಟ್ಟೆಂಬ ಭೇದಗಳುಂಟು. ಶಬ್ದಬ್ರಹ್ಮಾತ್ಮಕವಾದ ಆ ವೇದವು ಯಾವುದನ್ನು ವಿಧಿಸುವುದೋ, ಯಾವ ತತ್ವವನ್ನು ವಿವರಿಸುವುದೋ, ಯಾವುದನ್ನು ಅನುವಾದಮಾಡುವುದೋ, ಯಾವ ಅರ್ಥವನ್ನು ವಿಕಲ್ಪಿಸುವುದೋ, ಆ ಮರ್ಮಗಳನ್ನೆಲ್ಲಾ ನಾನೊಬ್ಬನು ಹೊರತು ಬೇರೆ ಯಾರೂ ತಿಳಿಯಲಾರರು. ಆ ವೇದಗಳ ಹೃದಯವನ್ನು ಚೆನ್ನಾಗಿಬಲ್ಲವನು. ನಾನೊಬ್ಬನೇ. ಮುಖ್ಯವಾಗಿ ವೇದಗಳ ಮುಖ್ಯತಾತ್ಪರ್ಯವೆಲ್ಲವೂ ಇಷ್ಟೇ! ಅದು ವಿಧಿಸತಕ್ಕ ಧರ್ಮಗಳೆಲ್ಲವೂ ನನ್ನ ಆರಾಧನರೂಪವಾದುದು. ಅದರೊಳಗಿನ ವಾಕ್ಯಗಳೆಲ್ಲವೂ ಸರ್ವಶರೀರಕನಾದ ನನ್ನನ್ನೇ ವಿಷಯೀಕರಿಸುತ್ತಿರುವುವು. ಆ ವೇದಗಳು ವಿಕಲ್ಪಿಸಿ ಅಪವದಿಸತಕ್ಕ ವಿಷಯಗಳೂ ನಾನೇ! ಇನ್ನು ಹೆಚ್ಚು ಮಾತಿನಿಂದೇನು ?ಮೊತ್ತಕ್ಕೆ ವೇದದ ತಾತ್ಪರ್ಯಾರ್ಥವೇನೆಂದರೆ ಆವೇದಗಳು ಒಂದೊಂದುವಾಕ್ಯದಿಂದಲೂ ನನ್ನನ್ನೇ ವಿಷಯೀಕರಿಸುತ್ತ, ದೇವಮನುಷ್ಯಾದ್ಯಾಕಾರಗಳೆಲ್ಲವೂ ಪ್ರಕೃತಿಪರಿಣಾಮರೂಪಗಳೆಂದೂ,

ಜೀವನಿಗೆ ಆ ಭೇದಗಳಿಲ್ಲವೆಂದೂ ಅನುವಾದಿಸಿ, ಕೊನೆಗೆ ಆ ಜೀವನಿಗುಂಟಾಗತಕ್ಕ ವಿಕಾರಗಳೂ ನನಗಿಲ್ಲವೆಂಬುದನ್ನೂ ಪ್ರತಿಪಾದಿಸಿ, ತನ್ನ ವ್ಯಾಪಾರದಿಂದ ವಿರಮಿಸುವುವು. ಇದೇ ವೇದಗಳ ಮುಖ್ಯತಾತ್ಪರ್ಯವು." ಎಂದನು. ಇದು ಇಪ್ಪತ್ತೊಂದನೆಯ ಅಧ್ಯಾಯವು.

---

## ತತ್ವಸಂಖ್ಯಾನಿರೂಪಣವು

ಉದ್ಧವನು ಪ್ರಶ್ನಮಾಡುವನು. "ಓ ವಿಶ್ವೇಶ್ವರಾ! ಕಷ್ಣಾ! ತತ್ವಗಳೆಷ್ಟು? ಕೆಲವು ಮಹರ್ಷಿಗಳು ಒಂಬತ್ತುತತ್ವಗಳೆಂದೂ, ಬೇರೆ ಕೆಲವರು ಹನ್ನೊಂದು ತತ್ವಗಳೆಂದೂ, ಇನ್ನು ಕೆಲವರು ಐದೇ ತತ್ವಗಳೆಂದೂ ಹೇಳಿರುವರು. ನೀನಾದರೋ ಈಗ ಮೂರೇ ತತ್ವಗಳೆಂದು ಹೇಳುತ್ತಿರುವೆ. ಈ ತತ್ವಸಂಖ್ಯೆಯವಿಷಯವಾಗಿ ಇನ್ನೂ ಅನೇಕಭಿನ್ನಾಭಿಪ್ರಾಯಗಳನ್ನು ಕೇಳಿರುವೆನು. ಕೆಲವರು ಇಪ್ಪತ್ತಾರುತತ್ವಗಳೆನ್ನುವರು. ಕೆಲವರು ಇಪ್ಪತ್ತೈದೆಂದು ನಿರ್ಣಯಿಸಿರುವರು. ಹಾಗೆಯೇ ಕೆಲವರು ಆರು ತತ್ವಗಳೆಂದೂ, ಕೆಲವರು ಏಳುತತ್ವಗಳೆಂದೂ, ಕೆಲವರು ನಾಲ್ಕೇ ತತ್ವಗಳೆಂದೂ ಹೇಳುವರು. ಬೇರೆ ಕೆಲವರು ಹದಿನೇಳುತತ್ವಗಳೆಂದು ಹೇಳುವರು. ಕೆಲವರು ಹದಿನಾರೆಂದು ನಿರ್ಣಯಿಸುವರು. ಮತ್ತೆ ಕೆಲವರು ಹದಿಮೂರೆಂದು ಹೇಳುವರು. ಋಷಿಗಳು ಹೀಗೆ ತತ್ವಸಂಖ್ಯೆಯನ್ನು ಬೇರೆಬೇರೆ ವಿಧವಾಗಿ ಹೇಳುವ ಉದ್ದೇಶವೇನು? ಇದರ ನಿರ್ಣಯವನ್ನು ನನಗೆ ತಿಳಿಸಬೇಕು." ಎಂದನು. ಅದಕ್ಕಾ ಕೃಷ್ಣನು "ಉದ್ಧವಾ! ಕೇಳು. ಮೇಲೆ ಹೇಳಿದಂತೆ ಋಷಿಗಳು ನಿರೂಪಿಸಿರುವ ಎಲ್ಲಾಪಕ್ಷಗಳೂ ಯುಕ್ತಿಯುಕ್ತಗಳಾಗಿಯೇ ಇರುವುವು. ಸಮಸ್ತತತ್ವಗಳಿಗೂ ಮೂಲಕಾರಣವು ನನ್ನ ಮಾಯೆಯೇ! ಆ ಮಾಯೆಯಿಂದ ಹುಟ್ಟಿದ ತತ್ವಗಳನ್ನು ಅನೇಕವಾಗಿ ವಿಭಾಗಿಸಿ, ಹೆಚ್ಚುಸಂಖ್ಯೆಯನ್ನು ತೋರಿಸಿದರೂ, ಮುಖ್ಯವಿಭಾಗಗಳಿಂದ ಸ್ವಲ್ಪಸಂಖ್ಯೆಯನ್ನು ತೋರಿಸಿದರೂ ವಿರೋಧವೇನೂ ಬಾರದು. ಆದುದರಿಂದ,ನೀನು ತತ್ವಗಳವಿಷಯವಾಗಿ ಅವರವರು ಹೇಳಿದ ಸಂಖ್ಯಾಭೇದಗಳನ್ನು ವಿರುದ್ಧವಾಗಿ ಗ್ರಹಿಸಬಾರದು. ಆ ಸಂಖ್ಯಾಭೇದಗಳಲ್ಲಿ ವಿರೋಧವಿಲ್ಲವೆಂ

ಬುದನ್ನು ಈಗ ನಿನಗೆ ಸ್ಪಷ್ಟವಾಗಿ ತೋರಿಸುವೆನು ನೋಡು. ದುರತಿಕ್ರ ಮಗಳಾದ ನನ್ನ ಶಕ್ತಿಯೇ ಹೀಗೆ ಪ್ರಕೃತಿ ಮಹದಹಂಕಾರಾದಿರೂಪದಿಂದ ಅನೇಕವಿಧವಾಗಿ ಪ್ರಸರಿಸಿ, ಈ ವಿಧವಾದ ವಾದಗಳಿಗೆಲ್ಲಾ ಮೂಲವಾಗಿರು ವುದೆಂಬುದನ್ನು ಎಲ್ಲರೂ ಒಪ್ಪಿಕೊಂಡೇ ತೀರಬೇಕು. ಈ ಶಕ್ತಿಗಳೇ ಒಂದು ಸ್ಥಿತಿಯಲ್ಲಿ ಒಂದರಲ್ಲೊಂದು ಅಂತರ್ಭೂತವಾಗಿಯೂ, ಮತ್ತೊಂದುದಶೆ ಯಲ್ಲಿ ಬೇರಾಗಿಯೂ ಇರುವುದರಿಂದ, ಅವರವರಿಗೆ ತೋರಿದಂತೆ ಪಕ್ಷಭೇದ ಗಳು ಹೊರಟಿರುವುವು. ಶಮದಮಾದಿಗುಣವುಳ್ಳವನಿಗೆ ಜಗತ್ತೆಲ್ಲವೂ ಮ ದಾತ್ಮಕವಾಗಿಯೇ ತೋರುವುದರಿಂದ, ಅಂತವನಲ್ಲಿ ಮೇಲೆಹೇಳಿದ ವಿಕಲ್ಪ ವಾಗಲಿ,ತನ್ಮೂಲಕಗಳಾದ ವಾದಗಳಾಗಲಿ ತಲೆದೋರಲಾರವು ತತ್ವಗಳು ಒಂದರಲ್ಲಿ ಮತ್ತೊಂದು ಅಡಗಿರುವುದರಿಂದ, ವಾದಿಗಳು ತಮ್ಮತಮ್ಮ ಮನೋಭಾವನೆಗೆ ತಕ್ಕಂತೆ ವಿಭಾಗಿಸಿ, ಅವುಗಳ ಸಂಖ್ಯೆಯನ್ನು ಹೆಚ್ಚಿಸಿ ಯೂ, ತಗ್ಗಿಸಿಯೂ ಹೇಳುವರು, ಪಾರ್ಥಿವದ್ರವ್ಯವಾದ ಕಟ್ಟಿಗೆಯಲ್ಲಿ, ಬೆಂಕಿ, ನೀರು ಮೊದಲಾದ ಇತರದ್ರವ್ಯಗಳು ಕಲೆತಿರುವಂತೆ, ಒಂದು ತತ್ವ ದಲ್ಲಿ ಬೇರೆ ಹಲವು ತತ್ವಗಳು ಅಂತರ್ಭೂತವಾಗಿರುವುದುಂಟು. ಇದೂ ಅಲ್ಲದೆ ತತ್ವಗಳೆಲ್ಲವೂ ಒಂದರಿಂದೊಂದು ಹುಟ್ಟಿದುವುಗಳಾದುದರಿಂದ, ಕಾರಣಭೂತವಾದ ತತ್ವದಲ್ಲಿಯಾಗಲಿ, ಕಾರ್ಯಭೂತವಾದ ತತ್ವದಲ್ಲಿಯಾಗ ಲಿ, ಬೇರೆ ಎಲ್ಲಾತತ್ವಗಳ ಅಂಶವೂ ಅಂತರ್ಗತವಾಗಿಯೇ ಇರುವುದು. ಆದುದರಿಂದ ಈ ತತ್ವಗಳನ್ನು ಅನೇಕರು ಅವರವರ ಇಷ್ಟಾನುಸಾರವಾಗಿ ವಿಭಾಗಿಸಿ, ನ್ಯೂನಾಧಿಕಸಂಖ್ಯೆಗಳನ್ನು ಹೇಳಿರುವರು ಆದರೇನು? ಯು ಕ್ತಿಯಿಂದ ಅವರವರ ಮತಗಳನ್ನೇ ಸರಿಯೆಂದು ಸಮರ್ಥಿಸಬಹುದು. ಹೇ ಗೆಂದರೆ, ಪ್ರಧಾನವಾದ ಒಂದು ತತ್ವದಲ್ಲಿ ಇತರತತ್ವಗಳನ್ನಡಗಿಸಿ ಹೇಳು ವುದರಿಂದ ಸಂಖ್ಯೆಯು ತಗ್ಗುವುದು. ಅವುಗಳನ್ನೇ ಪ್ರತ್ಯೇಕಿಸಿ ಹೇಳುವಾಗ ಸಂಖ್ಯೆಯು ಹೆಚ್ಚುವುದು. ಇದೇರೀತಿಯಾಗಿ ಎಲ್ಲರ ಪಕ್ಷವನ್ನೂ ಸಮರ್ಥಿಸ ಬಹುದು.

ಇವುಗಳಲ್ಲಿ ಇಪ್ಪತ್ತಾರುತತ್ವಗಳೆಂದು ಹೇಳುವವರು, ಪ್ರಕೃತಿ ಮೊದಲಾದ ಇಪ್ಪತ್ತುನಾಲ್ಕುತತ್ವಗಳೊಡನೆ ಜೀವೇಶ್ವರರೆಂಬ ಎರಡು

ತತ್ವಗಳನ್ನು ಸೇರಿಸಿ ಇಪ್ಪತ್ತಾರುಸಂಖ್ಯೆಯನ್ನು ತೋರಿಸುವರು. ಜೀವೇ ಶ್ವರರನ್ನು ಪ್ರತ್ಯೇಕತತ್ವಗಳಾಗಿ ಹೇಳುವುದಕ್ಕೆ ಇವರು ತೋರಿಸುವ ಕಾ ರಣಗಳೇನೆಂದರೆ, ಜೀವನು ಅನಾದಿಯಾಗಿ ಅವಿದ್ಯೆಯಿಂದ ಆವರಿಸಲ್ಪಟ್ಟ ವನು. ಈಶ್ವರನಾದರೋ ಸ್ವತಃ ಸರ್ವಜ್ಞನು. ಹೀಗೆ ಅವಿದ್ಯೆಯಿಂದ ದೇಹಾತ್ಮಭ್ರಮವುಳ್ಳ ಜೀವನಿಗೆ ಆತ್ಮಸ್ವರೂಪಜ್ಞಾನವು ಆ ಈಶ್ವರಾ ನುಗ್ರಹದಿಂದ ಲಭಿಸಬೇಕಲ್ಲದೆ ಸ್ವತಃ ಸಂಭವಿಸದು ಈಶ್ವರನು ಸರ್ವವಿಷ ಯದಲ್ಲಿಯೂ ತಾನೇ ಪ್ರಾಜ್ಞನಾಗಿರುವನಲ್ಲದೆ, ಜೀವನಿಗೆ ಜ್ಞಾನಪ್ರದಾ ನವನ್ನೂ ಮಾಡಬಲ್ಲನು. ಆದುದರಿಂದ ಜೀವೇಶ್ವರರಿಬ್ಬರನ್ನೂ ಪ್ರತ್ಯೇಕ ತತ್ವಗಳನ್ನಾಗಿಯೇ ಹೇಳಬೇಕೆಂಬುದು ತತ್ವಗಳನ್ನು ಇಪ್ಪತ್ತಾರೆಂದು ಹೇ ಳುವವರ ಪಕ್ಷವು.

ಇಪ್ಪತ್ತೈದು ತತ್ವಗಳೆಂದು ಹೇಳುವವರು, ಜೀವೇಶ್ವರರಿಬ್ಬರನ್ನೂ ಒಂದೇತತ್ವವನ್ನಾಗಿ ಸೇರಿಸಿ ಹೇಳುವರು. ಹೀಗೆ ಒಂದೇ ತತ್ವವನ್ನಾಗಿ ಹೇಳುವುದಕ್ಕೆ ಇವರು ನಿರೂಪಿಸುವ ಕಾರಣವೇನೆಂದರೆ, ಜೀವೇಶ್ವರರಿಗೆ ಅಜ್ಞತ್ವಪ್ರಾಜ್ಞತ್ವಗಳೆಂಬ ವೈಧರ್ಮ್ಯವಿದ್ದರೂ, ಸ್ವರೂಪಸ್ವಭಾವಾದಿಗ ಳಲ್ಲಿ ವೈಲಕ್ಷಣ್ಯವೇನೂ ಇಲ್ಲವುದರಿಂದ, ಜೀವೇಶ್ವರರನ್ನು ಪ್ರತ್ಯೇಕಿಸಿ ಹೇಳುವುದು ಯುಕ್ತವಲ್ಲ. ಜೀವನಿಗೆ ಅಜ್ಞಾನವೆಂಬುದು ಪ್ರಕೃತಿಸಂಬಂಧ ದಿಂದ ಆಗಂತುಕವಾಗಿ ಬರುವುದೇಹೊರತು ಸಹಜವಲ್ಲ. ಇದಲ್ಲದೆ ಮುಕ್ತಿ ದಶೆಯಲ್ಲಿ ಜೀವನಿಗೆ ಈಶ್ವರನೊಡನೆ ಸಾಮ್ಯವುಂಟಾಗುವುದು. ಮತ್ತು ಜೀ ವನು ಪರಮಾತ್ಮನಿಗೆ ಶರೀರಭೂತನಾದುದರಿಂದ, ಪರಮಾತ್ಮನ ಅಂಶವೆನಿ ಸುವನು. ಆದುದರಿಂದ ಜೀವೇಶ್ವರರಿಬ್ಬರನ್ನೂ ಒಂದೇ ತತ್ವವನ್ನಾಗಿ ಸೇರಿ ಸಬೇಕೆಂದು ನಿರೂಪಿಸಿ, ಇಪ್ಪತ್ತೈದುತತ್ವಗಳೆಂದು ಹೇಳುವರು. “ಆದರೆ ಜೀವನಿಗೆ ಸತ್ವಾದಿಗುಣಗಳಿಂದುಂಟಾದ ವೈಷಮ್ಯವುಂಟು? ಈಶ್ವರನಿಗೆ ಅದಿಲ್ಲದುದರಿಂದ ಈ ಭಾಗದಲ್ಲಿಯಾದರೂ ಜೀವೇಶ್ವರರಿಗೆ ವೈಲಕ್ಷಣ್ಯ ವಿದ್ದೇ ಇರಬೇಕಲ್ಲವೆ?” ಎಂದರೆ, ಸತ್ವಾದಿಗುಣಗಳ ಸಾಮ್ಯಾವಸ್ಥೆಯುಳ್ಳ ಅಚಿದ್ದ್ರವ್ಯವೇ ಪ್ರಕೃತಿಯೆನಿಸುವುದು. ಸೃಷ್ಟಿ ಸ್ಥಿತಿ ಲಯ ಕಾರಣಗ ಳಾದ ಆ ಮೂರುಗುಣಗಳೂ ಪ್ರಕೃತಿಗೆ ಸಂಬಂಧಿಸಿದುವೇ ಹೊ

ರತು ಆತ್ಮನಿಗಲ್ಲ. ಇವುಗಳಲ್ಲಿ ಸತ್ವಗುಣವು ಜ್ಞಾನಕ್ಕೂ, ರಜೋಗುಣವು ಕರ್ಮಕ್ಕೂ, ತಮೋಗುಣವು ಅಜ್ಞಾನಕ್ಕೂ ಮೂಲವೆನಿಸಿರುವುದು. ಜೀವನಿಗೆ ಈ ಪ್ರಕೃತಿಗುಣಗಳ ಕಾರ್ಯದಿಂದಲೇ ಜ್ಞಾನಾಜ್ಞಾನಕರ್ಮಾದಿಗಳ ಸಂಬಂಧವುಂಟಾಗುವುದರಿಂದಲೂ, ಅದಿಲ್ಲದಿದ್ದಾಗ ಈಶ್ವರನೊಡನೆ ಸ್ವರೂಪ ಸಾಮ್ಯವಿರುವುದರಿಂದಲೂ ಜೀವೇಶ್ವರರಿಬ್ಬರನ್ನೂ ಒಂದೇ ತತ್ವವಾಗಿ ಹೇಳಬೇಕೆಂಬುದು ಇಪ್ಪತ್ತೈದುತತ್ವಗಳೆಂದು ನಿರ್ಣಯಿಸಿದವರ ಅಭಿಪ್ರಾಯವು.

ತತ್ವಗಳ ಸಂಖ್ಯೆಯನ್ನು ಇಪ್ಪತ್ತೇಳೆಂದು ಹೇಳುವವರು, ಪ್ರಕೃತಿ ಮೊದಲಾದ ಇಪ್ಪತ್ತುನಾಲ್ಕು ತತ್ವಗಳೊಡನೆ, ಜೀವೇಶ್ವರರನ್ನೂ, ಕಾಲವನ್ನೂ, ಪ್ರತ್ಯೇಕವಾಗಿ ಸೇರಿಸಿ, ಇಪ್ಪತ್ತೇಳುತತ್ವಗಳೆಂದು ಹೇಳುವರು. ಸತ್ವಾದಿಗುಣಗಳನ್ನು ಕದಲಿಸತಕ್ಕುದು ಕಾಲವು. ಸಮಸ್ತಪದಾರ್ಥಗಳಿಗೂ ಕಾಲಸಂಬಂಧವು ನಿಯತವಾದುದರಿಂದಲೂ, ದ್ರವ್ಯಗಳ ಸ್ಥಿತಿಗತಿಗಳಿಗೂ ಕಾಲವೇ ಕಾರಣವಾದುದರಿಂದಲೂ, ಆ ಕಾಲವು ಸ್ವಭಾವವೆಂದೂ, ಸೂತ್ರವೆಂದೂ ವ್ಯವಹರಿಸಲ್ಪಡುವುದು ಆದುದರಿಂದ ಈ ಕಾಲವನ್ನೂ ಪ್ರತ್ಯೇಕತತ್ವವಾಗಿ ಗ್ರಹಿಸಿ ಇಪ್ಪತ್ತೇಳುತತ್ವಗಳೆಂದು ಹೇಳುವರು.

ಒಂಬತ್ತೇ ತತ್ವಗಳೆಂದು ಹೇಳುವವರು, ಪುರುಷನು, ಪ್ರಕೃತಿ, ಮಹತ್ತು, ಅಹಂಕಾರ, ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬಿವನ್ನುಮಾತ್ರ ತತ್ವಗಳೆಂದು ವಿಭಾಗಿಸುವರು. ಈ ಪಕ್ಷದಲ್ಲಿ ಈಶ್ವರನನ್ನು ಪ್ರತ್ಯೇಕಿಸಿ ಬೇರೆ ತತ್ವವನ್ನಾಗಿ ಹೇಳದಿದ್ದರೂ, ಪರಮಾತ್ಮನು ಸರ್ವಶರೀರಕನಾದುದರಿಂದ, ಪುರುಷಾದಿಶಬ್ದಗಳಿಂದಲೇ ಈಶ್ವರನನ್ನೂ ಹೇಳಿದಂತಾಗುವುದು. ಹೀಗೆಯೇ ಅಹಂಕಾರತತ್ವದಲ್ಲಿ ಅದರ ಕಾರ್ಯಗಳಾದ ಇಂದ್ರಿಯಗಳಿಗೂ, ಆಕಾಶಾದಿಭೂತಗಳಲ್ಲಿ ಶಬ್ದಾದಿತನ್ಮಾತ್ರಗಳಿಗೂ ಅಂತರ್ಭಾವವೆಂದು ಗ್ರಹಿಸಬೇಕು. ಮುಖ್ಯವಾಗಿ, ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಜ್ಞಾನೇಂದ್ರಿಯಗಳೈದು, ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಕರ್ಮೇಂದ್ರಿಯಗಳೈದು. ಈ ಜ್ಞಾನಕರ್ಮೇಂದ್ರಿಯಗಳೆರಡಕ್ಕೂ ಆಧಾರವಾದ ಮನಸ್ಸೊಂದು, ರೂಪ,

ಶಬ್ದ, ಗಂಧ, ರಸ, ಸ್ಪರ್ಶಗಳೆಂಬ ಜ್ಞಾನೇಂದ್ರಿಯವಿಷಯಗಳು, ನಡೆ, ನುಡಿ,ಕೆಲಸ,ಮಲ ಮೂತ್ರ ವೀರ್ಯೋತ್ಸರ್ಜನಗಳೆಂಬ ಕರ್ಮೇಂದ್ರಿಯ ವ್ಯಾಪಾರಗಳು, ಇಷ್ಟರಿಂದಲೇ ಈ ವ್ಯಷ್ಟಿಪ್ರಪಂಚನಿರ್ಮಾಣವು. ಇವೆಲ್ಲಕ್ಕೂ ಬೀಜಭೂತವಾದುದು ಪ್ರಕೃತಿಯೇ! ಸೃಷ್ಟ್ಯಾರಂಭದಲ್ಲಿ ಆ ಪ್ರಕೃತಿಯೇ, ಸತ್ವಾದಿಗುಣಗಳೊಡನೆ ಕಲೆತು, ಮಹತ್ತು ಮೊದಲಾದ ಕಾರಣರೂಪದಿಂದಲೂ, ಆಕಾಶಾದಿಕಾರ್ಯರೂಪದಿಂದಲೂ ವ್ಯಕ್ತವಾಗಿ, ವ್ಯಷ್ಟಿಪ್ರಪಂಚವನ್ನುಂಟುಮಾಡುವುದು ಆದರೆ ಈ ಪ್ರಕೃತಿಗೂ ತಾನಾಗಿ ಪ್ರಪಂಚವನ್ನುಂಟುಮಾಡುವ ಶಕ್ತಿಯಿಲ್ಲ.ಇಂದ್ರಿಯಗಳಿಗೆ ಅಗೋಚರನಾಗಿಯೂ,ವೇದಾಂತೈಕವೇದ್ಯನಾಗಿಯೂ ಇರುವ ಸರ್ವೇಶ್ವರನು,ಸೃಷ್ಟಿಗಾಗಿ ಸಂಕಲ್ಪಿಸಿ ತನ್ನ ಕಣ್ಣಿಂದ ನೋಡಿದೊಡನೆ, ಆ ಪ್ರಕೃತಿಯಿಂದ ಪ್ರಪಂಚಸೃಷ್ಟಿಯು ಆರಂಭವಾಯಿತು. ಹೀಗೆ ಆ ಪರಮಪುರುಷನ ವೀಕ್ಷಣದಿಂದ ಹುಟ್ಟಿದ ಮಹದಾದಿತತ್ವಗಳೂ ಕೂಡ,ಆತನ ವೀಕ್ಷಣದಿಂದಲೇ ಸೃಷ್ಟಿಸಾಮರ್ಥ್ಯವನ್ನು ಪಡೆದು ಒಂದಕ್ಕೊಂದು ಸಂಮಿಳಿತವಾಗಿ ವಿಕಾರಹೊಂದುತ್ತ, ತಮಗೆ ಕಾರಣವಾದ ಪ್ರಕೃತಿಯಬಲದಿಂದ ಬ್ರಹ್ಮಾಂಡವನ್ನು ಸೃಷ್ಟಿಸುವುವು. ಇದು ಸೃಷ್ಟಿಕ್ರಮವು.

ತತ್ವಗಳು ಏಳೆಂದು ಹೇಳುವವರಪಕ್ಷದಲ್ಲಿ, ಆಕಾಶಾದಿಭೂತಗಳೈದೂ, ಜ್ಞಾನಸ್ವರೂಪನಾದ ಜೀವನೂ, ಆ ಜೀವನಿಗೂ ಆಕಾಶಾದಿಭೂತಗಳಿಗೂ ಆಧಾರನಾದ ಪರಮಾತ್ಮನೂ ಸೇರಿ,ಏಳುತತ್ವಗಳಾಗುವುವು. ಈ ಏಳುತತ್ವಗಳಲ್ಲಿಯೇ ದೇಹೇಂದ್ರಿಯಪ್ರಾಣಾದಿಗಳೆಲ್ಲವೂ ಅಂತರ್ಗತಗಳಾಗುವುವು. ಏಕೆಂದರೆ, ದೇಹೇಂದ್ರಿಯಾದಿಗಳೊಂದೊಂದೂ ಆಕಾಶಾದಿತತ್ವಗಳೊಡನೆ ಕಲೆತೇ ಇರಬೇಕು. ಹೀಗೆ ಪರಸ್ಪರಾನುಪ್ರವೇಶವಿರುವುದರಿಂದ, ಈ ಸಪ್ತಸಂಖ್ಯೆಯಲ್ಲಿಯೇ ಎಲ್ಲಾತತ್ವಗಳನ್ನೂ ಹೇಳಿದಂತಾಗುವುದು.

ತತ್ವಗಳು ಆರೇ ಎಂದು ಹೇಳುವವರು, ಆಕಾಶಾದಿಗಳೈದು, ಪರಮಪುರುಷನೊಬ್ಬನು,ಇವಾರೇ ತತ್ವಗಳೆಂದು ನಿರ್ಣಯಿಸುವರು. * ಆ ಪರಮ

* ಇಲ್ಲಿ ಜೀವನಿಗೆ ಪರಮಾತ್ಮನಲ್ಲಿ ಶರೀರರೂಪದಿಂದ ಅಂತರ್ಭಾವವು. ದೇಹೇಂದ್ರಿಯಾದಿಗಳಿಗೆ ಆಕಾಶಾದಿಗಳಲ್ಲಿ ಅಂತರ್ಭಾವವು.

ಪುರುಷನು, ತನ್ನಿಂದ ಸೃಷ್ಟವಾದ ಆ ಆಕಾಶಾದಿಭೂತಗಳೊಡಗೂಡಿ, ಅವುಗಳಿಂಲೇ ವ್ಯಷ್ಟಿಪ್ರಪಂಚವನ್ನು ವಿಸ್ತರಿಸಿ, ಅವುಗಳಲ್ಲಿಯೂ ತಾನೇ ಅಂತರಾತ್ಮನಾಗಿದ್ದು, ಅವುಗಳ ಸ್ಥಿತಿಗತಿಗಳನ್ನು ನಿರ್ವಹಿಸುವನು.

ನಾಲ್ಕೇ ತತ್ವಗಳೆಂದು ಹೇಳುವವರು, ಪರಮಾತ್ಮನಿಂದ ತೇಜಸ್ಸು ನೀರು, ಅನ್ನ (ಭೂಮಿ) ವೆಂಬೀ ಮೂರುತತ್ವಗಳು ಹುಟ್ಟಿದುವಾಗಿಯೂ, ಪರಮಾತ್ಮನೂ, ಆ ಮೂರುತತ್ವಗಳೂ ಸೇರಿ ನಾಲ್ಕೇತತ್ವಗಳೆಂದೂ ಈ ನಾಲ್ಕರಿಂದಲೇ ಸಕಲಪ್ರಪಂಚನಿರ್ಮಾಣವೆಂದೂ ನಿರೂಪಿಸುವರು.

ಹನ್ನೊಂದುತತ್ವಗಳೆಂದು ಹೇಳುವರು, ಪಂಚಮಹಾಭೂತಗಳನ್ನೂ, ಪಂಚೇಂದ್ರಿಯಗಳನ್ನೂ, ಪರಮಾತ್ಮನನ್ನೂ ಸೇರಿಸಿ ಹನ್ನೊಂದು ತತ್ವಗಳೆಂದು ನಿರ್ಣಯಿಸಿರುವರು. ಉಳಿದ ತತ್ವಗಳಿಗೆ ಈ ಹನ್ನೊಂದರಲ್ಲಿಯೇ ಅಂತರ್ಭಾವವು.

ಹದಿನೇಳುತತ್ವಗಳೆಂದು ಹೇಳುವವರು, ಪಂಚಮಹಾಭೂತಗಳು, ಪಂಚತನ್ಮಾತ್ರಗಳು, ಪಂಚೇಂದ್ರಿಯಗಳು, ಮನಸ್ಸು, ಪರಮಾತ್ಮನೆಂಬ ವಿಭಾಗವನ್ನು ತೋರಿಸಿ, ಹದಿನೇಳುತತ್ವಗಳೆಂದೂ, ಉಳಿದ ತತ್ವಗಳೆಲ್ಲವೂ ಇವುಗಳಲ್ಲಿಯೇ ಅಂತರ್ಗತಗಳೆಂದೂ ಹೇಳುವರು.

ಹದಿನಾರು ತತ್ವಗಳೆಂದು ಹೇಳುವವರೂ, ಮೇಲಿನಂತೆಯೇ ವಿಭಾಗಗಳನ್ನುಮಾಡಿ, ಮನಸ್ಸನ್ನುಮಾತ್ರ ಪ್ರತ್ಯೇಕಿಸದೆ, ಅದಕ್ಕೆ ಆತ್ಮನಲ್ಲಿಯೇ ಅಂತರ್ಭಾವವನ್ನು ಹೇಳುವರು.

ಹದಿಮೂರು ತತ್ವಗಳೆಂದು ಹೇಳುವವರು, ಪಂಚಭೂತಗಳನ್ನೂ, ಪಂಚೇಂದ್ರಿಯಗಳನ್ನೂ, ಪ್ರಾಣವನ್ನೂ, ಮನಸ್ಸನ್ನೂ, ಆತ್ಮವನ್ನೂ ಸೇರಿಸಿ ಹದಿಮೂರುಸಂಖ್ಯೆಯಾಗಿ ವಿಭಾಗಿಸುವರು.

ಹೀಗೆಯೇ ಮೂರೇತತ್ವಗಳೆಂದು ಹೇಳುವವರಪಕ್ಷದಲ್ಲಿ, ಚಿತ್ತು, ಅಚಿತ್ತು, ಈಶ್ವರನೆಂದು ಮೂರೇವಿಭಾಗವು. ನಾಲ್ಕುತತ್ವಗಳೆಂದು ಹೇಳುವವರು, ಈ ಮೂರರೊಡನೆ ವಾಯುವನ್ನು ಪ್ರತ್ಯೇಕವಾಗಿ ಹೇಳುವರು.

ಐದು ತತ್ವಗಳೆಂದು ಹೇಳುವವರು, ಪೃಥಿವಿ, ಅಪ್ಪು, ತೇಜಸ್ಸು, ವಾಯು, ಪರಮಾತ್ಮನೆಂಬ ಐದುವಿಭಾಗವನ್ನು ಮಾಡಿರುವರು.

ಉದ್ಧವಾ! ಹೀಗೆ ಪುರಾತನಮಹರ್ಷಿಗಳು ತತ್ವಗಳ ಸಂಖ್ಯೆಯನ್ನು ಬೇರೆಬೇರೆವಿಧವಾಗಿ ನಿರ್ಣಯಿಸಿದ್ದರೂ, ಯುಕ್ತಿಯಿಂದ ಅವೆಲ್ಲವನ್ನೂ ಸಮರ್ಥನಮಾಡಬಹುದು. ಹೇಗೆಂದರೆ, ಕೆಲವನ್ನು ಪ್ರಧಾನತತ್ವಗಳನ್ನಾಗಿ ಹೇಳಿ, ಬೇರೆಕೆಲವನ್ನು ಅವುಗಳಲ್ಲಿ ಅಂತರ್ಗತಗಳನ್ನಾಗಿ ಮಾಡುವುದರಿಂದ ತತ್ವಗಳ ಸಂಖ್ಯೆಯು ತಗ್ಗುವುದು. ಆ ತತ್ವಗಳನ್ನೇ ಪ್ರತ್ಯೇಕಿಸಿ ಹೇಳುವುದರಿಂದ ಸಂಖ್ಯೆಯು ಹೆಚ್ಚುವುದು. ವಿದ್ವಾಂಸರಿಗೆ ಯುಕ್ತಿಯಿಂದ ಅಸಾಧ್ಯವಾದುದೊಂದಿಲ್ಲ" ಎಂದನು.

ಉದ್ಧವನು ತಿರುಗಿ ಪ್ರಶ್ನೆಮಾಡುವನು. "ಕೃಷ್ಣಾ! ಹಿಂದೆ ಹೇಳಿದ ನಾನಾಬಗೆಯ ತತ್ವವಿಭಾಗಗಳಲ್ಲಿ, ಪ್ರಕೃತಿಪುರುಷರಿಬ್ಬರನ್ನೂ ಪ್ರತ್ಯೇಕತತ್ವಗಳನ್ನಾಗಿಯೇ ತೋರಿಸಿರುವರಷ್ಟೆ? ಈ ವಿಚಾರದಲ್ಲಿ ನನಗೆ ಸಂದೇಹವು ತೋರುವುದು. ಪ್ರಕೃತಿಪುರುಷರಿಗೆ ಸಹಜವಾಗಿ ಸ್ವರೂಪದಲ್ಲಿ ಪರಸ್ಪರವೈಲಕ್ಷಣ್ಯವಿದ್ದರೂ, ಅವೆರಡರಲ್ಲಿ ಒಂದನ್ನು ಬಿಟ್ಟು ಮತ್ತೊಂದು ಪ್ರತ್ಯೇಕವಾಗಿರುವಂತೆ ಎಲ್ಲಿಯೂ ಕಾಣಿಸುವುದಿಲ್ಲ. ಎಂದರೆ, ಪ್ರಕೃತಿಕಾರ್ಯವಾದ ದೇಹದೊಡನೆಯೇ ಆತ್ಮವಿರುವುದು. ಆತ್ಮನೊಡನೆಯೇ ದೇಹವಿರುವುದು. ಒಂದನ್ನು ಬಿಟ್ಟು ಮತ್ತೊಂದು ಕಾಣಿಸದು. ಇದಲ್ಲದೆ ಸಹಜವಾಗಿ ದೇಹಿಗೆ, "ನಾನು ದೇವನು." "ನಾನು ಮನುಷ್ಯನು" ಎಂದು, ದೇಹದೊಡನೆ ಆತ್ಮಕ್ಕೆ ಅಭೇದವೇ ತೋರುತ್ತಿರುವುದು. ಇದರಿಂದ ದೇಹಾತ್ಮಗಳಿಗೆ ಭೇದವೇ ಕಾಣಿಸದು. ಹೀಗಿರುವಾಗ ಅವೆರಡನ್ನೂ ಪ್ರತ್ಯೇಕತತ್ವಗಳನ್ನಾಗಿ ವಿಭಾಗಿಸುವುದೇಕೆಂದು ನನಗೆ ಸಂದೇಹವು ಹುಟ್ಟಿರುವುದು. ನೀನು ಸರ್ವಜ್ಞನಾದುದರಿಂದ, ಯುಕ್ತಿಯುಕ್ತವಾದ ಉಪಪಾದನದಿಂದ ಈ ನನ್ನ ಸಂದೇಹವನ್ನು ನೀಗಿಸಬೇಕು. ಜೀವಕೋಟಿಯಲ್ಲಿ ಸೇರಿದ ನಮಗೆ, ಆಯಾ ಅರ್ಥಗಳನ್ನು ಯಥಾಸ್ಥಿತವಾಗಿ ಕಂಡುಕೊಳ್ಳತಕ್ಕ ಜ್ಞಾನವು ಲಭಿಸಬೇಕಾದುದು ನಿನ್ನ ಅನುಗ್ರಹಬಲದಿಂದಲೇ! ಅವರಿಗೆ ನಿನ್ನ ಮಾಯಾಶಕ್ತಿಯಿಂದ ಸಹಜವಾಗಿಯೇ ಜ್ಞಾನವು ಸಂಕುಚಿತವಾಗಿರುವುದು. ನೀನೊಬ್ಬನೇ ಸರ್ವಜ್ಞನು. ನಿನ್ನ ಮಾಯೆಯ ಸ್ವರೂಪವನ್ನು ನೀನೇ ತಿಳಿಯಬಲ್ಲವನೇಹೊರತು,

ಆ ನಿನ್ನ ಮಾಯೆಯಿಂದಲೇ ಮೋಹಿತರಾದವರು ಅದನ್ನು ಹೇಗೆ ತಿಳಿಯ ಬಲ್ಲರು?" ಎಂದನು.

ಅದಕ್ಕಾ ಭಗವಂತನು "ಉದ್ಧವಾ! ಪ್ರಕೃತಿಪುರುಷರೆಂಬ ತತ್ವಗಳೆರಡೂ ಬೇರೆಬೇರೆಯಾದುವುಗಳೇಹೊರತು ಒಂದಲ್ಲ. ಪ್ರಪಂಚದಲ್ಲಿ ಸೃಜಿಸಲ್ಪಟ್ಟಭೂತಗಳೆಲ್ಲವೂ ಪ್ರಕೃತಿಯ ವಿಕಾರವೆನಿಸಿಕೊಂಡ ಅಹಂಕಾರ ತತ್ವದಿಂದ ಉಂಟಾಗಿರುವುವು. ಅದರಲ್ಲಿ "ಇಚ್ಛಿಸುವೆನು." "ದ್ವೇಷಿಸುವೆನು" ಎಂಬಿವೇ ಮೊದಲಾದ ಆತ್ಮಗುಣಗಳೂ, ದೊಡ್ಡದು ಸಣ್ಣದೆಂಬ ದೇಹಗುಣಗಳೂ ಒಂವಾಗಿ ಕಲೆತು, ಒಂದರ ಗುಣವು ಮತ್ತೊಂದರಲ್ಲಿ ತೋರುವುದು ಅಹಂಕಾರಕಾರ್ಯವೆಂದೇ ತಿಳಿ! ಉದ್ಧವಾ! ಹೀಗೆ ಅಹಂಕಾರದ ಮೂಲಕವಾಗಿ ದೇಹಗುಣವನ್ನೂ, ಆತ್ಮಗುಣವನ್ನೂ ಕಲೆಸಿ, ಅವುಗಳಿಗೆ ಭೇದವೇ ತಿಳಿಯದಂತೆ ಮಾಡಿರುವುದು ನನ್ನ ಮಾಯೆಯೇ! ಮತ್ತು ಆ ಮಾಯೆಯೇ ಆತ್ಮನಲ್ಲಿ ಸತ್ವಾದಿಗುಣಗಳಮೂಲಕವಾಗಿ ದೇವನೆಂದೂ, ಮನುಷ್ಯನೆಂದೂ, ತಾನೇ ಸ್ವತಂತ್ರನೆಂದೂ, ನಾನಾಬಗೆಯ ಭೇದಬುದ್ಧಿಯನ್ನೂ ಕಲ್ಪಿಸುತ್ತಿರುವುದು. ವೈಕಾರಿಕವೆಂಬ ಆ ಅಹಂಕಾರತತ್ವವು, * ಅಧ್ಯಾತ್ಮ, ಅಧಿದೈವ, ಅತಿಭೂತವೆಂಬ ಮೂರುವಿಧವುಳ್ಳುದು ಇವುಗಳಲ್ಲಿ ದೃಕ್ಕು (ಕಣ್ಣು) ಅಧ್ಯಾತ್ಮವು. ರೂಪವು ಅಧಿಭೂತವು ಸೂರ್ಯ

* ಅಧ್ಯಾತ್ಮ, ಅಧಿಭೂತ, ಅಧಿದೈವಗಳೆಂಬುದರ ಅರ್ಥವೇನೆಂದರೆ, ಇಂದ್ರಿಯಗಳು ಆತ್ಮದಲಿ (ದೇಹದಲ್ಲಿ) ಇರುವುದರಿಂದ ಅಧ್ಯಾತ್ಮವೆಂದೂ. ರೂಪಾದಿವಿಷಯಗಳು ತೇಜಸ್ಸು ಮೊದಲಾದ ಭೂತಗಳಲ್ಲಿರುವುದರಿಂದ ಅಧಿಭೂತವೆಂದೂ, ಆ ಇಂದ್ರಿಯಾಧಿಷ್ಠಾನದೇವತೆಗಳಾದ ಸೂರ್ಯಾದಿಗಳು ದೇವರೂಪಿಗಳಾದುದರಿಂದ ಅಧಿದೈವವೆಂದೂ ಕರೆಯಲ್ಪಡುವುವು. ರಾಜಸಾಹಂಕಾರದೊಡಗೂಡಿದ ಸಾತ್ವಿಕ ತಾಮಸಾಹಂಕಾರಗಳೆರಡರಿಂದಲೂ,ಇಂದ್ರಿಯಗಳೂ, ರೂಪಾದಿವಿಷಯಗಳೂ, ಇಂದ್ರಿಯಾಧಿಷ್ಠಾತೃಗಳಾದ ದೇವತೆಗಳೂ ಸೃಜಿಸಲ್ಪಟ್ಟಂತೆ ಸೃಷ್ಟಿಪ್ರಕರಣದಲ್ಲಿ ಹೇಳಲ್ಪಡುವುವು. ಆದುದರಿಂದ ಅಧ್ಯಾತ್ಮಾದಿಗಗಳುಮೂರೂ ಅಹಂಕಾರಸೃಷ್ಟಿಯೆನಿಸುವುವು. ಈಮೂರರಲ್ಲಿ ಯಾವುದೊಂದರ ಸಹಾಯವಿಲ್ಲದಿದ್ದರೂ ಜ್ಞಾನವುಂಟಾಗಲಾರದು ಆದುದರಿಂದ ಈ ಮೂರರಕ್ಕೂ ಅನ್ಯೋನ್ಯವಾಗಿ ಉಪಕಾರ್ಯೋಪಕಾರತತ್ವವುಂಟೆಂದು ಗ್ರಾಹ್ಯವು.

ಶರೀರವು ಅಧಿದೈವವು. ದೇಹದೊಳಗಣ ನೇತ್ರರಂಧ್ರದಮೂಲಕವಾಗಿ ಇವು ಮೂರೂ ಒಂದನ್ನೊಂದು ಸಹಕರಿಸುವುದರಿಂದ ಜ್ಞಾನವನ್ನು ಹು ಟ್ಟಿಸುವುದು. ಎಂದರೆ, ಸೂರ್ಯಕಿರಣಸಹಾಯದಿಂದ ನೇತ್ರೇಂದ್ರಿಯಕ್ಕೂ ರೂಪಕ್ಕೂ ಸಂಬಂಧವಿದ್ದಾಗಲೇ ರೂಪಗ್ರಹಣವೇಹೊರತು, ಇವುಗಳಲ್ಲಿ ಯಾವುದೊಂದರ ಸಹಾಯವಿಲ್ಲದಿದ್ದರೂ ತಿಳಿವಳಿಕೆಯುಂಟಾಗಲಾರದು. "ಇದರ ಈ ಅಧ್ಯಾತ್ಮಾದಿಗಳ ಪರಸ್ಪರಸಹಾಯದಿಂದಲೇ ರೂಪಾದಿಗಳ ಪ್ರಕಾಶವುಂಟಾಗಬೇಕಾದರೆ, ಆತ್ಮಕ್ಕೆ ಯಾವುದರಿಂದ ಪ್ರಕಾಶವು"ಎಂದು ಕೇಳಬಹುದು. ಉದ್ಧವಾ! ಆತ್ಮವು ಸ್ವಯಂಪ್ರಕಾಶವುಳ್ಳುದಾಗಿ ಹೃದ ಯಾಕಾಶದಲ್ಲಿರುವುದು. ಏಕೆಂದರೆ, ಆತ್ಮವೆಂಬುದು ದೃಕ್ಕು ಮೊದಲಾದ ಆ ಮೂರಕ್ಕಿಂತಲೂ ಮೊದಲೇ ಇರತಕ್ಕುದು. ನೇತ್ರಾದಿಗಳನ್ನು ಪ್ರ ಕಾಶಗೊಳಿಸುವುದಕ್ಕೂ ಆ ಆತ್ಮವೆಂಬುದು ತಾನೇ ಕಾರಣವೆನಿಸಿರುವುದು. ದೃಕ್ಕು ಮೊದಲಾದ ಇಂದ್ರಿಯಗಳು ಹೋದಮೇಲೆಯೂ ಕೂಡ, ಆತ್ಮವು ಸ್ಥಿರವಾದುದರಿಂದ, ಆ ಇಂದ್ರಿಯಗಳಿಗಿಂತಲೂ ವಿಲಕ್ಷಣವೆನಿಸಿರುವುದು ತನ್ನ ಅಸಾಧಾರಣವಾದ ಜ್ಞಾನದಿಂದ ಇತರವಸ್ತುಗಳಿಗೆ ಪ್ರಕಾಶವನ್ನು ಕೊಡತಕ್ಕುದೂ. ಇದೇ! ನೇತ್ರೇಂದ್ರಿಯವು, ರೂಪ ಸೂರ್ಯಪ್ರಕಾಶಾದಿಗಳ ಅನ್ಯೋನ್ಯಸಹಾಯದಿಂದ ಕಾರ್ಯಕಾರಿಯಾಗುವಂತೆಯೇ,* ಕಿವಿ, ಮೂಗು, ನಾಲಗೆ, ತ್ವಕ್ಕು, ಎಂಬ ಇತರೇಂದ್ರಿಯಗಳೂಕೂಡ, ಶಬ್ದ ಮೊದಲಾದ ಅಧಿಭೂತಗಳಿಂದಲೂ, ದಿಕ್ಕು ಮೊದಲಾದ ಅಧಿದೈವಗಳಿಂದಲೂ ಕೂಡಿ, ಕಾರ್ಯಸಿದ್ಧಿಯನ್ನು ಹೊಂದುವುವು. ಆದರೆ, ಈ ಇಂದ್ರಿಯಗಳೆಲ್ಲಕ್ಕೂ ಮನ ಸ್ಸಿನ ಸಹಾಯವಿದ್ದೇ ಇರಬೇಕು. ಈ ಮನಸ್ಸಿಗೂಕೂಡ ಧ್ಯೇಯ ವಸ್ತುವೇ ಅಧಿಭೂತವು. ಚಂದ್ರನೇ ಅಧಿದೈವವು. ಈ ಇಂದ್ರಿಯಾದಿಗಳೆ ಲ್ಲವೂ ಅಹಂಕಾರತತ್ವದ ಸೃಷ್ಟಿಯಾಗಿರುವುದು. ದೇಹಾತ್ಮಗಳೆರಡೂ ಒಂದೇ ಎಂಬ ಅಭೇದಭ್ರಾಂತಿಯನ್ನುಂಟುಮಾಡುವುದಕ್ಕೂ ಆ ಅಹಂಕಾರವೇ

---

* ಕಿವಿ, ಮೂಗು, ತ್ವಕ್ಕು. ನಾಲಗೆ ಎಂಬೀ ಇಂದ್ರಿಯಗಳಿಗೆ ಕ್ರಮವಾಗಿ, ದಿಕ್ಕು, ಅಶ್ವಿನೀದೇವತೆಗಳು, ವಾಯು, ವರುಣರೆಂಬವರು ಅಧಿದೈವಗಳೆಂದು ಗ್ರಾಹ್ಯವು.

ಕಾರಣವು. ಸತ್ವರಜಸ್ತಮೋಗುಣಗಳು ತಮ್ಮ ಸಾಮ್ಯವನ್ನು ಬಿಟ್ಟು, ಹೆಚ್ಚು ಕಡಿಮೆಯಾಗುವುದರಿಂದ ಸಂಭವಿಸುವ ವಿಕಾರವೇ ಅಹಂಕಾರವೆಂದು ತಿಳಿ! ಈ ಅಹಂಕಾರವೆಂಬುದು ಪ್ರಕೃತಿಯಿಂದ ಜನಿಸಿದ ಮಹತ್ತತ್ವದಿಂದ ಹುಟ್ಟಿದುದು. ಈ ಅಹಂಕಾರವೇ ಮನುಷ್ಯನಿಗೆ ದೇಹವೇ ಆತ್ಮವೆಂಬ ಭ್ರಮವನ್ನೂ, ಆತ್ಮನಲ್ಲಿ ದೇವಮನುಷ್ಯಾದಿವಿಕಲ್ಪಗಳನ್ನೂ ಹುಟ್ಟಿಸು ತ್ತಿರುವುದು. ಈ ಅಹಂಕಾರವು ಸಾತ್ವಿಕ (ವೈಕಾರಿಕ), ಐಂದ್ರಿಯ(ತೈಜಸ), ತಾಮಸಗಳೆಂಬ ಮೂರು ವಿಧವಾಗಿರುವುದು. ಐಂದ್ರಿಯವೆಂಬುದು ರಾಜಸಾ ಹಂಕಾರವು. ಇಂದ್ರಿಯೋತ್ಪತ್ತಿಗೆ ಈ ರಾಜಸಾಹಂಕಾರವು ಸಹಕಾರಿ ಯಾದುದರಿಂದ ಅದಕ್ಕೆ ಐಂದ್ರಿಯವೆಂದು ವ್ಯವಹಾರವು. ಉದ್ಧವಾ ! ಹೀಗೆ ದೇಹಾತ್ಮಗಳಲ್ಲಿ ಅಭೇದಭ್ರಾಂತಿಯನ್ನುಂಟುಮಾಡುವುದಕ್ಕೆ ಅಹಂ ಕಾರವೇ ಕಾರಣವೆಂದು ತಿಳಿದೆಯಷ್ಟೆ" "ಹಾಗಿದ್ದರೆ ದೇಹಾತ್ಮಗಳಿಗಿರುವ ವೈಲಕ್ಷಣ್ಯವೇನು" ಎಂದು ಕೇಳುವೆಯಾ ? ಆತ್ಮವೆಂಬುದು ಕೇವಲಜ್ಞಾ ನಮಯವು. ದೇಹವಾದರೋ ಜಡವಾದುದು. "ಅಹಂ" ಎಂಬ ಶಬ್ದಕ್ಕೆ ಆತ್ಮವೇ ವಿಷಯವೆಂಬುದು ನಿರ್ವಿವಾದಾಂಶವು. ಉಂಟೆಂದೂ ಇಲ್ಲವೆಂದೂ ಹೇಳುವ ವ್ಯಪದೇಶಗಳು ದೇಹಕ್ಕೇಹೊರತು ಆತ್ಮನಿಗಿಲ್ಲ. ಆತ್ಮವು ಯಾವಾಗಲೂ ಇರತಕ್ಕುದು. ದೇಹಕ್ಕಾದರೋ ಆಗಾಗ ವಿಕಾ ರಗಳುಂಟಾಗುವುದರಿಂದ ಒಮ್ಮೆ ಇದ್ದ ಸ್ಥಿತಿಯು ಮತ್ತೊಮ್ಮೆ ಕಾಣಲಾ ರದು. "ಅಸ್ತಿ" "ನಾಸ್ತಿ" ಎಂಬ ಭೇದವು ಆತ್ಮಕ್ಕಿಲ್ಲದಿದ್ದರೂ, ನನ್ನಲ್ಲಿ ವಿಮು ಖರಾದವರಿಗೆ ಆತ್ಮನಲ್ಲಿಯೂ ಆ ಭೇದಭ್ರಮವೇ ಅನುವರ್ತಿಸುತ್ತ ಬರು ವುದು ಏಕೆಂದರೆ, ನನ್ನಿಂದಲೇ ಚೇತನರಿಗೆ ಆತ್ಮಸ್ವರೂಪಸಾಕ್ಷಾತ್ಕಾರವುಂ ಟಾಗಬೇಕು. ಆ ಆತ್ಮಸ್ವರೂಪಜ್ಞಾನವುಂಟಾಗುವವರೆಗೆ ದೇಹಾತ್ಮಭ್ರಮ ವೂ, ಅದರಮೂಲಕವಾದ ಸಂಸಾರವೂ ಬಿಟ್ಟುಹೋಗಲಾರದು." ಎಂದನು.

ಉದ್ಧವನು ತಿರುಗಿ ಪ್ರಶ್ನೆಮಾಡುವನು "ಪ್ರಭೂ! ನಿನ್ನಲ್ಲಿ ವಿಮು ಖರಾದವರು, ತಮ್ಮತಮ್ಮ ಕರ್ಮಗಳಿಗೆ ಫಲವಾಗಿ ಶರೀರಗಳನ್ನೆತ್ತುತ್ತಿ ರುವರೆಂದು ಹೇಳಿದೆಯಲ್ಲವೆ ? ಕರ್ಮಬದ್ಧರಾದವರು ನೀಚೋತ್ತಮದೇಹಗ ಳನ್ನು ಹೇಗೆ ಹೊಂದುವರೆಂಬುದನ್ನೂ, ಆ ದೇಹವಿಯೋಗದ ರೀತಿ

ಯನ್ನೂ ನನಗೆ ತಿಳಿಸಬೇಕು. ಒಂದು ದೇಹವನ್ನು ಬಿಡುವಾಗ, ಆ ದೇಹದೊಡನೆ ಇಂದ್ರಿಯಗಳೂ ಬಿಟ್ಟುಹೋಗಿ, ದೇಹಾಂತರಪ್ರಾಪ್ತಿಯಲ್ಲಿ ಇಂದ್ರಿಯಗಳೂ ಬೇರೆಯಾಗಿ ಬರುವುವೆ ? ಅಥವಾ ಮೊದಲಿನ ಇಂದ್ರಿಯಗಳು ಆತ್ಮದೊಡನೆ ಸೇರಿದ್ದಹಾಗೆಯೇ ದೇಹವುಮಾತ್ರ ಹೊಸದಾಗಿ ಬರುವುದೆ?" ಎಂಬುದನ್ನು ತಿಳಿಸಬೇಕು. ಗೋವಿಂದಾ! ಅಲ್ಪಬುದ್ಧಿಯುಳ್ಳವರಿಗೆ ಈ ವಿಚಾರವು ತಿಳಿಯಲಾರದು. ಲೋಕದಲ್ಲಿ ಪ್ರಾಯಕವಾಗಿ ಈ ಮರ್ಮವನ್ನು ತಿಳಿದವರೇ ಬಹಳ ವಿರಳರು. ನಿನ್ನ ಮಾಯೆಯಿಂದ ವಿದ್ವಾಂಸರೂ ವಂಚಿತರಾಗಿ ಭ್ರಮಿಸುವರು ಆದುದರಿಂದ ನೀನೇ ನನಗೆ ಈ ತತ್ವವನ್ನು ನಿಶ್ಚಯಿಸಿ ತಿಳಿಸಬೇಕು" ಎಂದನು.

ಅದಕ್ಕಾ ಕೃಷ್ಣನು. ‹ಉದ್ಧವಾ ! ಕೇಳು! ಕರ್ಮವಾಸನೆಯಿಂದ ಕೂಡಿದ ಮನಸ್ಸೇ ಆತ್ಮವನ್ನು ದೇಹದಿಂದ ದೇಹಕ್ಕೆ ಸೇರಿಸುವುದು. ಎಂದರೆ, ಮನಸ್ಸೆಂಬುದು, ಕಣ್ಣು, ಕಿವಿ, ಮೊದಲಾದ ಐದು ಜ್ಞಾನೇಂದ್ರಿಯಗಳೊಡನೆ ಸೇರಿಯೇ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಪ್ರವೇಶಿಸುವುದು. ಆತ್ಮವೆಂಬುದು ಅವುಗಳಿಗಿಂತಲೂ ಭಿನ್ನವಾಗಿದ್ದರೂ, ತಾನೂ ಆ ಮನಸ್ಸನ್ನು ಹಿಂಬಾಲಿಸಿ ಹೋಗುವುದು. ಹಾಗೆ ‹‹ಒಂದುದೇಹದಲ್ಲಿದ್ದ ಜ್ಞಾನೇಂದ್ರಿಯಗಳೊಡಗೂಡಿಯೇ ಆತ್ಮವು ಮತ್ತೊಂದುದೇಹಕ್ಕೆ ಪ್ರವೇಶಿಸುವುದಾದರೆ, ಪೂರ್ವಜನ್ಮಸ್ಮೃತಿಯು ತಪ್ಪಿಹೋಗುವುದೇಕೆ ? ಎಂದು ನೀನು ಕೇಳಬಹುದು. ಉದ್ಧವಾ ! ಕರ್ಮವಾಸನೆಗೊಳಗಾದ ಮನಸ್ಸು,ಹಿಂದೆ ತಾನು ಕಂಡ, ಅಥವಾ ಕೇಳಿದ ವಿಷಯಗಳನ್ನೇ ಆಗಾಗ ಚಿಂತಿಸುತ್ತಿದ್ದು, ಆ ವಿಷಯಗಳು ಲಭಿಸಿದಾಗ ಸಂತೋಷಿಸುವುದು. ಅವು ಕೈತಪ್ಪಿಹೋದಾಗ ದುಃಖಿಸುವುದು. ಸ್ವಲ್ಪಕಾಲದಮೇಲೆ ಅವುಗಳ ಸ್ಮರಣೆಯನ್ನೇ ಮರೆತುಹೋಗುವುದು. ಒಂದೇದೇಹದಲ್ಲಿಯೇ ಈ ವಿಧವಾದ ವಿಸ್ಮೃತಿಯುಂಟಾಗುವಾಗ,ಆ ದೇಹವೇ ಹೋಗಿ ಮತ್ತೊಂದು ದೇಹವುಂಟಾದಮೇಲೆ, ಹಿಂದಿನ ದೇಹಸ್ಮೃತಿಯು ತಪ್ಪಿಹೋಗುವುದೊಂದಾಶ್ಚರ್ಯವೆ ! ಯಾವನ ಮನಸ್ಸು ವಿಷಯಾಸಕ್ತಿಯಲ್ಲಿರುವುದರಿಂದ, ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆಂಬುದನ್ನೇ ತಿಳಿಯದಿರುವುದೋ, ಆ ದೇಹಿಗೆ ದೇಹಾವಸಾನದಲ್ಲಿ

ಸಂಪೂರ್ಣವಾಗಿ ಜ್ಞಾನಲೋಪವಾಗುವುದು. ಇದೇ ಮರಣವೆಂದು ತಿಳಿ! ಆದರೆ, ಮರಣಕಾಲದಲ್ಲಿ ಅತ್ಯಂತ ಜ್ಞಾನಲೋಪವಾದರೂ, ತಿರುಗಿ ದೇಹಾಂತರಪ್ರಾಪ್ತಿಯಲ್ಲಿ ಆದೇ ಮನಸ್ಸೂ, ಇಂದ್ರಿಯಗಳೂ ಅನುವರ್ತಿಸಿ ಬರುವಾಗ, ಹಿಂದಿನ ಜನ್ಮದ ಸ್ಮರಣವಿರಬೇಕಲ್ಲವೆ! ಎಂದರೆ, ಪ್ರಾಣಿಗಳಿಗೆ ಹುಟ್ಟಿದಾಗಲೇ ತಮ್ಮತಮ್ಮ ದೇಹದಲ್ಲಿ ತಾವೆಂಬ (ಆತ್ಮವೆಂಬ) ಅಭಿಮಾನವು ಹುಟ್ಟುವುದರಿಂದ, ದೇಹವನ್ನು ಆತ್ಮವೆಂದು ಸ್ವೀಕರಿಸುವುದೇ ಜನ್ಮವೆನ್ನುವರು! ಹೀಗೆ ಆತ್ಮಸ್ವರೂಪವನ್ನೇ ತಿಳಿಯಲಾರದ ಪುರುಷನಿಗೆ ಆ ಆತ್ಮಕ್ಕುಂಟಾಗತಕ್ಕ ಹಿಂದುಮುಂದಿನ ಜನ್ಮಗಳಾಗಲಿ, ಹಿಂದಿನ ದೇಹವು ಬಿಟ್ಟುಹೋದುದಾಗಲಿ, ಈಗ ಹೊಸದೇಹವು ಲಭಿಸಿದುದಾಗಲಿ ಹೇಗೆ ತಾನೇ ತಿಳಿಯುವುದು? ಹೊಸಸ್ವಪ್ನವನ್ನು ಕಂಡವನಿಗೆ ಹಿಂದಿನ ಸ್ವಪ್ನಗಳೆಲ್ಲವೂ ಮರೆತುಹೋಗುವಂತೆಯೂ. ಮನಸ್ಸಿನಲ್ಲಿ ಹೊಸದಾಗಿ ಯಾವುದಾದರೂ ಕೋರಿಕೆಯು ಹುಟ್ಟಿದಾಗ, ಹಿಂದಿದ್ದ ಮನೋರಥಗಳು ಗಮನಕ್ಕೆ ಬಾರದಂತೆಯೂ, ಹೊಸದಾಗಿ ದೇಹವನ್ನು ಹೊಂದಿ, ಅದರಲ್ಲಿ ವಿಶೇಷಾಭಿಮಾನವುಳ್ಳವನಿಗೆ, ಹಿಂದಿನಸ್ಮರಣೆಯು ತಪ್ಪಿಹೋಗುವುದೇನಾಶ್ಚರ್ಯವು? ದೇಹಿಯು ಹಿಂದೆ ಎಷ್ಟೋ ಜನ್ಮಗಳನ್ನು ಕಳೆದಿದ್ದರೂ, ಆಯಾಜನ್ಮವು ಬಂದಾಗ, ತಾನು ಆ ಜನ್ಮದಲ್ಲಿಯೇ ಹೊಸದಾಗಿ ಹುಟ್ಟಿದಂತೆ ಭಾವಿಸುತ್ತಿರುವನು. ಮುಖ್ಯವಾಗಿ ನಿರ್ವಿಕಾರನಾದ ಆತ್ಮನಿಗೆ, ಒಂದೊಂದು ಜನ್ಮದಲ್ಲಿಯೂ, ಶರೀರ, ಇಂದ್ರಿಯಗಳು, ಅಂತಃಕರಣವೆಂಬಿವು ಮೂರೂ ಅನುವರ್ತಿಸಿ ಬಂದು, ಹೊರಗೆ ದೇವಮನುಷ್ಯಾದ್ಯಾಕಾರಭೇದಗಳನ್ನೂ, ಒಳಗೆ ಭಯ ಲೋಭಾದಿವಿಕಾರಗಳನ್ನೂ ಕಾಣಿಸುತ್ತಿರುವುವು. ದುಷ್ಪುತ್ರರಂತೆ ಇವುಗಳೇ ಆತ್ಮನಿಗೆ ಅನರ್ಥಹೇತುಗಳೂ ಆಗುವುವು. ಉದ್ಧವಾ! ಪಂಚಭೂತಪರಿಣಾಮಗಳೆನಿಸಿಕೊಂಡ ಪ್ರಾಣಿಶರೀರಗಳೆಲ್ಲವೂ, ಕ್ಷಣಕ್ಷಣಕ್ಕೂ ಪೂರ್ವಸ್ಥಿತಿಯನ್ನು ಬಿಟ್ಟು ವಿಕಾರಹೊಂದುತ್ತಲೇ ಇರುವುವು. ಕಾಲವೆಂಬುದು ನಮಗೆ ತಿಳಿಯದಹಾಗೆಯೇ ಅತಿಸೂಕ್ಷ್ಮಗತಿಯಿಂದೋಡುತ್ತಿರುವುದರಿಂದ, ಆ ಸೂಕ್ಷ್ಮಕಾಲಗಳಲ್ಲಿ ನಡೆಯತಕ್ಕ ವಿಕಾರಗಳು ನಮಗೆ ತಿಳಿಯಲಾರವು. ಅಗ್ನಿಯಲ್ಲಿ ಹಿಂದಿನ ಜ್ವಾಲೆಗಳು ಹೋಗಿ ಬೇರೆ

ಬೇರೆ ಹೊಸಜ್ವಾಲೆಗಳು ಹೊರಡುತ್ತಿರುವುದನ್ನೂ, ಅಖಂಡವಾದ ಪ್ರವಾಹದಲ್ಲಿ ಮೊದಲಿದ್ದ ಜಲಕಣಗಳು ಮುಂದೆಮುಂದೆ ಹೋಗುತ್ತ ಹೊಸಹೊಸದಾಗಿ ಜಲಕಣಗಳು ಬರುವುದನ್ನೂ ಕಂಡು ಹಿಡಿಯುವುದು ಸಾಧ್ಯವೆ? ಮತ್ತು ವೃಕ್ಷಗಳಲ್ಲಿ ಹಣ್ಣುಗಳು ಪ್ರತಿಕ್ಷಣವೂ ಪಕ್ವವಾಗುತ್ತ ಬರುವುದನ್ನು ಯಾರು ತಿಳಿಯಬಲ್ಲರು? ಅದರಂತೆಯೇ ಪ್ರಾಣಿಗಳ ಶರೀರದಲ್ಲಿ ಕಾಲದಿಂದ ನಡೆಯುವ ಅವಸ್ಥಾಭೇದಗಳೂ ತಿಳಿಯಲಾರವು. ಆದರೆ ಕ್ಷಣಕ್ಷಣಕ್ಕೂ ಶರೀರದಲ್ಲಿ ಈ ವಿಕಾರಗಳುಂಟಾಗುತ್ತಿದ್ದಮೇಲೆ "ಅವನೇ ಈ ಬಾಲನು" "ಆಗ ಬಾಲನಾಗಿದ್ದವನೇ ಈಗ ಯುವಕನು" ಎಂದವೇ ಮೊದಲಾಗಿ, ಹಿಂದುಮುಂದಿನ ಅವಸ್ಥೆಗಳನ್ನೆಲ್ಲಾ ಒಬ್ಬನಿಗೇ ಹೇಳುವುದು ಹೇಗೆ" ಎಂದು ಕೇಳುವೆಯಾ? ದೀಪದುರಿಯಲ್ಲಿ,ಹಿಂದೆ ನಷ್ಟವಾದ ಜ್ವಾಲೆಗಳೂ,ಮುಂದೆಮುಂದೆ ಹುಟ್ಟುವ ಜ್ವಾಲೆಗಳೂ ಸಮಾನಗಳಾಗಿಯೇ ಇರುವುದರಿಂದ,ಅದನ್ನು ನೋಡಿದವರು ಮೊದಲಿದ್ದ ದೀಪವೆಂದೇ ಭ್ರಮಿಸುವರು. ಹಾಗೆಯೇ ಪ್ರವಾಹದಲ್ಲಿಯೂ ಮುಂದೆ ಹರಿದುಹೋದ ನೀರೂ. ಹಿಂದಿನಿಂದ ಬರುವ ನೀರೂ ಪರಸ್ಪರಭೇದವೇ ತಿಳಿಯದಂತೆ ಸಮಾನವಾಗಿರುವುದರಿಂದ ಆ ಪ್ರವಾಹವನ್ನೆಲ್ಲಾ ಒಂದೇ ಜಲವನ್ನಾಗಿ ಭ್ರಮಿಸುವರು. ಇದರಂತೆಯೇ ಪ್ರಾಣಿಶರೀರವೆಂಬುದು ಕ್ಷಣಕ್ಷಣಕ್ಕೂ ನಾಶಹೊಂದಿ, ಹೊಸವಿಕಾರಗಳು ಏರ್ಪಡುತಿದ್ದರೂ. ಆ ವಿಕಾರಗಳು ಅತಿಸೂಕ್ಷ್ಮವಾಗಿರುವುದರಿಂದ,ಬಾಲ್ಯಕೌಮಾರ ಯೌವನಾದಿಗಳಲ್ಲಿ ಒಬ್ಬನೇ ಮನುಷ್ಯನೆಂದು ತೋರುವುದು. ಇದು ಕೇವಲಭ್ರಾಂತಿಯೇ ಹೊರತು ನಿಜವಲ್ಲ. ಉದ್ಧವಾ! ಈ ಶರೀರದ ಉತ್ಪತ್ತಿಗೆ ಕರ್ಮವೇ ಬೀಜವು. ಶರೀರಕ್ಕೆಮಾತ್ರವೇ ಉತ್ಪತ್ತಿವಿನಾಶಗಳುಂಟೇಹೊರತು ಜೀವನಿಗಿಲ್ಲ. ಜೀವನು ಉತ್ಪತ್ತಿವಿನಾಶಾದಿವಿಕಾರಗಳಿಲ್ಲದವನಾದರೂ, ತನ್ನ ಮನೋಭ್ರಾಂತಿಯಿಂದಲೇ ತನ್ನ ಶರೀರದೊಡನೆ ತಾನು ಹುಟ್ಟಿದಂತೆಯೂ,ಅದರೊಡನೆ ತಾನು ಸತ್ತಂತೆಯೂ ಎಣಿಸುವನು. ಹೀಗೆ ಆತ್ಮನು ಹುಟ್ಟುವುದೂ, ಸಾಯುವುದೂ, ಅವನ ಭ್ರಾಂತಿಯಿಂದಲೇಹೊರತು ಸ್ವಾಭಾವಿಕವಲ್ಲ. ಏಕೆಂದರೆ, ಆತ್ಮವೆಂಬುದು ದೇಹೋತ್ಪತ್ತಿಗೆ ಮೊದಲೂ, ದೇಹವು ಬಿದ್ದುಹೋದಮೇಲೆಯೂ ಇರತಕ್ಕುದು.

ಬೆಂಕಿಯು,ಅರಣಿಕಾಷ್ಠದಲ್ಲಿ ಅಂತರ್ಗತವಾಗಿರುವಾಗ ಹೊರಕ್ಕೆ ಕಾಣಿಸದಿದ್ದು ಆಕಾಷ್ಠವನ್ನು ಜ್ಜಿದಾಗ ವ್ಯಕ್ತವಾಗಿ ಕಾಣ್ಣುವುದು ಇಷ್ಟೇಹೊರತು ಆ ದಾರುವಿನೊಡನೆ ಬೆಂಕಿಗೂ ಉತ್ಪತ್ತಿವಿನಾಶಗಳಿಲ್ಲವಲ್ಲವೆ? ಅದರಂತೆಯೇ ಆತ್ಮವೆಂಬುದು ದೇಹದೊಡನೆ ಸೇರಿದಂತೆ ತೋರುತಿದ್ದರೂ, ಆ ದೇಹದ ಉತ್ಪತ್ತಿವಿನಾಶಗಳಿಗೆ ಅದು ಈಡಾಗತಕ್ಕುದಲ್ಲ. ಆಶರೀರದ ಉತ್ಪತ್ತಿವಿನಾಶಗಳನ್ನು ಆತ್ಮನಿಗೆಂದು ತಿಳಿಯುವುದು ಕೇವಲಭ್ರಾಂತಿಯೇ! ಉದ್ಧವಾ! ಪ್ರಾಣಿಶರೀರದಲ್ಲಿ ಕ್ಷಣಕ್ಷಣಕ್ಕೂ ವಿಕಾರಗಳುಂಟಾಗುತ್ತಿರುವುವೆಂದು ಹೇಳಿದೆನಲ್ಲವೆ? ಅವುಗಳಲ್ಲಿ ಮುಖ್ಯವಾದ ಕೆಲವನ್ನು ತಿಳಿಸುವೆನು ಕೇಳು! ಮೊದಲು ಗರ್ಭಾಧಾನವೆಂದರೆ ಪುರುಷವೀರ್ಯದಿಂದ ಸ್ತ್ರೀಗರ್ಭಕ್ಕೆ ಪ್ರವೇಶಿಸುವುದು ಆ ಗರ್ಭದಲ್ಲಿ ಶಿಶುರೂಪವಾಗಿ ಬೆಳೆಯುವುದು, ಅಲ್ಲಿಂದ ಹುಟ್ಟುವುದು, ಹುಟ್ಟಿದಮೇಲೆ ಬಾಲ್ಯ, ಕೌಮಾರ, ಯೌವನ, ಮಧ್ಯವಯಸ್ಸು, ಮುಪ್ಪು, ಸಾವು, ಎಂಬೀ ವಯೋಭೇದಗಳು, ಹೀಗೆ ಶರೀರಕ್ಕೆ ಒಂಭತ್ತುಬಗೆಯ ಅವಸ್ಥಾಭೇದಗಳುಂಟಾಗುವುವು. ಈ ವಯೋವಸ್ಥೆಗಳೇ ಅಲ್ಲದೆ, ಜೀವನಿಗೆ ಇದೇಶರೀರಸಂಬಂಧದಿಂದ, ಶಯನ, ಆಸನ, ಭೋಜನಗಳೇ ಮೊದಲಾದ ಇನ್ನೂ ನಾನಾಬಗೆಯ ಅವಸ್ಥೆಗಳುಂಟು. ಇವೆಲ್ಲವೂ ಬದ್ಧಜೀವನಿಗೆ ಮಾತ್ರ,ಒಮ್ಮೆ ಬಂದುತಗುಲುಕಟ್ಟುವುವು.ಮತ್ತೊಮ್ಮೆ ಬಿಟ್ಟುಹೋಗುವುವು. ಗುಣಪರಿಣಾಮಾತ್ಮಕಗಳಾದ ಶಬ್ದಾದಿವಿಷಯಗಳನ್ನು ಮನಸ್ಸಿನಲ್ಲಿಟ್ಟು ಚಿಂತಿಸುತ್ತಿರುವುದೇ ಮೇಲೆಹೇಳಿದ ಸಂಯೋಗವಿಯೋಗಗಳಿಗೆ ಮೂಲಕಾರಣವು. ಆತ್ಮನಿಗುಂಟಾಗತಕ್ಕ ಶರೀರಸಂಯೋಗವೂ, ವಿಯೋಗವೂ ಅವನ ಕಣ್ಣಿಗೆ ಕಾಣತಕ್ಕುದಲ್ಲ. ಆದುದರಿಂದ ಪ್ರತಿಯೊಬ್ಬನೂ ತನ್ನ ತಂದೆಯ ಸಾವನ್ನು ನೋಡಿ ತನಗೂ ಹಾಗೆಯೇ ಸಾವೆಂಬುದನ್ನೂ, ತನಗುಂಟಾಗುವ ಪುತ್ರಜನನವನ್ನು ನೋಡಿ, ತನಗೂ ಹಾಗೆಯೇ ಜನನವೆಂಬುದನ್ನೂ ಅನುಮಾನದಿಂದಲೇ ತಿಳಿದುಕೊಳ್ಳಬೇಕಾಗಿರುವುದು. ಒಬ್ಬೊಬ್ಬನೂ ಶರೀರಸಂಬಂಧವಿದ್ದಾಗ ಮೋಹಗ್ರಸ್ತನಾಗಿಯೇ ಇರುವುದರಿಂದ, ತನ್ನ ಜನನಮರಣಗಳನ್ನು ತಾನು ತಿಳಿಯಲಾರನು. ಆದರೆ, ಈ ಜನನಮರಣಗಳು ದೇಹಕ್ಕೆಮಾತ್ರವೇ ಹೊರತು ತನಗಲ್ಲವೆಂಬುದನ್ನು ಮಾತ್ರ ತಿಳಿದಿರಬೇಕು.ಒಂದು ಗಿಡವನ್ನು ಬೆ

ಳೆಸುವವನು, ಆಗಿಡಕ್ಕೆ ಬೀಜದಿಂದ ಉತ್ಪತ್ತಿಯೆಂಬುದನ್ನೂ, ಕಾಲಪರಿಪಾ
ಕದಿಂದ ಅದಕ್ಕೆ ನಾಶವೆಂಬುದನ್ನೂ ಚೆನ್ನಾಗಿ ನೋಡಿ ತಿಳಿಯಬಹುದು. ಆ
ವೃಕ್ಷವನ್ನು ತಾನೇ ಬೆಳೆಸಿದವನಾದರೂ ಅದಕ್ಕಿಂತಲೂ ತಾನು ಬೇರೆ
ಯೆಂಬುದನ್ನೂ ತಿಳಿಯಬಹುದಲ್ಲವೆ? ಅದರಂತೆಯೇ ತನ್ನ ದೇಹಕ್ಕೂ ಕೂಡ, ಪಂ
ಚಭೂತಗಳ ಸಮುದಾಯವೆಂಬ ಬೀಜದಿಂದ ಉತ್ಪತ್ತಿಯೂ, ಕಾಲಪರಿಪಾ
ಕದಿಂದ ನಾಶವೂ ಲಭಿಸುವುದೆಂದೂ, ಆ ವಿಕಾರಗಳನ್ನು ನೋಡ
ತಕ್ಕವನುಮಾತ್ರ ತಾನೆಂದೂ ಗ್ರಹಿಸಬೇಕು. ಇದರಿಂದ ಆ ದೇಹಕ್ಕಿಂತ
ಲೂ ತಾನು (ಆತ್ಮವು) ವಿಲಕ್ಷಣನಾಗಿ ಬೇರೆಯಾಗಿಯೇ ಇರುವನೆಂಬುದು
ಸ್ಪಷ್ಟವಾಗುವುದು. ಹೀಗೆ ದೇಹಕ್ಕಿಂತಲೂ ಆತ್ಮವು ವಿಲಕ್ಷಣವೆಂಬುದನ್ನು
ವಿವೇಚನೆಯಿಂದ ತಿಳಿಯಲಾರದವರು, ವಿಷಯಪ್ರವಣರಾಗಿ, ದೇಹವನ್ನೇ
ಆತ್ಮವೆಂದು ಭ್ರಮಿಸಿ, ಸಂಸಾರಬದ್ಧರಾಗುವರು. ಸಂಸಾರರೂಪವಾದ
ಶರೀರಪ್ರಾಪ್ತಿಯಲ್ಲಿಯೂ ಅವರವರ ಕರ್ಮಾನುಸಾರವಾಗಿ ಉತ್ತಮ ಮಧ್ಯ
ಮಾಧಮಜನ್ಮಗಳುಂಟು ಸಾತ್ವಿಕಕರ್ಮಗಳನ್ನು ನಡೆಸಿದವರು ದೇವಶರೀ
ರವನ್ನಾಗಲಿ, ಋಷಿಜನ್ಮವನ್ನಾಗಲಿ ಹೊಂದುವರು. ರಾಜಸಕರ್ಮಗಳಲ್ಲಿ
ಬಿದ್ದವರು ದೈತ್ಯಜನ್ಮವನ್ನಾಗಲಿ, ಮನುಷ್ಯಜನ್ಮವನ್ನಾಗಲಿ ಹೊಂದು
ವರು. ತಾಮಸ ಕರ್ಮಗಳಲ್ಲಿ ನಿರತರಾದವರು, ಭೂತ, ಪಿಶಾಚ, ತಿರ್ಯಗಾದಿ
ಜನ್ಮಗಳನ್ನು ಹೊಂದುವರು. ಹೀಗೆ ಆಯಾಕರ್ಮಾನುಸಾರವಾಗಿ ಮುಂದಿ
ನ ಜನ್ಮಗಳನ್ನು ಹೊಂದುತ್ತ, ಸಂಸಾರಚಕ್ರದಲ್ಲಿ ಸುತ್ತುತ್ತಿರುವರು. ಗಮ
ನಾದಿಗಳಿಲ್ಲದ ನಿಶ್ಚೇಷ್ಟನಾದ ಆತ್ಮನು ಸಂಸಾರದಲ್ಲಿ ಸುತ್ತುವನೆಂದರೆ
ಹೇಗೆ" ಎಂದು ನೀನು ಶಂಕಿಸಬಹುದು. ಆತ್ಮನು ನಿರ್ವ್ಯಾಪಾರನೆಂಬುದೇ
ನೋ ವಾಸ್ತವವೇ! ಆದರೆ, ಮನುಷ್ಯನು ಮತ್ತೊಬ್ಬರು ಮಾಡುವ
ಗಾನನರ್ತನಗಳನ್ನು ನೋಡುತ್ತಿರುವಾಗ, ತಾನೂ ಉತ್ಸಾಹದಿಂದ ತನ್ನ
ಬುದ್ಧಿಯಲ್ಲಿ ಹಾಡುವಂತೆಯೂ, ಕುಣಿಯುವಂತೆಯೂ ಆಗುವುದುಂಟಲ್ಲವೆ?
ಅದರಂತೆಯೇ ಆತ್ಮನೂಕೂಡ, ತಾನು ನಿರ್ವ್ಯಾಪಾರನಾಗಿದ್ದರೂ, ಬುದ್ಧಿ
ಮೂಲಕಗಳಾದ ಚೇಷ್ಟಾದಿಧರ್ಮಗಳನ್ನು ನೋಡಿ, ಅವುಗಳನ್ನು ತಾನೇ ಅ
ನುಕರಿಸುವಹಾಗೆ ಭಾವಿಸುವನು. ಕೊಳದನೀರು ಕಲಗಿದಾಗ ತೀರದಲ್ಲಿರ

ವೃಕ್ಷಗಳೂ ಕದಲುವಂತೆ ಕಾಣುವುವು. ಮನುಷ್ಯನು ಗಿರಗಿರನೆ ಸುತ್ತಿದಾಗ ಅವನ ಕಣ್ಣುಗಳು ತಿರುಗುವುದರಿಂದ ಭೂಮಿಯೆಲ್ಲವೂ ಸುತ್ತುತ್ತಿರುವಂತೆ ಕಾಣುವುದು. ಹೀಗೆಯೇ ದೇಹವನ್ನೇ ಆತ್ಮವೆಂದು ತಿಳಿದವನಿಗೆ, ಆದೇಹಗುಣಗಳೇ ಆತ್ಮನಲ್ಲಿ ತೋರುವುವು.ಓ ಯದೂತ್ತಮಾ! ಮನಸ್ಸಿನಲ್ಲಿ ಹುಟ್ಟುವ ಕೋರಿಕೆಗಳೂ, ಸ್ವಪ್ನದಲ್ಲಿ ಅನುಭವಿಸಿದ ಸುಖದುಃಖಗಳೂ ಹೇಗೆ ತಾತ್ಕಾಲಿಕವಾಗಿದ್ದು, ಆಮೇಲೆ ಏನೂ ಇಲ್ಲದಂತಾಗುವುವೋ, ಹಾಗೆಯೇ ಆತ್ಮನಿಗೆ ದೇಹಧರ್ಮಗಳ ಸಂಬಂಧವೆಂಬ ಸಂಸಾರವೂ ಮಿಥ್ಯೆಯೆನಿಸುವುದು. ಆಯಾಶರೀರವಿಯೋಗಗಳಲ್ಲಿ ಅವೂ ಬಿಟ್ಟುಹೋಗುವುವು. ಶಬ್ದಾದಿವಿಷಯಗಳು ಸನ್ನಿಹಿತವಾಗಿಲ್ಲದಿದ್ದರೂ, ಅವುಗಳನ್ನು ಚಿಂತಿಸುತ್ತಿರುವುದರಿಂದ ಜೀವನಿಗೆ ಆ ಸಂಸಾರವು ಬಿಟ್ಟುಹೋಗದೆ ಅನುವರ್ತಿಸಿಬರುತ್ತಲೇ ಇರುವುದು. ಸ್ವಪ್ನವು ನಡೆಯುತ್ತಿರುವವರೆಗೂ, ಅದರಲ್ಲಿ ಅನುಭವಕ್ಕೆ ಬರುವ ದೇಶಾಂತರಗಮನ, ಶಿರಶ್ಛೇದವೇ ಮೊದಲಾದ ಅನರ್ಥಪರಂಪರೆಗಳು ಅನುವರ್ತಿಸುತ್ತಲೇ ಇದ್ದು, ಆಸ್ವಪ್ನವು ನಿಂತುಹೋದಮೇಲಲ್ಲವೇ ಆ ಅನುಭವಗಳೂ ತಪ್ಪುವುವು. ಆದುದರಿಂದ ಉದ್ಧವಾ! ವಿಷಯಚಿಂತೆಯಿರುವವರೆಗೂ ಸಂಸಾರವು ಬಿಟ್ಟುಹೋಗದೆ ಹೆಚ್ಚುತ್ತಲೇ ಬರುವುದೆಂಬುದನ್ನು ನೀನೂಕೂಡ ಯೋಚಿಸಿ, ಅಸದ್ವಿಷಯಗಳನ್ನೇ ಬಯಸುತ್ತಿರುವ ಇಂದ್ರಿಯಗಳನ್ನು ಆಕಡೆಗೆ ಬಿಡದಂತೆ ತಡೆಬಿಡಬೇಕು. ಸನ್ನಿಹಿತವಾದ ವಿಷಯಗಳನ್ನನುಭವಿಸುವುದಕ್ಕೂ ಆಸೆಪಡಬಾರದು. ಒಂದಾವರ್ತಿ ಅನುಭವಿಸಿದರೆ ಅದರ ಚಿಂತೆಯು ಬಿಟ್ಟುಹೋಗದೆ ಅನುವರ್ತಿಸಿಬರುವುದು.ಆ ವಿಷಯಚಿಂತೆಯೇ ಸಂಸಾರಾನುವೃತ್ತಿಗೆ ಕಾರಣವಾಗುವುದು. ಆತ್ಮನಲ್ಲಿ ಜನನಮರಣಾದ್ಯವಸ್ಥೆಗಳನ್ನು ಕಲ್ಪಿಸತಕ್ಕ ಭ್ರಮವು, ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆಂಬ ತಿಳಿವಳಿಕೆಯಿಲ್ಲದುದರಿಂದಲೇ ಉಂಟಾಗತಕ್ಕುದೆಂದು ತಿಳಿ! ಆತ್ಮಸ್ವರೂಪವನ್ನು ಪರಿಶೀಲಿಸಿ ತಿಳಿದು ಶರೀರದಲ್ಲಿ ಅಭಿಮಾನವನ್ನು ಬಿಟ್ಟವನಿಗೆ ಯಾವಭಯವೂ ಇರದು. ಆದುದರಿಂದ ಉದ್ಧವಾ! ದುರ್ಜನರು ನಿನ್ನನ್ನು ಆಕ್ಷೇಪಿಸಿದರೂ, ನಿಂದಿಸಿದರೂ, ವಂಚಿಸಿದರೂ, ದೋಷಾರೋಪಣೆಮಾಡಿದರೂ, ಹೊಡೆದರೂ, ಸೆರೆಹಿಡಿದರೂ, ನಿನ್ನ ಜೀವನವನ್ನೇ ಹೋಗ

ಲಾಡಿಸಿದರೂ, ನಿನ್ನ ಮೇಲೆ ಉಗುಳಿದರೂ, ಮಲಮೂತ್ರಗಳನ್ನು ಸುರಿದ ರೂ, ಇನ್ನೂ ಅನೇಕವಿಧದಿಂದ ನಿನಗೆ ಕಿರುಕುಳಗಳನ್ನು ಮಾಡಿದರೂಕೂಡ, ನೀನು ಶ್ರೇಯಸ್ಸನ್ನು ಬಯಸುವವನಾಗಿದ್ದರೆ, ಅವೊಂದನ್ನೂ ಗಮನಿಸದೆ, ಆತ್ಮಸ್ವರೂಪದರ್ಶನದಿಂದ ನಿನ್ನನ್ನು ನೀನೇ ಉದ್ಧರಿಸಿಕೊಳ್ಳಬಹುದು."ಎಂ ದನು. ಉದ್ಧವನು ತಿರುಗಿ ಪ್ರಶ್ನೆಮಾಡುವನು. "ಕೃಷ್ಣಾ! ದುರ್ಜನರು ಮಾಡತಕ್ಕ ತಿರಸ್ಕಾರಗಳನ್ನು ಸಹಿಸಿಕೊಂಡು ಸುಮ್ಮನಿರುವುದೇನೋ ಬಹ ಳ ಕಷ್ಟಕಾರ್ಯವೆಂದು ನನಗೆ ತೋರುವುದು. ಅದಕ್ಕೆ ಉಪಾಯವೇನೆಂಬು ದನ್ನೂ ನೀನೇ ನನಗೆ ತಿಳಿಸಬೇಕು. ಪ್ರಕೃತಿಸಂಬಂಧವಿದ್ದಾಗ ದೇಹಾತ್ಮಾ ಭಿಮಾನವೂ, ರಾಗದ್ವೇಷಾದಿಗಳೂ ವಿದ್ವಾಂಸರನ್ನೂ ಬಿಟ್ಟುದಲ್ಲ! ಇಂದ್ರಿ ಯಗಳನ್ನು ಜಯಿಸಿ, ಭಗವದ್ಧರ್ಮನಿರತರಾಗಿ, ನಿನ್ನ ಪಾದಾರವಿಂದಗಳನ್ನೇ ನಂಬಿರತಕ್ಕವರಿಗೆಹೊರತು, ಉಳಿದವರಾರಿಗೂ ಅಂತಹ ಮನೋದಾರ್ಢ್ಯ ವು ಶಕ್ಯವಲ್ಲ. ಆದುದರಿಂದ ಅದಕ್ಕೆ ತಕ್ಕ ಉಪಾಯವನ್ನೂ ನನಗೆ ತಿಳಿಸಬೇ ಕು?" ಎಂದನು. ಇದು ಇಪ್ಪತ್ತೆರಡನೆಯ ಅಧ್ಯಾಯವು.

---

(ಸುಖದುಃಖಗಳಿಗೆ ಅವರವರ ಮನಸ್ಸೇ ಹೇತುವೆಂ ಬುದನ್ನು ಕೃಷ್ಣನು ಉದ್ಧವನಿಗೆ ಯುಕ್ತಿಪೂರ್ವಕ ವಾಗಿ ನಿರೂಪಿಸಿದುದು.)

ಭಕ್ತೋತ್ತಮನಾದ ಉದ್ಧವನ ಪ್ರಶ್ನೆಯನ್ನು ಕೇಳಿ ಕೃಷ್ಣನು, ಸಂತೋಷದಿಂದ ಅವನನ್ನು ಮನ್ನಿಸುತ್ತ ಹೀಗೆಂದು ಹೇಳುವನು. "ಉ ದ್ಧವಾ! ಓ ಬೃಹಸ್ಪತಿಶಿಷ್ಯಾ! ದುರ್ಜನರಾಡುವ ದುರ್ವಾಕ್ಯಗಳಿಂದ ನೊಂದ ಮನಸ್ಸನ್ನು ತಾನಾಗಿಯೇ ಸಮಾಧಾನಹೊಂದಿಸಬಲ್ಲ ಸಾಧುಗಳೇ ನೋ ಲೋಕದಲ್ಲಿ ದುರ್ಲಭರೇ! ದುರ್ಜನರ ಮಾತುಗಳು ಮನುಷ್ಯನನ್ನು ಸಂಕಟಪಡಿಸುವಂತೆ, ಮರ್ಮಗಳಲ್ಲಿ ನಾಟಿದ ತೀಕ್ಷ್ಣಬಾಣಗಳೂಕೂಡ ಸಂಕಟಗೊಳಿಸಲಾರವು. ಇದೇ ವಿಚಾರವಾಗಿ ಪುಣ್ಯತರವಾದ ಒಂದಿತಿಹಾಸ ವನ್ನು ಹೇಳುವರು. ದುರ್ಜನರಿಂದ ಬಹಳವಾಗಿ ತಿರಸ್ಕರಿಸಲ್ಪಡುತಿದ್ದ ಒ ಬ್ಬಾನೊಬ್ಬ ಭಿಕ್ಷುಕನು,ತನಗುಂಟಾದ ಆ ತಿರಸ್ಕಾರಗಳೊಂದಕ್ಕೂ ಪರಿತಪಿ

ನಡೆ, ಕರ್ಮಾಧೀನವಾದ ಅವರವರ ಮನಸ್ಸೇ ಅವರವರ ಸುಖದುಃಖಗಳಿಗೆ ಕಾರಣವೆಂದು ಯೋಚಿಸಿ, ಧೀರಮನಸ್ಕನಾಗಿದ್ದು, ಒಂದು ಗಾಥೆಯನ್ನು ಹಾಡಿರುವನು. ಆ ಗಾಥೆಯನ್ನು ತಿಳಿಸುವೆನು ಕೇಳು !

ಅವಂತೀದೇಶದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು. ಅವನು ಬಹಳ ಧನಿಕನು ! ಆದರೆ ಪರಮಲುಬ್ಧನು ! ಬಹಳ ಮುಂಗೋಪವು ಳ್ಳವನು. ಅವನಿಗೆ ಹಣದಾಸೆಯು ಮೇಲೆಮೇಲೆ ಮಿತಿಮೀರಿದುದರಿಂದ, ತನ್ನ ವರ್ಣಾಶ್ರಮಧರ್ಮಗಳಿಗೆ ವಿರುದ್ಧವಾದ ಕೃಷಿವಾಣಿಜ್ಯಾದಿಗಳಿಂದಲೂ ಹಣ ವನ್ನು ಸಂಗ್ರಹಿಸುತ್ತಿದ್ದನು. ತನ್ನ ಉದರಪೋಷಣವೊಂದಕ್ಕೆ ಮಾತ್ರವಲ್ಲ ದೆ, ಬೇರೆ ಯಾವ ಧರ್ಮಕಾರ್ಯಕ್ಕೂ ಆ ಹಣವನ್ನು ವೆಚ್ಚಮಾಡತಕ್ಕವನಲ್ಲ. ಬಂ ಧುಗಳಾಗಲಿ, ಅತಿಥಿಗಳಾಗಲಿ ಮನೆಗೆ ಬಂದರೂ, ಅವರನ್ನು ಬರೀಮಾತುಗ ಳಿಂದಾದರೂ ಆದರಿಸುತ್ತಿರಲಿಲ್ಲ ! ಇದಕ್ಕಾಗಿ ಅತಿಥಿಗಳಾರೂ ಅವನ ಮನೆ ಗೆ ಬರುತ್ತಿರಲಿಲ್ಲ. ತನ್ನ ಸುಖಕ್ಕಾದರೂ ತಾನು ಹಣವನ್ನು ವೆಚ್ಚಮಾಡ ಲಾರದೆ, ಬಹಳ ಕೃಪಣನಾಗಿ, ಕೇವಲದುಸ್ಸ್ವಭಾವದಿಂದಿದ್ದ ಅವನ ಲೋಭಬುದ್ಧಿಯನ್ನು ಕಂಡು, ಹೆಂಡಿರು, ಮಕ್ಕಳು, ಬಂಧುಗಳು, ಸೇವಕ ರು ಮುಂತಾಗಿ ಅವನ ಪರಿವಾರಗಳೆಲ್ಲವೂ ಅಸಹ್ಯಪಟ್ಟು ಅವನನ್ನು ದ್ವೇಷಿಸುತ್ತಿದ್ದರು. ಅವನಿಗೆ ಯಾರೂ ಅನುಕೂಲರಾಗಿರಲಿಲ್ಲ. ಹೀಗೆ ಆ ಲೋ ಭಿಯು, ಕುಬೇರನಂತೆ ಧನಿಕನಾಗಿದ್ದರೂ, ಆ ಹಣವನ್ನು ಇಹಲೋ ಕದ ಭೋಗಕ್ಕಾಗಲಿ, ಪರಲೋಕಸಾಧನಗಳಾದ ಧರ್ಮಕಾರ್ಯಗಳಿಗಾಗಲಿ ಉಪಯೋಗಿಸದೆ ಹೋದುದರಿಂದ, ಉಭಯಲೋಕಕ್ಕೂ ಬಾಹ್ಯನಾಗಿದ್ದ ನು. ಉದ್ಧವಾ ! ಮನುಷ್ಯನು ಹುಟ್ಟುವಾಗಲೇ, ದೇವತೆಗಳು, ಪಿತೃಗಳು, ಭೂತಗಳು, ಮನುಷ್ಯರು, ಬ್ರಾಹ್ಮಣರೆಂಬ ಐದುಮಂದಿಗೆ ಋಣಿಯಾ ಗಿರುವನು. ಪಂಚಮಹಾಯಜ್ಞಗಳಿಂದ ಆ ಐವರನ್ನೂ ತೃಪ್ತಿಗೊಳಿಸಬೇ ಕಾದುದು ಬ್ರಾಹ್ಮಣನ ಕರ್ತವ್ಯವು. ಲುಬ್ಧನಾದ ಆ ಬ್ರಾಹ್ಮಣನು, ಆ ಪಂಚಮಹಾಯಜ್ಞಗಳನ್ನೂ ಸರಿಯಾಗಿ ನಡೆಸದೆಹೋದುದರಿಂದ, ಆ ಯಜ್ಞದೇವತೆಗಳೂ ಅವನ ವಿಷಯದಲ್ಲಿ ಕುಪಿತರಾಗಿದ್ದರು. ಅವರ ಕೋಪ ಕ್ಕೆ ಫಲವಾಗಿ, ಈ ಬ್ರಾಹ್ಮಣನ ಸಂಪತ್ತಿಗೆ ಮೂಲವೆನಿಸಿದ ಪುಣ್ಯಫಲವು

ಕ್ಷೀಣಿಸುತ್ತಬಂದು, ಕ್ರಮಕ್ರಮವಾಗಿ ಅವನು ಕಷ್ಟಪಟ್ಟು ಗಳಿಸಿಟ್ಟ ಧನ ವೆಲ್ಲವೂ ನಾನಾವಿಧದಿಂದ ಕರಗುತ್ತಬಂದಿತು. ಅವನ ಆಸ್ತಿಯಲ್ಲಿ ಸ್ವಲ್ಪ ಭಾಗವು ಜ್ಞಾತಿಗಳಿಗೆ ಸೇರಿಹೋಯಿತು! ಸ್ವಲ್ಪಭಾಗವನು . ಕಳ್ಳರು ಅಪ ಹರಿಸಿಕೊಂಡು ಹೋದರು ! ಮನೆಗೆ ಬೆಂಕಿಬಿದ್ದು ದೈವಿಕವಾಗಿ ಕೆಲವು ದ್ರವ್ಯಗಳು ನಷ್ಟವಾದುವು. ದುಷ್ಕಾಲವಶದಿಂದ ಕೆಲವುಭಾಗವು ನಷ್ಟ ವಾಯಿತು. ರಾಜಭಟರು ಬಲಾತ್ಕಾರದಿಂದ ಕೆಲವುಧನವನ್ನು ಕಿತ್ತು ಕೊಂಡುಹೋದರು. ಆಗ ಅವನ ದುಸ್ಥಿತಿಯನ್ನು ಕೇಳಬೇಕೆ?ಸಂಗ್ರಹಿಸಿಟ್ಟ ಹಣವೂ ಹೋಯಿತು! ಬಂಧುಗಳೂ ತನ್ನನ್ನು ಲಕ್ಷ್ಯಮಾಡದೆ ಕೈಬಿಟ್ಟರು! ಇದರಿಂದ ಅವನು ದುಸ್ಸಹವಾದ ಚಿಂತೆಗೆ ಗುರಿಯಾಗಿ, ಅಹೋರಾತ್ರವೂ ಕೊರಗುತಿದ್ದನು. ಹೀಗೆ ಅಪಾರದುಃಖದಿಂದ ನವೆಯುತಿದ್ದ ಆ ಬಡಬ್ರಾ ಹ್ಮಣನಿಗೆ, ಕ್ರಮಕ್ರಮವಾಗಿ ಮನಸ್ಸಿನಲ್ಲಿ ವಿರಕ್ತಿಯು ಹುಟ್ಟುತ್ತ ಬಂದಿತು. ತನ್ನ ಹಿಂದಿನ ನಡತೆಯನ್ನುಕುರಿತು ಪಶ್ಚಾತ್ತಾಪಪಡುತ್ತ ಆ ಬ್ರಾಹ್ಮಣನು ತನ್ನಲ್ಲಿತಾನು ಹೀಗೆಂದು ಯೋಚಿಸುವನು. “ಅಯ್ಯೋ ! ನಾನೆಂತಹ ಬುದ್ಧಿಹೀನನು? ಎಷ್ಟೋಕಷ್ಟಪಟ್ಟು ಹಣವನ್ನು ಸಂಪಾದಿಸಿ ದೆನು ! ಅದರಿಂದ ಫಲವೇನಾಯಿತು ? ಒಂದು ಧರ್ಮಕಾರ್ಯಕ್ಕಾದರೂ ಉಪಯೋಗಿಸಲಿಲ್ಲ! ನಾನೂ ಅದರಿಂದ ಸುಖಪಡಲಿಲ್ಲ. ಆ ದ್ರವ್ಯಸಂಗ್ರ ಹಕ್ಕಾಗಿ ನನ್ನ ಈ ದೇಹವನ್ನು ವ್ಯರ್ಥವಾಗಿ ಕಷ್ಟಪಡಿಸಿದಂತಾಯಿತಲ್ಲವೆ? ಲೋಭಿಗಳಿಗೆ ಹಣವೆಂಬುದು ಅನರ್ಥಕ್ಕೇಹೊರತು ಸುಖಕ್ಕಲ್ಲ! ಲೋಭಿಗ ಳಲ್ಲಿರುವ ಹಣವು ಇಲ್ಲಿ ನಾನಾವಿಧಚಿಂತೆಗೂ, ಸತ್ತಮೇಲೆ ನರಕಕ್ಕೂ ಕಾರಣವಾಗುವುದು. ಮನುಷ್ಯನು ಎಷ್ಟೇ ಉತ್ತಮವಾದ ಕೀರ್ತಿಯನ್ನು ಸಂಪಾದಿಸಿರಲಿ ! ಎಷ್ಟೇ ಸುಗುಣಗಳುಳ್ಳವನಾಗಿರಲಿ ! ಅವನಲ್ಲಿ ಲೋಭ ಬುದ್ಧಿಯು ಲೇಶಮಾತ್ರವಿದ್ದರೆ ಸಾಕು! ವಿಶೇಷರೂಪಸಂಪತ್ತಿಯುಳ್ಳ ಪುರುಷನಿಗೆ ದೇಹದಲ್ಲಿ ಲೇಶಮಾತ್ರವಾದರೂ ಶ್ವೇತಕುಷ್ಠವು ಕಂಡುಬಂದ ರೆ, ಅದರಿಂದ ಅವನ ಸೌಂದರ್ಯವು ಹೇಗೆ ಶೋಭಿಸಲಾರದೋ, ಹಾಗೆ, ಆ ಲೋಭಬುದ್ಧಿಯಿಂದ ಅವನ ಕೀರ್ತಿಗುಣಗಳೆಲ್ಲವೂ ನಾಶವಾಗುವುವು. ಆಹಾ ! ಅರ್ಥವೆಂಬುದು ಯಾವಾಗಲೂ ಅನರ್ಥಹೇತುವೇ ! ಏಕೆಂದರೆ

ಮೊದಲು ಹಣವನ್ನು ಸಂಪಾದಿಸುವುದೇ ಎಷ್ಟೋ ಕಷ್ಟವು ! ಸಂಪಾದಿಸಿದ ಹಣವನ್ನು ಬಡ್ಡಿಗೆ ಕೊಟ್ಟು ವೃದ್ಧಿಗೊಳಿಸುವುದು ಮತ್ತೊಂದು ಕಷ್ಟವು ! ಅದನ್ನು ವೆಚ್ಚಮಾಡುವಾಗಲೂ, ನಷ್ಟಬಂದಾಗಲೂ ದುಸ್ಸಹವಾದ ಚಿಂತೆ ! ಅದನ್ನು ಕಾಪಾಡುವಾಗ ಅಹೋರಾತ್ರವೂ ಭಯದಿಂದ ಕಳವಳಿಸಬೇಕು ! ಅದನ್ನು ತನ್ನ ಭೋಗಕ್ಕಾಗಿ ಉಪಯೋಗಿಸುವಾಗಲೂ ಅದನ್ನು ಕೈಬಿಡಲಾರದ ಸಂಕಟವು ಅಪರಿಮಿತವಾಗಿರುವುದು. ಇದ್ದ ಹಣವು ನಷ್ಟವಾದರಂತೂ ವ್ಯಸನದಿಂದ ಹುಚ್ಚುಹಿಡಿದಂತಾಗಿ, ಕೊನೆಗೆ ಆ ದುಃಖದಿಂದಲೇ ಸಾವೂ ಸಂಭವಿಸಬಹುದು. ಇದಲ್ಲದೆ ಹಣವನ್ನು ಸಂಪಾದಿಸುವಾಗ ಎಷ್ಟೋ ಪಾಪಕೃತ್ಯಗಳನ್ನು ಮಾಡಿ ಅದನ್ನು ಸಂಗ್ರಹಿಸಬೇಕಾಗುವುದು. ಈ ಧನಸಂಪಾದನೆಗಾಗಿ, ಕಳವು, ದ್ರೋಹ, ಸುಳ್ಳು ದಂಭ, ಕಾಮ, ಕ್ರೋಧಗಳೆಂಬ ಆರುಬಗೆಯ ಪಾಪಕೃತ್ಯಗಳಲ್ಲಿಯೂ ಪ್ರವರ್ತಿಸಬೇಕು. ಹಣವನ್ನು ಸಂಪಾದಿಸಿದಮೇಲೆ, ಗರ್ವ, ಮದ, ದೇಹಾನುಬಂಧಿಗಳಲ್ಲಿಯೂ ಭೇದಬುದ್ಧಿ, ನಿಷ್ಕಾರಣದ್ವೇಷ, ಎಲ್ಲರಲ್ಲಿಯೂ ಅಪನಂಬಿಕೆ, ಕಲಹ,ಸ್ತ್ರೀ ದ್ಯೂತ ಮದ್ಯಪಾನಗಳೆಂಬ ದುರ್ವ್ಯಸನಗಳಲ್ಲಿ ಆಸಕ್ತಿ,ಈ ಒಂಭತ್ತುಬಗೆಯ ದುರ್ಗುಣಗಳೂ ತಲೆದೋರವುವು. ಈ ಹದಿನೈದುಬಗೆಯ ಅನರ್ಥಗಳಿಗೂ ಅರ್ಥವೇ ಮೂಲವಾದುದರಿಂದ,ಶ್ರೇಯಃಕಾಂಕ್ಷಿಯಾದವನು ಅದರ ಆಸೆಯನ್ನೇ ದೂರಮಾಡಬೇಕು. ಈ ಧನದವಿಷಯದಲ್ಲಿ ಇಪ್ಪತ್ತು ಕವಡೆಗಳಷ್ಟು (ಎಂದರೆ ಒಂದು ಕಾಸಿನಷ್ಟು)ಕಡಿಮೆಯಾದರೂ, ತನ್ನ ಸುಖದುಃಖಗಳಲ್ಲಿ ಸಮಭಾಗಿಗಳಾಗಿಯೂ, ತನ್ನಲ್ಲಿ ವಿಶೇಷಪ್ರೇಮವುಳ್ಳವರಾಗಿಯೂ ಇದ್ದ ಅಣ್ಣತಮ್ಮಂದಿರು, ಹೆಂಡಿರು, ಮಕ್ಕಳು, ತಂದೆತಾಯಿಗಳು, ಇಷ್ಟಮಿತ್ರರು,ಮೊದಲಾಗಿ ಸ್ವಜನವೆಲ್ಲವೂ ಪೂರ್ವಪ್ರೇಮವನ್ನು ಬಿಟ್ಟು ವೈರಿಗಳಾಗುವರು.ಅತ್ಯಲ್ಪವಾದಹಣಕ್ಕಾಗಿ ಪ್ರಿಯಬಂಧುಗಳೆಲ್ಲರೂ ಮಹಾದ್ವೇಷವನ್ನಿಟ್ಟು ಕೊಲೆಮಾಡುವುದಕ್ಕೂ ಯತ್ನಿಸುವರು.ಅಥವಾ ತಮ್ಮಪ್ರಾಣವನ್ನಾದರೂ ಕಳೆದುಕೊಳ್ಳುವರು. ದೇವತೆಗಳೂ ಆಸೆಪಡತಕ್ಕ ಮನುಷ್ಯಜನ್ಮವನ್ನು ಪಡೆದು, ಅದರಲ್ಲಿಯೂ ಉತ್ತಮವಾದ ಬ್ರಾಹ್ಮಣಜನ್ಮದಲ್ಲಿ ಹುಟ್ಟಿರುವಾಗಲೂ,ಯಾವನು ಅದರಿಂದ ತಾನು ಪಡೆಯಬಹುದಾದ ಉತ್ತಮ

ಶ್ರೇಯಸ್ಸಿಗೆ ಪ್ರಯತ್ನಿಸದೆ,ಅನರ್ಥಹೇತುವಾದ ಧನಕ್ಕಾಗಿ ಆಸೆಪಟ್ಟು,ತನ್ನ ಹಿತವನ್ನೇ ತಾನು ಕೆಡಿಸಿಕೊಳ್ಳುವನೋ,ಅಂತವನಿಗೆ ಸತ್ತಮೇಲೆಯೂ ನರಕಗತಿಯುತಪ್ಪದು.ಮನುಷ್ಯದೇಹವೇ ಸ್ವರ್ಗಾಪವರ್ಗಗಳೆರಡಕ್ಕೂ ಸಾಧನವೆನಿಸಿರುವುದು.ಇಂತಹ ಜನ್ಮವನ್ನು ಪಡೆದೂ,ವಿವೇಕಿಯಾದ ಯಾವನು ತಾನೇ ಅನರ್ಥಹೇತುವಾದ ದ್ರವ್ಯಕ್ಕಾಸೆಪಡುವನು? ಆದರೆ "ಪಂಚಮಹಾಯಜ್ಞಗಳಿಗೂ ದ್ರವ್ಯವೇ ಸಾಧನವಾಗಿರುವಾಗ,ಅದನ್ನು ಅನರ್ಥಾವಹವೆಂದು ನಿರಾಕರಿಸಬಹುದೆ"ಎಂದರೆ,ದೇವತೆಗಳಿಗೂ,ಋಷಿಗಳಿಗೂ, ಪಿತೃಗಳಿಗೂ, ಇತರಭೂತಗಳಿಗೂ, ಜ್ಞಾತಿಗಳಿಗೂ, ಬಂಧುಗಳಿಗೂ, ಹೀಗೆಯೇ ತಾನು ಸಂಪಾದಿಸಿದ ದ್ರವ್ಯಕ್ಕೆ ನ್ಯಾಯವಾಗಿ ಭಾಗಿಗಳೆನಿಸಿದವರೆಲ್ಲರಿಗೂ, ತನ್ನ ದೇಹಪೋಷಣೆಗೂ ಉಪಯೋಗಪಡಿಸದೆ, ನಿರರ್ಥಕವಾಗಿ ಹಣವನ್ನು ಬಚ್ಚಿಟ್ಟ ನನ್ನಂತವನಿಗೆ ಅಧೋಗತಿಯಲ್ಲದೆ ಬೇರೇನು ! ವ್ಯರ್ಥವಾದ ಆ ಹಣದಾಸೆಯಿಂದ ವಿವೇಕಹೀನನಾಗಿ ದುಡಿಯುತಿದ್ದ ನನಗೆ, ಶ್ರಮಪಟ್ಟು ಗಳಿಸಿದ ಹಣವೂ ಹೋಯಿತು. ವಯಸ್ಸೂ ವ್ಯರ್ಥವಾಗಿ ಕಳೆದುಹೋಯಿತು!ದೇಹಬಲವೂ ತಗ್ಗಿತು!ಹೀಗೆ ಧರ್ಮಾದಿಪುರುಷಾರ್ಥಸಾಧನೆಗೆ ಅತ್ಯವಶ್ಯವಾದ ಆಯುಸ್ಸು, ಧನ, ದೇಹಶಕ್ತಿ, ಎಂಬಿವು ಮೂರೂ ಹೋದಮೇಲೆ, ಈಗ ವೃದ್ಧನಾದ ನಾನು ಇನ್ನೇನು ಮಾಡಬಲ್ಲೆನು ? ಈಗ ನನ್ನ ಸಂಗತಿಯೂ ಹಾಗಿರಲಿ! ಅರ್ಥವು ಅನರ್ಥಹೇತುವೆಂಬುದನ್ನು ಚೆನ್ನಾಗಿ ತಿಳಿದ ವಿದ್ವಾಂಸರೂಕೂಡ ಆ ಹಣದಾಸೆಯಿಂದ ದುಡಿಯುವರು! ಮುಖ್ಯವಾಗಿ ಆ ಭಗವಂತನ ಮಾಯಾಪ್ರಭಾವವೇ ಇದು! ಲೋಕವೆಲ್ಲವೂ ಆ ಒಬ್ಬನ ಮಾಯೆಗೆ ಮರುಳಾಗಿ ಚೇಷ್ಟೆಗಳನ್ನು ನಡೆಸುತ್ತಿರುವುದು. "ಆದರೆ ಹಣವನ್ನು ನಿರುಪಯೋಗವಾಗಿ ಬಚ್ಚಿಡದೆ, ತನ್ನ ಭೋಗಗಕ್ಕಾಗಲಿ, ದಾನಧರ್ಮಗಳಿಗಾಗಲಿ, ಯಜ್ಞಾದಿಕರ್ಮಗಳಿಗಾಗಲಿ ಉಪಯೋಗಿಸುವಾಗ ಅದು ಪುರುಷಾರ್ಥಸಾಧನವೆನಿಸುವುದಿಲ್ಲವೆ"ಎಂದರೆ, ಅವೂ ಉತ್ತಮವಾದ ಪುರುಷಾರ್ಥಗಳಲ್ಲ!ಏಕೆಂದರೆ, ಧನವನ್ನು ಭೋಗಕ್ಕುಪಯೋಗಿಸುವುದರಿಂದ ಕಾಮವನ್ನು ತೀರಿಸಿಕೊಳ್ಳಬಹುದು.ಆ ಧನವನ್ನು ದಾನಮಾಡುವುದರಿಂದ ಮತ್ತಷ್ಟು ಭಾಗ್ಯವು ವೃದ್ಧಿಯಾಗಬಹುದು. ಯಜ್ಞಾದಿಕರ್ಮಗಳಿಗಾಗಿ ಆ ಧನವನ್ನುಪ

ಯೋಗಿಸುವುದರಿಂದ, ಆ ಕರ್ಮಫಲವನ್ನು ಅನುಭವಿಸುವುದಕ್ಕಾಗಿ ತಿರುಗಿ ಮತ್ತೊಮ್ಮೆ ಜನ್ಮವನ್ನೆತ್ತಬಹುದು. ಈಗಲೋ ನಾಳೆಯೋ ಮೃತ್ಯುವಿನ ಬಾಯಿಗೆತುತ್ತಾಗಬೇಕಾದ ಮನುಷ್ಯನಿಗೆ, ಈ ಸ್ವಲ್ಪಕಾಲದ ಕಾಮಾದಿಗಳಿಂದ ಆಗಬೇಕಾದುದೇನು ? ಆದುದರಿಂದ ಧನವೆಂಬುದನ್ನು ದೂರದಲ್ಲಿ ತ್ಯಜಿಸುವುದೇ ಮನುಷ್ಯನಿಗೆ ಸರ್ವವಿಧದಿಂದಲೂ ಶ್ರೇಯಸ್ಕರವು. ಮುಖ್ಯವಾಗಿ ಭಗವಂತನು ಈಗ ನನ್ನಲ್ಲಿ ಪ್ರಸನ್ನನಾದುದರಿಂದಲೇ, ನನಗೆ ಈ ಸ್ಥಿತಿಯುಂಟಾಗಿರಬೇಕು. ಅದರಿಂದಲ್ಲವೇ ನನಗೆ ಸಂಸಾರಸಾಗರವನ್ನು ದಾಟಿಸತಕ್ಕ ನಾವೆಯಂತೆ ಈ ನಿರ್ವೇದವು ಹುಟ್ಟಿತು. ನಾನು ಹಿಂದಿನಂತೆ ಐಶ್ವರ್ಯಮದದಿಂದಿದ್ದರೆ, ನನಗೆ ಈಬುದ್ಧಿಯು ಹುಟ್ಟುತಿತ್ತೇನು? ಇನ್ನು ನನಗೆ ಉಳಿದಿರುವ ಅಲ್ಪಸ್ವಲ್ಪ ಆಯುಶ್ಶೇಷದಲ್ಲಿಯಾದರೂ ನಾನು ನನ್ನ ಶರೀರವನ್ನು ತಪಸ್ಸಿನಿಂದ ದಂಡಿಸಿ ಶೋಷಿಸುವೆನು. ಇನ್ನಾದರೂ ನಾನು ನಿರತಿಶಯಪುರುಷಾರ್ಥವೆನಿಸಿಕೊಂಡ ಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟು, ಎಚ್ಚರಿಕೆಯಿಂದಿದ್ದರೆ, ದೇವತೆಗಳು ನನ್ನಲ್ಲಿ ಪ್ರಸನ್ನರಾಗಿ ನನ್ನನ್ನುದ್ಧರಿಸಬಹುದು. "ಈ ಅಂತ್ಯಕಾಲದಲ್ಲಿ ಆ ಪ್ರಯತ್ನವು ಸಾಧ್ಯವೆ?" ಎಂದು ಶಂಕಿಸಬೇಕಾಗಿಲ್ಲ. ಖಟ್ವಾಂಗನೆಂಬವನು ಒಂದು ಮುಹೂರ್ತಕಾಲಮಾತ್ರದಲ್ಲಿ ಬ್ರಹ್ಮಲೋಕವನ್ನೇ ಸಾಧಿಸಲಿಲ್ಲವೆ?" ಎಂದು ನಿಶ್ಚಯಿಸಿದನು.

ಉದ್ಧವಾ! ಆ ಅವಂತಿದೇಶದ ಬ್ರಾಹ್ಮಣನು ಹೀಗೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ತನ್ನಹೃದಯದಲ್ಲಿ ಬಹುಕಾಲದಿಂದ ದುರ್ಭೇದ್ಯಗಳಾಗಿದ್ದ ರಾಗದ್ವೇಷಾದಿಗಳೆಂಬ ಹೃದಯಗ್ರಂಥಿಗಳನ್ನು ನೀಗಿ, ನಿಷ್ಕಲ್ಮಷನಾಗಿ, ಪ್ರಾಣೇಂದ್ರಿಯಗಳನ್ನು ನಿಗ್ರಹಿಸಿ, ಭಿಕ್ಷಾರ್ಥವಾಗಿ ಅಲ್ಲಲ್ಲಿ ನಗರಗಳನ್ನೂ, ಗ್ರಾಮಗಳನ್ನೂ ಪ್ರವೇಶಿಸುತ್ತ, ನಿಂತಲ್ಲಿ ನಿಲ್ಲದೆ, ಯಾವುದರಲ್ಲಿಯೂ ಆಸಕ್ತಿಯನ್ನಿಡದೆ, ತಾನು ಇಂತವನೆಂದು ಯಾರಿಗೂ ತಿಳಿಯದಂತೆ ಭೂಮಿಯನ್ನು ಸಂಚರಿಸುತಿದ್ದನು. ಹಿಂದೆ ಧನಮದದಿಂದ ಗರ್ವಿಷ್ಠನಾಗಿದ್ದ ಆ ಬ್ರಾಹ್ಮಣನೇ ಈಗ ಮುದುಕನಾಗಿ, ಅವಧೂತವೇಷದಿಂದ ಭಿಕ್ಷೆಗಾಗಿ ಸುತ್ತುತ್ತಿರುವುದನ್ನು ನೋಡಿ, ಕೆಲವುದುಷ್ಟರು, ಅವನನ್ನು ಗುರುತುಹಿಡಿದು, ನಾನಾವಿಧಕುಚೇಷ್ಟೆಗಳಿಂದ ಪೀಡಿಸತೊಡಗಿದರು. ಕೆಲವರು

ಅವನ ತ್ರಿದಂಡವನ್ನು ಕಿತ್ತುಕೊಂಡರು! ಕೆಲವರು ಅವನ ಕೈಯಲ್ಲಿದ್ದ ಕ
ಮಂಡಲುವನ್ನು ಕಿತ್ತು ಬಿಸಾಡಿದರು ! ಮತ್ತೆ ಕೆಲವರು ಅವನ ಕೃಷ್ಣಾಜಿನ
ವನ್ನೂ, ಕೆಲವರು 'ಅವನ ಜಪಮಣಿಯನ್ನೂ, ಕೆಲವರು ಅವನ ಕಂಥೆಯನ್ನೂ
ಕೆಲವರು ನಾರುಮಡಿಯನ್ನೂ ಬಲಾತ್ಕಾರದಿಂದ ಕಿತ್ತುಕೊಂಡರು. ಹೀಗೆ
ಕಿತ್ತುಕೊಂಡ ವಸ್ತುಗಳನ್ನು ಹಿಂತಿರುಗಿ ಕೊಡುವುದಾಗಿ ಆಸೆತೋರಿ
ಸಿ, ಅವನನ್ನು ಕರೆದು, ಅವನು ಸಮೀಪಕ್ಕೆ ಬಂದಾಗ ವಂಚಿಸುತಿದ್ದರು.
ಅವನು ಭಿಕ್ಷೆಯೆತ್ತಿತಂದ ಅನ್ನವನ್ನು ನದೀತೀರದಲ್ಲಿ ಕುಳಿತು ಭುಜಿಸುವಕಾ
ಲಕ್ಕೆ ಸರಿಯಾಗಿ, ಕೆಲವು ಪಾಪಿಷ್ಠರು ಬಂದು, ಆ ಅನ್ನದಮೇಲೆ ಮೂತ್ರ
ವನ್ನು ಸುರಿದು, ಅವನ ತಲೆಯಮೇಲೆ ಎಂಜಲುಗುಳಿ ಹೋಗುತಿದ್ದರು. ಅವ
ನು ಮಾತಾಡದೆ ಮೌನವ್ರತದಿಂದಿರುವಾಗ, ಕೆಲವು ದುಷ್ಟರು ಬಲಾತ್ಕಾರ
ದಿಂದ ಮಾತಾಡಿಸುವರು. ಮಾತಾಡದಿದ್ದರೆ ತಲೆಯಮೇಲೆ ಹೊಡೆಯುವ
ರು. ಕೆಲವರು “ಇದೋ ! ಇವನು ಕಳ್ಳನೆಂದು ಹೇಳಿ ಅವನನ್ನು ಬೆದ
ರಿಸುವರು. ಕೆಲವರು ಹಗ್ಗಗಳಿಂದ ಅವನ ಕೈಕಾಲುಗಳನ್ನು ಬಿಗಿದುಕಟ್ಟಿ”
“ಇವನನ್ನು ಕೊಲ್ಲಿರಿ ! ಬಡಿಯಿರಿ” ಎಂದು ಕೂಗುವರು. ಕೆಲವರು 'ಅವನಮುಂ
ದೆ ಗುಂಪುಗೂಡಿ. “ಎಲಾ ! ಈತನು ಈಗ ದೊಡ್ಡಧಾರ್ಮಿಕನಂತೆ ವೇಷವ
ನ್ನು ಹಾಕಿರುವನು. ಇವನನ್ನು ನಂಬಿದರೆ ಮೋಸವೇ ! ತನ್ನ ಧನವೆಲ್ಲವೂ
ನಷ್ಟವಾಗಿ, ತನ್ನ ಸ್ವಜನರೂ ಕೈಬಿಟ್ಟುದರಿಂದ, ಬದುಕುವುದಕ್ಕೆ ದಾರಿಯಿ
ಲ್ಲದೆ, ಇವನು ಈ ಕಪಟವೇಷವನ್ನು ತೋರಿಸುವನು” ಎಂದು ಅವಾಚ್ಯವಾ
ಗಿ ಬೈದು ಅವಮಾನಿಸುವರು. ಮತ್ತೆ ಕೆಲವರು ಅವನನ್ನು ನೋಡಿ “ಅಬ್ಬಾ !
ಇವನ ಬಲವೆಷ್ಟು ನೋಡಿರಿ! ಬೆಟ್ಟದಂತೆ ಅತ್ತಿತ್ತ ಕದಲದೆ ಹೇಗೆ ಧೈರ್ಯದಿಂದಿ
ರುವನು ! ಏನೋ ಕಪಟಸಾಧನೆಗಾಗಿ ಮೌನವೆಂಬ ನೆವದಿಂದ ಬಕದಂತೆ
ಹೊಂಚುಹಾಕುತ್ತ, ಹೀಗೆಯೇ ತನ್ನ ಹೊಟ್ಟೆಹೊರೆಯುತ್ತಿರುವನಲ್ಲಾ! ”
ಎಂದು ಪರಿಹಾಸ್ಯಮಾಡಿ ನಗುವರು. ಕೆಲವು ನೀಚರು, ಅವನಕಡೆಗೆ ಅಪಾನ
ವಾಯುವನ್ನು ಬಿಡುವರು. ಕೆಲವರು ಅವನ ಕೊರಲಿಗೆ ಹಗ್ಗವನ್ನು ಕಟ್ಟಿ ಕಪಿ
ಗಳನ್ನಾಡಿಸುವಂತೆ ಆಡಿಸುವರು. ಆ ಬ್ರಾಹ್ಮಣನಾದರೋ ಹೀಗೆ ಆಗಾಗ
ಇತರರಿಂದ ತನಗಾಗುವ ಹಿಂಸೆಗಳನ್ನಾಗಲಿ, ದೈವಿಕಗಳಾದ ಶೀತೋಷ್ಣಾದಿ

ಬಾಧೆಗಳನ್ನಾಗಲಿ,ವಯಸ್ಸಿನಿಂದ ತನ್ನ ದೇಹಜನ್ಯಗಳಾದ ಜರಾದಿದುಃಖಗ ಳನ್ನಾಗಲಿ ಗಮನಿಸದೆ, ತಾಳ್ಮೆಯಿಂದ ಸಹಿಸಿಕೊಂಡು, ಅವೆಲ್ಲವೂ ತನ್ನ ಪ್ರಾರಬ್ಧಕರ್ಮಳಿಂದಲೇ ಉಂಟಾದುವೆಂದೂ, ಅವುಗಳನ್ನು ತಾನು ಅನುಭವಿ ಸಿಯೇ ತೀರಬೇಕೆಂದೂ ನಿಶ್ಚಯಿಸಿ, ಒಂದೇ ದೃಢದಿಂದಿದ್ದನು. ಅನೇಕದು ರ್ಜನರುತನ್ನನ್ನು ಅವಮಾನಪಡಿಸಿ,ನಾನಾಕಡೆಗೆ ಎಳೆದಾಡುತ್ತಿರುವಾಗಲೂ ಆ ಬ್ರಾಹ್ಮಣನು, ತನ್ನ ಧರ್ಮವನ್ನೂ, ಸಾತ್ವಿಕವಾದ ಧೈರ್ಯವನ್ನೂ ಬಿಡದೆ ಈ ಮುಂದೆ ಹೇಳುವ ಗಾಥೆಯನ್ನು ಹಾಡಿದನು. “ಈನನ್ನಕಷ್ಟಕ್ಕೆ ಬೇರೆ ಜನರಾರೂ ಕಾರಣರಲ್ಲ. ಅಥವಾ ಸರ್ವೇಶ್ವರನನ್ನಾಗಲಿ, ಗ್ರಹಗತಿಯನ್ನಾಗ ಲಿ, ಕರ್ಮಗಳನ್ನಾಗಲಿ, ಕಾಲವನ್ನಾಗಲಿ ಸುಖದುಃಖಗಳಿಗೆ ಕಾರಣವೆಂದು ಹೇಳುವುದಕ್ಕಿಲ್ಲ! ಮುಖ್ಯವಾಗಿ ಸುಖದುಃಖಗಳೆಲ್ಲಕ್ಕೂ ಮೂಲಕಾರಣವು ಅವರವರ ಮನಸ್ಸೇ! ಜ್ಞಾನಿಗಳಾದ ಹಿರಿಯರ ಅಭಿಪ್ರಾಯವೂ ಇದೇ! ಏಕೆಂದರೆ, ಮನಸ್ಸೇ ಜನರನ್ನು ಸಂಸಾರಚಕ್ರದಲ್ಲಿ ಸುತ್ತಿಸುವುದು. ದುರ್ದಮವಾದ ಆಯಾಮನುಷ್ಯನ ಮನಸ್ಸೇ ಅವನಲ್ಲಿ ಸತ್ವಾದಿಗುಣಗ ಳನ್ನು ಹುಟ್ಟಿಸುವುದು. ಆಯಾಗುಣಗಳಿಗೆ ತಕ್ಕಂತೆ ಮನುಷ್ಯನು ಸಾತ್ವಿಕ ರಾಜಸ ತಾಮಸಗಳೆಂಬ ಕರ್ಮಗಳಲ್ಲಿ ಪ್ರವರ್ತಿಸುವನು. ಆ ಕರ್ಮಗಳಿಗೆ ತಕ್ಕಂತೆ ದೇವತಿರ್ಯಙ್ಮನುಷ್ಯಾದಿಜನ್ಮಗಳುಂಟಾಗುವುವು. ಆಯಾಜನ್ಮಗ ಳಲ್ಲಿಯೂ ತಿರುಗಿ ಆ ಮನಸ್ಸೇ ಗುಣಗಳ ಸೃಷ್ಟಿಗೆ ಕಾರಣವಾಗಿ,ಅದರಿಂದ ಕರ್ಮಪ್ರವೃತ್ತಿಯೂ, ಆ ಕರ್ಮಗಳಿಂದ ಪುನರ್ಜನ್ಮವೂ ಉಂಟಾಗುವುದು.

ಆದರೆ ಮನಸ್ಸು ದೇಹಸಂಬಂಧದಿಂದ ಪ್ರಾಣಿಗಳಿಗೆ ಸುಖದುಃಖಗ ಳನ್ನುಂಟುಮಾಡುವುದಾದರೆ, ಸರ್ವಜೀವಾಂತರಾತ್ಮನಾದ ಪರಮಾತ್ಮನೂ ಎಲ್ಲಾದೇಹದೊಳಗೆ ಸೇರುವಾಗ ಅವನಿಗೂ ಆ ಸುಖದುಃಖಾನುಭವವಿರ ಬೇಕಲ್ಲವೆ?” ಎಂದರೆ, ಪರಮಾತ್ಮನು ನನ್ನಂತಹ ಎಲ್ಲಾಜೀವಗಳಿಗೂ ಧಾರ ಕನಾಗಿಯೂ ನಿಯಾಮಕನಾಗಿಯೂ ಇದ್ದು, ಎಡೆಬಿಡದೆ ಅವುಗಳಲ್ಲಿ ಸೇರಿ ದ್ದರೂ, ದೇಹಧರ್ಮಗಳು ಅವನನ್ನು ಮುಟ್ಟಲಾರವು. ಅವನು ಸುವರ್ಣದಂ ತೆ ಸ್ವಯಂಪ್ರಕಾಶವುಳ್ಳವನು. ಚೇತನನ ಮನಸ್ಸು ನಾನಾಬಗೆಯ ಸಂಕ ಲ್ಪವಿಕಲ್ಪಗಳಿಗೆ ಎಡೆಯಾದರೂ,ಪರಮಾತ್ಮನು ಆ ಚೇತನನ ಬುದ್ಧಿಗೆ ಕೇವ

ಲಸಾಕ್ಷಿಯಾಗಿಮಾತ್ರ ನೆಲೆಗೊಂಡಿರುವನೇಹೊರತು, ತಾನು ಆ ಜೀವ
ನಂತೆ ಅಹಂಕಾರಮಮಕಾರಗಳಿಗೆ ತಕ್ಕ ಚೇಷ್ಟೆಗಳನ್ನು ನಡೆಸಲಾರನು.
ಜೀವನಾದರೋ, ತನ್ನದೇಹವನ್ನೇ ಆತ್ಮವೆಂದು ಭ್ರಮಿಸುತ್ತ, ವಿಷಯಾ
ನುಭವದಲ್ಲಿ ಬಿದ್ದು, ಶಬ್ದಾದಿವಿಷಯಗಳ ಸಂಗದಿಂದ ಬದ್ಧನಾಗುವನು.
ಆದುದರಿಂದ ಒಂದೇದೇಹದಲ್ಲಿ ಜೀವಪರಮಾತ್ಮರಿಬ್ಬರೂ ನೆಲೆಗೊಂಡಿದ್ದ
ರೂ, ಸುಖದುಃಖಗಳೆಲ್ಲವೂ ಜೀವನಿಗೇ ! ಗುಣಮೂಲಕಗಳಾದ ಕರ್ಮಗಳಿಗೆ
ವಶವಾಗುವುದರಿಂದಲೇ ಆ ಸುಖದುಃಖಗಳುಂಟಾಗುವುವೇಹೊರತು, ಶರೀ
ರಸಂಬಂಧಮಾತ್ರದಿಂದಲೇ ಸುಖದುಃಖಗಳುಂಟಾಗಲಾರವು. ಪರಮಾತ್ಮ
ನಿಗೆ ಗುಣಕರ್ಮವಶ್ಯತ್ವವಿಲ್ಲದುದರಿಂದ ಅವನಿಗೆ ಸುಖದುಃಖಗಳೂ ಇಲ್ಲವು.
ಆದುದರಿಂದ ಮನಸ್ಸೇ ಸುಖದುಃಖಗಳಿಗೆ ಮೂಲವು. ಆ ಮನೋನಿಗ್ರಹ
ವೇ ಸುಖದುಃಖನಿವೃತ್ತಿಗೂ ಪ್ರಧಾನೋಪಾಯವು. ಆದುದರಿಂದ ಲೋಕ
ದಲ್ಲಿ ಮನುಷ್ಯರು, ಪುರುಷಾರ್ಥಸಾಧನೆಗಾಗಿ ನಡೆಸತಕ್ಕ ದಾನಗಳು,ವರ್ಣಾ
ಶ್ರಮಧರ್ಮಗಳು, ಯಮನಿಯಮಗಳು, ವೇದಾಧ್ಯಯನಗಳು, ಯಜ್ಞಾದಿ
ಕರ್ಮಗಳು, ವ್ರತಗಳು, ಇವೆಲ್ಲಕ್ಕೂ ಮನೋನಿಗ್ರಹವೇ ಮುಖ್ಯಫಲವಾಗಿರ
ಬೇಕು. ಆದರೆ “ಈ ದಾನಾದಿಗಳೆಲ್ಲವೂ ಸಮಾಧಿಗೆ ಸಾಧನಗಳೆಂದು ಶ್ರುತಿ
ಗಳಲ್ಲಿ ಹೇಳಿರುವಾಗ,ಮನೋನಿಗ್ರಹವೇ ಇವುಗಳಿಗೆ ಮುಖ್ಯಫಲವೆಂದು ಹೇ
ಳುವುದಕ್ಕಾಧೀತೆ?” ಎಂದರೆ, ಸಮಾಧಿಯೆಂಬುದೂ ಮನೋನಿಗ್ರಹವೇ!ಹೇ
ಗೆಂದರೆ, ಬೇರೆವಿಷಯಗಳಿಗೆ ಹೋಗದಂತೆ ಮನಸ್ಸನ್ನಾಕರ್ಷಿಸಿ ಪರಮಾತ್ಮ
ನಲ್ಲಿ ನಿಲ್ಲಿಸಿಡುವುದಲ್ಲವೇ ಸಮಾಧಿಯೆನಿಸುವುದು! ಈವಿಧವಾದ ಮನೋನಿಗ್ರ
ಹವೇ ಉತ್ತಮವಾದ ಯೋಗವು. ಮೋಕ್ಷದಲ್ಲಿಯೇ ದೃಷ್ಟಿಯಿಟ್ಟು ಈ ವಿ
ಧವಾದ ಮನೋನಿಗ್ರಹವನ್ನು ಸಾಧಿಸಿ, ರಾಗಾದಿಗಳಿಂದ ಕಲುಷಿತವಾಗದ
ಮನಸ್ಸುಳ್ಳವನಿಗೆ ದಾನಾದಿಗಳಿಂದ ಆಗಬೇಕಾದುದೇನೂ ಇಲ್ಲ! ಮನೋ
ನಿಗ್ರಹಕ್ಕೆ ಸಾಧನವಾಗದಿದ್ದ ಆ ದಾನಾದಿಗಳಿಂದ ಬೇರೆ ಯಾವ ಪ್ರ
ಯೋಜನವೂಇಲ್ಲ! ದಾನಾದಿಗಳೆಲ್ಲವೂ ಮನೋನಿಗ್ರಹರೂಪವಾದ ಸಮಾ
ಧಿಗೇ ಅಂಗಗಳಾಗಿರಬೇಕಲ್ಲದೆ ಬೇರೆಯಲ್ಲ. ಆ ಪರಮಪುರುಷನೊಬ್ಬನುಹೊ
ರತು, ಇತರದೇವತೆಗಳೆಲ್ಲರೂ ಮನಸ್ಸಿಗೆ ವಶವಾಗಿರತಕ್ಕವರೇಹೊರತು, ಮ

ನಸ್ಸು ಅವರೊಬ್ಬರಿಗೂ ವಶವಾಗತಕ್ಕುದಲ್ಲ! ಹಾಗಿದ್ದರೆ ಒಬ್ಬರಿಗೂ ವಶವಾಗದ ಮನಸ್ಸನ್ನು ದಾನಾದಿಗಳಿಂದ ವಶಗೊಳಿಸುವುದಕ್ಕಾದೀತೆ ? ಎಂದರೆ, ಇಂದ್ರಿಯಾಧಿದೇವತೆಗಳಿಗೂ ದೇವನಾಗಿ, ಬಲಾಢ್ಯರಿಗೂ ಬಲಾಢ್ಯನಾಗಿ, ನಿಜತೇಜಸ್ಸಿನಿಂದಲೇ ಬೆಳಗುತ್ತಿರುವ ಪರಮಪುರುಷನು, ದಾನಾದಿಗಳಿಂದ ಆರಾಧಿಸಲ್ಪಟ್ಟರೆ, ಅವನು ದುರ್ನಿಗ್ರಹವಾದ ಆ ಮನಸ್ಸನ್ನೂ ವಶದಲ್ಲಿರಿಸಬಲ್ಲನು. ಆದುದರಿಂದ ಮೇಲೆಹೇಳಿದಂತೆ ಭಗವದಾರಾಧನವೊಂದುಹೊರತು ಬೇರೆ ಉಪಾಯಗಳಿಂದ ದುರ್ಜಯವಾಗಿಯೂ, ಶತ್ರುವಿನಂತೆ ಯಾವಾಗಲೂ ದುಃಖಪ್ರದವಾಗಿಯೂ, ರಾಗದ್ವೇಷಗಳೇ ಮೊದಲಾದ ನಿರಂಕುಶವೇಗವುಳ್ಳುದಾಗಿಯೂ ಇರುವ ಆ ಮನಸ್ಸನ್ನು ನಿಗ್ರಹಿಸಲಾರದುದಕ್ಕಾಗಿಯೇ ಅನೇಕಮೂಢರು, ಆ ಮನಸ್ಸಿನ ಪ್ರವರ್ತನೆಗೆ ತಕ್ಕಂತೆ, ಕೆಲವರಲ್ಲಿ ನಿಷ್ಕಾರಣವೈರವನ್ನೂ, ಕೆಲವರಲ್ಲಿ ಸ್ನೇಹವನ್ನೂ, ಕೆಲವರಲ್ಲಿ ಔದಾಸೀನ್ಯವನ್ನೂ ತೋರಿಸುವರು. ದೇಹೋತ್ಪತ್ತಿಗೆ ಮನಸ್ಸೇ ಮೂಲವು. ಮೂಢಬುದ್ಧಿಯುಳ್ಳವರು ದೇವಮನುಷ್ಯಾದ್ಯಾಕಾರಗಳಿಂದ ಅನೇಕವಿಧವಾಗಿರುವ ತಮ್ಮ ದೇಹವನ್ನೇ ತಾವೆಂದು ತಿಳಿದು, ಅಹಂಕಾರಮಮಕಾರಗಳಿಂದ ಬುದ್ಧಿಗೆಟ್ಟು, ತಾನೆಂದೂ, ಅನ್ಯನೆಂದೂ ಬ್ರಾಹ್ಮಣನೆಂದೂ, ಶೂದ್ರನೆಂದೂ ಭೇದಭ್ರಾಂತಿಯಿಂದ ದುರಂತವಾದ ಸಂಸಾರವೆಂಬ ತಮಸ್ಸಿನಲ್ಲಿ ಬಿದ್ದು ಕಳವಳಿಸುವರು, ಒಬ್ಬ ಪುರುಷನು ಮತ್ತೊಬ್ಬನ ಸುಖದುಃಖಗಳಿಗೆ ಕಾರಣವೆಂಬುದು ಹೇಗೆ ? ಇಲ್ಲಿ ಪುರುಷನೆಂಬ ಶಬ್ದಾರ್ಥವಾವುದು ? ದೇಹವೇ? ಆತ್ಮವೇ? ಇವೆರಡೂ ಸೇರಿದುದೆ! ಅಥವಾ ಆ ದೇಹಾತ್ಮಗಳೆರಡಕ್ಕೂ ಅಂತರಾತ್ಮನಾದ ಪರಮಪುರುಷನೆ? ಇವುಗಳಲ್ಲಿ ಯಾವುದೆಂದು ಗ್ರಹಿಸಬಹುದು. ಯಾವುದೂ ಸಮಂಜಸವಾಗುವುದಿಲ್ಲ. ಪುರುಷಶಬ್ದಕ್ಕೆ ಶರೀರಮಾತ್ರವೆಂದೇ ಗ್ರಹಿಸಿ, ಸುಖದುಃಖಕಾರಣವೂ, ಆ ಸುಖದುಃಖಗಳನ್ನು ಅನುಭವಿಸುವುದೂ ಶರೀರಮಾತ್ರವೇ ಎಂದು ಹೇಳಿದಪಕ್ಷದಲ್ಲಿ, ಅದರಿಂದ ಆತ್ಮನಿಗೇನಾಯಿತು? ಶರೀರಮಾತ್ರಗಳಲ್ಲಿ ಪರ್ಯವಸಾನಹೊಂದುವ ಸುಖದುಃಖಗಳಿಗಾಗಿ ಆತ್ಮನು ಚಿಂತಿಸಬೇಕಾದುದೇಇಲ್ಲ! ಪ್ರತಿಯೊಬ್ಬನೂ ತನ್ನ (ಆತ್ಮದ) ಸುಖಪ್ರಾ

ಪ್ತಿಗೂ, ದುಃಖನಿವೃತ್ತಿಗೂ ಯತ್ನಿಸುವನು. ಆ ಸುಖದುಃಖಗಳು ಆತ್ಮನಿ ಗಿಲ್ಲದಪಕ್ಷದಲ್ಲಿ ಅದಕ್ಕಾಗಿ ಯತ್ನಿಸಲಾರನಷ್ಟೆ? ಈ ಕಾರಣಗಳಿಂದ ದೇಹವೇ ಸುಖದುಃಖಭಾಗಿಯೆಂದು ಹೇಳುವುದಕ್ಕಿಲ್ಲ! ಇದಲ್ಲದೆ, ಜಡವಾದ ದೇಹಕ್ಕೆ ಸುಖದುಃಖಕರ್ತೃತ್ವವನ್ನು ಹೇಳುವುದಕ್ಕೂ ಸಂಭವವಿಲ್ಲ. ಏಕೆಂದರೆ, ಕರ್ತೃತ್ವವೆಂಬುದು ಪ್ರಯತ್ನಮೂಲಕವಾದುದು. ಪ್ರಯತ್ನವೂ ಸುಖದುಃಖಗಳೂ ಜ್ಞಾನಾಶ್ರಯಗಳು. ಅಚೇತನಗಳಾದ ದೇಹಗಳಿಗೆ, ಜ್ಞಾನರೂಪಗಳಾದ ಯತ್ನಾದಿಗಳನ್ನು ಹೇಳುವುದೂ ಅಸಂಭವವೇ! ಒಬ್ಬ ಪುರುಷನೆಂಬುದಕ್ಕೆ ದೇಹಾತ್ಮಗಳೆರಡರ ಸಂಯೋಗವೆಂಬ ಅರ್ಥವನ್ನು ಗ್ರಹಿಸಿ, ದೇಹವಿಶಿಷ್ಟವಾದ ಒಂದಾತ್ಮವು, ಅದರಂತೆಯೇ ಇರುವ ಮತ್ತೊಂದಕ್ಕೆ ಸುಖದುಃಖಕಾರಣವೆಂದೂ ತಿಳಿಯುವುದಕ್ಕಿಲ್ಲ! ಏಕೆಂದರೆ, ಒಬ್ಬನು ಎಂದಾದರೂ ಒಮ್ಮೆ ತನ್ನ ಹಲ್ಲುಗಳಿಂದ ತನ್ನ ನಾಲಗೆಯನ್ನೇ ಕಚ್ಚಿಕೊಂಡು ಬಾಧೆಪಡುವುದುಂಟು! ಆಗ ಅವನು ಯಾರಮೇಲೆ ಕೋಪಿಸಬೇಕು?ಇಲ್ಲಿ ಆತ್ಮವೊಂದೇ ಅಲ್ಲವೆ?ಆ ಆತ್ಮದಿಂದ ಅಧಿಷ್ಠಿತವಾದ ಒಂದೇ ಶರೀರದಲ್ಲಿ,ಒಂದವಯವವು ದುಃಖಕರ್ತೃವಾಗಿಯೂ,ಮತ್ತೊಂದು ಆ ದುಃಖಕ್ಕೆ ವಿಷಯವಾಗಿಯೂ ಇದ್ದಂತಾಯಿತೇಹೊರತು ಆತ್ಮವನ್ನು ಬೇರೆಯಾಗಿ ಹೇಳುವುದಕ್ಕಿಲ್ಲ. ಆ ಒಂದೇ ಆತ್ಮವು ತನಗೆ ತಾನೇ ದುಃಖಕಾರಣವಾಗುವುದೆಂಬುದನ್ನೂ ಒಪ್ಪುವುದಕ್ಕಿಲ್ಲ. ಈ ನಿರೂಪಣದಿಂದ ದೇಹಕ್ಕೇ ಸುಖದುಃಖಕಾರಣತ್ವವನ್ನು ಹೇಳಿದಂತಾಗುವುದಲ್ಲವೆ? ಆದರೆ ಮನಸ್ಸಿನ ಪ್ರಮಾದದಿಂದ, ಆತ್ಮವು ತನಗೆ ತಾನೆಯಾಗಲಿ, ಮತ್ತೊಬ್ಬರಿಗಾಗಲಿ ದುಃಖಕಾರಣವಾಗಬಹುದೆಂದು. ತಿಳಿಯಬಾರದೆ"ಎಂದರೆ, ಆಗಲೂ ಮನಸ್ಸೇ ಸುಖದುಃಖಹೇತುವೆಂದು ಸ್ಪಷ್ಟವಾಗುವುದು. ಅಥವಾ ಆ ದೇಹಾತ್ಮಗಳೆರಡನ್ನೂ ಬಿಟ್ಟು, ಅವೆರಡಕ್ಕೂ ಅಂತರಾತ್ಮನಾದ ಈಶ್ವರನೇ ಒಂದು ಶರೀರದಲ್ಲಿದ್ದು ಸುಖದುಃಖಕಾರಣನಾಗಿಯೂ, ಮತ್ತೊಂದು ಶರೀರದಲ್ಲಿದ್ದು ಅವುಗಳನ್ನನುಭವಿಸತಕ್ಕವನಾಗಿಯೂ ಇರಬಾರದೆ?" ಎಂದರೆ, ಆಗಲೂ ಆ ಸುಖದುಃಖಗಳಲ್ಲಿ ಜೀವಾತ್ಮನಿಗೇನೂ ಸಂಬಂಧವಿಲ್ಲ! ಇದಲ್ಲದೆ, ವೈಷಮ್ಯ, ನೈರ್ಘೃಣ್ಯ, ಸುಖ ದುಃಖಶೀಲತ್ವಾದಿ ವಿಕಾ

ರವುಳ್ಳವುಗಳಿಗೇ ಆ ಸುಖದುಃಖಾದಿಗಳನ್ನು ಹೇಳಬಹುದೇಹೊರತು, ನಿರ್ವಿಕಾರನಾದ ಪರಮಾತ್ಮನಿಗೆ ಅವುಗಳ ಸಂಬಂಧವನ್ನೂ ಹೇಳುವುದಕ್ಕಿಲ್ಲ. ಇದಲ್ಲದೆ ಪರಮಪುರುಷನಿಗೆ ಪ್ರಕೃತಿಪುರುಷರೆಂಬಿವೆರಡೂ ಶರೀರವೆನಿಸಿರುವುವು. ಅವುಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಬಾಧೆಯುಂಟಾಯಿತೆಂದರೆ, ತನ್ನ ಶರೀರವನ್ನು ತನ್ನ ಶರೀರದಿಂದಲೇ ನೋಯಿಸಿಕೊಂಡಂತಾಗುವುದಲ್ಲವೆ? ಒಬ್ಬ ಮನುಷ್ಯನ ದೇಹದಲ್ಲಿ ಒಂದವಯವದಿಂದ ಮತ್ತೊಂದವಯವಕ್ಕೆ ಪೆಟ್ಟು ತಗುಲಿದಾಗ, ಅವನು ಯಾವುದರಮೇಲೆ ಕೋಪಿಸಿಕೊಳ್ಳಬಹುದು? ತನ್ನನ್ನೇ ತಾನು ಕೋಪಿಸಿಕೊಳ್ಳಬೇಕು! ತನ್ನನ್ನೇತಾನು ನೋಯಿಸಿಕೊಂಡು, ಅದಕ್ಕಾಗಿ ತನ್ನ ಮೇಲೆಯೇ ಕೋಪಿಸುವವರು ಹುಚ್ಚರಲ್ಲವೆ? ಆದುದರಿಂದ ಅಂತರಾತ್ಮನಾದ ಪರಮಪುರುಷನನ್ನಾದರೂ ಸುಖದುಃಖಕಾರಣನೆಂದು ಹೇಳುವುದು ಯುಕ್ತವಲ್ಲ" ನಿರ್ವಿಕಾರನಾದ ಪರಮಪುರುಷನಿಗೆ ಸುಖದುಃಖ ಕಾರಣತ್ವವನ್ನು ಹೇಳದಿದ್ದರೆ ಹೋಗಲಿ! ದೇಹಸಂಬಂಧದಿಂದ ವಿಕಾರಿಯಾದ ಪ್ರತ್ಯಗಾತ್ಮನೇ ಅವುಗಳಿಗೆ ಹೇತುವೆಂದು ತಿಳಿಯಬಾರದೆ? ಎಂದರೆ, ಆಗ ವಿಕಾರಾಶ್ರಯತ್ವವು ದೇಹಿಗೆ ಸಹಜವೇಆಯಿತು. ಹೀಗೆ ತನಗೆ ಸ್ವಭಾವಪ್ರಯುಕ್ತವಾದ ವಿಕಾರಗಳಿಗಾಗಿ ಮತ್ತೊಬ್ಬರನ್ನು ಕಾರಣವಾಗಿ ತಿಳಿದು ಪರಿತಪಿಸುವುದೇಕೆ? ಇದರಮೇಲೆ ಆತ್ಮಕ್ಕಿಂತಲೂ ಬೇರೆ ಯಾವುದಕ್ಕೂ ಕಾರಣತ್ವವನ್ನು ಹೇಳದೆ, ಕೇವಲಪ್ರತ್ಯಗಾತ್ಮವೇ ಸುಖದುಃಖಕಾರಣವೆಂದೂ, ಆ ಸುಖದುಃಖಗಳನ್ನನುಭವಿಸತಕ್ಕುದೆಂದೂ ಹೇಳುವಪಕ್ಷದಲ್ಲಿ, ಅದು ಮೊದಲೇ ಸುಳ್ಳಾಗುವುದು. ಕೇವಲಜ್ಞಾನಾನಂದೈಕರಸನಾಗಿಯೂ, ನಿರ್ವಿಕಾರನಾಗಿಯೂ ಇರುವ ಶುದ್ಧಾತ್ಮಸ್ವರೂಪಕ್ಕೆ ಸುಖದುಃಖಾದಿವಿಕಾರಗಳೇ ಅಸಂಭವವು. ಜನ್ಮಾದಿಸ್ಥಾನಗಳಲ್ಲಿರುವ ಸೂರ್ಯಾದಿಗ್ರಹಗಳನ್ನು ಸುಖದುಃಖಕಾರಣಗಳೆಂದು ತಿಳಿಯಬಾರದೆ? ಎಂದರೆ, ಆತ್ಮನಿಗೆ ಅವುಗಳ ಸಂಬಂಧವೆಲ್ಲಿಯದು? ಜನ್ಮವೆಂಬುದು ಶರೀರಕ್ಕೇಹೊರತು ಆತ್ಮನಿಗಲ್ಲ. ಹೀಗೆ ಆತ್ಮನಿಗೆ ಜನ್ಮವೇ ಇಲ್ಲದಿರುವಾಗ, ಗ್ರಹಗತಿಯನ್ನೆಣಿಸುವುದು ಹೇಗೆ? ಜನ್ಮಾಶ್ರಯವಾದ ದೇಹಕ್ಕೇ,ಗ್ರಹಗಳು ಗತಿಭೇದದಿಂದ ಸುಖದುಃಖಕಾರಣಗಳೆಂದು ತಿಳಿಯಬಾರದೆ?ಎಂದರೆ, ಆಗಲೂ ಅದರಿಂದ ಆತ್ಮನಿಗೇನು? ಗ್ರ

ಹುಗತಿಗಳಿಂದ ಪ್ರಾಣಿಗಳಿಗೆ ಸುಖದುಃಖಗಳುಂಟೆಂದು ಹೇಳಿದ ಜ್ಯೋತಿಷ್ಕ ರೇ, ಒಂದು ಗ್ರಹದಿಂದ ಮತ್ತೊಂದು ಗ್ರಹಕ್ಕೆ ಪೀಡೆಯುಂಟೆಂದೂ ಹೇಳು ವರು. ಆವೆರಡಕ್ಕಿಂತಲೂ ಭಿನ್ನನಾದ ಪುರುಷನು ಯಾವುದಕ್ಕಾಗಿ ಕೋಪಿ ಸಬೇಕು? ಆದರೆ ಸುಖದುಃಖಗಳಿಗೆ ಕರ್ಮವೇ ಮೂಲವೆಂದು ಹೇಳಬಾರದೆ ? ಎಂದರೆ, ಸ್ವಯಂಪ್ರಕಾಶರೂಪನಾಗಿಯೂ, ನಿರ್ವಿಕಾರನಾಗಿಯೂ, ಇರು ವ ಆತ್ಮನನ್ನು ಆ ಕರ್ಮಗಳು ತಾನೇ ಏನುಮಾಡಬಲ್ಲುವು ? ಸುಖದುಃಖಗ ಳಾಗಲಿ, ತನ್ಮೂಲಕಗಳಾದ ಶುಭಾಶುಭಕರ್ಮಗಳಾಗಲಿ ಆತ್ಮನಿಗಿಲ್ಲ. ಹಾಗಿ ಯೇ ದೇಹವೆಂಬುದು ಅಚೇತನವಾದುದರಿಂದ, ಅದೂ ತಾನಾಗಿ ಯಾವ ಕ ರ್ಮಪ್ರವೃತ್ತಿಗೂ ಸಮರ್ಥವಲ್ಲ! ಜಡವಾದ ದೇಹವು ಕರ್ಮಕ್ಕೆ ಸಾಧನಮಾತ್ರ ವಾಗಿರುವುದು. ಆದುದರಿಂದ ಜಡತ್ವಾಜಡತ್ವಗಳೆಂಬ ವಿರುದ್ಧಭಾವಗಳೆರ ಡೂ ಏಕೀಭವಿಸಿದ್ಧಕಡೆಯಲ್ಲಿಯೇ ಕರ್ಮಪ್ರವೃತ್ತಿಯೂ, ಕರ್ಮಾಚರಣವೂ, ಕರ್ಮಮೂಲಕಗಳಾದ ಸುಖದುಃಖಾನುಭವಗಳೂ ಇರಬೇಕು. ಈ ವಿರುದ್ಧ ಗುಣಗಳೆರಡೂ ಒಂದೇ ವಸ್ತುವಿನಲ್ಲಿ ಸೇರಿರುವ ಸಂಭವವಿಲ್ಲ!ಏಕೆಂದರೆ,ದೇ ಹವು ಜಡವೆನಿಸಿರುವುದು. ಜೀವಾತ್ಮನಾದರೋ ಸ್ವಯಂಪ್ರಕಾಶಸ್ವರೂ ಪನು. ಈ ಪರಸ್ಪರವಿರುದ್ಧಸ್ವಭಾವಗಳನ್ನು ಒಂದೇ ವಸ್ತುವಿನಲ್ಲಿ ಹೇಳು ವುದಕ್ಕಿಲ್ಲ ! ಹೀಗಿರುವಾಗ ಕರ್ಮಕ್ಕೆ ಯಾವುದು ಮೂಲವೆಂದು ತಿಳಿದು, ಯಾತರಮೇಲೆ ಕೋಪಿಸಿಕೊಳ್ಳಬಹುದು? ಆದುದರಿಂದ ಕರ್ಮಗಳೇ ಸುಖ ದುಃಖಹೇತುಗಳೆಂಬುದೂ ಯುಕ್ತವಲ್ಲ. ಆದರೆ ಕರ್ಮಗಳೇ ಜೀವನಿಗೆ ಸಂ ಸಾರಹೇತುವೆಂದು ತತ್ವಜ್ಞರಿಂದ ನಿರ್ಣಯಿಸಲ್ಪಟ್ಟಿದ್ದರೂ, ಆ ಕರ್ಮಗ ಳಿಗೂ ಮನಸ್ಸಿನ ಅಜ್ಞತೆಯೇ ಮೂಲಕಾರಣವೆಂದು ಈ ವಿಚಾರಗಳಿಂದ ಸ್ಪಷ್ಟವಾಗುವುದು. ಕಾಲವನ್ನು ಸುಖದುಃಖಕಾರಣವೆಂದು ಹೇಳಬಾರದೆ ? ಎಂದರೆ, ಸ್ವಭಾವದಿಂದ ಸುಖದುಃಖಗಳಲ್ಲಿ ಸಂಬಂಧವಿಲ್ಲದ ಆತ್ಮನನ್ನು ಕಾಲವುತಾನೇ ಏನುಮಾಡಬಲ್ಲುದು ? ಸಹಜವಾಗಿ ಸುಖದುಃಖಸಂಬಂಧ ವಿಲ್ಲದ ಆತ್ಮಸ್ವರೂಪವು, ಕಾಲವಶದಿಂದ ಆ ಸುಖದುಃಖಗಳಿಗೆ ಈ ಡಾಗುವುದೆಂಬುದನ್ನು ಅಂಗೀಕರಿಸುವಪಕ್ಷದಲ್ಲಿ, ಅದೇಕಾಲದಿಂದ ಅಗ್ನಿಗೆ ಸ್ವಭಾವಸಿದ್ಧವಾದ ತಾಪವೂ, ಹಿಮಕ್ಕೆ ಸ್ವಭಾವಸಿದ್ಧವಾದ ಶೈತ್ಯವೂ

ತಪ್ಪಿಹೋಗಬೇಕಲ್ಲವೆ? ಹೀಗಾಗುವ ಸಂಭವವಿಲ್ಲ. ಅದರಂತೆಯೇ ಕಾಲವು ಆತ್ಮನಿಗೆ ಸುಖದುಃಖಹೇತುವಾಗುವುದೆಂಬುದನ್ನೂ ಒಪ್ಪಿಕೊಳ್ಳುವುದಕ್ಕಿಲ್ಲ. ಆದುದರಿಂದ ಒಬ್ಬನಿಗೆ ಬೇರೊಬ್ಬನು ಸುಖದುಃಖಕಾರಣನಾಗುವನೆಂದು ತಿಳಿಯುವುದೇ ತಪ್ಪು! ಅವನವನ ಮನಸ್ಸೇ ಅವನವನ ಸುಖಕ್ಕೂ ದುಃಖಕ್ಕೂ ಮೂಲವು. ಆದರೆ ಮನಸ್ಸೇ ಕಾರಣವೆಂಬುದನ್ನು ಅಂಗೀಕರಿಸಿದರೂ, ಆಸುಖದುಃಖಸಂಬಂಧದಲ್ಲಿ ಆತ್ಮನ ನಿಜಸ್ವಭಾವಕ್ಕೆ ಹಾನಿಯುಂಟಾದಹಾಗೆಯೇ ಆಯಿತಲ್ಲವೆ? ಎಂದು ಶಂಕಿಸಬಾರದು. ಆಗಲೂ ಆತ್ಮಸ್ವಭಾವಕ್ಕೇನೂ ಹಾನಿಯಿಲ್ಲ. ಅಗ್ನಿಜಲಾದಿಗಳಿಂದ ಮನುಷ್ಯನಿಗೆ ಅಪಾಯವು ಸಹಜವಾಗಿದ್ದರೂ, ಅಗ್ನಿಸ್ತಂಭ, ಜಲಸ್ತಂಭಾದಿಶಕ್ತಿಯುಳ್ಳವನು, ತನ್ನ ಶಕ್ತಿಯಿಂದ ಅವುಗಳನ್ನು ತಡೆಯಬಲ್ಲನಲ್ಲವೆ? ಇದರಿಂದ ಆ ಅಗ್ನಿಜಲಾದಿಗಳ ಸ್ವಭಾವವೇ ಕೆಟ್ಟುಹೋಯಿತೆಂದು ಗ್ರಹಿಸಬಹುದೆ? ಇದರಂತೆಯೇ ಆತ್ಮನು ಮನಸ್ಸನ್ನು ಸ್ತಂಭಿಸುವುದರಿಂದ, ಆಮನಸ್ಸಿನಮೂಲಕವಾಗಿ ಬಂದೊದಗತಕ್ಕ ಸುಖದುಃಖಗಳಿಗೆ ತಾನು ಈಡಾಗದೆ, ನಿಜಸ್ವಭಾವದಲ್ಲಿಯೇ ಇರಬಹುದು. ಮುಖ್ಯವಾಗಿ ದೇಹಕ್ಕಿಂತಲೂ ವಿಲಕ್ಷಣನಾದ ಆತ್ಮನಿಗೆ, ಹಿಂದೆಹೇಳಿದಂತೆ ಇತರಜನವಾಗಲಿ, ಅಂತರಾತ್ಮನಾಗಲಿ, ಆತ್ಮವಾಗಲಿ, ಗ್ರಹಗಳಾಗಲಿ, ಕಾಲವಾಗಲಿ, ಕರ್ಮವಾಗಲಿ ಅಥವಾ ಬೇರೆಯಾವುದಾಗಲಿ, ಯಾವಾಗಲೂ, ಎಲ್ಲಿಯೂ, ಯಾವವಿಧದಿಂದಲೂ ಸುಖದುಃಖಗಳನ್ನುಂಟುಮಾಡಲಾರವು. ಸಂಸಾರಕಾರಣವಾದ ಮನಸ್ಸೇ ದೇಹದಲ್ಲಿ ಆತ್ಮಾಭಿಮಾನವನ್ನು ಹುಟ್ಟಿಸಿ, ಅಹಂಕಾರಮಮಕಾರಗಳನ್ನುಂಟುಮಾಡುವುದು. ಆ ಉಪಾಧಿವಶದಿಂದಲೇ ಆತ್ಮನಿಗೆ ಸುಖದುಃಖಗಳು ತೋರುವುವೇಹೊರತು, ಅವು ಆತ್ಮನಿಗೆ ಸ್ವರೂಪದಿಂದ ಬಂದುವಲ್ಲ. ಎಂದರೆ, ಸಂಕಲ್ಪವಿಕಲ್ಪಾತ್ಮಕವಾದ ಮನಸ್ಸು ಎಚ್ಚರತಪ್ಪುವುದರಿಂದಲೇ ಅಹಂಕಾರಮಮಕಾರಗಳು ಹುಟ್ಟುವುವು. ಆ ಅಭಿಮಾನದಿಂದ ದ್ವೇಷಾದಿಗಳೂ, ಆ ದ್ವೇಷಾದಿಗಳಿಂದ ಕರ್ಮಪ್ರವೃತ್ತಿಯೂ, ಆ ಕರ್ಮಗಳಿಂದ ಜನ್ಮಗಳೂ, ಆ ಜನ್ಮಗಳಿಂದ ಸುಖದುಃಖಗಳೂ ಸಂಭವಿಸುವುವು. ಈ ತತ್ವವನ್ನು ಯಾವನು ಚೆನ್ನಾಗಿ ತಿಳಿದಿರುವನೋ, ಅವನು

ಇತರಭೂತಗಳಿಂದ ತನಗೆ ಎಷ್ಟೇ ಉಪದ್ರವವುಂಟಾದರೂ ಅವುಗಳಿಗಾಗಿ ಸ್ವಲ್ಪವೂ ಭಯಪಡಲಾರನು. ಆಹಾ ! ನಿಜಾಂಶವು ಹೀಗಿರುವಾಗಲೂ ಮೂಢನಾದ ನಾನು, ಮೊದಲೇ ಅದನ್ನು ಪರ್ಯಾಲೋಚಿಸದೆ ಮೋಸಹೋದೆನಲ್ಲಾ ! . ಇನ್ನು ಮೇಲಾದರೂ ನಾನು, ಸುಖದುಃಖಕಾರಣ ನಿಶ್ಚಯಪೂರ್ವಕವಾಗಿ ಪೂರ್ವಿಕರಾದ ವಿದ್ವಾಂಸರು ಪರಿಗ್ರಹಿಸಿರುವ ಪರಮಾತ್ಮನಿಷ್ಠೆಯನ್ನೇ ಹಿಡಿದು, ಆ ಭಗವಂತನ ಪಾದಸೇವೆಯಿಂದ ದುರಂತವಾದ ಸಂಸಾರವೆಂಬ ತಮಸ್ಸನ್ನು ದಾಟುವೆನು" ಎಂದು ನಿಶ್ಚಯಿಸಿಕೊಂಡನು. ಹೀಗೆ ಆ ಬ್ರಾಹ್ಮಣನು, ತನ್ನ ಧನವೆಲ್ಲವನ್ನೂ ಕಳೆದುಕೊಂಡಮೇಲೆ, ತನ್ನ ಸ್ಥಿತಿಗಾಗಿ ಪಶ್ಚಾತ್ತಾಪಪಡುತ್ತ, ಅರ್ಥಕಾಮಗಳಲ್ಲಿ ನಿರ್ವೇದವನ್ನು ಹೊಂದಿ, ಆಗಲೇ ತನ್ನ ಗ್ರಾಮವನ್ನು ಬಿಟ್ಟು ಹೊರಟು, ಭೂಸಂಚಾರವನ್ನು ಮಾಡುತ್ತ, ಅಲ್ಲಲ್ಲಿ ದುಷ್ಟರು ತನ್ನನ್ನು ನಾನಾವಿಧವಾಗಿ ನಿಂದಿಸಿದರೂ, ಬಾಧಿಸಿದರೂ, ಅವಮಾನಪಡಿಸಿದರೂ ತನ್ನ ಸ್ವಧರ್ಮದಿಂದ ಸಲ್ಪಮಾತ್ರವೂ ಚಲಿಸದೆ, ಹಿಂದೆ ಹೇಳಿದ ಗಾಥೆಯನ್ನು ಹೇಳಿದನು. ಆದುದರಿಂದ ಉದ್ಧವಾ! ಪುರುಷನಿಗೆ ಮನಸ್ಸಿನಲ್ಲಿ ದೇಹವೇ ಆತ್ಮವೆಂದೂ, ತಾನೇ ಸ್ವತಂತ್ರನೆಂದೂ ಹುಟ್ಟುವ ಅಭಿಮಾನಗಳೇ ಅವನವನ ಸುಖದುಃಖಗಳಿಗೆ ಮೂಲವೇಹೊರತು, ಮತ್ತೊಬ್ಬರನ್ನು ಸುಖದುಃಖಗಳಿಗೆ ಕಾರಣವೆಂದು ತಿಳಿಯಬಾರದು. ಮುಖ್ಯವಾಗಿ ದೇಹಾತ್ಮಭ್ರಮವುಳ್ಳ ಮನಸ್ಸೇ ಮನುಷ್ಯನಿಗೆ ಸುಖದುಃಖಕಾರಣವು. ಈ ಸುಖದುಃಖಗಳಿಗೆ ಅವಕಾಶವನ್ನು ಕೊಡುವುದರಿಂದ ಬೇರೆಯವರಲ್ಲಿ ಮಿತ್ರರೆಂದೂ, ಶತ್ರುಗಳೆಂದೂ, ಉದಾಸೀನರೆಂದೂ ಭೇದಬುದ್ಧಿಯು ಹುಟ್ಟುವುದು. ಈ ಭೇದಬುದ್ಧಿಯೇ ಸಂಸಾರಕ್ಕೆ ಮೂಲವು. ಆದುದರಿಂದ ಉದ್ಧವಾ! ನೀನೂಕೂಡ, ಇದುಮೊದಲು, ಆಯಾಮನುಷ್ಯನ ಸುಖದುಃಖಗಳಿಗೆ ಅವನವನ ಮನಸ್ಸೇ ಕಾರಣವೆಂಬ ತತ್ವವನ್ನು ತಿಳಿದು, ನಿನ್ನ ವಿವೇಕಬುದ್ಧಿಯಿಂದ ಆ ಮನಸ್ಸನ್ನು ನಿಗ್ರಹಿಸಿ, ಆ ಬುದ್ಧಿಯನ್ನು ನನ್ನಲ್ಲಿಯೇ ದೃಢವಾಗಿ ನಿಲ್ಲಿಸಿಡು ! ಶಾಸ್ತ್ರಗಳೊಳಗೆಲ್ಲಾ ಮುಖ್ಯವಾಗಿ ಪ್ರತಿಪಾದಿಸಲ್ಪಡುವ ಯೋಗಗಳ ಸಾರವೆಲ್ಲವೂ ಇಷ್ಟೇ ! ನನ್ನಲ್ಲಿ (ಪರಮಾತ್ಮನಲ್ಲಿ) ಸ್ಥಿರಬುದ್ಧಿಯನ್ನಿಟ್ಟು, ಆ ಬುದ್ಧಿಯಿಂದ ಮನಸ್ಸಿನ

ಯಥೇಚ್ಛಪ್ರವರ್ತನವನ್ನು ತಡೆಯುವುದೇ ಸಮಸ್ತಯೋಗಗಳ ಸಾರವೆಂದು ತಿಳಿ! ಉದ್ಧವಾ! ಭಿಕ್ಷುಕನಾದ ಆ ಬ್ರಾಹ್ಮಣನು ಹೇಳಿದ ಈ ಗಾಥೆಯನ್ನು ಶ್ರದ್ಧೆಯಿಂದ ಕೇಳುವವರೂ, ಮತ್ತೊಬ್ಬರಿಗೆ ಉಪದೇಶಿಸುವರೂ, ಪ್ರಾಕೃತಜನರಂತೆ ಸುಖದುಃಖಾದಿ ದ್ವಂದ್ವಗಳಿಗೆ ಈಡಾಗದೆ, ಪರಮಾತ್ಮ ನಿಷ್ಠೆಯಿಂದ ಮುಕ್ತಿಯನ್ನು ಪಡೆಯುವರು. ಇದು ಇಪ್ಪತ್ತಮೂರನೆಯ ಅಧ್ಯಾಯವು.

---

## ಶ್ರೀಕೃಷ್ಣನು ಉದ್ಧವನಿಗೆ ಸಾಂಖ್ಯತತ್ವವನ್ನುಪದೇಶಿಸಿದುದು.

ಉದ್ಧವಾ! ಇನ್ನು ನಾನು ನಿನಗೆ ಸಾಂಖ್ಯವನ್ನು ಎಂದರೆ, ಪ್ರಕೃತಿಪುರುಷೇಶ್ವರರೆಂಬ ತತ್ವತ್ರಯದ ಸ್ವರೂಪವಿಭಾಗವನ್ನು ತಿಳಿಸುವೆನು ಕೇಳು. ಪುರಾತನಮಹರ್ಷಿಗಳಿಂದ ನಿಶ್ಚಯಿಸಲ್ಪಟ್ಟ ಈ ತತ್ವವನ್ನು ತಿಳಿದವನಿಗೆ, ತಾನೆಂದೂ, ಅನ್ಯನೆಂದೂ, ದೇಹವೇ ಆತ್ಮವೆಂದೂ ನಾನಾವಿಧವಾಗಿ ಭೇದ ಬುದ್ಧಿಯನ್ನು ಹುಟ್ಟಿಸತಕ್ಕ ಭ್ರಮಗಳೆಲ್ಲವೂ ಬಿಟ್ಟುಹೋಗುವುವು. ಸೃಷ್ಟಿಗೆ ಮೊದಲು ಪ್ರಳಯಾವಸ್ಥೆಯಲ್ಲಿ ಚಿದಚಿತ್ತುಗಳೆಂಬ ಜೀವಪ್ರಕೃತಿಗಳೆರಡೂ, ನಾಮರೂಪವಿಭಾಗಗಳೇ ಇಲ್ಲದಂತೆ, ಅತಿಸೂಕ್ಷ್ಮವಾಗಿ, ಈಶ್ವರನಿಗೆ ಶರೀರವೆನಿಸಿಕೊಂಡು, ಅವನೊಡನೆಯೇ ಸೇರಿದ್ದುದರಿಂದ, ಚಿದಚಿದೀಶ್ವರರೆಂಬ ಮೂರುತತ್ವಗಳೂ ಒಂದೇ ಆಕಾರದಿಂದ ಕಾಣಿಸುತಿದ್ದುವು. ಪ್ರಳಯದಶೆಯು ಮುಗಿದಮೇಲೆ, ಮೊದಲನೆಯದಾದ ಮತ್ತು ನಿರುಪಮಾನವಾದ ಕೃತಯುಗದಲ್ಲಿ, ಚಿದಚಿದೀಶ್ವರರೆಂಬ ತತ್ವತ್ರಯವಿವೇಚನೆಯುಳ್ಳ ವಿದ್ವಾಂಸರು, ಸೂಕ್ಷ್ಮಚಿದಚಿದ್ವಿಶಿಷ್ಟವಾಗಿ ಸರ್ವಕಾರಣವೆನಿಸಿಕೊಂಡ ಆಪರಬ್ರಹ್ಮ ಸ್ವರೂಪವನ್ನೇ ಉಪಾಸಿಸುತಿದ್ದರು. ಆ ಬ್ರಹ್ಮಸ್ವರೂಪವು ಸತ್ವಾದಿಗುಣಗಳ ವೈಷಮ್ಯವಿಲ್ಲದುದು. ಜಾತ್ಯಾದಿ ವಿಕಲ್ಪರಹಿತವಾದುದು. ಮನಸ್ಸಿಗೂ ವಾಕ್ಕಿಗೂ ಆಗೋಚರವಾದ ಸ್ವರೂಪಸ್ವಭಾವಗಳುಳ್ಳುದು. ನಿರ್ವಿಕಾರವಾದುದು. ಎಲ್ಲಕ್ಕಿಂತಲೂ ಬೃಹತ್ತಾದುದರಿಂದ ಬ್ರಹ್ಮಶಬ್ದವಾಚ್ಯವಾಗಿರುವುದು. ಆ ಬ್ರಹ್ಮಕ್ಕೆ ಪ್ರಳಯದಶೆಯಲ್ಲಿ, ಮಾಯೆ (ಪ್ರಕೃತಿ)

ಮತ್ತು ಫಲ (ಪುರುಷನು) ವೆಂಬಿವೆರಡೂ ವಿಶೇಷಣಭೂತಗಳಾಗಿ ಎಂದರೆ, ಶರೀರಗಳಾಗಿದ್ದುವು. ಆ ಎರಡುವಿಶೇಷಣಗಳಲ್ಲಿ, ಮಾಯೆಯೆಂಬ ಪ್ರಕೃತಿಯು ಕಾರ್ಯಕಾರಣರೂಪದಿಂದ,ಎರಡು ಬಗೆಯೆನಿಸಿರುವುದು. *ಫಲವೆಂದು ಹೇಳಿಸಿಕೊಳ್ಳುವ ಎರಡನೆಯ ವಿಶೇಷಣವೇ ಪುರುಷನು! ಈ ಪುರುಷನಿಗೆ ಪ್ರತ್ಯಗಾತ್ಮನೆಂದೂ ಹೆಸರು.

## ಸೃಷ್ಟಿಲಯಕ್ರಮಗಳು.

ಪ್ರಕೃತಿಯಲ್ಲಿ ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರುಗುಣಗಳುಂಟು. ನಾನು ನನ್ನ ಆರಾಧನೆಗೆ ಬೇಕಾದ ದೇಹೇಂದ್ರಿಯಾದಿಗಳನ್ನು ಜೀವನಿಗೆ ಕೊಟ್ಟು, ಆ ಮೂಲಕವಾಗಿ ಅವನನ್ನು ಅನುಗ್ರಹಿಸಬೇಕೆಂಬ ಕೋರಿಕೆಯಿಂದ, ಪ್ರಕೃತಿಯಲ್ಲಿ ಸಾಮ್ಯಾವಸ್ಥೆಯಿಂದಿದ್ದ ಆ ಸತ್ವಾದಿಗುಣಗಳನ್ನು ಕಲಗಿಸಿದಾಗ, ಅದರಿಂದ ಮಹತ್ತೆಂಬ ತತ್ವವು ಹುಟ್ಟಿತು.ಇದು ಸೂತ್ರವೆಂದೂ ಕರೆಯಲ್ಪಡುವುದು. ಏಕೆಂದರೆ, ಅನೇಕರತ್ನಗಳನ್ನು ತನ್ನಲ್ಲಿ ಧರಿಸಿರುವ ಸೂತ್ರದಂತೆ, ಆ ಮಹತ್ತತ್ವವು, ಪ್ರಾಪಂಚಿಕಗಳಾದ ಅನೇಕಕಾರ್ಯಗಳಿಗೆ ಮೂಲಾಧಾರವೆನಿಸಿರುವುದು.ಆ ಮಹತ್ತತ್ವವು ವಿಕಾರವನ್ನು ಹೊಂದುತ್ತಬಂದು,ಅದರಿಂದ ಅಹಂಕಾರತತ್ವವು ಜನಿಸಿತು. ಈ ಅಹಂಕಾರವೇ ಪುರುಷನಿಗೆ ದೇಹಾತ್ಮಭ್ರಮಾದಿಗಳಿಂದ ಮೋಹವನ್ನುಂಟುಮಾಡತಕ್ಕುದು. ಈ ಅಹಂಕಾರತತ್ವವು ವೈಕಾರಿಕ, ತೈಜಸ, ತಾಮಸಗಳೆಂಬ ಮೂರು ವಿಭಾಗಗಳನ್ನೊಳಕೊಂಡಿರುವುದು. ಈ ಮೂರು ಬಗೆಯುಳ್ಳ ಅಹಂಕಾರವೇ ಶಬ್ದಾದಿತನ್ಮಾತ್ರಗಳಿಗೂ, ಕಣ್ಣು ಮೊದಲಾದ ಇಂದ್ರಿಯಗಳಿಗೂ, ಮನಸ್ಸಿಗೂ ಕಾರಣವಾಗಿ, ಚೇತನಾಚೇತನಮಯವೆನಿಸಿರುವುದು (ಎಳ್ಳಿನಲ್ಲಿ ಎಣ್ಣೆಯು ಹೇಗೋಹಾಗೆ, ಚಿತ್ತು ಅಚೇತನಗಳಲ್ಲಿ ಅಂತರ್ಗತವಾಗಿಯೇ ಕಾಣಿಸುವುದರಿಂದ, ಅಹಂಕಾರವು ಚೇತ

* ಪ್ರಾಪಂಚಿಕವಾದ ವಿಚಿತ್ರಕಾರ್ಯಗಳನ್ನುಂಟುಮಾಡುವುದರಿಂದ ಪ್ರಕೃತಿಗೆ ಮಾಯೆಯೆಂದು ಹೆಸರು. ಜೀವನು ಜ್ಞಾನಾತ್ಮಕವಾದ ಆನಂದವೇ ಸ್ವರೂಪವುಳ್ಳವನಾದುದರಿಂದಲೂ, ಆ ಆನಂದವೇ ಪುರುಷಾರ್ಥವೆನಿಸಿಕೊಳ್ಳುವುದರಿಂದಲೂ ಫಲವೆನಿಸುವನು.

ನಾಚೇತನಮಯವೆನಿಸಿರುವುದು.) ಆ ಮೂರುಬಗೆಯ ಅಹಂಕಾರಗಳಲ್ಲಿ ಶಬ್ದಾದಿತನ್ಮಾತ್ರಗಳಿಗೆ ಕಾರಣವೆನಿಸಿದ ತಾಮಸಾಹಂಕಾರದಿಂದ ಆಕಾಶಾದಿಮಹಾಭೂತಗಳು ಹುಟ್ಟಿದುವು. ಆಯಾದೇವತೆಗಳಿಂದ ಅಧಿಷ್ಠಿತಗಳಾದ ಏಕಾದಶೇಂದ್ರಿಯಗಳು ರಾಜಸ ಸಾತ್ವಿಕಾಹಂಕಾರಗಳಿಂದ ಹುಟ್ಟಿದುವು. ಮಹತ್ತು ಮೊದಲಾದ ಆ ತತ್ವಗಳು ಮೊದಲು ಬೇರೆಬೇರೆಯಾಗಿದ್ದಾಗ, ಪ್ರಪಂಚಸೃಷ್ಟಿಗೆ ಸಾಮರ್ಥ್ಯವಿಲ್ಲದಿದ್ದುವು. ಆಗ ಆ ತತ್ವಗಳು, ಅಂತರ್ಯಾಮಿಯಾದ ನನ್ನ ಪ್ರೇರಣೆಯಿಂದ ಒಂದಾಗಿ ಕಲೆತು, ಕಾರ್ಯಸಮರ್ಥಗಳಾಗಿ, ಸುವರ್ಣಮಯವಾದ ಒಂದು ಅಂಡವನ್ನು ಸೃಷ್ಟಿಸಿದುವು. ಉದ್ಧವಾ! ಆ ಅಂಡವು ನನಗೆ ನಿವಾಸಸ್ಥಾನವಾಯಿತು. ಪ್ರಳಯಜಲಮಧ್ಯದಿಂದ ಹುಟ್ಟಿದ ಆ ಅಂಡದಲ್ಲಿ ನಾನಿದ್ದಾಗ, ನನ್ನ ನಾಭಿಯಿಂದ ಜಗದ್ರೂಪವಾದ ಒಂದು ಕಮಲವು ಹೊರಟಿತು. ಆ ಕಮಲಮಧ್ಯದಿಂದ ಚತುರ್ಮುಖನು ಉದ್ಭವಿಸಿದನು. ಆ ಚತುರ್ಮುಖನು ಕೇವಲರಜೋಗುಣಪ್ರಚುರನಾಗಿ ಸೃಷ್ಟಿಕಾರ್ಯಕ್ಕಾಗಿ ಬಯಸಿ, ತಪಸ್ಸಿನಿಂದ ನನ್ನ ಅನುಗ್ರಹವನ್ನು ಪಡೆದು, ಭೂರ್ಭುವಸ್ಸುವರ್ಲೋಕಗಳೆಂಬ ಮೂರುಲೋಕಗಳನ್ನೂ, ಲೋಕಪಾಲಕರನ್ನೂ ಸೃಷ್ಟಿಸಿದನು. ಅವುಗಳಲ್ಲಿ ಸ್ವರ್ಲೋಕವು ದೇವತೆಗಳಿಗೆ ಸ್ಥಾನವೆನಿಸಿತು. ಭುವರ್ಲೋಕವೆಂಬ ಅಂತರಿಕ್ಷವು ಭೂತಗಳಿಗೆ ಸ್ಥಾನವೆನಿಸಿತು. ಭೂಲೋಕವೆಂಬುದು ಮನುಷ್ಯರು ಮೊದಲಾದ ಪ್ರಾಣಿಗಳಿಗೆ ಸ್ಥಾನವಾಯಿತು. ತಪಸ್ಸಿದ್ಧರೆನಿಸಿದ ಭೃಗು ಮೊದಲಾದ ಮಹರ್ಷಿಗಳಿಗೆ ಈ ಮೂರು ಲೋಕಗಳಿಗಿಂತಲೂ ಬೇರೆನಿಸಿದ ಮಹರ್ಲೋಕ, ಜನರ್ಲೋಕಗಳೆಂಬ ಬೇರೆ ಎರಡುಲೋಕಗಳು ನಿವಾಸಸ್ಥಾನಗಳಾದುವು. ಸುರರಿಗೂ, ನಾಗರಿಗೂ ವಾಸಕ್ಕಾಗಿ, ಭೂಮಿಯ ಕೆಳಗೆ, ಅತಲಾದಿಲೋಕಗಳು ಸೃಷ್ಟಿಸಲ್ಪಟ್ಟುವು. ಚೇತನರು ನಡೆಸತಕ್ಕ ಸಾತ್ವಿಕ, ರಾಜಸ,ತಾಮಸಗಳೆಂಬ ಮೂರು ಬಗೆಯ ಕರ್ಮಗಳಿಗೆ ಫಲರೂಪಗಳಾದ ಸ್ಥಾನಭೇದಗಳೆಲ್ಲವೂ ಆ ಮೂರುಲೋಕಗಳಲ್ಲಿಯೇ ಎಂದರೆ, ಬ್ರಹ್ಮಾಂಡದಲ್ಲಿಯೇ ಅಂತರ್ಗತಗಳಾಗಿರುವುವು. ಪ್ರಾಣಾಯಾಮವೇ ಮೊದಲಾದ ಯೋಗಗಳಿಗೂ, ತಪಸ್ಸಿಗೂ, ಸನ್ಯಾಸಧರ್ಮಗಳಿಗೂ ಫಲ

ರೂಪವಾಗಿ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳೆಂಬ ಕೇವಲಸತ್ವಮಯಗಳಾದ ಪುಣ್ಯಲೋಕಗಳು ಏರ್ಪಟ್ಟಿರುವುವು. ನನ್ನಲ್ಲಿ ಭಕ್ತಿಯೋಗವುಳ್ಳವರಿಗೆ ನನ್ನ ನಿಜಸ್ಥಾನವಾದ ಪರಮಪದವೇ ಲಭಿಸುವುದು. ಉದ್ಧವಾ! ಕರ್ಮಪ್ರಾಪ್ಯಗಳಾದ ಸಮಸ್ತಲೋಕಗಳನ್ನೂ ನಾನೇ ಅಂತರಾತ್ಮರೂಪದಿಂದ ಒಳಗೂ, ಕಾಲರೂಪದಿಂದ ಹೊರಗೂ ವ್ಯಾಪಿಸಿ, ಭರಿಸುತ್ತ, ಅವುಗಳನ್ನು ನಡೆಸುತ್ತಿರುವೆನು. ಆದುದರಿಂದ ನನ್ನಿಂದಲೇ ಸಮಸ್ತಜಗತ್ತೂ ಸತ್ವಾದಿಗುಣಗಳ ಪ್ರವಾಹರೂಪವಾದ ಪ್ರಕೃತಿಯಲ್ಲಿ ಆಗಾಗ ಗೋಚರಿಸುತ್ತಲೂ, ಲಯಿಸುತ್ತಲೂ ಇರುವುವು. ಆದರೆ, ಈ ಉತ್ಪತ್ತಿಲಯಗಳೆಲ್ಲವೂ ಅವರವರ ಕರ್ಮಗಳಿಗನುಸಾರವಾಗಿ ನಡೆಸಲ್ಪಡುವುವೇಹೊರತು ನಾನು ಸ್ವೇಚ್ಛೆಯಿಂದ ನಡೆಸುವವನಲ್ಲ. ಲೋಕದಲ್ಲಿ ಚಿಕ್ಕದು, ದೊಡ್ಡದು, ಸಣ್ಣದು, ಮಹತ್ತಾದುದು, ಎಂಬೀ ಆಕಾರಭೇದಗಳುಳ್ಳ ಯಾವಯಾವ ಪದಾರ್ಥಗಳುಂಟೋ ಅವೆಲ್ಲವೂ ಪ್ರಕೃತಿಪುರುಷರೆಂಬ ಎರಡರ ಸಂಯೋಗದಿಂದಲೇ ತೋರುತ್ತಿರುವುವು. ಕಾರ್ಯರೂಪವಾದ ಒಂದು ವಸ್ತುವಿನ ಉತ್ಪತ್ತಿಗೆ ಮೊದಲೂ, ಅಂತ್ಯದಲ್ಲಿಯೂ ಯಾವುದು ಕಾರಣವೆನಿಸಿರುವುದೋ, ಅದೇ ಇವುಗಳ ಮಧ್ಯಕಾಲದಲ್ಲಿಯೂ ಎಂದರೆ, ಆ ಕಾರ್ಯಾವಸ್ಥೆಯಲ್ಲಿಯೂ ಕಾರಣರೂಪವಾಗಿ ಆ ವಸ್ತುವಿನಲ್ಲಿ ಸೇರಿಯೇ ಇರುವುದು. ಹೇಗೆಂದರೆ, ಕಿರೀಟಕುಂಡಲಾದ್ಯಾಭರಣಗಳಿಗೂ, ಹರವಿ, ಮಡಕೆ, ಮುಂತಾದ ಪಾತ್ರೆಗಳಿಗೂ, ಆದ್ಯಂತಗಳಲ್ಲಿ ಕಾರಣರೂಪವಾಗಿದ್ದ ಬಂಗಾರವೂ, ಮಣ್ಣೂ, ಅವುಗಳ ಕಾರ್ಯದಶೆಯಲ್ಲಿಯೂ ಸೇರಿರುವುವಲ್ಲವೆ? ಇದರಿಂದ ಒಂದೇ ವಸ್ತುವಿಗೆ ಬೇರೆಬೇರೆ ಅವಸ್ಥಾಭೇದಗಳಲ್ಲಿ ಬೇರೆಬೇರೆ ನಾಮಗಳು ವ್ಯವಹರಿಸಲ್ಪಡುವುವೇಹೊರತು ಬೇರೆಯಲ್ಲ. ಆದುದರಿಂದ ಈ ವಿಕಾರಗಳೆಲ್ಲವೂ ಕೇವಲವ್ಯವಹಾರಾರ್ಥವಾಗಿಯೇ ಎಂಬುದು ಸ್ಪಷ್ಟವು. ಈ ನಿದರ್ಶನದಿಂದ ಒಂದವಸ್ಥೆಯಲ್ಲಿರುವ ಒಂದು ಪದಾರ್ಥವು, ಯಾವ ದ್ರವ್ಯವನ್ನು ಉಪಾದಾನಕಾರಣವಾಗಿ ಹೊಂದಿ, ಆ ಅವಸ್ಥೆಯನ್ನು ಹೊಂದಿರುವುದೋ, ಆ ಉಪಾದಾನವಸ್ತುವಿನ ಸ್ವರೂಪವಾಗಿಯೇ ಇದ್ದು, ಕೊನೆಗೆ ಕಾರ್ಯದಶೆಯಲ್ಲಿ ತನಗಿದ್ದ ಆಕಾರವು

ಕೆಟ್ಟುಹೋದಮೇಲೆಯೂ ಆ ಕಾರಣವಸ್ತುವಿನ ಸ್ವರೂಪದಿಂದಲೇ ನಿಲ್ಲು ವುದಲ್ಲವೆ! ಆದುದರಿಂದ ಒಂದು ವಸ್ತುವಿನಲ್ಲಿ ಬೇರೆಬೇರೆ ವಿಕಾರಗಳಿಗೆ ಆದ್ಯಂತಗಳುಂಟೇ ಹೊರತು, ಆ ದ್ರವ್ಯವುಮಾತ್ರ ಸ್ಥಾಯಿಯೆಂದೇ ಎಣಿಸ ಲ್ಪಡುವುದು. ಆಯಾ ಅವಸ್ಥಾಭೇದಗಳೊಡನೆ ದ್ರವ್ಯಕ್ಕೂ ಉತ್ಪತ್ತಿವಿಕಾಶ ಗಳೆಂದು ತಿಳಿಯಬಾರದು. ಇದರಂತೆಯೇ ದೇವಮನುಷ್ಯಾದ್ಯಾಕಾರಭೇದ ಗಳಿಂದ ಕಾಣುವ ಶರೀರಪರಂಪರೆಗಳಿಗೆ, ಪ್ರಕೃತಿಯೇ ಉಪಾದಾನಕಾರ ಣವು. ಈ ಪ್ರಕೃತಿಗಿಂತಲೂ ಭಿನ್ನನಾದ ಜೀವನು, ಆ ಪ್ರಕೃತಿವಿಕಾರಗ ಳೆನಿಸಿದ ದೇಹಗಳಲ್ಲಿ ಪ್ರವೇಶಿಸಿ, ಅವುಗಳಿಗೆ ಧಾರಕನಾಗಿರುವನು. ಪ್ರಕೃತಿ ಯಂತೆ ಜೀವನಿಗೆ ಉತ್ಪತ್ತಿ ಮೊದಲಾದ ವಿಕಾರಗಳಿಲ್ಲ. ಹೀಗೆ ಸ್ವರೂಪ ಸ್ವಭಾವಗಳಲ್ಲಿ ವಿಕಾರರಹಿತನಾಗಿ, ನಿತ್ಯನೆನಿಸಿಕೊಂಡ ಜೀವಾತ್ಮನಿಗೆ, ಧರ್ಮ ಭೂತವಾದ ಜ್ಞಾನದಲ್ಲಿ ಸಂಕೋಚವಿಕಾಸಗಳನ್ನುಂಟುಮಾಡತಕ್ಕುದು ಕಾಲವು. ಏಕೆಂದರೆ, ಸೃಷ್ಟಿಕಾಲದಲ್ಲಿ ಜೀವನಿಗೆ ಜ್ಞಾನವಿಕಾಸವುಂ ಟಾಗುವುದು. ಹೀಗೆ ಮೇಲೆ ಹೇಳಿದ ಪ್ರಕೃತಿ, ಪುರುಷ, ಕಾಲವೆಂಬಿವು ಮೂರೂ ಬ್ರಹ್ಮನೆನಿಸಿಕೊಂಡ ನನಗೆ ಶರೀರವಾಗಿಯೇ ಇರುವುದರಿಂದ ಅವೆಲ್ಲವೂ ನಾನೇ! ಹೀಗೆ ಚಿತ್ತು, ಅಚಿತ್ತು ಎಂಬಿವೆರಡೂ ಸ್ವರೂಪದಿಂ ದ ನಿತ್ಯವಾಗಿರುವಂತೆ, ಇವುಗಳಿಂದೇರ್ಪಡುವ ಪ್ರಪಂಚವೆಂಬ ಕಾರ್ಯ ಪ್ರಹಾರವೂ ನಿತ್ಯವೇ! ಹೇಗೆಂದರೆ, ಪರಬ್ರಹ್ಮರೂಪಿಯಾದ ನನ್ನ ನೋ ಟದಿಂದ, ಪ್ರಕೃತಿಯಲ್ಲಿ, ಮಹತ್ತು ಮೊದಲಾದ ಸೃಷ್ಟಿಗೆ ಆರಂಭವಾಗಿ, ನನ್ನ ಸಂಕಲ್ಪವಿರುವವರೆಗೂ ತ್ರಿಗುಣಾತ್ಮಕವಾದ ಚೇತನಾಚೇತನ ಪ್ರ ಪಂಚದ ಉತ್ಪತ್ತಿವಿನಾಶಗಳು ಒಂದರಮೇಲೊಂದು ನಿತ್ಯವಾಗಿ ನಡೆ ಯುತ್ತಲೇ ಇರುವುವು. ಸಮಸ್ತಪ್ರಾಣಿಗಳ ಉತ್ಪತ್ತಿವಿನಾಶಗಳಿಗೆ ಸ್ಥಾ ನವಾದ ಬ್ರಹ್ಮಾಂಡವು, ಕೊನೆಗೆ (ಎಂದರೆ ಪ್ರಳಯಕಾಲದಲ್ಲಿ). ಕಾಲಶರೀ ರಕನಾದ ನನ್ನಿಂದ ಲಯಹೊಂದಿಸಲ್ಪಡುವುದು. ಆಗ ಬ್ರಹ್ಮಾಂಡವೆಲ್ಲವೂ ಮೊತ್ತಕ್ಕೆ ತನ್ನೊಳಗಿನ ಸಮಸ್ತಲೋಕಗಳೊಡನೆ ನಾಶಹೊಂದಿ ನನ್ನಲ್ಲಿ ಲಯಿಸುವುದು. ಈ ಲಯಕ್ರಮವು ಹೇಗೆಂದರೆ, ಮೊದಲು ಪ್ರಾಣಿಶರೀರ ಗಳು ಅನ್ನದಲ್ಲಿ ಲಯಿಸುವುವು. (ಎಂದರೆ ಅನ್ನಾಭಾವದಿಂದ ಪ್ರಾಣಿ

ಶರೀರಗಳು ನಶಿಸುವುವು.) ಆ ಅನ್ನವು ಧಾನ್ಯಬೀಜಗಳಲ್ಲಿ ಲಯಿಸುವುವು. (ಎಂದರೆ,ನಟ್ಟ ಬೀಜಗಳು ಮೊಳೆಯಲಾರವು.)ಆ ಧಾನ್ಯಬೀಜಗಳು ಭೂಮಿ ಯಲ್ಲಿ ಲಯಿಸಿಹೋಗುವುವು. ಭೂಮಿಯು, ತನ್ನ ಗುಣವೆನಿಸಿಕೊಂಡ ಗಂಧತನ್ಮಾತ್ರದಲ್ಲಿ ಲಯಿಸಿಹೋಗುವುದು. ಗಂಧವು ಜಲದಲ್ಲಿ ಲಯಿ ಸುವುದು. ಆ ಜಲವು ತನ್ನ ತನ್ಮಾತ್ರವೆನಿಸಿದ ರಸದಲ್ಲಿ ಲಯಿಸಿಹೋಗು ವುದು. ಹಾಗೆಯೇ ರಸವು ತೇಜಸ್ಸಿನಲ್ಲಿಯೂ, ತೇಜಸ್ಸು, ರೂಪತನ್ಮಾತ್ರ ದಲ್ಲಿಯೂ, ರೂಪವು ವಾಯುವಿನಲ್ಲಿಯೂ, ವಾಯುವು ಸ್ಪರ್ಶತನ್ಮಾತ್ರದ ಲ್ಲಿಯೂ, ಸ್ಪರ್ಶವು ಆಕಾಶವೆಂಬ ಭೂತದಲ್ಲಿಯೂ, ಆಕಾಶವು ಶಬ್ದತ ನ್ಮಾತ್ರದಲ್ಲಿಯೂ ಲಯಿಸುವುವು. ಹೀಗೆಯೇ ಇಂದ್ರಿಯಗಳೆಲ್ಲವೂ ತಮ್ಮ ಲ್ಲಿ ಪ್ರಧಾನವೆನಿಸಿದ ಮನಸ್ಸಿನೊಡಗೂಡಿ, ತಮತಮಗೆ ಉತ್ಪತ್ತಿ ಕಾರಣ ಗಳೆನಿಸಿದ, ವೈಕಾರಿಕಾಹಂಕಾರದ ಬೇರೆಬೇರೆ ಅಂಶಗಳಲ್ಲಿ ಲಯಿಸಿದಮೇಲೆ, ಶಬ್ದತನ್ಮಾತ್ರವು ತನಗೆ ಕಾರಣವೆನಿಸಿದ ಭೂತಾದಿಯೆಂಬ ತಾಮಸಾಹಂ ಕಾರದಲ್ಲಿ ಲಯಿಸುವುದು, ದೇಹಾತ್ಮಾಭಿಮಾನವೇ ಮೊದಲಾದ ಮೋಹ ವನ್ನುಂಟುಮಾಡುವುದರ ಮೂಲಕವಾಗಿ, ಸಮಸ್ತ ಪ್ರಾಣಿಗಳನ್ನೂ ತನ್ನ ವಶಮಾಡಿಕೊಳ್ಳತಕ್ಕ ಈ ತಾಮಸಾಹಂಕಾರವು, ತೈಜಸವೈಕಾರಿಕಗಳೆಂಬ ಮತ್ತೆರಡು ಅಹಂಕಾರಗಳೊಡಗೂಡಿ, ಮಹತ್ತತ್ವದಲ್ಲಿ ಲಯಿಸುವುದು. ಆ ಮಹತ್ತತ್ವವು ತನಗೆ ಕಾರಣಭೂತಗಳಾದ ಸತ್ವಾದಿಗುಣಗಳಲ್ಲಿ ಲಯಿ ಸುವುದು. ಆ ಗುಣಗಳು ಅವ್ಯಕ್ತದಲ್ಲಿ ಲಯಿಸುವುವು. (ಎಂದರೆ ಮಹತ್ತ ತ್ವವು, ತನಗೆ ಕಾರಣಭೂತಗಳಾದ ಸತ್ವಾದಿಗುಣಗಳು ವೈಷಮ್ಯವನ್ನು ಬಿಟ್ಟು ಶಾಂತವಾದೊಡನೆ, ಅವ್ಯಕ್ತದಲ್ಲಿ ಲಯಿಸುವುದು.) ಆ ಅವ್ಯಕ್ತವು ಅವ್ಯಯವೆನಿಸಿದ ಕಾಲದೊಡನೆ ಸಂಸರ್ಗವನ್ನು ಹೊಂದುವುದು. ಆ ಕಾಲ ವೂಕೂಡ ಮಾಯಾಮಯನಾದ (ಪ್ರಕೃತಿಸಂಸೃಷ್ಟನಾದ) ಜೀವನೊ ಡನೆ ಏಕೀಭವಿಸುವುದು. ಆ ಜೀವನು ಉತ್ಪತ್ತಿವಿನಾಶಗಳಿಲ್ಲದ ಪರಮಾ ತ್ಮನೆನಿಸಿದ ನನ್ನಲ್ಲಿ ಲಯಿಸುವನು. ಸರ್ವಾತ್ಮಭೂತನಾದ ನಾನು ನನ್ನ ಲ್ಲಿಯೇ ನೆಲೆಗೊಂಡಿರತಕ್ಕವನೇ ಹೊರತು, ನನಗೆ ಬೇರೊಂದಾಧಾರವಿಲ್ಲ. ನನಗೆ ಕರ್ಮಪ್ರಾಪ್ತಗಳಾದ ದೇವಮನುಷ್ಯಾದಿಶರೀರಗಳೊಡನೆ ಸಂಯೋ

ಗವಿಯೋಗಗಳೂ ಇಲ್ಲ. ಉದ್ಧವಾ! ಹೀಗೆ, ಪ್ರಕೃತಿ, ಪುರುಷ, ಕಾಲ, ಈ ಶ್ವರರೆಂಬ ನಾಲ್ಕು ಬಗೆಯ ತತ್ವಗಳನ್ನೂ, ಅವುಗಳಿಂದೇರ್ಪಡುವ ಪ್ರ ಪಂಚದ ಉತ್ಪತ್ತಿಲಯಕ್ರಮಗಳನ್ನೂ ವಿಮರ್ಶೆಯಿಂದ ತಿಳಿದವರಿಗೆ, ಸೂರ್ಯೋದಯದಿಂದ ಅಂಧಕಾರವು ಹೇಗೋ ಹಾಗೆ, ದೇಹಾತ್ಮವಿಚಾರ ವಾದ ವೈಕಲ್ಪಿಕ ಭ್ರಮಗಳೆಲ್ಲವೂ ಬಿಟ್ಟು ಹೋಗುವುವು. ಪರಾವರ ತತ್ವ ಗಳೆಲ್ಲವನ್ನೂ ಸಾಕ್ಷಾತ್ಕರಿಸಬಲ್ಲ ನಾನು, ನಿನ್ನ ಸಮಸ್ತಸಂಶಯಗಳೂ ನೀಗುವಂತೆ, ಈ ಸಾಂಖ್ಯವಿಧಿಯನ್ನು ಸೃಷ್ಟಿಕ್ರಮದಿಂದಲೂ, ಲಯಕ್ರಮ ದಿಂದಲೂ ವಿವರವಾಗಿ ತಿಳಿಸಿರುವೆನು. ಇದು ಇಪ್ಪತ್ತನಾಲ್ಕನೆಯ ಅಧ್ಯಾಯವು.

---

{ ಸತ್ವಾದಿಗುಣಗಳ ಸಂಬಂಧದಿಂದಲೂ, ನಿರ್ಗುಣತ್ವ ದಿಂದಲೂ ಉಂಟಾಗುವ ಫಲಗಳು. }

ಉದ್ಧವಾ! ಮನುಷ್ಯರಲ್ಲಿ ಸತ್ವರಜಸ್ತಮೋಗುಣಗಳು ಪ್ರತ್ಯೇಕ ವಾಗಿಯಾಗಲಿ, ಮಿಶ್ರವಾಗಿಯಾಗಲಿ ಕಲೆತಿದ್ದಾಗ, ಅಂತವನು ಯಾವ ಯಾವಗುಣಗಳಿಂದ ಯಾವವಿಧವಾದ ಅಭಿನಿವೇಶವುಳ್ಳವನಾಗುವನೆಂಬು ದನ್ನು ನಿನಗೆ ಹೇಳುವೆನು ಕೇಳು. ಮನೋನಿಗ್ರಹರೂಪವಾದ ಶಮ, ಬಾಹ್ಯೇಂದ್ರಿಯನಿಗ್ರಹರೂಪವಾದ ದಮ, ತತ್ವವಿಮರ್ಶೆ, ತಪಸ್ಸು, ಸತ್ಯ, ಸ್ಮೃತಿ, ತುಷ್ಟಿ, ತ್ಯಾಗ, ವೈರಾಗ್ಯ, ಆಸ್ತಿಕ್ಯ, ಅಯುಕ್ತ ಕಾರ್ಯಗಳಲ್ಲಿ ನಾಚಿಕೆ, ದಾನ, ಋಜುತ್ವ, ವಿನಯ, ಮೊದಲಾದ ಸುಗುಣ ಗಳೂ, ಆತ್ಮಾನುಭವದಿಂದುಂಟಾದ ಸುಖಾನುಭವವೂ ಸತ್ವಗುಣದ ಚಿಹ್ನಗಳು. ವಿಷಯಾನುಭವದಲ್ಲಿ ಆತುರ, ಕಾಮೋಪಭೋಗಗಳಿ ಗಾಗಿ ಪ್ರವರ್ತನೆ, ಮದ, ತೃಷ್ಣೆ, ಗರ್ವ, ಆಶೆ,ವೈಷಮ್ಯ, ವಿಷಯಾಸಕ್ತಿ, ಸಾಹಸಕರ್ಮಗಳಲ್ಲಿ ಉತ್ಸಾಹ, ಸ್ತೋತ್ರಪ್ರಿಯತ್ವ, ಅಪಹಾಸ್ಯ, ತನ್ನ ಹೆಮ್ಮೆಯನ್ನು ಹೇಳಿಕೊಳ್ಳುವುದು, ಬಲದಿಂದ ಕಾರ್ಯಸಾಧನೆ, ಇವೆ ಲ್ಲವೂ ರಜೋಗುಣದ ಚಿಹ್ನಗಳು. ಕ್ರೋಧ, ಲೋಭ, ಅನೃತ, ಹಿಂಸೆ, ಯಾಚನೆ, ದಂಭ (ವಂಚನೆ) ಬಳಲಿಕೆ, ಕಲಹ, ಶೋಕ, ಮೋಹ, ದುಃಖ,

ದೈನ್ಯ, ಅತ್ಯಾಶೆ, ಭಯ, ಸೋಮಾರಿತನ, ಇವೆಲ್ಲವೂ ತಮೋಗುಣವುಳ್ಳವರ ಲಕ್ಷಣಗಳು. ಮೇಲೆಹೇಳಿದ ಬೇರೆಬೇರೆ ಲಕ್ಷಣಗಳಿಂದ, ಮನುಷ್ಯನು ಸಾತ್ವಿಕನೆಂದೂ, ರಾಜಸನೆಂದೂ, ತಾಮಸನೆಂದೂ ಹೇಳಲ್ಪಡುವನು. ಒಬ್ಬನಲ್ಲಿಯೇ ಈ ಗುಣಗಳು ಮಿಶ್ರವಾಗಿ ಕಲೆತಿದ್ದಾಗ,ಅವನ ಲಕ್ಷಣಗಳನ್ನು ತಿಳಿಸುವೆನು ಕೇಳು. "ನಾನು" "ನನ್ನದು" ಎಂಬ ಅಹಂಕಾರಮಮಕಾರ ಪ್ರಯುಕ್ತವಾದ ಬುದ್ಧಿಯೇ ಆ ಗುಣಗಳ ಮಿಶ್ರಣದಿಂದುಂಟಾದ ಕಾರ್ಯ ವು! ಮತ್ತು ಆ ಅಹಂಕಾರಮಮಕಾರಗಳಮೂಲಕವಾಗಿ, ಮನಸ್ಸು, ಇಂದ್ರಿಯಗಳು, ದೇಹ, ಪ್ರಾಣಗಳು ಇವುಗಳಿಂದ ನಡೆಯುವ ವ್ಯವ ಹಾರಗಳೂ ಆ ಮಿಶ್ರಗುಣಗಳ ಕಾರ್ಯವೇ! ಮತ್ತು ಪುರುಷನು ಧರ್ಮಾ ರ್ಥಕಾಮಗಳೆಂಬ ತ್ರಿವರ್ಗಗಳಲ್ಲಿ ನಿಷ್ಠೆಯುಳ್ಳವನಾಗಿ, ಶ್ರದ್ಧೆಯನ್ನೂ, ಧನವನ್ನೂ, ರತಿಯನ್ನೂ ಹೆಚ್ಚಿಸತಕ್ಕ ಯಾವಯಾವ ಕಾರ್ಯಗಳನ್ನು ನಡೆ ಸುವನೋ ಅವೆಲ್ಲವೂ ಸತ್ವಾದಿಗುಣಗಳ ಮಿಶ್ರಣದಿಂದಲೇ ಉಂಟಾಗತಕ್ಕ ವ್ಯಾಪಾರಗಳು. ಈ ಧರ್ಮಾರ್ಥಕಾಮಗಳಲ್ಲಿ ಯಾವನು ನಿಷ್ಠೆಯುಳ್ಳವ ನಾಗಿರುವನೋ, ಅವನು ತನ್ನ ವರ್ಣಾಶ್ರಮಧರ್ಮಗಳೆಲ್ಲವನ್ನೂ ಫಲಾ ಪೇಕ್ಷೆಯಿಂದಲೇ ನಡೆಸುವನು. ಈ ವಿಧವಾದ ಪ್ರವೃತ್ತಿಧರ್ಮನಿಷ್ಠೆಯೂ ಆ ಮಿಶ್ರಗುಣಗಳ ಕಾರ್ಯವೆಂದೇ ತಿಳಿಯಬೇಕು. ಉದ್ಧವಾ! ಮುಖ್ಯವಾಗಿ ಒಬ್ಬಮನುಷ್ಯನಲ್ಲಿ ಶಮದಮಾದಿಗುಣಗಳು ಕಂಡುಬಂದಾಗ, ಅವನನ್ನು ಸಾತ್ವಿಕನೆಂದೂ, ಕಾಮಾದಿಗಳು ಕಂಡುಬಂದಾಗ ಅಂತವನನ್ನು ರಾಜಸ ನೆಂದೂ, ಕ್ರೋಧಾದಿದುರ್ಗುಣಗಳಿದ್ದಾಗ ಆ ಮನುಷ್ಯನನ್ನು ತಾಮಸ ನೆಂದೂ ಅನುಮಾನಿಸಿ ತಿಳಿದುಕೊಳ್ಳಬಹುದು. ಫಲಾಪೇಕ್ಷೆಯಿಲ್ಲದೆ, ತನ್ನ ತನ್ನ ವರ್ಣಾಶ್ರಮಧರ್ಮಗಳಿಂದ ಭಕ್ತಿಪೂರ್ವಕವಾಗಿ ನನ್ನನ್ನಾರಾಧಿಸತಕ್ಕ ವರು, ಪುರುಷರಾಗಲಿ, ಸ್ತ್ರೀಯರಾಗಲಿ, ಅವರನ್ನು ಸಾತ್ವಿಕಪ್ರಕೃತಿಯುಳ್ಳ ವರೆಂದೇ ತಿಳಿಯಬೇಕು. ಫಲಾಪೇಕ್ಷೆಯಿಂದ ನನ್ನನ್ನಾರಾಧಿಸತಕ್ಕವರು ರಾಜಸಪ್ರಕೃತಿಗಳು. ಶತ್ರುವಧವೇ ಮೊದಲಾದ ಹಿಂಸೆಗಳನ್ನುದ್ದೇಶಿಸಿ ಅದ ಕ್ಕಾಗಿಯೇ ನನ್ನನ್ನಾರಾಧಿಸಿದರೆ, ಅಂತವರನ್ನು ತಾಮಸಪ್ರಕೃತಿಯುಳ್ಳವ ರೆಂದು ತಿಳಿಯಬೇಕು. ಸತ್ವರಜಸ್ತಮಸ್ಸುಗಳೆಂಬ ಈ ಮೂರುಗುಣಗಳೂ

ಜೀವನನ್ನು ಬಂಧಿಸುವುವೇಹೊರತು, ನನ್ನನ್ನು ಬಂಧಿಸಲಾರವು. ಏಕೆಂದರೆ,ಈ ಗುಣಗಳು ಆಯಾಜೀವನ ಮನಸ್ಸಿನಲ್ಲಿ ತಮ್ಮತಮ್ಮ ಕಾರ್ಯಗಳನ್ನು ಹುಟ್ಟಿಸುವುದರಿಂದಲೇ, ಅವನು ಪಂಚಭೂತಪರಿಣಾಮಾತ್ಮಕವಾದ ದೇಹದಲ್ಲಿಯೂ,ಆದೇಹಕ್ಕೆ ಸಂಬಂಧಿಸಿದ ವಿಷಯಗಳಲ್ಲಿಯೂ ಬಂಧಿಸಲ್ಪಡುವನು. ರಜಸ್ತಮೋಗುಣಗಳನ್ನಡಗಿಸಿ ಸತ್ವಗುಣವು ತಲೆಯೆತ್ತಿದಾಗ ಮನುಷ್ಯನ ಮನಸ್ಸು, ಸ್ವಚ್ಛವಾಗಿಯೂ, ನಿಷ್ಕಲ್ಮಷವಾಗಿಯೂ, ಶಾಂತವಾಗಿಯೂ ಆಗುವುದು. ಆಗ ಪುರುಷನು ಧರ್ಮ, ಜ್ಞಾನ, ಶಮ, ದಮಾದಿಗುಣಗಳುಳ್ಳವನಾಗಿ ಸುಖಿಸುವನು. ಯಾವಾಗ ತಮೋಗುಣಸತ್ವಗುಣಗಳೆರಡನ್ನೂ ಅಡಗಿಸಿ, ರಜೋಗುಣವು ತಲೆಯೆತ್ತುವುದೋ, ಆಗ ಪುರುಷನ ಮನಸ್ಸು ಭೋಗಾಸಕ್ತವಾಗಿ, ಶಬ್ದಾದಿವಿಷಯಾನುಭವದಕಡೆಗೇ ಓಡುತ್ತಿರುವುದು. ಇದರಿಂದ ಮನುಷ್ಯನು ಮನಸ್ಸಿನಲ್ಲಿ ಶಾಂತಿಯಿಲ್ಲದೆ, ಫಲಾಪೇಕ್ಷೆಯುಳ್ಳ ಕರ್ಮಗಳಿಗಾಗಿಯೂ, ಯಶಸ್ಸಿಗಾಗಿಯೂ, ಸಂಪತ್ತಿಗಾಗಿಯೂ ಆತುರಪಟ್ಟು ದುಃಖಿಸುವನು. ಸತ್ವರಜೋಗುಣಗಳೆರಡನ್ನೂ ನಿಗ್ರಹಿಸಿ ಯಾವಾಗ ತಮೋಗುಣವು ತಲೆಯೆತ್ತುವುದೋ, ಆಗ ಮನಸ್ಸು ವಿವೇಕಜ್ಞಾನವಿಲ್ಲದೆ, ಕೇವಲಜಡವಾಗಿಯೂ, ಉತ್ಸಾಹಹೀನವಾಗಿಯೂ ಆಗುವುದು. ಇದರಿಂದ ಮನುಷ್ಯನು ಶೋಕ, ಮೋಹ, ನಿದ್ರೆ, ಭೂತದ್ರೋಹ, ಆತ್ಯಾಶೆ, ಮೊದಲಾದ ವಿಕಲ್ಪಗಳಿಗೆ ಈಡಾಗುವನು. ಯಾವಾಗ ಮನಸ್ಸು ಶಾಂತವಾಗಿರುವುದೋ, ಆಗ ಇಂದ್ರಿಯಗಳು ವಿಷಯಾತುರವನ್ನು ಬಿಟ್ಟು ನೆಮ್ಮದಿಯಿಂದಿರುವುವು. ದೇಹದಲ್ಲಿಯೂ ರೋಗಾದಿಗಳ ಭಯವು ತೋರದು.ಮನಸ್ಸು ವಿಷಯಾಸಕ್ತಿಯಿಂದುಂಟಾದ ಕಳವಳವಿಲ್ಲದಿರುವುದು. ಈ ಲಕ್ಷಣಗಳಿದ್ದಾಗ ಸತ್ವಗುಣವು ಉದ್ರೇಕಹೊಂದಿರುವುದಾಗಿ ತಿಳಿ ! ಈ ವಿಧವಾದ 'ಸ್ಥಿತಿಯೇ ನನ್ನ ಸ್ವರೂಪವನ್ನು ಸಾಕ್ಷಾತ್ಕರಿಸುವುದಕ್ಕೆ ಸಹಕಾರಿಯಾಗುವುದು. ಯಾವಾಗ ಪುರುಷನು ಒಳ್ಳೆಯದಾಗಲಿ, ಕೆಟ್ಟುದಾಗಲಿ,ಯಾವುದಾದರೂ ಒಂದು ಕಾರ್ಯದಲ್ಲಿ ಆಸಕ್ತನಾಗಿ,ಅದನ್ನು ನಡೆಸುತ್ತ, ಆ ಕರ್ಮಗಳಿಗೆ ಫಲರೂಪವಾದ ಹರ್ಷಶೋಕಾದಿವಿಕಾರಗಳನ್ನೂ ಅನುಭವಿಸುತ್ತ,ಅದರಿಂದ ಮನಶ್ಶಾಂತಿಯಿಲ್ಲದಿರುವನೋ, ಮತ್ತು ಅವನ ಜ್ಞಾನೇಂ

ದ್ರಿಯಗಳು ವಿಷಯಾತುರದಿಂದಲೂ, ಕರ್ಮೇಂದ್ರಿಯಗಳು ಕರ್ಮಾರಂಭದಲ್ಲಿ ಯೂ ಕಳವಳಿಸುತ್ತಿರುವುವೋ,ಆಗ ಅವನಲ್ಲಿ ರಜೋಗುಣವು ಉದ್ರೇಕಹೊಂ ದಿರುವುದಾಗಿ ತಿಳಿಯಬೇಕು.ಯಾವಾಗ ಪುರುಷನ ಚಿತ್ತವು ತಿರೋಹಿತವಾಗಿ, ರೂಪವೇ ಮೊದಲಾದ ಜ್ಞಾನೇಂದ್ರಿಯವಿಷಯಗಳನ್ನೂ ಗ್ರಹಿಸಲಾರದೆ ಲಯಿಸಿಹೋಗುವುದೋ, ಆಗ ಸಂಕಲ್ಪವಿಕಲ್ಪಾತ್ಮಕವಾದ ಮನಸ್ಸೂ ನಷ್ಟವಾಗುವುದು. ಅಜ್ಞಾನವೂ ವಿಷಾದವೂ ತಲೆದೋರುವುವು. ಅಂತವರಲ್ಲಿ ತಮಸ್ಸು ಉದ್ರೇಕಹೊಂದಿದುದಾಗಿ ತಿಳಿಯಬೇಕು. ಉದ್ಧವಾ! ಸತ್ವ ಗುಣವು ಹೆಚ್ಚಿದಷ್ಟೂ ದೇವತೆಗಳ ಬಲವು ಹೆಚ್ಚುವುದು. ರಜೋಗುಣವು ಹೆಚ್ಚಿದಷ್ಟೂ ಅಸುರರ ಬಲವು ಹೆಚ್ಚುವುದು. ತಮೋಗುಣವು ಹೆಚ್ಚಿದ ಹಾಗೆಲ್ಲಾ ರಾಕ್ಷಸರ ಬಲವು ಹೆಚ್ಚುವುದು. ದೇಹಸಂಸರ್ಗವುಳ್ಳ ಜೀವನಿಗೆ, ಸತ್ವಗುಣದಿಂದ ಜಾಗರಾವಸ್ಥೆಯೂ, ರಜಸ್ಸಿನಿಂದ ಸ್ವಪ್ನವೂ, ತಮಸ್ಸಿ ನಿಂದ ಸುಷುಪ್ತಿಯೂ ಉಂಟಾಗುವುದೆಂದು ತಿಳಿ! ಈ ಮೂರವಸ್ಥೆಗಳ ನ್ನೊಳಕೊಂಡಂತೆ ತೋರುವ ಆತ್ಮಸ್ವರೂಪವು, ಇವು ಮೂರಕ್ಕಿಂತಲೂ ಬೇರೆಯಾಗಿರುವುದು. ಆದುದರಿಂದ ಆತ್ಮನಿಗೆ ಈ ಅವಸ್ಥೆಗಳು ಸ್ವಭಾವ ದಿಂದ ಬಂದುವಲ್ಲ. ಸತ್ವಗುಣವು ಉಲ್ಲಾಸಹೊಂದಿದಷ್ಟೂ ಜನರು ಬ್ರಹ್ಮಲೋಕಪರ್ಯಂತವಾಗಿ ಮೇಲುಮೇಲಿನ ಉತ್ತಮಲೋಕಗಳನ್ನು ಹೊಂದುವರು. ತಮಸ್ಸುಹೆಚ್ಚಿದಷ್ಟೂ ಕೆಳಕೆಳಗಿನ ಅಧೋಲೋಕಗಳಲ್ಲಿ ಬೀಳುವರು. ರಜೋಗುಣವು ಹೆಚ್ಚಿದವರು ಮೇಲೆಹೇಳಿದ ಊರ್ಧ್ವಾಧೋ ಲೋಕಗಳಿಗೆ ಮಧ್ಯಸ್ಥಾನದಲ್ಲಿ ಸಂಚರಿಸುವರು ಸತ್ವಗುಣವು ಉತ್ಕರ್ಷ ದಶೆಯಲ್ಲಿದ್ದಾಗ ಮರಣಹೊಂದಿದವರು, ಸ್ವರ್ಲೋಕವನ್ನು ಸೇರುವರು. ರಜೋಗುಣವು ಹೆಚ್ಚಿದ್ದಾಗ ಮೃತಿಹೊಂದಿದವರು ನರಲೋಕವನ್ನು ಹೊಂದುವರು. ತಮೋಗುಣವು ಹೆಚ್ಚಿದಾಗ ಮೃತರಾದವರು ನರಕದಲ್ಲಿ ಬೀಳುವರು.ಈ ಗುಣಗಳಸಂಬಂಧವೇ ಇಲ್ಲದ ನಿರ್ಗುಣರು ನನ್ನನ್ನು ಸೇರುವರು ಸತ್ವಗುಣದ ಅತ್ಯುತ್ಕರ್ಷದಶೆಯೇ ನಿರ್ಗುಣತ್ವವು. ಏಕೆಂದರೆ, ಸತ್ವ ಗುಣವು ಅತ್ಯುಚ್ಚದಶೆಯನ್ನು ಹೊಂದಿದಾಗ, ಅದು ಎಲ್ಲಾಗುಣಗಳ

ಸಂಬಂಧವನ್ನೂ ನೀಗಿಸುವುದು. ಆದುದರಿಂದ * ನಿರ್ಗುಣತ್ವವೆಂದರೆ ಅತಿ ಪ್ರವೃದ್ಧವಾದ ಸತ್ವಗುಣವೆಂದೇ ತಿಳಿಯಬೇಕು. ಕರ್ಮಗಳಲ್ಲಿಯೂ ಸಾತ್ವಿಕರಾಜಸ ತಾಮಸಗಳೆಂಬ ಮೂರುಬಗೆಯುಂಟು. ಯಾವಫಲವನ್ನೂ ಉದ್ದೇಶಿಸದೆ, ನನ್ನ ಆರಾಧನವೆಂದೇ ತಿಳಿದು ನನಗೇ ಅರ್ಪಿತವಾಗಿ ನಡೆಸತಕ್ಕ ಕರ್ಮಗಳು ಸಾತ್ವಿಕಗಳು. ಫಲೋದ್ದೇಶದಿಂದ ನಡೆಸತಕ್ಕ ಕರ್ಮಗಳು ರಾಜಸಗಳು. ಶತ್ರುಹಿಂಸೆ, ಮಾತ್ಸರ್ಯ, ಮೊದಲಾದ ಉದ್ದೇಶಗಳಿಂದ ನಡೆಸತಕ್ಕ ಕರ್ಮಗಳು ತಾಮಸಗಳು. ಜ್ಞಾನಗಳಲ್ಲಿ, ಆರೋಪಿತವಲ್ಲದ ಯಥಾವಸ್ಥಿತವಸ್ತುಸ್ವರೂಪಜ್ಞಾನವು ಸಾತ್ವಿಕವು. ಆರೋಪಿತವಾದ ಆಕಾರವನ್ನು ಕುರಿತ ಜ್ಞಾನವು ರಾಜಸವು. ಇದು ಈ ವಿಷಯವಾದುದೆಂದೂ ತಿಳಿಯಲಾರದ ಜ್ಞಾನವು ತಾಮಸವು. ನನ್ನ ವಿಷಯವಾದ ಜ್ಞಾನವು ನಿರ್ಗುಣವಾದುದು. (ಎಂದರೆ ಸತ್ವೋದ್ರೇಕದ ಉಚ್ಚಸ್ಥಿತಿಯಲ್ಲಿ ಹುಟ್ಟತಕ್ಕುದು) ವಾಸಸ್ಥಳಗಳಲ್ಲಿ ವಿವಿಕ್ತವಾದ ವನಪ್ರದೇಶವು ಸಾತ್ವಿಕವು. ಗ್ರಾಮಗಳು ರಾಜಸಗಳು. ದ್ಯೂತಾದಿಸ್ಥಳಗಳು ತಾಮಸಗಳು. ನನ್ನ ಸ್ಥಾನವಾದರೋ ಈ ಮೂರುಗುಣಗಳನ್ನೂ ಅಡಗಿಸತಕ್ಕ ಸತ್ವೋದ್ರೇಕಕ್ಕೆ ಹೇತುವಾದುದು. ಹೀಗೆಯೇ ಅರ್ಥಕಾಮಗಳ ಸಂಗವಿಲ್ಲದ ಕರ್ತನು ಸಾತ್ವಿಕನು. ಫಲಗಳಲ್ಲಿ ವಿಶೇಷವಾದ ಅಭಿನಿವೇಶವುಳ್ಳ ಕರ್ತನು ರಾಜಸನು. ವಿಷಯಗಳು ಅನರ್ಥಾವಹಗಳೆಂಬುದನ್ನು ತಿಳಿದೂ, ವಿವೇಕವಿಲ್ಲದೆ ಅದಕ್ಕಾಗಿ ಕರ್ಮಗಳನ್ನು ನಡೆಸುವ ಕರ್ತನು ತಾಮಸನು. ಧ್ಯಾನಾದಿಗಳಿಂದ ನನ್ನನ್ನೇ ಉಪಾಸಿಸತಕ್ಕವನು ನಿರ್ಗುಣನು. ಶ್ರದ್ಧೆಗಳಲ್ಲಿ ಅಧ್ಯಾತ್ಮವಿಷಯವಾದುದು ಸಾತ್ವಿಕವು. ಕರ್ಮಗಳಲ್ಲಿ ಶ್ರದ್ಧೆಯು ರಾಜಸವು. ಅಧರ್ಮಗಳಲ್ಲಿ ಶ್ರದ್ಧೆಯು ತಾಮಸವೆನಿಸುವುದು. ನನ್ನ ಸೇವೆಯಲ್ಲಿ ಶ್ರದ್ಧೆಯು ನಿರ್ಗುಣವಾದುದು. ಆಹಾರಗಳಲ್ಲಿ ಹಿತವಾಗಿಯೂ, ನಿರ್ದುಷ್ಟವಾಗಿಯೂ, ಅನಾಯಾಸಲಭ್ಯವಾಗಿಯೂ ಇರುವ ಅನ್ನಾದಿಗಳು ಸಾತ್ವಿಕಗಳು. ಇಂದ್ರಿಯ ತೃಪ್ತಿಗಾಗಿಯೇ

---

* "ಸತ್ವಂರಜಸ್ತಮಇತಿಗುಣಾ ಬುದ್ಧೇರ್ನಚಾತ್ಮನಃ । ಸತ್ವೇನಾನ್ಯತಮೌ ಹನ್ಯಾತ್ ಸತ್ವಂ ಸತ್ವೇನಚೈವಹಿ ॥" ಎಂಬ ಶ್ಲೋಕಾರ್ಥವು ಇಲ್ಲಿ ಸೂಚಿತವಾಗುವುದು.

ಉಪಭೋಗಿಸಲ್ಪಡತಕ್ಕವುಗಳಾಗಿಯೂ, ಶ್ರಮಲಬ್ಧಗಳಾಗಿಯೂ ಇರುವ ಆಹಾರಗಳು ರಾಜಸಗಳು. ಶಾಸ್ತ್ರನಿಷಿದ್ಧಗಳಾಗಿಯೂ, ದೇಹೇಂದ್ರಿಯಗಳಿಗೆ ಬಾಧಕಗಳಾಗಿಯೂ ಇರುವ ಆಹಾರಗಳು ತಾಮಸಗಳು. ಆತ್ಮಾನುಭವದಿಂದಾಗುವ ಸುಖವು ಸಾತ್ವಿಕವು. ವಿಷಯಾನುಭವದಿಂದಲಭಿಸತಕ್ಕ ಸುಖವು ರಾಜಸವು. ಮೋಹದಿಂದಲೂ, ದೈನ್ಯದಿಂದಲೂ ಲಭಿಸತಕ್ಕ ಸುಖವು ತಾಮಸವು. ನನ್ನ ಗುಣಾನುಭವದಿಂದಾಗುವ ಸುಖವು ನಿರ್ಗುಣವಾದುದು. ಉದ್ಧವಾ! ಹೀಗೆಯೇ, ದ್ರವ್ಯ, ದೇಶ, ಫಲ, ಕಾಲ, ಜ್ಞಾನ, ಕರ್ಮ, ಕಾರಣ, ಶ್ರದ್ಧೆ, ಜಾಗರಾದ್ಯವಸ್ಥೆ, ಆಕೃತಿ, ನಿಷ್ಠೆ, ಎಂಬಿವೇ ಮೊದಲಾದುವೆಲ್ಲವೂ ಸತ್ವಾದಿಗುಣಗಳ ಕಾರ್ಯರೂಪಗಳಾಗಿ, ಗುಣಮಯಗಳಾಗಿಯೇ ಇರುವುವು. ಇವೆಲ್ಲವೂ ಪ್ರಕೃತಿಸಂಸರ್ಗವುಳ್ಳ ಜೀವನನ್ನೇ ಹೊಂದಿರುವುವು. ಇನ್ನು ಹೆಚ್ಚು ಮಾತಿನಿಂದೇನು ? ಕಣ್ಣಿಂದ ನೋಡಬಹುದಾದ ಐಹಿಕವಿಷಯಗಳು, ಕಿವಿಯಿಂದ ಕೇಳಿ ತಿಳಿಯತಕ್ಕ ಪಾರಲೌಕಿಕಗಳು, ಬುದ್ಧಿಯಿಂದ ಯೋಚಿಸತಕ್ಕವುಗಳು, ಇವೆಲ್ಲವೂ ತ್ರಿಗುಣಗಳಿಂದಲೇ ಬಂದವುಗಳೆಂದು ತಿಳಿ! ಹೀಗೆ ಇವೆಲ್ಲವೂ ತ್ರಿಗುಣಾತ್ಮಕಗಳಾದುದರಿಂದಲೇ, ಆಯಾ ಸತ್ವಾದಿಗುಣಗಳಿಗೆ ತಕ್ಕ ಪ್ರಾಚೀನಪುಣ್ಯಪಾಪಕರ್ಮಗಳ ಮೂಲಕವಾಗಿ, ಸಂಸಾರವನ್ನುಂಟುಮಾಡುವುವು. ಆದುದರಿಂದ ಜೀವನು ತನ್ನ ಮನಸ್ಸಿನಲ್ಲಿ ಹುಟ್ಟತಕ್ಕ ಈ ಸತ್ವಾದಿತ್ರಿಗುಣಗಳನ್ನು ಜಯಿಸಬೇಕಾದರೆ, ದೃಢವಾದ ಭಕ್ತಿಯೋಗದಿಂದ ನನ್ನಲ್ಲಿಯೇ ನಟ್ಟಮನಸ್ಸುಳ್ಳವನಾಗಿರಬೇಕು. ಆ ಭಕ್ತಿಯೋಗದಿಂದ ಸತ್ವಗುಣವು ಹೆಚ್ಚುತ್ತ ಹೆಚ್ಚುತ್ತ ಬಂದು, ರಜಸ್ತಮೋಗುಣಗಳನ್ನಡಗಿಸಿ, ಕೊನೆಗೆ ಪರಿಪಾಕದಶೆಯಲ್ಲಿ ಆ ಸತ್ವಗುಣವೂ ತನ್ನಿಂದತಾನೇ ಶಾಂತವಾಗುವುದು. ಹೀಗೆ ಪುರುಷನು ನಿರ್ಗುಣತ್ವವನ್ನು ಹೊಂದಿದಮೇಲೆ, ನನ್ನೊಡನೆ ಸಾಧರ್ಮ್ಯವನ್ನು ಪಡೆಯುವನು ಆದುದರಿಂದಲೇ ವಿದ್ವಾಂಸರು, ಆತ್ಮಪರಮಾತ್ಮ ಜ್ಞಾನಸಂಪಾದನೆಗೆ ಮುಖ್ಯಸಾಧನವಾದ ಈ ಮನುಷ್ಯದೇಹವನ್ನು ಪಡೆದಿರುವಾಗ, ಗುಣಮೂಲಕಗಳಾದ ಶಬ್ದಾದಿವಿಷಯಗಳಲ್ಲಿ ಮನಸ್ಸಿಡದೆ,ನನ್ನನ್ನೇ ಅನವರತವೂ ಭಜಿಸುತ್ತಿರುವರು. ಇಂದ್ರಿಯಗಳನ್ನು ವಶಮಾಡಿಕೊಂಡಮೇ

ಲೆಯೂ, ಮನುಷ್ಯನು ಅವುಗಳನ್ನು ನಂಬಿ ಎಚ್ಚರತಪ್ಪಿದ್ದರೆ, ಅವು ತಿರುಗಿ ವಿಷಯಾಭಿಲಾಷೆಯನ್ನು ಹುಟ್ಟಿಸಿ ಅನರ್ಥವನ್ನೇ ತಂದಿಡುವುವು. ಆದುದರಿಂದ ಮನುಷ್ಯನು, ಈ ವಿಚಾರವನ್ನು ತಿಳಿದು, ಆ ಇಂದ್ರಿಯಗಳಲ್ಲಿ ವಿಶ್ವಾಸವನ್ನಿಡದೆ, ವಿಷಯಸಂಗವನ್ನು ಬಿಟ್ಟು, ನನ್ನನ್ನು ಭಜಿಸುತ್ತ, ಸತ್ವಾಭಿವೃದ್ಧಿಗೆ ಹೇತುಗಳಾದ ದ್ರವ್ಯಗಳನ್ನೇ ಸೇವಿಸುತ್ತಬಂದರೆ, ಆ ಸತ್ವೋದ್ರೇಕದಿಂದ ರಜಸ್ತಮೋಗುಣಗಳನ್ನು ಅಡಗಿಸಬಹುದು. ಆದರೆ ಈ ಸತ್ವಗುಣವೂಕೂಡ ಪ್ರಕೃತಿಸಂಬಂಧಿಯೇ ಆದುದರಿಂದ, ಆ ಗುಣವಿರುವವರೆಗೂ ಕೂಡ ಪ್ರಕೃತಿಸಂಬಂಧವು ಬಿಡಲಾರದು. ಹಾಗಿದ್ದರೂ ಆ ಸತ್ವಗುಣವನ್ನು ಹೆಚ್ಚಿಸಿಕೊಳ್ಳುವುದರಿಂದ, ಅನನ್ಯಪ್ರಯೋಜನವಾದ ನನ್ನ ಉಪಾಸನಾತ್ಮಕಜ್ಞಾನವು ಹುಟ್ಟುವುದು. ಆ ಜ್ಞಾನದಿಂದ ಮನಸ್ಸು ರಾಗಾದಿದೋಷಗಳನ್ನು ನೀಗಿ ನಿಷ್ಕಲ್ಮಷವಾಗುವುದು. ಈ ಜ್ಞಾನಬಲದಿಂದ ಆ ಸತ್ವಗುಣವೂ ತನ್ನಿಂದತಾನೇ ಶಾಂತವಾಗುವುದು. ಹೀಗೆ ಗುಣತ್ರಯರಹಿತನಾದ ಜೀವನು, ದೇಹಾವಸಾನದಲ್ಲಿ ನನ್ನನ್ನು ಸೇರುವನು. ಹೀಗೆ ಮನಸ್ಸಿನಲ್ಲಿ ತೋರುವ ಸತ್ವಾದಿಗುಣಗಳನ್ನೂ, ಹೊರಗಿನ ದೇಹವನ್ನೂ ನೀಗಿದ ಜೀವನು, ತನಗೆ ಅಂತರ್ಯಾಮಿಯಾದ ನನ್ನ ಸ್ವರೂಪವನ್ನು ಅನವರತವೂ ಸಾಕ್ಷಾತ್ಕರಿಸುತ್ತಿರುವುದರಿಂದ, ಸಂಸಾರಕಾರಣಗಳಾದ ಹೊರಗಿನ ಕರ್ಮಗಳಲ್ಲಿಯಾಗಲಿ, ಒಳಗೆ ಮೋಕ್ಷಸಾಧನವಾದ ಜ್ಞಾನಯೋಗದಲ್ಲಿಯಾಗಲಿ, ಅವನಿಗೆ ಪ್ರವೃತ್ತಿಯು ಹುಟ್ಟದು. ಎಂದರೆ, ಮುಕ್ತಿದಶೆಯಲ್ಲಿ ಜೀವನು ಶಾಸ್ತ್ರವಶ್ಯನೂ ಆಗದಿರುವನು. ಇದು ಇಪ್ಪತ್ತೈದನೆಯ ಅಧ್ಯಾಯವು.

---

{ ಸ್ತ್ರೀಸಂಗವು ದೂಷ್ಯವೆಂಬುದನ್ನು ತಿಳಿಸುವುದಕ್ಕಾಗಿ, ಕೃಷ್ಣನು ಐಲಗೀತೆಯನ್ನು ಹೇಳಿದುದು. }

ಉದ್ಧವಾ! ಯಾವನು ನನ್ನ ಪ್ರಾಪ್ತಿಗೆ ಸಾಧನವಾದ ಇಂತಹ ಮನುಷ್ಯದೇಹವನ್ನು ಪಡೆದಿರುವಾಗ, ಫಲೋದ್ದೇಶವುಳ್ಳ ಪ್ರವೃತ್ತಿಧರ್ಮಗಳಲ್ಲಿ ಪ್ರವರ್ತಿಸದೆ, ನನ್ನ ಆರಾಧನರೂಪವಾದ ನಿವೃತ್ತಿಧರ್ಮವನ್ನೇ ಅವ

ಲಂಬಿಸುವನೋ, ಅವನು ನಿತ್ಯಾನಂದಮಯನಾಗಿಯೂ, ಜೀವಾಂತರ್ಯಾಮಿ ಯಾಗಿಯೂ ಇರುವ ನನ್ನನ್ನು ಹೊಂದುವನು. ಯಾವನು, ಆತ್ಮ ಪರಮಾತ್ಮಸ್ವರೂಪವಿವೇಚನೆಯಿಂದ ತ್ರಿಗುಣಾತ್ಮಕವಾದ ಪ್ರಕೃತಿಯ ಕಾರ್ಯಭೂತಗಳೆನಿಸಿಕೊಂಡ ದೇವಮನುಷ್ಯಾದಿ ಶರೀರಗಳಲ್ಲಿ "ನಾನು ನನ್ನ"ದೆಂಬ ಅಹಂಕಾರಮಮಕಾರಗಳನ್ನು ನೀಗುವನೋ, ಅವನು ನಿಷಿದ್ಧಗಳಲ್ಲದ ಶಬ್ದಾದಿವಿಷಯಗಳನ್ನನುಭವಿಸುತಿದ್ದರೂ, ದೇಹಾನುಬಂಧಿಗಳಲ್ಲಿ ತನ್ನವರೆಂಬ ಅಭಿಮಾನವನ್ನಿಟ್ಟಿದ್ದರೂ, ಆ ವಸ್ತುಗಳಿಂದಾಗಲಿ, ಗುಣಗಳಿಂದಾಗಲಿ ಬಂಧಿಸಲ್ಪಡಲಾರನು. ಮುಖ್ಯವಾಗಿ ಇಂತವನು ಶಿಶ್ನೋದರಪರಾಯಣರಾದ ಅಸಜ್ಜನರೊಡನೆ ಸಹವಾಸವಿಲ್ಲದಿರಬೇಕು. ಅಂತವರನ್ನು ಅನುಸರಿಸುವವನು,ಕುರುಡನ ಕೈಯನ್ನು ಹಿಡಿದು ನಡೆಯುವ ಕುರುಡನಂತೆ, ಎಂದಾದರೂ ಒಮ್ಮೆ ಅಂಧತಮಸ್ಸಿನಲ್ಲಿ ಬಿಳುವುದೇ ನಿಶ್ಚಯವು. ಇದಕ್ಕೊಂದು ನಿದರ್ಶನವನ್ನು ಹೇಳುವೆನು ಕೇಳು. ಪೂರ್ವಕಾಲದಲ್ಲಿ ಪುರೂರವನೆಂಬ ರಾಜನು ದೊಡ್ಡಚಕ್ರವರ್ತಿಯೆನಿಸಿಕೊಂಡು, ಅಪಾರವಾದ ಕೀರ್ತಿಯನ್ನು ಸಂಪಾದಿಸಿದ್ದನು. ಅಂತವನೂ ಕೂಡ, ಊರ್ವಶಿಯಲ್ಲಿ ಮೋಹಾಕುಲನಾಗಿದ್ದು, ಅವಳ ವಿಯೋಗಕಾಲದಲ್ಲಿ ಸಹಿಸಲಾರದ ದುಃಖದಿಂದ ವಿವೇಕಹೀನನಾಗಿದ್ದನು. ಈ ರಾಜನು ಆ ವೇಶ್ಯೆಯೊಡನೆ ರಮಿಸುತ್ತಿದ್ದಾಗ, ಅವಳ ಮೇಲಿನ ಮೋಹದಿಂದ, ಹಗಲುರಾತ್ರಿಗಳನ್ನೇ ತಿಳಿಯದೆ ತುಚ್ಛಭೋಗಗಳಲ್ಲಿ ಮೈಮರೆತು, ಅನೇಕವರ್ಷಗಳವರೆಗೆ ತೃಪ್ತಿಯಿಲ್ಲದೆ ವಿಷಯಸುಖದಲ್ಲಿಯೇ ಮುಳುಗಿದ್ದನು. ಹೀಗಿರುವಾಗ ಒಮ್ಮೆ ಆ ವೇಶ್ಯೆಯು, ಆತನನ್ನು ವಂಚಿಸಿ! ,ಬಿಟ್ಟುಹೋದಾಗ, ಆವಳ ವಿಯೋಗವನ್ನು ಸಹಿಸಲಾರದೆ, ಹುಚ್ಚು ಹಿಡಿದವನಂತಾಗಿ, ತನ್ನ ಮೈಮೇಲೆ ಬಟ್ಟೆಯಿಲ್ಲದಿರುವುದನ್ನೂ ತಿಳಿಯದೆ, ಅವಳನ್ನು ಹಿಂಬಾಲಿಸುತ್ತ "ಪ್ರಿಯೆ ! ನೀನು ಎಂತಹ ಕಠಿನಹೃದಯಳು! ನನ್ನನ್ನು ಬಿಟ್ಟು ಹೋಗಬೇಡ! ನಿಲ್ಲು!" ಎಂದು ಬುದ್ಧಿವಿಕಲನಾಗಿ ವಿಲಪಿಸುತ್ತ ಹೋದನು. ಹೀಗೆ ಆ ವೇಶ್ಯೆಯಲ್ಲಿ ಮೋಹಪರವಶನಾಗಿದ್ದ ಐಲನು (ಪುರೂರವನು), ಕೊನೆಗೆ ಕುರುಕ್ಷೇತ್ರದಲ್ಲಿ ಅವಳನ್ನು ಸಂಧಿಸಿ, ಅಲ್ಲಿ ಗಂಧರ್ವಾನುಗ್ರಹದಿಂದ ತನಗೆ ಲಭಿಸಿದ ಅಗ್ನಿಯಲ್ಲಿ ಒಂದು

ಹೋಮವನ್ನು ಮಾಡಿ, ಅದರ ಫಲದಿಂದ ತಾನೂ ಆ ಊರ್ವಶಿಯ ಲೋಕವನ್ನು ಸೇರಿ,ಬಹುಕಾಲದವರೆಗೆ ಅಲ್ಲಿ ಅವಳೊಡನೆ ರಮಿಸುತಿದ್ದನು.)ಆಮೇಲೆ ಅವನಿಗೆ ಕ್ರಮಕ್ರಮವಾಗಿ ಆ ಮೋಹವು ತಗ್ಗುತ್ತ ಬಂದು, ಕೊನೆಗೆ ತನ್ನ ಹಿಂದಿನ ಸ್ಥಿತಿಯನ್ನು ಕುರಿತು ಪಶ್ಚಾತ್ತಾಪವೂ, ವಿಷಯಸುಖಗಳು ಅನರ್ಥಹೇತುವೆಂಬ ವಿವೇಕಜ್ಞಾನವೂ, ಅದರಿಂದ ಮನಸ್ಸಿನಲ್ಲಿ ವೈರಾಗ್ಯವೂ ಜನಿಸಿತು. ಆಗ ಅವನು ಈ ಗಾಥೆಯನ್ನು ಹೇಳುವನು. “ಅಹಾ! ಕಾಮಾತುರದಿಂದ ಬುದ್ಧಿಗೆಟ್ಟ ನನಗೆ, ಇದೆಂತಹ ಮೋಹವು ಆವರಿಸಿತು ! ಆ ಊರ್ವಶಿಯ ತೋಳುಗಳಿಂದ ಆಲಿಂಗಿಸಲ್ಪಟ್ಟು, ಸುಖಾನುಭವದಲ್ಲಿದ್ದ ನಾನು, ಇದುವರೆಗೆ ನನ್ನ ಆಯುರ್ಭಾಗಗಳು ವ್ಯರ್ಥವಾಗಿ ಕಳೆದು ಹೋಹುದನ್ನೂ ತಿಳಿಯದೆ ಹೋದೆನು. ಸ್ತ್ರೀ ಮೋಹದಿಂದ ನನ್ನ ವಿವೇಕವೆಲ್ಲವೂ ಕೆಟ್ಟಿತು. ಅವಳೊಡನೆ ಸುಖಿಸುತಿದ್ದ ನನಗೆ, ಸೂರ್ಯನ ಉದಯಾಸ್ತಮಯಗಳೂ ತಿಳಿಯದಂತಿದ್ದುವು. ಹೀಗೆಯೇ ನನಗೆ ಎಷ್ಟೋವರ್ಷಗಳ ಹಗಲುರಾತ್ರಿಗಳು ಕಳೆದು ಹೋದುವಲ್ಲವೆ? ಅಯ್ಯೋ! ನನ್ನ ಸ್ಥಿತಿಯೇನು? ನಾನು ಮಾಡಿದ ಕಾರ್ಯವೇನು? ಚಕ್ರವರ್ತಿಯೆಂದೂ, ರಾಜರಲ್ಲಿ ಶಿಖಾಮಣಿಯೆಂದೂ,ಜನರೆಲ್ಲರೂ ನನ್ನನ್ನು ಕೊಂಡಾಡುತಿದ್ದರು. ಈ ಸ್ಥಿತಿಯಲ್ಲಿರುವಾಗಲೂ ನಾನು ಮೋಹಾಕುಲನಾಗಿ ಒಬ್ಬ ಹೆಂಗಸಿಗೆ ಆಟದ ಬೊಂಬೆಯಂತಾದೆನಲ್ಲಾ ? ಅಹಾ ! ಇದೇನು ನನ್ನ ಮೋಹವು ? ಸಾರ್ವಭೌಮಪದವಿಯಲ್ಲಿರುವ ನಾನು, ನನ್ನ ರಾಜೋಪಭೋಗಗಳನ್ನೂ ತೃಣಕ್ಕೆ ಸಮಾನವಾಗಿ ಭಾವಿಸಿ, ಅವೆಲ್ಲವನ್ನೂ ತೊರೆದು, ಮೈಮೇಲೆ ಬಟ್ಟೆಯೂ ಇಲ್ಲದೆ, ಆ ಸ್ತ್ರೀಯನ್ನು ಹಿಂಬಾಲಿಸಿ, ಹುಚ್ಚನಂತೆ ವಿಲಪಿಸುತ್ತ ಹೋದೆನಲ್ಲಾ! ನನ್ನಂತೆ ಹೀಗೆ, ತನ್ನನ್ನು ನಿರಾಕರಿಸಿ ಹೋಗುವ ಸ್ತ್ರೀಯನ್ನು ಬಿಡಲಾರದೆ ಹಿಂಬಾಲಿಸಿ ಹೋಗುವವನನ್ನು ಕತ್ತೆಗಳಂತೆಯೇ ಭಾವಿಸಬೇಕು. ಹೆಣ್ಣುಕತ್ತೆಗಳು ಹಿಂಗಾಲುಗಳಿಂದ ಒದೆಯುತಿದ್ದರೂ ಅವುಗಳನ್ನು ಬಿಡದೆ ಹಿಂಬಾಲಿಸುವುದು ಕತ್ತೆಗಳ ಸ್ವಭಾವವಲ್ಲವೆ? ಇಂತಹ ಅಲ್ಪಬುದ್ಧಿಯುಳ್ಳವರಿಗೆ, ಗೌರವವಾಗಲಿ, ತೇಜಸ್ಸಾಗಲಿ, ಪ್ರಭುತ್ವವಾಗಲಿ ನಿಲ್ಲುವುದೆಂದರೇನು ? ಯಾವನ ಮನಸ್ಸು ಹೀಗೆ ಸ್ತ್ರೀವಶ್ಯವಾ

ಗಿರುವುದೋ, ಅವನಿಗೆ ಎಷ್ಟು ವಿದ್ಯೆಯಿದ್ದರೇನು ? ಎಷ್ಟು ವಿವೇಕವಿದ್ದರೇನು ? ಮತ್ತು ಅವನಿಗೆ ತಪಸ್ಸಿನಿಂದಾಗಲಿ, ದಾನದಿಂದಾಗಲಿ, ಶಾಸ್ತ್ರಶ್ರವಣದಿಂದಾಗಲಿ, ವಿವಿಕ್ತವಾಸದಿಂದಾಗಲಿ, ಮೌನದಿಂದಾಗಲಿ, ಪ್ರಯೋಜನವೇನು ? ಆಹಾ ! ನಾನು ಸಾರ್ವಭೌಮಪದವಿಯನ್ನು ಹೊಂದಿದ್ದರೂ, ಒಬ್ಬ ಸ್ತ್ರೀಗೆ ವಶನಾಗಿ, ಪಶುವಿನಂತೆಯೂ, ಕತ್ತೆಯಂತೆಯೂ ಅವಳನ್ನು ಹಿಂಬಾಲಿಸಿ ಓಡಿಹೋದೆನು! ಹೀಗೆ ನಾನು ನನ್ನ ಶ್ರೇಯಸ್ಸನ್ನೇ ತಿಳಿಯದ ಮೂಢನಾಗಿದ್ದರೂ, ನಾನೇ ಪಂಡಿತನೆಂಬ ಅಭಿಮಾನವುಮಾತ್ರ ಇದುವರೆಗೂ ನನ್ನನ್ನು ಬಿಟ್ಟುಹೋಗಿಲ್ಲ. ಛೀ ! ಈ ನನ್ನ ಜನ್ಮವನ್ನು ಸುಡಬೇಕಲ್ಲವೆ ? ಈ ನನ್ನ ಜನ್ಮವೊಂದು ಜನ್ಮವೆ? ಹಿಂದೆ ಅನೇಕವರ್ಷಗಳವರೆಗೆ ನಾನು ಆಗಾಗ ಆ ವೇಶ್ಯೆಯ ಅಧರಪಾನವನ್ನು ಮಾಡುತಿದ್ದರೂ, ನನ್ನ ಮನಸ್ಸಿಗೆ ತೃಪ್ತಿಯಿಲ್ಲದೆ ಹೋಯಿತು. ಆಹುತಿಯನ್ನಿಕ್ಕಿದಷ್ಟೂ ಅಗ್ನಿಯು ಮೇಲೆಮೇಲೆ ಜ್ವಲಿಸುವಂತೆ, ನಾನು ವಿಷಯಸುಖಗಳನ್ನನುಭವಿಸಿದಷ್ಟೂ, ಕಾಮವು ಹೆಚ್ಚುತ್ತಲೇ ಬಂದಿತು. ಇಂತಹ ಜಾರೆಯರಿಂದ ಅಪಹರಿಸಲ್ಪಡುವ ಮನಸ್ಸನ್ನು ಹಿಂತಿರುಗಿಸಬೇಕೆಂದರೆ, ಆತ್ಮಾರಾಮನಾದ ಆ ಸರ್ವೇಶ್ವರನೊಬ್ಬನುಹೊರತು ಬೇರೊಬ್ಬರೂ ಸಮರ್ಥರಲ್ಲವೆಂದೇ ನನಗೆ ತೋರುವುದು. ಅಥವಾ ಆ ಸ್ತ್ರೀಯರನ್ನು ತಾನೇ ಏಕೆ ನಿಂದಿಸಬೇಕು? ಆ ಊರ್ವಶಿಯು ನನಗೆ ಮೊದಲು ಎಷ್ಟೋ ವಿಧವಾಗಿ ಬುದ್ಧಿವಾದಗಳನ್ನು ಹೇಳಿ ಬೋಧಿಸಿದಳು. ಅವಳಲ್ಲಿ ಸ್ವಲ್ಪಮಾತ್ರವೂ ತಪ್ಪಿಲ್ಲವು. ನಾನೇ ಇಂದ್ರಿಯಗಳನ್ನು ಜಯಿಸಲಾರದೆ ಬುದ್ಧಿಗೆಟ್ಟು ಅವಳನ್ನು ಹಿಂಬಾಲಿಸಿದೆನು. ಅವಳು ಎಷ್ಟೋವಿಧದಲ್ಲಿ ನನಗೆ ಹಿತವನ್ನು ಹೇಳಿ ನಿವಾರಿಸಿದರೂ ನನ್ನ ಮನಸ್ಸಿನ ಮಹಾಮೋಹವು ನನ್ನನ್ನು ಬಿಡದೆ ಹೋಯಿತು. ಅವಳು ನನಗೆ ಮಾಡಿದ ತಪ್ಪೇನು ? ಒಂದು ಹಗ್ಗವನ್ನು ನೋಡಿ ಅದರ ನಿಜಸ್ವರೂಪವನ್ನು ತಿಳಿಯಲಾರದ ಮೂಢನು. ಅದನ್ನು ಸರ್ಪವೆಂದು ಭ್ರಮಿಸಿದರೆ,ಅದು ಅವನ ಮನಸ್ಸಿನ ಭ್ರಾಂತಿಯೇಹೊರತು ಅಲ್ಲಿ ಆ ಹಗ್ಗವು ಮಾಡಿದ ಅಪಕಾರವೇನು? ಹಾಗೆಯೇ ಇಂದ್ರಿಯಗಳನ್ನು ಜಯಿಸಲಾರದವನು, ದೇಹವನ್ನೇ ಆತ್ಮವೆಂದು ಭ್ರಮಿಸಿದರೆ. ಅದರಲ್ಲಿ ದೇಹವು

ಮಾಡಿದ ಅಪಕಾರವೇನು ? ಈ ದೇಹವೆಂಬುದು ದುರ್ಗಂಧಾದಿದೋಷ ಗಳಿಗೆ ನೆಲೆಯಾಗಿ, ಅಶುಚಿಯಾಗಿಯಾಗಿರುವುದು. ಕೇವಲ ಮಲಿನವಾದ ಈ ದೇಹದಲ್ಲಿ,ಸೌಗಂಧ್ಯವೇ ಮೊದಲಾಗಿ ಮನೋಹರಗಳಾದ ಗುಣಗಳನ್ನು ಭಾ ವಿಸಿ ಅಭಿಮಾನಿಸುವುದು ಅಜ್ಞಾನದ ಕಾರ್ಯವಲ್ಲವೆ? ದೇಹವನ್ನು ಯಾರ ಸ್ವ ತ್ತೆಂದು ಹೇಳಬಹುದು. ಈ ದೇಹವನ್ನು ಹುಟ್ಟಿಸಿದ ತಾಯಿತಂದೆಗಳಿಗೆ ಸೇ ರಿದುದೆ?ಅಥವಾ ಈ ದೇಹಸಂಬಂಧದಿಂದ ಸುಖಾನುಭವವನ್ನು ಮಾಡತಕ್ಕ ಹೆಂಡಿರದೆ?ಅನ್ನವಿತ್ತು ಕಾಪಾಡತಕ್ಕ ಒಡೆಯನದೆ? ಕೊನೆಗೆ ಇದನ್ನು ಭಸ್ಮ ಮಾಡತಕ್ಕ ಅಗ್ನಿಗೆ ಸೇರಿದುದೆ? ಆಹಾರವಾಗಿ ಭಕ್ಷಿಸತಕ್ಕ ನಾಯಿ, ನರಿ, ಹದ್ದು ಮುಂತಾದ ಪ್ರಾಣಿಗಳಿಗೆ ಸೇರಿದುದೆ? ತನ್ನ ಆತ್ಮನಿಗಾದರೂ ಇ ದು ಸ್ವಂತವೆ? ಅನುಬಂಧಿಗಳಾದ ಇಷ್ಟಮಿತ್ರಬಂಧುಗಳದೆ? ಇವರಲ್ಲಿ ಯಾರಿಗೆ ಈ ದೇಹವನ್ನು ಸ್ವಂತವೆಂದು ಹೇಳಬಹುದು? ಹೀಗೆ ಈ ದೇಹ ದಲ್ಲಿ ಅನೇಕರಿಗೆ ಬಾಧ್ಯತೆಯುಂಟೆಂಬುದನ್ನು ತಿಳಿದು,ಯಾವನು,ಅದನ್ನು ತನ್ನ ದಲ್ಲವೆಂದು ಅದರ ಅಭಿಮಾನವನ್ನು ಬಿಡುವನೋ, ಅವನಿಗೆ ಯಾವ ವಿಧ ದಿಂದಲೂ ದುಃಖವಿಲ್ಲ! ದೇಹವೆಂಬುದು ಹುಟ್ಟಿದುದು ಮೊದಲು ಅಶುಚಿ ಯಾಗಿಯೇ ಇದ್ದು! ಕೊನೆಗ ಏನೂ ಇಲ್ಲದಂತೆಯೂ ಹೋಗುವುದು, ಇಂತಹ ದೇಹವನ್ನು ನೋಡಿ ಮೂಢಜನರು "ಆಹಾ! ಆ ಸುಂದರಿಯ ಮೈಕಟ್ಟು ಎಷ್ಟು ಮನೋಹರವಾಗಿರುವುದು ? ಅವಳ ಮೂಗೋ! ಅ ವಳ ಕಣ್ಣೋ! ಮುಗುಳ್ನಗೆಯನ್ನು ಬೀರುತ್ತಿರುವ ಅವಳ ಮುಖವೋ! ಆ ಸೌಂದರ್ಯವನ್ನು ಎಷ್ಟು ವರ್ಣಿಸಿದರೂ ತೀರದು" ಎಂದು ಅದರಲ್ಲಿ ಮೋಹಿತರಾಗಿ ಕಳವಳಿಸುವರು. ರಕ್ತ, ಮಾಂಸ ಮೇದಸ್ಸು, ಮಜ್ಜೆ, ಸ್ನಾಯು, ಅಸ್ಥಿ, ಚರ್ಮ,ಗಳೆಂಬ ಸಪ್ತಧಾತುಗಳಿಂದಲೂ, ಮಲಮೂ ತ್ರಾದಿ ದುರ್ಗಂಧಗಳಿಂದಲೂ ತುಂಬಿದ ಇಂತಹ ದೇಹದಲ್ಲಿ ಮೋಹವನ್ನಿ ಟ್ಟು, ಅದರೊಡನೆ ರಮಿಸತಕ್ಕವರಿಗೂ, ಕೀವು, ರಕ್ತ,ಮಾಂಸ, ಮಲ,ಮೂ ತ್ರಾದಿಗಳಲ್ಲಿಯೇ ಬಿದ್ದು, ಅವುಗಳನ್ನು ತಿಂದು ಜೀವಿಸುವ ಕ್ರಿಮಿಗಳಿಗೂ ವ್ಯತ್ಯಾಸವೇನು ? ಆತ್ಮಹಿತವನ್ನು ಬಯಸತಕ್ಕವನು, ಇಂತಹ ಸ್ತ್ರೀಯ ರಲ್ಲಿಯೂ, ಸ್ತ್ರೀಸಂಗವುಳ್ಳವರಲ್ಲಿಯೂಎಂದಿಗೂ ಕಲೆತಿರಬಾರದು. ಇಂ

ದ್ರಿಯಗಳೊಡನೆ ಶಬ್ದಾದಿವಿಷಯಗಳ ಸಂಬಂಧವಿದ್ದಾಗ ಮನಸ್ಸು ಕೆಡು ವುದೇಹೊರತು, ಆ ವಿಷಯಗಳನ್ನು ಕಣ್ಣಿಂದ ನೋಡದೆಯೂ, ಕಿವಿ ಯಿಂದ ಕೇಳದೆಯೂ ಇದ್ದಾಗ, ಮನಸ್ಸೂ ಕಲಗಲಾರದು. ಪುರುಷನು, ತನ್ನ ಇಂದ್ರಿಯಗಳಿಗೆ ಅಂತಹ ದುರ್ವಿಷಯಗಳನ್ನು ದೂರಮಾಡಿದ್ದರೆ, ಅ ವನ ಮನಸ್ಸು ನಿಶ್ಚಲವಾಗಿಯೂ, ಶಾಂತವಾಗಿಯೂ ಇರುವುದು. ಆದುದ ರಿಂದ ವಿವೇಕಿಯಾದವನು, ಸ್ತ್ರೀಯರೊಡನೆಯಾಗಲಿ, ಸ್ತ್ರೀಸಂಗವುಳ್ಳವ ರೊಡನೆಯಾಗಲಿ ಸಂಪರ್ಕವನ್ನೇ ಮಾಡಬಾರದು. ಇಂದ್ರಿಯಗಳಾದರೂ, ಬಹಳ ಬಲವತ್ತರಗಳು ! ವಿದ್ವಾಂಸನನ್ನಾದರೂ ವಂಚಿಸದೆ ಬಿಡವು. ಹೀಗಿ ರುವಾಗ ನಮ್ಮಂತವರ ಪಾಡೇನು?" ಎಂದನು.

ಉದ್ಧವಾ ! ರಾಜರಾಜನೆನಿಸಿಕೊಂಡ ಆ ಪುರೂರವನು ಹೀಗೆಂದು ಹೇಳಿ, ಒಡನೆಯೇ ಆ ಊರ್ವಶೀಲೋಕವನ್ನು ಬಿಟ್ಟು ಹಿಂತಿರುಗಿ ಬಂದು, ತನ್ನಲ್ಲಿ ಅಂತರಾತ್ಮನಾದ ನನ್ನನ್ನು ಧ್ಯಾನೋಪಾಸನೆಗಳಿಂದ ಸಾಕ್ಷಾತ್ಕರಿಸು ತ್ತ, ಆ ಉಪಾಸನಾರೂಪವಾದ ಜ್ಞಾನಬಲದಿಂದ, ದೇಹಾಭಿಮಾನವೆಂಬ ಮೋಹವನ್ನು ನೀಗಿ, ಕೊನೆಗೆ ಮುಕ್ತನಾದನು. ಆದುದರಿಂದ ಉದ್ಧವಾ ! ತನ್ನ ಶ್ರೇಯಸ್ಸನ್ನು ಬಯಸತಕ್ಕ ವಿವೇಕಿಗಳು, ದುಸ್ಸಂಗವನ್ನು ಬಿಟ್ಟು ಸತ್ಸಂಗವನ್ನೇ ಮಾಡುತ್ತಿರಬೇಕು. ಸತ್ಪುರುಷರು, ವಿಷಯಾಸಕ್ತಿಯಲ್ಲಿರು ವ ಅನರ್ಥಗಳನ್ನು ಆಗಾಗ ಬೋಧಿಸುತ್ತ, ಅವನ ಮನಸ್ಸನ್ನು ತಿದ್ದಿ, ದುರ್ವಿ ಷಯಗಳಕಡೆಗೆ ಹೋಗದಂತೆ ತಡೆಯುವರು. ಸಹವಾಸಯೋಗ್ಯರಾದ ಅಂತ ಹ ಸತ್ಪುರುಷರ ಲಕ್ಷಣಗಳೇನೆಂದರೆ; ಯಾವುದರಲ್ಲಿಯೂ ಅಪೇಕ್ಷೆಯಿಲ್ಲದೆ, ನನ್ನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿಯೂ, ರಾಗಾದಿದೋಷಗಳಿಲ್ಲದೆ ಶಾಂತರಾಗಿಯೂ, ಸಮದರ್ಶಿಗಳಾಗಿಯೂ, ಅಹಂಕಾರ ಮಮಕಾರಗಳನ್ನು ನಿಶ್ಶೇಷವಾಗಿ ತ್ಯಜಿಸಿದವರಾಗಿಯೂ, ಸುಖದುಃಖಾದಿದ್ವಂದ್ವಗಳನ್ನು ಜ ಯಿಸಿದವರಾಗಿಯೂ, ಪರಿಗ್ರಹವಿಲ್ಲದವರಾಗಿಯೂ ಇರುವವರು ಯಾರೋ ಅವರೇ ಸತ್ಪುರುಷರು. ಅಂತಹ ಮಹಾತ್ಮರು ಯಾವಾಗಲೂ; ನನ್ನ ಕಥೆಗಳನ್ನೇ ಅನುಭವಿಸುತ್ತಿರುವುದರಿಂದ, ಅವರ ಸಹವಾಸದಲ್ಲಿರುವವ ರೂ, ಸಮಸ್ತಪಾಪನಿವಾರಕಗಳಾದ ಆ ಭಗವತ್ಕಥೆಗಳನ್ನು ಕೇಳಿ

ಪರಿಶುದ್ಧರಾಗಬಹುದು. ಹೀಗೆ ಯಾರು ನನ್ನ ಕಥೆಗಳನ್ನು ಶ್ರದ್ಧೆಯಿಂದಲೂ, ಆದರದಿಂದಲೂ ಕೇಳುತ್ತ ಆಗಾಗ ಅವುಗಳನ್ನು ಕೀರ್ತಿಸುತ್ತ, ನನ್ನ ಆರಾಧನದಲ್ಲಿ ನಿರತರಾಗಿರುವರೋ ಅವರಿಗೆ ತಾನಾಗಿ ನನ್ನಲ್ಲಿ ಭಕ್ತಿಯು ಹುಟ್ಟುವುದು. ಅನಂತಕಲ್ಯಾಣಗುಣಪರಿಪೂರ್ಣನಾಗಿಯೂ, ಜ್ಞಾನಾನಂದಸ್ವರೂಪನಾಗಿಯೂ ಇರುವ ಪರಬ್ರಹ್ಮನೆನಿಸಿಕೊಂಡ ನನ್ನಲ್ಲಿ ಭಕ್ತಿಯನ್ನು ಪಡೆದ ಸಾಧುಗಳಿಗೆ ಹೊಂದಬೇಕಾದ ಬೇರೆ ಪುರುಷಾರ್ಥವೇನೂ ಇರುವುದಿಲ್ಲ. ಅಗ್ನಿಯನ್ನಾಶ್ರಯಿಸಿದವನಿಗೆ ಶೀತಭಯವಾಗಲಿ, ಕತ್ತಲೆಯ ಭಯವಾಗಲಿ ಇಲ್ಲದಿರುವಂತೆ, ಸಾಧುಗಳನ್ನಾಶ್ರಯಿಸಿದವರಿಗೆ, ಅಜ್ಞಾನದಿಂದಾಗಲಿ, ಸಂಸಾರದಿಂದಾಗಲಿ ಭಯವಿಲ್ಲ! ಭಯಂಕರವಾದ ಸಂಸಾರಸಮುದ್ರದಲ್ಲಿ ಮುಳುಗಿ ತೇಲುತ್ತಿರುವವರಿಗೆ, ಸಾಧುಗಳು ದೃಢವಾದ ನಾವೆಯಂತಿರುವರು. ಪ್ರಾಣಿಗಳಿಗೆ ಅನ್ನವು ಹೇಗೆ ಜೀವನಾಧಾರವೋ, ಹಾಗೆ ತಾಪತ್ರಯಪೀಡಿತರಾದವರಿಗೆ ಸರ್ವೇಶ್ವರನಾದ ನಾನೇ ಉದ್ಧಾರಕನು. ಪರಲೋಕದಲ್ಲಿ ಧರ್ಮವೂ, ಇಹಲೋಕದಲ್ಲಿ ಧನವೂ, ಮನುಷ್ಯರಿಗೆ ರಕ್ಷಕವಾಗಿರುವಂತೆ, ಸಂಸಾರಭೀತರಿಗೆ ಸಾಧುಗಳೇ ರಕ್ಷಕರು. ಪ್ರಾಣಿಗಳಿಗೆ ಸೂರ್ಯನು ಹೊರಗಿನ ಕಣ್ಣುಗಳನ್ನು ಕೊಡುವನು. ಸಾಧುಗಳಾದರೋ ಜ್ಞಾನಾತ್ಮಕವಾದ ಒಳಗಿನ ಕಣ್ಣುಗಳನ್ನೇ ಕೊಡುವರು. ಆದುದರಿಂದ ಸಜ್ಜನರು ದೇವತೆಗಳಂತೆ ಪೂಜ್ಯರೂ, ಬಂಧುಗಳಂತೆ ಉಪಕಾರಕರೂ ಆಗಿರುವರು. ಅಂತವರೇ ನನಗೆ ಆತ್ಮಭೂತರಾದುದರಿಂದ ಅವರನ್ನು ನಾನೆಂದೇ ತಿಳಿ! ಉದ್ಧವಾ! ಹೀಗೆ ವೀತಸೇನರಾಜನ ಮಗನಾದ ಪುರೂರವನು, ಸ್ತ್ರೀಸಂಗದಲ್ಲಿದ್ದು, ತನ್ನ ವಿವೇಕದಿಂದ ತಾನೇ ಅದನ್ನು ಬಿಡಿಸಿಕೊಂಡು, ಆತ್ಮಧ್ಯಾನಪರನಾಗಿ, ಭೂಮಿಯನ್ನು ಸಂಚರಿಸುತಿದ್ದನು. ಇದು ಇಪ್ಪತ್ತಾರನೆಯ ಅಧ್ಯಾಯವು.

---

## ಭಗವದಾರಾಧನಕ್ರಮವು.

ಉದ್ಧವನು ಪ್ರಶ್ನಮಾಡುವನು. “ಓ ಪ್ರಭೂ! ನಿನ್ನ ಆರಾಧನರೂಪವಾದ ಕರ್ಮಯೋಗವನ್ನು ನನಗೆ ವಿವರಿಸಿ ತಿಳಿಸಬೇಕು. ನಿನ್ನ ಭಕ್ತರು

ನಿನ್ನನ್ನು ಯಾವಸಾಧನಗಳಿಂದ, ಎಲ್ಲೆಲ್ಲಿ, ಯಾವವಿಧವಾಗಿ ಪೂಜಿಸುವರೆಂಬುದನ್ನು ಹೇಳು! ಪೂಜ್ಯನಾದ ನಾರದನೂ, ವ್ಯಾಸಮಹರ್ಷಿಯೂ, ದೇವಗುರುವಾದ ಬೃಹಸ್ಪತಿಯೂ, ಇನ್ನೂ ಅನೇಕಮಹರ್ಷಿಗಳೂ ಕೂಡ, ಕರ್ಮಯೋಗಗಳೊಳಗೆಲ್ಲಾ ನಿನ್ನ ಆರಾಧನರೂಪವಾದ ಕರ್ಮವೇ ಉತ್ತಮಪುರುಷಾರ್ಥಸಾಧಕವೆಂದು ಹೇಳಿರುವರು. ಈ ನಿನ್ನ ಆರಾಧನಕ್ರಮವು ಮೊದಲು ನಿನ್ನ ಬಾಯಿಂದಲೇ ಹೊರಟು ಚತುರ್ಮುಖಬ್ರಹ್ಮನಿಗೆ ಉಪದೇಶಿಸಲ್ಪಟ್ಟಿತು. ಆ ಬ್ರಹ್ಮನು, ಭೃಗು ಮೊದಲಾದ ತನ್ನ ಪುತ್ರರಿಗೆ ಉಪದೇಶಿಸಿರುವನು. ಭಗವಂತನಾದ ರುದ್ರನು ಇದನ್ನೇ ತನ್ನ ಪತ್ನಿಯಾದ ಪಾರ್ವತಿಗೆ ಉಪದೇಶಿಸಿರುವನು ಓ ಪುರುಷೋತ್ತಮಾ! ನಿನ್ನ ಆರಾಧನವು ಎಲ್ಲಾವರ್ಣಾಶ್ರಮಗಳಿಗೂ, ಸ್ತ್ರೀಶೂದ್ರಾದಿಗಳಿಗೂ, ಉತ್ತಮವಾದ ಶ್ರೇಯಸ್ಸಾಧನೆಗೆ ಸುಲಭೋಪಾಯವಾಗಿರುವುದು. ಓ ಪುಂಡರೀಕಾಕ್ಷಾ! ಕರ್ಮಬಂಧವನ್ನು ಬಿಡಿಸತಕ್ಕ ಆ ನಿನ್ನ ಆರಾಧನಕ್ರಮವನ್ನು ಭಕ್ತನೂ, ನಿನ್ನಲ್ಲಿ ಅನುರಕ್ತನೂ ಆದ ನನಗೆ ಉಪದೇಶಿಸಬೇಕು. ಈ ಉಪದೇಶವು ಬ್ರಹ್ಮಾದಿಗಳಿಂದ ಉಪದೇಶಪರಂಪರೆಯಾಗಿ ಲೋಕದಲ್ಲಿ ಹರಡಿದ್ದರೂ, ಆ ಬ್ರಹ್ಮಾದಿಗಳಿಗೂ ಪ್ರಭುವಾದ ನಿನ್ನ ಮುಖಾರವಿಂದದಿಂದಲೇ ಕೇಳುವುದು ನನ್ನ ಪರಮಭಾಗ್ಯವಲ್ಲವೆ?" ಎಂದನು.

ಅದಕ್ಕಾ ಭಗವಂತನು "ಉದ್ಧವಾ! ಕೇಳು! ಲೋಕದಲ್ಲಿ ಕರ್ಮಬೋಧಕಗಳಾದ ಶಾಸ್ತ್ರಗಳು ಅಪಾರವಾಗಿರುವುವು. ಹಾಗಿದ್ದರೂ ನಿನಗೆ ಅದನ್ನು ಸಂಕ್ಷೇಪಿಸಿ ಯಥಾಸ್ಥಿತವಾಗಿ ಹೇಳುವೆನು ಕೇಳು. ನನ್ನ ಆರಾಧನರೂಪವಾದ ಯಜ್ಞದಲ್ಲಿ, ವೈದಿಕವೆಂದೂ, ತಾಂತ್ರಿಕವೆಂದೂ, ಮಿಶ್ರವೆಂದೂ ಮೂರುವಿಧಗಳುಂಟು. ಈ ಮೂರರಲ್ಲಿ !ಅವರವರಿಗೆ ಇಷ್ಟವಾದ ವಿಧಿಯಿಂದ ನನ್ನನ್ನಾರಾಧಿಸಬಹುದು. ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ತ್ರಿವರ್ಣದವರೂ, ವೇದೋಕ್ತವಿಧಿಯಿಂದ ಉಪನಯನಸಂಸ್ಕಾರವನ್ನು ಹೊಂದಿ, ದ್ವಿಜತ್ವವನ್ನು ಪಡೆದಮೇಲೆ, ನನ್ನನ್ನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಆರಾಧಿಸಬೇಕಾದ ಕ್ರಮವನ್ನು ಮೊದಲು ತಿಳಿಸುವೆನು ಕೇಳು. ಪ್ರತಿಮೆ (ಎಂದರೆ ಅರ್ಚಾವಿಗ್ರಹಗಳು), ಸ್ಥಂಡಿಲ(ವೆಂದರೆ ಚಕ್ರಾ

ಬ್ಜಮಂಡಲಾದಿಗಳಿಂದ ಅಲಂಕೃತವಾದ ಭೂಮಿ) ಅಗ್ನಿ, ಸೂರ್ಯ, ಜಲ, ಹೃದಯ, ಬ್ರಾಹ್ಮಣರು, ಈ ಏಳುಸ್ಥಾನಗಳಲ್ಲಿ ಗಂಧಪುಷ್ಪಾದಿಪೂಜಾ ದ್ರವ್ಯಗಳಿಂದ ನಿಷ್ಕಪಟವಾದ ಭಕ್ತಿಯೊಡನೆ ನನ್ನನ್ನಾರಾಧಿಸಬಹುದು. ಹೀಗೆ ಪೂಜೆಯನ್ನು ಮಾಡತಕ್ಕವನು, ಮೊದಲು ದೇಹಶುದ್ಧಿಗಾಗಿ ಹಲ್ಲುಗಳನ್ನು ಚೆನ್ನಾಗಿ ಬೆಳಗಿ, ಮೈತೊಳೆದು ಸ್ನಾನಮಾಡಬೇಕು. ಆಮೇಲೆ ಮೃತ್ತಿಕೆ, ಗೋಮಯ,ಮುಂತಾದ ಲೇಪನದಿಂದ,ವೈದಿಕ ತಾಂತ್ರಿಕಗಳೆಂಬ ಎರಡು ಬಗೆಯ ಮಂತ್ರಗಳಿಂದಲೂ ಮಂತ್ರಸ್ನಾನವನ್ನು ನಡೆಸಬೇಕು. ಆಮೇಲೆ ವೇದೋಕ್ತರೀತಿಯಿಂದ ಸಂಧ್ಯೋಪಾಸನಾದಿನಿತ್ಯಕರ್ಮಗಳನ್ನು ನಡೆಸಬೇಕು. ಆ ಸಂಧ್ಯೋಪಾಸನೆಗಳನ್ನು ನಡೆಸಿದಕೂಡಲೆ, ಫಲಾಪೇಕ್ಷೆಯಿಲ್ಲದ ಸಂಕಲ್ಪವನ್ನು ಮಾಡಿ,ಕರ್ಮಕ್ಷಯಹೇತುವಾಗಿಯೇ ಪೂಜಾಕರ್ಮವನ್ನಾರಂಭಿಸಬೇಕು.ನನ್ನನ್ನು ಆವಾಹನಮಾಡಿ ಆರಾಧಿಸುವುದಕ್ಕೆ ಯೋಗ್ಯಗಳಾದ ಪ್ರತಿಮೆಗಳಲ್ಲಿ, ಶಿಲಾಮಯ, ದಾರುಮಯ, ಲೋಹಮಯ, ಲೇಪಮಯ, ಲೇಖ್ಯ(ಚಿತ್ರ), ಸಿಕತಾಮಯ (ಮರಳಿನಪ್ರತಿಮೆ) ಮನೋಮಯ, ಮಣಿಮಯಗಳೆಂಬ ಎಂಟು ವಿಧಗಳುಂಟು. ಇವುಗಳಲ್ಲಿ ಅಚಲವೆಂದೂ, (ಸ್ಥಿರವೆಂದೂ) ಚಲವೆಂದೂ (ಅಸ್ಥಿರವೆಂದೂ) ಬೇರೆ ಎರಡು ವಿಧವುಂಟು. ಇವೆಲ್ಲವೂ ಮಂತ್ರನ್ಯಾಸಾದಿಗಳಿಂದ ನನ್ನ ಸಾನ್ನಿಧ್ಯಕ್ಕೆ ಯೋಗ್ಯಸ್ಥಳಗಳೆನಿಸಿರುವುವು. ಇವುಗಳಲ್ಲಿ ಸ್ಥಿರಪ್ರತಿಮೆಗಳಿಗೆ ಪೂಜಾಕಾಲಗಳಲ್ಲಿ ಆಗಾಗ ಆವಾಹನೋದ್ವಾಸನಗಳಿಲ್ಲ. ಅಸ್ಥಿರಪ್ರತಿಮೆಗಳಲ್ಲಿ ಆ ಆವಾಹನೋದ್ವಾಸನಗಳು ವೈಕಲ್ಪಿಕಗಳು. ಸ್ಥಂಡಿಲದಲ್ಲಿಮಾತ್ರ, ಆಗಾಗ ಅವೆರಡನ್ನೂ ಮಾಡಿಯೇ ತೀರಬೇಕು ಲೆಪ್ಪದಿಂದಲೂ, ಚಿತ್ರಲೇಖನದಿಂದಲೂ, ಮರಳಿನಿಂದಲೂ ಮಾಡಿದ ಪ್ರತಿಮೆಗಳಿಗೆ ಸ್ನಪನಮಾತ್ರದಿಂದಲೇ ಶುದ್ಧಿಯು ಇತರಪ್ರತಿಮೆಗಳಿಗೆ ಪರಿಮಾರ್ಜನದಿಂದ ಎಂದರೆ, ಚೆನ್ನಾಗಿ ತೊಳೆಯುವುದರಿಂದ ಶುದ್ಧಿಯು.

ಫಲೋದ್ದೇಶದಿಂದ ನನ್ನ ಪೂಜೆಯನ್ನು ನಡೆಸತಕ್ಕವರು, ವಿಧಿವಿಹಿತಗಳಾದ ಸಮಸ್ತಪೂಜಾದ್ರವ್ಯಗಳನ್ನೂ ಸಂಗ್ರಹಿಸಿಕೊಂಡು, ಡಂಭವಿಲ್ಲದೆ ಆರಾಧಿಸಬೇಕು. ಫಲಾಭಿಸಂಧಿಯಿಲ್ಲದ ನಿಜವಾದ ಭಕ್ತರಾದರೋ ತಮಗೆ

ದೊರೆತ ಅಲ್ಪಸ್ವಲ್ಪದ್ರವ್ಯಗಳಿಂದಾಗಲಿ, ಕೊನೆಗೆ ಕೇವಲಮನಸ್ಸಂಕಲ್ಪದಿಂದಲೇ ಆ ದ್ರವ್ಯಗಳಿಂದ ಆರಾಧಿಸುವಂತೆ ಭಾವಿಸಿಯಾಗಲಿ, ಪೂಜೆಗಳನ್ನು ನಡೆಸಬಹುದು. ಉದ್ಧವಾ! ಮುಖ್ಯವಾಗಿ ನನಗೆ ಅಭಿಷೇಕದಲ್ಲಿಯೂ, ಅಲಂಕಾರಗಳಲ್ಲಿಯೂ ಹೆಚ್ಚು ಪ್ರೀತಿಯು. ನನ್ನನ್ನು ಅರ್ಚಿಸತಕ್ಕವರು ಇವೆರಡನ್ನೂ ತಪ್ಪದೆ ನಡೆಸಬೇಕು ಸ್ಥಂಡಿಲದಲ್ಲಿ ಆಯಾ ಅಂಗದ ಪ್ರಧಾನದೇವತೆಗಳನ್ನು, ಮಂತ್ರಪೂರ್ವಕವಾಗಿ ಆಯಾಸ್ಥಾನಗಳಲ್ಲಿ ಸ್ಥಾಪನಮಾಡುವುದೂ, ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡುವುದೂ, ಸೂರ್ಯನಲ್ಲಿ ಸ್ತುತಿಯೂ, ಜಲದಲ್ಲಿ ಗಂಧಪುಷ್ಪಸಲಿಲಾದಿಗಳಿಂದ ಅರ್ಚಿಸುವುದೂ, ನನಗೆ ವಿಶೇಷಸಂತೋಷಕರವಾದ ಪೂಜೆಯೆನಿಸುವುದು ಉದ್ಧವಾ! ಕೇವಲಜಲಮಾತ್ರವನ್ನಾದರೂ ಭಕ್ತಿಯಿಂದ ಸಮರ್ಪಿಸಿದಪಕ್ಷದಲ್ಲಿ, ಅದೇ ನನಗೆ ಅತ್ಯಂತಪ್ರಿಯವೆನಿಸುವುದು. ಇನ್ನು ಗಂಧ, ಪುಷ್ಪ, ಧೂಪ, ದೀಪ, ನಿವೇದನ, ತಾಂಬೂಲಾದಿಗಳನ್ನು ಸಂಗ್ರಹಿಸಿ ತಂದು, ನನ್ನನ್ನು ಭಕ್ತಿಯಿಂದಾರಾಧಿಸಿದಪಕ್ಷದಲ್ಲಿ ಹೇಳಬೇಕಾದುದೇನು? ಭಕ್ತಿಯಿಲ್ಲದೆ ಎಷ್ಟೋ ದೊಡ್ಡಕಾಣಿಕೆಗಳನ್ನು ತಂದೊಪ್ಪಿಸಿದರೂ ಅದು ನನಗೆ ಪ್ರಿಯವೆನಿಸಲಾರದು. ಇನ್ನು ಪೂಜಾಕ್ರಮವನ್ನು ತಿಳಿಸುವೆನು ಕೇಳು! ಮೊದಲು ಪೂಜೆಗೆ ಬೇಕಾದ ಉಪಕರಣಗಳನ್ನೆಲ್ಲಾ ಸಿದ್ಧಪಡಿಸಿಕೊಳ್ಳಬೇಕು. ಆಮೇಲೆ ಪೂರ್ವಾಗ್ರಗಳಾದ ದರ್ಭಗಳಿಂದ ಆಸನವನ್ನು ಕಲ್ಪಿಸಿಕೊಂಡು, ತಾನು ಪೂರ್ವಾಭಿಮುಖವಾಗಿಯಾಗಲಿ, ಉತ್ತರಾಭಿಮುಖವಾಗಿಯಾಗಲಿ, ಅಥವಾ ಅರ್ಚಾವಿಗ್ರಹಕ್ಕೆ ಇದಿರಾಗಿಯಾಗಲಿ ಕುಳಿತು, ಪೂಜೆಯನ್ನು ಪಕ್ರಮಿಸಬೇಕು. ಪೂಜೆಯು ಮುಗಿಯುವವರೆಗೆ ಆಗಾಗ ಎದ್ದು ಹೋಗಬಾರದು. ಪೂಜೆಮಾಡುವವನು, ಮೊದಲು ತನ್ನ ಅಂಗಗಳಲ್ಲಿ ಮಂತ್ರನ್ಯಾಸವನ್ನು ಮಾಡಿಕೊಂಡು, ಅರ್ಚಾಪ್ರತಿಮೆಗೂ ಹಾಗೆಯೇ ಮಂತ್ರಪೂರ್ವಕವಾದ ಅಂಗನ್ಯಾಸವನ್ನು ನಡೆಸಿ, ಆಮೇಲೆ ಆ ಅರ್ಚಾಮೂರ್ತಿಯನ್ನು ಕೈಯಿಂದ ಸವರಬೇಕು. ಆಮೇಲೆ ಪ್ರೋಕ್ಷಣಕಲಶವನ್ನು ತನ್ನ ಎಡಪಾರ್ಶ್ವದಲ್ಲಿಟ್ಟುಕೊಂಡು, ಆ ಕಲಶತೀರ್ಥದಿಂದ, ಪೂಜಾಸ್ಥಳವನ್ನೂ, ಪೂಜಾದ್ರವ್ಯಗಳನ್ನೂ, ಅರ್ಘ್ಯಪಾದ್ಯಾದಿಪಾತ್ರಗಳನ್ನೂ

ಪ್ರೋಕ್ಷಿಸಬೇಕು. ಆಮೇಲೆ ಆ ಪಾತ್ರಗಳ ಜಲದಿಂದಲೂ, ತುಲಸಿ, ದರ್ಭೆ, ಮೊದಲಾದ ದ್ರವ್ಯಗಳಿಂದಲೂ ಅರ್ಚಿಸಬೇಕು. ಆರಾಧಕನು ಅರ್ಘ್ಯ ಪಾದ್ಯಾಚಮನೀಯಗಳಿಗಾಗಿ ಇಟ್ಟಿರುವ ಮೂರುಪಾತ್ರಗಳನ್ನೂ, ವೇದೋಕ್ತಗಳಾದ ಹೃದಯಮಂತ್ರದಿಂದಲೂ, ಶಿರೋಮಂತ್ರದಿಂದಲೂ, ಶಿಖಾಮಂತ್ರದಿಂದಲೂ, ವಿಷ್ಣುಗಾಯಿತ್ರಿಯಿಂದಲೂ ಅಭಿಮಂತ್ರಿಸಬೇಕು. ವಾಯು, ಅಗ್ನಿ, ಜಲ, ಇವುಗಳಮೂಲಕವಾಗಿ, ಶೋಷಣ, ದಾಹನ, ಪ್ಲಾವನಾದಿಗಳಿಂದ ತನ್ನ ದೇಹವನ್ನು ಶುದ್ಧೀಕರಿಸಿದಂತೆಯೂ, ಆ ದೇಹದೊಳಗೆ ಹೃದಯಕಮಲಮಧ್ಯದಲ್ಲಿ, ಜ್ಞಾನಸ್ವರೂಪನಾಗಿಯೂ, ಅಣುವಾಗಿಯೂ, ದೇಹೇಂದ್ರಿಯಗಳಿಗಿಂತ ವಿಲಕ್ಷಣನಾಗಿಯೂ, ಇರುವ ಜೀವನು ಮದಾತ್ಮಕನೆಂದೂ, ಪ್ರಣವದ ಕೊನೆಯ ಅಕ್ಷರವಾದ ಮಕಾರದಲ್ಲಿ ಪ್ರತಿಪಾದ್ಯನೆಂದೂ, ಧ್ಯಾನಿಸಬೇಕು. ಮತ್ತು ದೀಪಪ್ರಭೆಯು ಗೃಹವನ್ನು ಹೇಗೋಹಾಗೆ, ಜೀವನು ತನಗೆ ಧರ್ಮಭೂತವಾದ ಜ್ಞಾನದಿಂದ ತನ್ನ ಶರೀರವೆಲ್ಲವನ್ನೂ ವ್ಯಾಪಿಸಿರುವಂತೆ ಧ್ಯಾನಿಸಿ, ಹೀಗೆ ಸಂಸ್ಕರಿಸಲ್ಪಟ್ಟ ಆ ಶರೀರದೊಳಗಿನ ಹೃದಯಕಮಲದಲ್ಲಿ ಮೊದಲು ಮಾನಸೋಪಚಾರದಿಂದ ನನ್ನನ್ನು ಅರ್ಚಿಸಬೇಕು. ಆಮೇಲೆ ತಾನು ಪೂಜಿಸತಕ್ಕ ಅರ್ಚಾಪ್ರತಿಮೆಗಳಲ್ಲಿ ನನ್ನನ್ನು ಆವಾಹನಮಾಡಿ, ಅಲ್ಲಿ ನನಗೆ ಅಂಗನ್ಯಾಸಗಳನ್ನು ನಡೆಸಿ ಪೂಜಿಸಬೇಕು. ಆಮೇಲೆ ಧರ್ಮವೇ ಮೊದಲಾದ * ಎಂಟುಪಾದಗಳಮೇಲೆ, ವಿಮಲೆ ಮೊದಲಾದ † ಒಂಬತ್ತು ಮೂರ್ತಿಗಳಿಂದಲೂ, (ಪೀಠದೇವತೆಗಳಿಂದಲೂ), ಕರ್ಣಿಕೆಯಿಂದಲೂ, ಕೇಸರಗಳಿಂದಲೂ ಕೂಡಿದುದಾಗಿಯೂ, ಇರುವ ಅಷ್ಟದಳಗಳುಳ್ಳ ಪದ್ಮವನ್ನು ನನಗೆ ಆಸನವಾಗಿ ಕಲ್ಪಿಸಬೇಕು. ಆಮೇಲೆ ನನಗೆ ವೇದದಲ್ಲಿಯೂ ಪಾಂಚರಾತ್ರದಲ್ಲಿಯೂ ಹೇಳಲ್ಪಟ್ಟ ಎರ

---

* ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ,ಗಳೆಂಬಿವೆಂಟೂ ಆ ಪೀಠದ ಎಂಟು ಪಾದಗಳೆಂದು ಗ್ರಹಿಸಬೇಕು.

† "ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತತಃಪರಂ । ಪ್ರಹ್ವಾ ಸತ್ಯಾ ತಥೇಶಾನಾಽನುಗ್ರಹಾ ನವಮೂರ್ತಯಃ" ॥ ಎಂಬಿವೊಂಭತ್ತೂ ಪೀಠದೇವತೆಗಳು.

ಡು ವಿಧಿಗಳಿಂದ, ಅರ್ಘ್ಯಪಾದ್ಯಾಚಮನೀಯಗಳೇ ಮೊದಲಾದ ಉಪಚಾರ ಗಳನ್ನು ಮಂತ್ರಪೂರ್ವಕವಾಗಿ ಸಮರ್ಪಿಸಬೇಕು. ಆಮೇಲೆ ನನ್ನ * ಅಸಾಧಾರಣ ಚಿಹ್ನಗಳಾದ;ಚಕ್ರ, ಶಂಖ, ಗದಾ, ಪದ್ಮ,ಶಾರ್ಙ್ಗ ಬಾಣ, ಹಲ, ಮುಸಲಗಳೆಂಬ ಎಂಟು ದಿವ್ಯಾಯುಧಗಳನ್ನೂ, ಕೌಸ್ತುಭ, ವನಮಾಲಿಕೆ, ಶ್ರೀವತ್ಸ ವೆಂಬಿವುಗಳನ್ನೂ ಕ್ರಮವಾಗಿ ಪೂಜಿಸಬೇಕು. ಆಮೇಲೆ ನನ್ನ ಪಾರ್ಷದರಾದ ನಂದ, ಸುನಂದ,ಪ್ರಚಂಡ,ಚಂಡ,ಮಹಾಬಲ,ಬಲ, ಕುಮುದ,ಕುಮುದೇಕ್ಷಣರನ್ನೂ,ಗರುಡನನ್ನೂ ಪೂಜಿಸಬೇಕು.ಆಮೇಲೆ ನನಗೆ ಅಭಿಮುಖರಾಗಿ ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಗೊಳಿಸಲ್ಪಟ್ಟಿರುವ ದುರ್ಗೆಯನ್ನೂ,ವಿನಾಯಕನನ್ನೂ,ವ್ಯಾಸರನ್ನೂ, ವಿಷ್ವಕ್ಸೇನರನ್ನೂ, ಗುರುಗಳನ್ನೂ, ಇಂದ್ರಾದಿಲೋಕಪಾಲಕರನ್ನೂ ಪ್ರೋಕ್ಷಣ ಪಾದ್ಯಪ್ರದಾನಾದಿಗಳಿಂದ ಪೂಜಿಸಬೇಕು. ಆರಾಧಕನು ಶಕ್ತಿಯುಳ್ಳವನಾಗಿದ್ದರೆ, ಅಗುರುಚಂದನ, ಕುಂಕುಮಕೇಸರಿ, ಪಚ್ಚಕರ್ಪೂರ, ಲಾಮಂಚ,ಮೊದಲಾದುವುಗಳಿಂದ ಸುವಾಸಿತವಾದ ತೀರ್ಥದಿಂದ ಪ್ರತಿದಿನವೂ ಮಂತ್ರಪೂರ್ವಕವಾಗಿ ಸ್ನಾನಮಾಡಿಸಬೇಕು ಶಕ್ತಿಯಿಲ್ಲದವರು ಸಾಧ್ಯವಾದಷ್ಟು ಚಂದನಾದಿಸುಗಂಧಗಳನ್ನು ಸೇರಿಸಿ ಅಭಿಷೇಕಮಾಡಬಹುದು. ನನಗೆ ಅಭಿಷೇಕವನ್ನು ನಡೆಸುವಾಗ, ಸುವರ್ಣಘರ್ಮವೆಂಬ ಅನುವಾಕಮಂತ್ರವನ್ನೂ, § ಮಹಾಪುರುಷವಿದ್ಯೆಯ

---

* ಇಲ್ಲಿ ಸುದರ್ಶನಾದಿಗಳಾದ ಅಷ್ಟಾಯುಧಗಳನ್ನೂ, ನಂದನೇ ಮೊದಲಾದ ಎಂಟುಮಂದಿ ಪಾರ್ಷದರನ್ನೂ, ಇಂದ್ರಾದ್ಯಷ್ಟದಿಕ್ಪಾಲಕರನ್ನೂ, ಅರ್ಚಾಮೂರ್ತಿಯ ಎಂಟುದಿಕ್ಕುಗಳಲ್ಲಿಯೂ, ಶ್ರೀವತ್ಸ, ಕೌಸ್ತುಭ, ವನಮಾಲಿಕೆಗಳನ್ನು ವಕ್ಷಸ್ಥಳದಲ್ಲಿಯೂ, ಗುರುಗಳನ್ನು ಭಗವಂತನ ಬಲಪಾರ್ಶ್ವದಲ್ಲಿಯೂ, ದುರ್ಗಾದಿಗಳನ್ನು, ಆಗ್ನೇಯಾದಿಕೋಣಗಳಲ್ಲಿಯೂ, ಗರುಡನನ್ನು ಮುಂಭಾಗದಲ್ಲಿಯೂ ಇಟ್ಟು ಪೂಜಿಸಬೇಕು. ದುರ್ಗೆಯು ಭಗವನ್ಮಾಯಾಭಿಮಾನಿದೇವತೆಯಾದುದರಿಂದಲೂ, ವಿನಾಯಕನು ವಿಷ್ವಕ್ಸೇನನ ಪಾರ್ಷದನಾದುದರಿಂದಲೂ, ದೇವತೆಗಳು ಭಗವಂತನ ವಿಭೂತಿಯೆನಿಸಿರುವುದರಿಂದಲೂ, ಇವರನ್ನೂ ಆ ಭಗವಂತನ ಪರಿವಾರಗಳಲ್ಲಿ ಸೇರಿಸಿ ಪೂಜಿಸಬೇಕು.

§ "ಮಹಾಪುರುಷವಿದ್ಯೆ ಎಂದರೆ" "ಜಿತಂತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ। ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ" ಎಂಬೀ ಮಂತ್ರವು.

ನ್ನೂ, ಪುರುಷಸೂಕ್ತವನ್ನೂ, ನೀರಾಜನ, ರೌಹಿಣಾದಿಮಂತ್ರಗಳನ್ನೂ ಪುನಶ್ಚರಣಮಾಡಬೇಕು. ಆಮೇಲೆ, ನನ್ನನ್ನು ಆರಾಧಿಸತಕ್ಕ ಭಕ್ತನು, ಧೌತವಸ್ತ್ರ, ಉಪವೀತ, ಆಭರಣ, ತುಳಸೀದಳ, ಪುಷ್ಪಮಾಲಿಕೆ, ಗಂಧಾನುಲೇಪ, ಮೊದಲಾದುವುಗಳಿಂದ ನನ್ನ ಮೂರ್ತಿಯನ್ನಲಂಕರಿಸಬೇಕು. ಆಮೇಲೆ ಪಾದ್ಯಾಚಮನೀಯಗಳನ್ನೂ, ಗಂಧಪುಷ್ಪಾಕ್ಷತೆಗಳನ್ನೂ, ಧೂಪದೀಪನೈವೇದ್ಯಗಳನ್ನೂ ಅರ್ಪಿಸಬೇಕು. ನೈವೇದ್ಯಕ್ಕಾಗಿ, ಬೆಲ್ಲ, ಪಾಯಸ, ತುಪ್ಪ, ಚಕ್ಕುಲಿ, ಕಜ್ಜಾಯ, ಕಡುಬು, ಗೋದುವೆಯ ಭಕ್ಷ್ಯಗಳು, ಮೊಸರು, ತೊವ್ವೆ, ಮುಂತಾದ ಉಪಕಾರದ್ರವ್ಯಗಳನ್ನು ಅವರವರ ಶಕ್ತ್ಯನುಸಾರವಾಗಿ ಸಮರ್ಪಿಸಬೇಕು. ಏಕಾದಶಿ ಮೊದಲಾದ ಪರ್ವದಿನಗಳಲ್ಲಿ ನನ್ನ ಅರ್ಚಾಮೂರ್ತಿಗಳಿಗೆ ಅಭ್ಯಂಗನಮಾಡುವುದು, ಮೈಯೊತ್ತುವುದು, ಕನ್ನಡಿಯನ್ನು ತೋರಿಸುವುದು, ಹಲ್ಲುಜ್ಜುವುದು, ಅಭಿಷೇಕಮಾಡುವುದು, ಅನ್ನಾದಿಗಳನ್ನು ನಿವೇದಿಸುವುದು, ಗಾನನರ್ತನಗಳನ್ನು ಮಾಡಿಸುವುದು ಇವೇ ಮೊದಲಾದ ವಿಭವಗಳೊಡನೆ ಪೂಜೆಯನ್ನು ನಡೆಸಬೇಕು. ಶಕ್ತಿಯಿದ್ದವರು ದಿನದಿನವೂ ಈ ಉಪಚಾರಗಳನ್ನು ನಡೆಸಬಹುದು. ಅಗ್ನಿಮೂಲಕವಾಗಿ ನನ್ನನ್ನಾರಾಧಿಸತಕ್ಕವರು, ತಂತ್ರೋಕ್ತರೀತಿಯಾಗಿ ಮೇಖಲೆಯಿಂದಲೂ, ಎಂಟುಗುಳಿಗಳಿಂದಲೂ, ನಡುವೆ ವೇದಿಕೆಯಿಂದಲೂ ಕೂಡಿದ ಔಪಾಸನಪಾತ್ರದಲ್ಲಿ, ಅಥವಾ ಶುದ್ಧವಾದ ನೆಲದಲ್ಲಿ, ಅಗ್ನಿಯನ್ನು ಪ್ರತಿಷ್ಠಿಸಿ, ಅದನ್ನು ಚೆನ್ನಾಗಿ ಹುತಮಾಡಿ, ನಾಲ್ಕುಕಡೆಗೂ ಕೆದರಿದ ಆ ಅಗ್ನಿಯನ್ನು ಕೈಯಿಂದ ಒಂದಾಗಿ ಸೇರಿಸಿಟ್ಟು ದರ್ಭೆಗಳಿಂದ ಪರಿಸ್ತರಣವನ್ನು ಹಾಕಿ, ಪರಿಷೇಚನವನ್ನು ನಡೆಸಬೇಕು. ತಮ್ಮತಮ್ಮ ಗೃಹ್ಯೋಕ್ತಕ್ರಮದಿಂದ, ಅಗ್ನಿಮುಖವಾಗಿ ನಡೆಸಬೇಕಾದ ಕರ್ಮಗಳಿಗೆಲ್ಲಾ ಸಂಕಲ್ಪವನ್ನು ಮಾಡಿ, ಪ್ರೋಕ್ಷಣಪಾತ್ರದಲ್ಲಿರುವ ತೀರ್ಥದಿಂದ, ಆಜ್ಯಸ್ಥಾಲಿ ಮೊದಲಾದ ಉಪಕರಣಗಳೆಲ್ಲವನ್ನೂ ಪ್ರೋಕ್ಷಿಸಿ, ಆಮೇಲೆ ಆ ಅಗ್ನಿಯಲ್ಲಿ ನನ್ನನ್ನು ಧ್ಯಾನಿಸಬೇಕು. ಆ ಧ್ಯಾನಕಾಲದಲ್ಲಿ ಪುಟಹಾಕಿದ ಬಂಗಾರದಂತೆ ಮೈಬಣ್ಣದಿಂದಲೂ, ಶಂಖಚಕ್ರಗದಾಪದ್ಮಗಳಿಂದಲೂ, ಚತುರ್ಭುಜಗಳಿಂದಲೂ, ಶಾಂತವಾದ ಆಕಾರದಿಂದಲೂ, ಕಮಲದ ಕುಸುರಿಯಂತಿರುವ ಪೀತಾಂ

ಬರದಿಂದಲೂ, ಕಾಂತಿಯಿಂದ ಝುಗಝುಗಿಸುತ್ತಿರುವ ಕಿರೀಟ, ಕುಂಡಲ, ಕಟಕ, ಕೇಯೂರ, ಕಟಿಸೂತ್ರಾದ್ಯಾಭರಣಗಳಿಂದಲೂ, ಶ್ರೀವತ್ಸ, ಕೌಸ್ತುಭ, ವನಮಾಲಿಕೆಗಳಿಂದಲೂ ಕೂಡಿದ ನನ್ನ ದಿವ್ಯಸ್ವರೂಪವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಹೀಗೆ ಧ್ಯಾನಿಸುತ್ತ, ಸವಿತ್ತುಗಳನ್ನು ಕೈಗೆತಿಕ್ಕೊಂಡು, ಅದನ್ನೂ ಅರ್ಚಿಸಿ, ಅವುಗಳ ಅಗ್ರಭಾಗವನ್ನು ಆಜ್ಯದಲ್ಲಿ ನೆನೆಸಿ, ಅಗ್ನಿಯಲ್ಲಿ ಸಮರ್ಪಿಸಬೇಕು. ಆಮೇಲೆ ಆಘಾರಗಳೆಂಬ ಆಜ್ಯಾಹುತಿಗಳನ್ನರ್ಪಿಸಿ ಹೋಮಮಾಡಬೇಕು. ಆಮೇಲೆ ಸ್ವಾಹಾಕಾರದೊಡಗೂಡಿದ ಅಷ್ಟಾಕ್ಷರವೆಂಬ ಮೂಲಮಂತ್ರದಿಂದಲೂ, ಪುರುಷಸೂಕ್ತವೆಂಬ ಹದಿನಾರು ಋಕ್ಕುಗಳಿಂದಲೂ, ತುಪ್ಪದಲ್ಲಿ ತೊಯ್ದ ಹವಿಸ್ಸನ್ನು ಹೋಮಮಾಡಬೇಕು. ಆಮೇಲೆ ಕ್ರಮವಾಗಿ ಧರ್ಮಾದಿಪೀಠದೇವತೆಗಳನ್ನೂ, ವಿಮಲಾದ್ಯಾವರಣದೇವತೆಗಳನ್ನೂ, ಸುದರ್ಶನಾದ್ಯಸ್ತ್ರಗಳನ್ನೂ, ಆಭರಣಗಳನ್ನೂ, ನಂದಾದಿಪಾರ್ಷದರನ್ನೂ ಉದ್ದೇಶಿಸಿ ಹವಿಸ್ಸಿನಿಂದ ಹೋಮಮಾಡಿ ಪೂಜಿಸಬೇಕು. ಆಮೇಲೆ ಸ್ವಿಷ್ಟಕೃತಹೋಮವನ್ನು ನಡೆಸಬೇಕು. ಆಮೇಲೆ ಅಗ್ನಿಯಲ್ಲಿ ಆವಾಹಿತನಾದ ಭಗವಂತನಿಗೆ ಉತ್ತರಪೂಜೆಗಳನ್ನು ಮಾಡಿ, ನಮಸ್ಕರಿಸಿ, ನಂದಾದಿಪಾರ್ಷದರಿಗೆ ಅಷ್ಟದಿಕ್ಕುಗಳಲ್ಲಿಯೂ ಬಲಿಯನ್ನು ಸಮರ್ಪಿಸಿ, ಪರಬ್ರಹ್ಮನಾದ ನನ್ನನ್ನು ಸ್ಮರಿಸುತ್ತ, ನಾರಾಯಣಾತ್ಮಕವಾದ ಮೂಲಮಂತ್ರವನ್ನು ಜಪಿಸಬೇಕು. ಆಮೇಲೆ ವಿಷ್ವಕ್ಸೇನರಿಗೆ ಆಚಮನವನ್ನು ಸಮರ್ಪಿಸಿ, ಭಗವನ್ನಿವೇದಿತವಾದುದನ್ನೇ ಅವರಿಗೂ ನಿವೇದನಮಾಡಬೇಕು. ಆಮೇಲೆ ಏಲಾ ಲವಂಗ ಕರ್ಪೂರಾದಿಗಳಿಂದ ಸುವಾಸಿತವಾದ ತಾಂಬೂಲದಿಂದ ಭಗವಂತನಿಗೆ ಮುಖವಾಸನೆಯನ್ನು ಸಮರ್ಪಿಸಿ, ತಿರುಗಿ ಪುಷ್ಪಾದಿಗಳಿಂದ ಅರ್ಚನೆಮಾಡಬೇಕು. ಆಮೇಲೆ ಆ ಭಗವಂತನ ಗುಣಗಳನ್ನು ಕೀರ್ತಿಸುವುದು, ಅತನ ಚರಿತ್ರಗಳನ್ನು ಅಭಿನಯಿಸುವುದು, ಭಗವದ್ಗುಣಗಳನ್ನು ಇತರರಿಗೆ ಹೇಳುವುದು, ಇತರರಿಂದ ಅದನ್ನು ಕೇಳುವುದು, ಇತ್ಯಾದಿರೀತಿಯಿಂದ ನನ್ನ ಗುಣಾನುಭವವನ್ನು ಮಾಡುತ್ತ, ಕ್ಷಣಕಾಲದವರೆಗೆ ಅದರಲ್ಲಿಯೇ ಏಕಾಗ್ರಚಿತ್ತನಾಗಿರಬೇಕು ಆಮೇಲೆ ವೇದವಾಕ್ಯಗಳಿಂದಲೂ, ಪುರಾಣಶ್ಲೋಕಗಳಿಂದಲೂ, ಸ್ವದೇಶಭಾಷೆಯ

ಪದ್ಯಗಳಿಂದಲೂ, ಭಗವಂತನನ್ನು ಸ್ತುತಿಸಿ “ಓ ಪರಮಪುರುಷಾ ! ನನ್ನಲ್ಲಿ ಪ್ರಸನ್ನನಾಗು!” ಎಂದು ಪ್ರಾರ್ಥಿಸಿ, ಸಾಷ್ಟಾಂಗಪ್ರಣಾಮವನ್ನು ಮಾಡಬೇಕು. ಹಾಗೆ ಪ್ರಣಾಮಮಾಡುವಾಗ ತನ್ನ ಎರಡು ಕೈಗಳಿಂದಲೂ ಅರ್ಚಾಮೂರ್ತಿಯ ಪಾದಗಳೆರಡನ್ನೂ ಹಿಡಿದು “ಓ ಸರ್ವೇಶ್ವರಾ ! ನಾನು ನಿನ್ನ ಪಾದಾರವಿಂದಗಳಲ್ಲಿ ಮರೆಹೊಕ್ಕಿರುವೆನು, ಸಂಸಾರವೆಂಬ ಮಹಾಸಮುದ್ರದಲ್ಲಿ ಬಿದ್ದು, ಮೃತ್ಯುಗ್ರಹಪೀಡಿತನಾದ ನನ್ನ ಭಯವನ್ನು ನೀಗಿಸಿ ಕಾಪಾಡು!” ಎಂದು ಪ್ರಾರ್ಥಿಸಬೇಕು.! ಆಮೇಲೆ ನನಗೆ ಸಮರ್ಪಿಸಿದ ತುಳಸೀಪುಷ್ಪಾದಿಗಳನ್ನು ನಾನೇ ಅನುಗ್ರಹಿಸಿಕೊಟ್ಟಂತೆ ಭಾವಿಸುತ್ತ, ಆದರದಿಂದ ಅವುಗಳನ್ನು ಕೈಗೆ ತೆಗೆದುಕೊಂಡು ತಲೆಯಮೇಲೆ ಧರಿಸಬೇಕು. ಆಮೇಲೆ ಆವಾಹಿತನಾದ ನನ್ನನ್ನು ಉದ್ವಾಸನಮಾಡಬೇಕಾಗಿದ್ದರೆ, ತೇಜೋರೂಪವಾದ ನನ್ನ ಸ್ವರೂಪವನ್ನು ತಿರುಗಿ, ತೇಜೋರೂಪನಾದ ತನ್ನ ಅಂತರಾತ್ಮನಲ್ಲಿಯೇ ಸೇರಿಸಿಟ್ಟುಕೊಂಡಂತೆ ಉದ್ವಾಸನಮಾಡಬೇಕು. ಉದ್ಧವಾ! ಮೇಲೆ ಹೇಳಿದ ಅರ್ಚಾದಿಮೂರ್ತಿಗಳಲ್ಲಿ, ಯಾರಿಗೆ, ಯಾವಾಗ, ಯಾವುದರಲ್ಲಿ ಶ್ರದ್ಧೆ ಹುಟ್ಟುವುದೋ, ಅದರಲ್ಲಿಯೇ ಆಗಾಗ ನನ್ನನ್ನು ಅರ್ಚಿಸಬೇಕು. ಸರ್ವಾತ್ಮಕನಾದ ನಾನು ಅವರವರ ಹೃದಯದಲ್ಲಿಯೂ, ಇತರ ಸಮಸ್ತ ಭೂತಗಳಲ್ಲಿಯೂ ನೆಲೆಗೊಂಡಿರತಕ್ಕವನು.

ಹೀಗೆ ವೇದಗಳಲ್ಲಿಯೂ, ತಂತ್ರಗಳಲ್ಲಿಯೂ ಹೇಳಲ್ಪಟ್ಟಿರುವ ಕ್ರಿಯಾವಿಧಿಗಳಿಂದ ನನ್ನನ್ನು ಅರ್ಚಿಸಿದವನು, ಇಹಪರಗಳೆರಡರಲ್ಲಿಯೂ ತನ್ನ ಅಭೀಷ್ಟಗಳನ್ನು ಹೊಂದುವನು. ಶಕ್ತಿಯುಳ್ಳವನು ನನ್ನ ಅರ್ಚಾಮೂರ್ತಿಗಳಿಗಾಗಿ ಸ್ಥಿರವಾದ ಮಂದಿರವನ್ನು ಕಟ್ಟಿಸಿ, ಅದರಲ್ಲಿ ನನ್ನ ಮೂರ್ತಿಯನ್ನು ಪ್ರತಿಷ್ಠೆಮಾಡಿಸಿ, ರಮಣೀಯಗಳಾದ ಪುಷ್ಪೋದ್ಯಾನಗಳನ್ನು ಕಲ್ಪಿಸಿ, ನನಗೆ ಪೂಜೆಗಳನ್ನೂ, ಜಾತ್ರೆಗಳನ್ನೂ, ಉತ್ಸವಗಳನ್ನೂ ನಡೆಸಬಹುದು. ಇಂತಹ ದೇವಾಲಯಗಳಲ್ಲಿ ನಿತ್ಯೋತ್ಸವ, ಪರ್ವೋತ್ಸವಾದಿಗಳು ಸ್ಥಿರವಾಗಿ ನಡೆದುಬರುವಂತೆ, ಆಯಾ ಅರ್ಚಾಮೂರ್ತಿಗಳ ಹೆಸರಿನಲ್ಲಿಯಾಗಲಿ, ಅಲ್ಲಿನ ಕೈಂಕರ್ಯಪರರ ಹೆಸರಿನಲ್ಲಿಯಾಗಲಿ ಗ್ರಾಮಗಳನ್ನು ಮಾನ್ಯವಾಗಿ ಬಿಡಬೇಕು ಹೀಗೆ ಮಾಡತಕ್ಕ ಧಾರ್ಮಿಕರು, ನನ್ನೊಡನೆ ಸಮಾನವಾದ

ಐಶ್ವರ್ಯವನ್ನು ಹೊಂದುವರು. ನನ್ನ ಪ್ರತಿಮೆಯನ್ನು ಪ್ರತಿಷ್ಠೆ ಮಾಡತಕ್ಕವರು ಸಾರ್ವಭೌಮಪದವಿಯನ್ನೂ, ನನಗೆ ಮಂದಿರವನ್ನೇರ್ಪಡಿಸಿದವರು ಲೋಕಾಧಿಪತ್ಯವನ್ನೂ ಹೊಂದುವರು ಯಾವ ಫಲದಲ್ಲಿಯೂ ಅಭಿಲಾಷೆಯಿಲ್ಲದೆ ನನ್ನನ್ನು ಆರಾಧಿಸತಕ್ಕವರಿಗೆ, ಭಕ್ತಿಯೋಗವು ಕೈಗೂಡುವುದು. ಆ ಭಕ್ತಿಯೋಗದಿಂದ ನನ್ನ ಸಾನ್ನಿಧ್ಯವನ್ನೇ ಪಡೆಯಬಹುದು. ಹೀಗಿಲ್ಲದೆ ಯಾವನು, ದೇವಬ್ರಾಹ್ಮಣರಿಗಾಗಿ ತನ್ನಿಂದಾಗಲಿ, ಬೇರೊಬ್ಬರಿಂದಾಗಲಿ ಬಿಡಲ್ಪಟ್ಟ ಮಾನ್ಯಗಳನ್ನೂ, ವೃತ್ತಿಗಳನ್ನೂ ದುರಾಶೆಯಿಂದ ಅಪಹರಿಸುವನೋ, ಅವನು, ಅನೇಕಕೋಟಿವರ್ಷಗಳವರೆಗೆ ಅಮೇಧ್ಯಭಕ್ಷಕಕ್ರಿಮಿಗಳ ಜನ್ಮವನ್ನು ಹೊಂದುವನು. ಉದ್ಧವಾ! ಮೇಲೆ ಹೇಳಿದಂತೆ ಸತ್ಕರ್ಮಗಳನ್ನಾಗಲಿ, ದುಷ್ಕರ್ಮಗಳನ್ನಾಗಲಿ ಯಾವನು ಮಾಡುವನೋ, ಯಾವನು ಮಾಡಿಸುವನೋ, ಯಾವನು ಆ ಕಾರ್ಯಕ್ಕೆ ಸಹಕಾರಿಯಾಗುವನೋ, ಯಾವನು ಅನುಮೋದಿಸುವನೋ, ಅವರೆಲ್ಲರೂ ಆಯಾ ಕರ್ಮಫಲಕ್ಕೆ ಸಮಭಾಗಿಗಳಾಗುವರು. ಅನೇಕಾವರ್ತಿ ಸತ್ತು ಹುಟ್ಟಿದರೂ, ಇಹಲೋಕ ಪರಲೋಕಗಳೆರಡರಲ್ಲಿಯೂ ಆ ಕರ್ಮಫಲವು ಬೆಂಬಿಡದೆ ಹಿಂಬಾಲಿಸುತ್ತಿರುವುವು. ಇದು ಇಪ್ಪತ್ತೇಳನೆಯ ಅಧ್ಯಾಯವು.

---

## { ಕೃಷ್ಣನು ತಿರುಗಿ ಜ್ಞಾನಯೋಗವನ್ನು ಸಂಗ್ರಹಿಸಿ ತಿಳಿಸಿದುದು }

ಉದ್ಧವಾ! ಕೇಳು! ಹಿಂದೆ ಹೇಳಿದ ದಾನಾಪಕಾರಗಳೇ ಮೊದಲಾದ ಸತ್ಕರ್ಮಗಳಾಗಲಿ, ದುಷ್ಕರ್ಮಗಳಾಗಲಿ ಮನುಷ್ಯರಲ್ಲಿ ಅವರ ಸ್ವಭಾವಾನುಗುಣವಾಗಿ ನಡೆಯುವುದುಂಟು. ಇದಕ್ಕಾಗಿ ಅವರನ್ನು ಸ್ತುತಿಸಲೂ ಬಾರದು. ನಿಂದಿಸಲೂಬಾರದು. ಏಕೆಂದರೆ, ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಅಂತರ್ಯಾಮಿಯಾದ ನನಗೆ ಶರೀರಭೂತವೆಂಬುದನ್ನು ತಿಳಿದವನು, ಎಲ್ಲವನ್ನೂ ನನ್ನೊಡನೆ ಸಮಾನವಾಗಿಯೇ ಭಾವಿಸುವುದರಿಂದ, ಅವನಿಗೆ ಗುಣದೋಷಬುದ್ಧಿಯೇ ಉಂಟಾಗಲಾರದು. ಹಾಗಿಲ್ಲದೆ ಯಾವನು ಇತರರ ಸ್ವಾಭಾವಿಕಕರ್ಮಗಳನ್ನು ಕುರಿತು ನಿಂದಿಸುತ್ತಲೂ, ಸ್ತುತಿ

ಸುತ್ತಲೂ ಇರುವನೋ, ಅವನು ಅಸತ್ಕಾದ ದೇಹದಲ್ಲಿ ಆತ್ಮಾಭಿಮಾನ ವುಳ್ಳನೆಂದು ಸ್ಪಷ್ಟವಾಗುವುದು. ಈ ಆತ್ಮಾಭಿಮಾನವುಳ್ಳವನು, ತನಗೆ ಪುರುಷಾರ್ಥಸಾಧಕವಾದ ಜ್ಞಾನಯೋಗದಿಂದ ಭ್ರಷ್ಟನಾಗುವನು. ದೇಹಕ್ಕಿಂತಲೂ ಆತ್ಮವು ಭಿನ್ನವೆಂಬ ವೈಲಕ್ಷಣ್ಯವನ್ನು ತಿಳಿಯದವನಿಗೆ ತನ್ನ ದೇಹವೇ ಆತ್ಮವೆಂಬ ಭ್ರಮವುಂಟಾಗುವುದು ಸಹಜವೇ! ಜೀವನಿಗೆ ನಿದ್ರೆಯಂತಿರುವ ಅವಿದ್ಯೆಯಿಂದ, ಅಹಂಕಾರಕಾರ್ಯವೆನಿಸಿದ ದೇಹಾತ್ಮಾಭಿ ಮಾನವು ಹುಟ್ಟಿದಾಗ, ಅವನಿಗೆ ಪ್ರಕೃತಿಯಿಂದ ನಿಜಸ್ವರೂಪವು ಮರೆಸಿ ಹೋಗುವುದು. ಈ ಮಾಯಾವರಣದಿಂದ ಆತ್ಮನಲ್ಲಿ ದೇಹಮೂಲಕ ವಾದ ನಾನಾತ್ವಭ್ರಮವುಳ್ಳವನು, ಜಾಗರಾವಸ್ಥೆಯಲ್ಲಿರುವಾಗಲೂ ನಿದ್ರೆ ಮಾಡುವವನಂತೆಯೇ ಜ್ಞಾನಶೂನ್ಯನೆನಿಸುವನು. ಆದರೆ “ದೇಹಧರ್ಮ ಗಳನ್ನು ಆತ್ಮನಲ್ಲಿ ಆರೋಪಿಸಿ, ನಿಂದಾಸ್ತುತಿಗಳನ್ನು ಮಾಡುವುದು ಅನರ್ಥಕಗಳಾಗಿದ್ದರೂ, ಆ ದೇಹಧರ್ಮಗಳನ್ನು ದೇಹಕ್ಕೆಂದೇ ತಿಳಿದು, ಆ ದೇಹಗಳನ್ನುದ್ದೇಶಿಯೇ ಗುಣದೋಷಗಳನ್ನು ಹೇಳಬಹುದಲ್ಲವೆ?” ಎಂದರೆ, ಈಗಲೋ ನಾಳೆಯೋ ಬಿದ್ದುಹೋಗತಕ್ಕ ಅಸ್ಥಿರವಾದ ದೇಹದಲ್ಲಿ ಗುಣವಿದ್ದರೇನು? ಅಥವಾ ದೋಷವಿದ್ದರೇನು? ಅತ್ಯುತ್ತಮವೆನಿಸಿಕೊಂಡ ದೇವಾದಿಶರೀರಗಳಾಗಲಿ, ಅತಿನೀಚವೆನಿಸಿಕೊಂಡ ಅಮೇಧ್ಯಕ್ರಿಮಿಗಳ ಶರೀರ ವಾಗಲಿ, ಇವೆಲ್ಲವೂ ಪ್ರಕೃತಿಪರಿಣಾಮರೂಪವಾದುದರಿಂದ, ಒಂದು ಸ್ಥಿತಿಯ ಲ್ಲಿಲ್ಲದೆ ಕ್ಷಣಕ್ಷಣಕ್ಕೂ ವಿಕಾರವನ್ನು ಹೊಂದುತ್ತಲೇ ಇರುವುವು. ಶರೀರ ವೆಂಬುದೆಲ್ಲವೂ ಆತ್ಮನಿಗಿಂತಲೂ ಭಿನ್ನವಾದುವುಗಳೇ! ಈ ದೇಹಗಳೆಲ್ಲವೂ ಆತ್ಮನಿಗೆ ಅನರ್ಥಾವಹಗಳಾಗಿ, ಅಸತ್ತೆನಿಸಿಯೇ ಇರುವಾಗ, ಅವುಗಳಲ್ಲಿ ಸತ್ತೆಂದೂ, ಅಸತ್ತೆಂದೂ ಗುಣದೋಷಗ್ರಹಣವು ಹೇಗೆ? ಕ್ಷಣಕ್ಷಣಕ್ಕೂ ಮಾರುತ್ತಿರುವ ಶರೀರದಲ್ಲಿ ದೇವತ್ವಮನುಷ್ಯತ್ವಾದಿವ್ಯವಹಾರಗಳೂ ಸ್ಥಿರವಲ್ಲ. ಆ ಶರೀರಗಳ ವಿಷಯವಾಗಿ ಮನಸ್ಸಿಗೆ ತೋರುವ ತಾನೆಂಬ ಅಭಿ ಮಾನವೂ ಸುಳ್ಳು! ಆದುದರಿಂದ ಅಸತ್ಪ್ರಾಯವಾದ ದೇಹವು ಸತ್ತಾ ದರೇನು? ಅಸತ್ತಾದರೇನು? ಆದರೆ “ದೇಹಗತವಾದ ಆಕಾರಭೇದಗಳು ಆತ್ಮನಲ್ಲಿ ಅಸತ್ಯವಾಗಿರುವಾಗ, ಮನಸ್ಸಿನಲ್ಲಿ ಆ ಅಭಿನಿವೇಶವಿದ್ದಮಾತ್ರಕ್ಕೆ

ಅನರ್ಥವೇನು ?" ಎಂದರೆ, ಅನೇಕವಿಷಯಗಳಲ್ಲಿ ಇಂತಹ ತಪ್ಪುತಿಳಿವಳಿಕೆಯೇ ಅನರ್ಥಕಾರಣವಾಗುವುದು. ಹೇಗೆಂದರೆ; ಒಬ್ಬ ಮನುಷ್ಯನು ದೊಡ್ಡದಾಗಿ ಕಾಣಿಸುವ ತನ್ನ ನೆರಳನ್ನು ನೋಡಿ, ಅದೊಂದು ಭೂತವೆಂದು ಭ್ರಮಿಸಿದಾಗ, ಅದೇ ಭಯಕಾರಣವಾಗುವುದು. ನಿಜಸ್ಥಿತಿಯನ್ನು ತಿಳಿದವನಿಗೆ ಆ ಭಯವಿಲ್ಲವಲ್ಲವೆ ? ಹಾಗೆಯೇ ತನ್ನ ಪ್ರತಿಧ್ವನಿಯನ್ನು ಕೇಳಿ, ಪರ್ವತಗುಹೆಗಳಲ್ಲಿರುವ ಕ್ರೂರಮೃಗಗಳ ಧ್ವನಿಯೆಂದು ಭ್ರಮಿಸಿದವನಿಗೆ, ಭಯದಿಂದ ಮೈ ನಡುಗುವುದು, ಪ್ರತಿಧ್ವನಿಯೆಂದೇ ತಿಳಿದವನಿಗೆ ಆ ಭಯವಿರದು. ಹಾಗೆಯೇ ಸ್ವಪ್ನವನ್ನು ನಿಜವೆಂದು ಭ್ರಮಿಸಿದವನಿಗೆ ಅದರ ಸುಖದುಃಖಗಳೂ ತೋರಿಬರುವುವು.ಅದು ಸ್ವಪ್ನವೆಂದು ತಿಳಿದಮೇಲೆ ಮನಸ್ಸು ಶಾಂತವಾಗುವುದು. ಇದರಂತೆಯೇ ದೇಹಾದಿಗಳಲ್ಲಿ ಆತ್ಮಬುದ್ಧಿಯೇ ಪ್ರಳಯಾಂತವಾಗಿ ಸಂಸಾರಭಯವನ್ನುಂಟುಮಾಡುವುದು. ಹೀಗೆ ದೇಹಗತವಾದ ಭೇದಗಳನ್ನು ಆತ್ಮನಲ್ಲಿ ಆರೋಪಿಸದೆ,ಎಲ್ಲಾ ಜೀವಾತ್ಮವೂ ಒಂದೇ ಎಂದು ತಿಳಿದವನು, ಬೇರೆಯವರ ವಿಷಯದಲ್ಲಿ ಗುಣದೋಷಗಳನ್ನೆಣಿಸಲಾರನು. ಇದಲ್ಲದೆ, ದೇಹಕ್ಕಾದರೂ, ಆ ಭೇದವನ್ನೆಣಿಸುವುದು ಯುಕ್ತವಲ್ಲ ! ಏಕೆಂದರೆ, ಜಗತ್ತೆಲ್ಲವೂ ಆ ಪರಮಪುರುಷನೊಬ್ಬನ ಸ್ವರೂಪವೇ ಆಗಿರುವುದು. ಸೃಷ್ಟಿಸತಕ್ಕವನೂ ಅವನೇ ! ಸೃಷ್ಟಿಸಲ್ಪಡತಕ್ಕವನೂ ಅವನೇ ! ರಕ್ಷಿಸತಕ್ಕವನೂ, ರಕ್ಷಿಸಲ್ಪಡತಕ್ಕವನೂ ಆತನೇ ! ಲಯಕಾಲದಲ್ಲಿ ಇದನ್ನು ಉಪಸಂಹರಿಸತಕ್ಕವನೂ, ಉಪಸಂಹರಿಸಲ್ಪಡತಕ್ಕವನೂ ಆತನೇ ! ಎಂದರೆ, ಸೃಷ್ಟಿಗೆ ಮೊದಲು ಸೂಕ್ಷ್ಮಚಿದಚಿದ್ವಿಶಿಷ್ಟನಾಗಿದ್ದ ಪರಮಪುರುಷನು, ಆ ತನ್ನ ಶರೀರದಿಂದಲೇ ಈ ಜಗತ್ತನ್ನು ವಿಸ್ತರಿಸಿ, ಅವುಗಳೊಳಗೆ ತಾನೂ ಅಂತರ್ಯಾಮಿಯಾಗಿದ್ದು ಪೋಷಿಸುತ್ತ, ಕೊನೆಗೆ ಅವೆಲ್ಲವನ್ನೂ ತನ್ನಲ್ಲಿಯೇ ಉಪಸಂಹರಿಸಿಕೊಳ್ಳುವನು. ಹೀಗೆ ಸಮಸ್ತವೂ ಬ್ರಹ್ಮಾತ್ಮಕವೇ ಆಗಿರುವುದರಿಂದ, ತಾನು ಬೇರೆ, ಮತ್ತೊಬ್ಬನು ಬೇರೆ, ಚಿತ್ತು ಬೇರೆ, ಅಚಿತ್ತು ಬೇರೆ, ಎಂಬ ಭೇದಬುದ್ಧಿಗೆ ಅವಕಾಶವೆಲ್ಲಿ ! ಹೀಗೆ ಎಲ್ಲವೂ ಒಂದೇ ಆಗಿರುವಾಗ, ಯಾರು ಯಾರನ್ನು ನಿಂದಿಸಬಹುದು ? ಯಾರು ಯಾರನ್ನು ಸ್ತುತಿಸಬಹುದು ? ಯಾರು ಯಾರನ್ನು

ಉಪೇಕ್ಷಿಸಬಹುದು ? ಈ ನಿಂದೆ, ಸ್ತುತಿ, ಉಪೇಕ್ಷೆಯೆಂಬಿವು ಮೂರೂ ಪ್ರಮಾಣಶೂನ್ಯಗಳಾಗಿ, ಕೇವಲಭ್ರಮವೆನಿಸುವುವಲ್ಲವೆ ? "ಹಾಗೆ ಪರಮ ಪುರುಷನೇ ಪ್ರಪಂಚಕ್ಕೆ ಉಪಾದಾನಕಾರಣನಾಗಿ, ತಾನೇ ಪ್ರಪಂಚ ರೂಪದಿಂದ ಕಾಣಿಸುವಪಕ್ಷಕ್ಕೆ, ಅವನಿಗೂ ಆಕಾರಭೇದಗಳನ್ನು ಹೇಳ ಬೇಕಾಗುವುದಲ್ಲವೆ ? ಆಗ ಪರಮಪುರುಷನು ನಿರ್ವಿಕಾರನೆಂಬುದು ಹೇಗೆ?" ಎಂದು ಕೇಳುವೆಯಾ ? ಈ ಜಗತ್ತೆಂಬುದು ಸತ್ವಾದಿಗುಣಗಳ ವಿಕಾರವೇ ಆಗಿರುವುದರಿಂದ, ಆ ವಿಕಾರಗಳು ಆ ಗುಣಗಳಿಗೇ ಸೇರುವುವೇಹೊರತು ಪರಮಾತ್ಮನಿಗಲ್ಲ ! ಪರಮಾತ್ಮನು ತನ್ನ ಸಂಕಲ್ಪರೂಪದಿಂದ ಗುಣಗಳಲ್ಲಿ ಪ್ರವೇಶಿಸಿ ವಿಕಾರವನ್ನು ಹುಟ್ಟಿಸುವುದರಿಂದಲೇ ಅವನಿಗೆ ಉಪಾದಾನ ಕಾರಣತ್ವವಲ್ಲದೆ ಬೇರೆಯಲ್ಲ ? ಮತ್ತು ಆತನು ಸಮಸ್ತಜಗತ್ತಿಗೂ ಅಂತರ್ಯಾಮಿಯಾಗಿರುವುದರಿಂದ, ಆ ಗುಣಗಳಲ್ಲಿಯೂ ತಾನೇ ಸೇರಿರುವನು. ಹೀಗೆ ಗುಣಮಯವಾದ ಜಗತ್ತೆಲ್ಲವೂ, ಬ್ರಹ್ಮಮಯವಾಗಿಯೇ ಇರು ವುದರಿಂದ, ಅವನಿಗೆ ಉಪಾದಾನಕಾರಣತ್ವವನ್ನು ಹೇಳುವುದರಲ್ಲಿ ವಿರೋ ಧವೇನೂ ಬಾರದು. ಹೀಗೆ ಪರಮಾತ್ಮಮಯವಾದ ಜಗತ್ತಿನಲ್ಲಿ, ಪ್ರಕೃತಿ ಪುರುಷರಿಗಿರುವ ವೈಲಕ್ಷಣ್ಯವನ್ನೂ, ಇವೆರಡಕ್ಕಿಂತಲೂ ಪರಮಪುರುಷನು ವಿಲಕ್ಷಣನೆಂಬುದನ್ನೂ, ಸಮಸ್ತಜಗತ್ತೂ ಈ ತತ್ವತ್ರಯದಿಂದಲೇ ಕೂಡಿ ರುವುದೆಂಬುದನ್ನೂ ಚೆನ್ನಾಗಿ ತಿಳಿದ ವಿದ್ವಾಂಸನು, ಬೇರೆಯಾವುದನ್ನೂ ನಿಂದಿಸದೆ, ಯಾವುದನ್ನೂ ಸ್ತುತಿಸದೆ, ಸೂರ್ಯನಂತೆ ಸರ್ವವಸ್ತುವಿ ನಲ್ಲಿಯೂ ಗುಣದೋಷಭಾವನೆಯಿಲ್ಲದೆ ಸಮಭಾವದಿಂದ ವರ್ತಿಸುವನು. ಆದುದರಿಂದ ವಿವೇಕಿಯಾದವನು, ಚತುರ್ಮುಖಬ್ರಹ್ಮನಿಂದ ಹಿಡಿದು, ಸಣ್ಣ ಕ್ರಿಮಿಗಳವರೆಗಿನ ಎಲ್ಲಾ ದೇಹಸಮೂಹವೂ ಜನನಮರಣಗಳನ್ನು ಹೊಂದತಕ್ಕದೆಂದೂ, ಆತ್ಮನಿಗಿಂತಲೂ ಭಿನ್ನವಾದುದೆಂದೂ, ಪ್ರತ್ಯಕ್ಷ ದಿಂದಲೂ, ಅನುಮಾನದಿಂದಲೂ, ಶಾಸ್ತ್ರಪ್ರಮಾಣದಿಂದಲೂ, ಬುದ್ಧಿ ಕೌಶಲದಿಂದಲೂ ತಿಳಿದುಕೊಂಡು, ಯಾವುದರಲ್ಲಿಯೂ ಸಂಗವಿಲ್ಲದೆ ವರ್ತಿ ಸುತ್ತಿರಬೇಕು" ಎಂದನು.

ಉದ್ಧವನು ತಿರುಗಿ ಪ್ರಶ್ನಮಾಡುವನು "ಓ ಪ್ರಭೂ! ದೇಹಾತ್ಮಗಳೆರಡೂ ಒಂದಕ್ಕೊಂದಕ್ಕೆ ಅತ್ಯಂತವಿಲಕ್ಷಣಧರ್ಮವುಳ್ಳವುಗಳಷ್ಟೆ ? ಇವುಗಳಲ್ಲಿ ಸುಖದುಃಖಾನುಭವರೂಪವಾದ ಸಂಸಾರವೆಂಬುದು ಯಾವುದಕ್ಕೆ ? ದೇಹಕ್ಕೇ ? ಅಥವಾ ಆತ್ಮನಿಗೇ ? ಸಂಸಾರದಲ್ಲಿ ಸುಖದುಃಖಗಳೇನೋ ಕಾಣುತ್ತಿರುವುವು. ಆ ಅನುಭವವನ್ನು ದೇಹಕ್ಕೆಂದು ಹೇಳುವುದಕ್ಕಿಲ್ಲ. ಏಕೆಂದರೆ, ದೇಹವು ಜಡವೆನಿಸಿರುವುದು. ಅಥವಾ ಆತ್ಮನಿಗೂ ಅದನ್ನು ಹೇಳುವುದಕ್ಕಿಲ್ಲ! ಏಕೆಂದರೆ, ಆತ್ಮವೆಂಬುದು ಸಹಜವಾಗಿ ಶುದ್ಧವೆನಿಸಿರುವುದು. ಸ್ವಯಂಪ್ರಕಾಶವುಳ್ಳುದು. ಅದಕ್ಕೆ ಸಹಜವಾಗಿ ಕರ್ಮರೂಪವಾದ ಆವರಣವಾಗಲಿ, ಸತ್ವಾದಿಗುಣಗಳಾಗಲಿ ಇರುವುದಿಲ್ಲ. ಮತ್ತು ಆತ್ಮವು ಸ್ವಭಾವದಿಂದ ವಿಕಾರರಹಿತವಾದುದು. ಹೀಗೆ ದೇಹಾತ್ಮಗಳೆರಡೂ ಪರಸ್ಪರವಿಲಕ್ಷಣಧರ್ಮವುಳ್ಳವುಗಳಾಗಿದ್ದರೂ, ದಾರುವಿನಲ್ಲಿ ಅಗ್ನಿಯಂತೆ ಅವೆರಡೂ ಒಂದಾಗಿ ಕಲೆತಿರುವುವು. ಇವುಗಳಲ್ಲಿ ಯಾವುದಕ್ಕೆ ಸಂಸಾರ ಸಂಬಂಧವೆಂದು ಹೇಳಬಹುದು ? ಸುಖದುಃಖಸಂಬಂಧವಿಲ್ಲದೆ ಸಹಜವಾಗಿ ಶುದ್ಧನೆನಿಸಿದ ಆತ್ಮನಿಗಾಗಲಿ, ಜಡವಾದ ದೇಹಕ್ಕಾಗಲಿ, ಸಂಸಾರ ಸಂಬಂಧವನ್ನು ಹೇಳುವುದಕ್ಕಿಲ್ಲ! ಈ ವಿಷಯದಲ್ಲಿ ನನ್ನ ಸಂದೇಹವನ್ನು ನೀಗಿಸಬೇಕು." ಎಂದನು. ಅದಕ್ಕಾಭಗವಂತನು "ಉದ್ಧವಾ ! ಕೇಳು ! ಆತ್ಮವೆಂಬುದು ಸಹಜದಶೆಯಲ್ಲಿ ಶುದ್ಧವೆನಿಸಿದ್ದರೂ,ಪ್ರಕೃತಿಸಂಬಂಧದಿಂದ ಅದು ಅಶುದ್ಧವೆನಿಸುವುದು. ಅಂತಹ ಅಶುದ್ಧದಶೆಯಲ್ಲಿಯೇ ಆತ್ಮನಿಗೆ ಸಂಸಾರವು. ಆತ್ಮನಿಗೆ ದೇವಾದಿರೂಪಗಳು ಸಹಜವಾಗಿಲ್ಲದಿದ್ದರೂ, ಯಾವಾಗ ದೇಹದೊಡನೆ ಸಂಬಂಧವಿರುವುದೋ, ಆಗ ಅವೂ ಇದ್ದಂತೆ ತೋರಿ, ಜೀವನಿಗೆ ಸುಖದುಃಖಗಳನ್ನುಂಟುಮಾಡುವುವು. ಏಕೆಂದರೆ, ಆತ್ಮವು ದೇಹಕ್ಕಿಂತಲೂ ವಿಲಕ್ಷಣವೆನಿಸಿದ್ದರೂ, ತನ್ನ ಸ್ವರೂಪವನ್ನು ತಾನು ತಿಳಿಯಲಾರದ ಅಜ್ಞಾನದಿಂದ, ಅಶುದ್ಧಿಯನ್ನು ಹೊಂದುವುದು. ಆತ್ಮನಿಗೆ "ನಾನು ಸ್ಥೂಲನು, ನಾನು ಕೃಶನು, ಇವರು ನನ್ನವರು, ಅವರು ಪ್ರತಿಕೂಲರು" ಎಂಬೀ ಭಾವನೆಯಿರುವವರೆಗೆ ಸಂಸಾರವು ತಪ್ಪಲಾರದು. ಸ್ವಪ್ನದೇಹವು ತನ್ನದಲ್ಲವೆಂದು ಚೆನ್ನಾಗಿ ತಿಳಿದಿದ್ದರೂ, ಕನಸನ್ನು ಕಾಣುವಾಗ,

ಆ ದೇಹವೇ ಆತ್ಮಭ್ರಾಂತಿಯನ್ನು ಹುಟ್ಟಿಸಿ, ಸುಖದುಃಖಗಳನ್ನು ತೋರಿಸುವಂತೆ, ಆತ್ಮನಿಗೆ ದೇಹಾದ್ಯಾಕಾರಗಳಿಲ್ಲದಿದ್ದರೂ, ಅವು ತನಗಿದ್ದಂತೆ ಭ್ರಮಿಸುವುದರಿಂದ, ಆಮೂಲಕವಾದ ಸುಖದುಃಖಾನುಭವಗಳೂ ತೋರುವುವು.

ಎಚ್ಚರವಿಲ್ಲದಿರುವವರೆಗೆ ಸ್ವಪ್ನಗಳೇ ಎಷ್ಟೋ ಭಯವನ್ನುಂಟು ಮಾಡುವುವು. ಆ ಸ್ವಪ್ನವೇ, ಅದರಿಂದ ಎಚ್ಚರಗೊಂಡವನಿಗೆ ಮೊದಲಿದ್ದ ಮೋಹವನ್ನುಂಟುಮಾಡಲಾರದಲ್ಲವೆ? ಎಚ್ಚರಗೊಂಡವನಿಗೆ ಹಿಂದೆ ಸ್ವಪ್ನದಲ್ಲಿ ತಾನು ಅನುಭವಿಸಿದ ಸುಖದುಃಖಗಳಾವುವೂ ಮನಸ್ಸನ್ನು ಕಲಗಿಸಲಾರವು. ಆದುದರಿಂದ, ಶೋಕ, ಹರ್ಷ, ಭಯ, ಕ್ರೋಧ, ಲೋಭ, ಮೋಹ, ಸ್ಪೃಹೆ, ಜನನ, ಮರಣವೆಂಬಿವೇ ಮೊದಲಾದ ವಿಕಾರಗಳೆಲ್ಲವೂ, ದೇಹವನ್ನೇ ಆತ್ಮವೆಂದು ಭ್ರಮಿಸುವಂತೆ ಮಾಡುವ ಅಹಂಕಾರದಿಂದುಂಟಾಗತಕ್ಕವುಗಳೇಹೊರತು ಆತ್ಮನಿಗೆ ಸ್ವಾಭಾವಿಕಗಳಲ್ಲ. ಆತ್ಮವನ್ನು ಸಂಸಾರದಲ್ಲಿ ಕಟ್ಟಿಡುವುದಕ್ಕೆ, ದೇಹ, ಇಂದ್ರಿಯಗಳು, ಪ್ರಾಣಗಳು, ಮನಸ್ಸು, ದೇಹಾತ್ಮಭ್ರಮೆ, ಜೀವನು, ನಿಯಾಮಕನಾದ ಪರಮಾತ್ಮನು, ಸತ್ವಾದಿಗುಣಗಳು, ಕರ್ಮಗಳು, ದೇವಮನುಷ್ಯಾದಿಜಾತಿಗಳು, ಸೂತ್ರರೂಪವಾದ ಮಹತ್ತು, ಎಂಬೀ ಅನೇಕಕಾರಣಗಳ ಸಮುದಾಯವುಂಟು. ಇದರಿಂದ ಸಂಸಾರವೆಂಬುದು ಕಾಲಾಧೀನವಾಗಿ ನಡೆಯುತ್ತ ಬರುವುದು. ಮನೋವಾಕ್ಕಾಯಗಳೆಂಬ ತ್ರಿಕರಣಗಳ, ಮತ್ತು ಪ್ರಾಣಗಳ ಮೂಲಕವಾಗಿ ನಡೆಸಿದ ಅನೇಕಕರ್ಮಗಳೇ, ಮೇಲೆ ಹೇಳಿದ ದೇಹವೇ ಮೊದಲಾದ ಅನೇಕರೂಪಗಳಿಂದ ಸಂಸಾರಕ್ಕೆ ಮೂಲವೆನಿಸುವುವು. ಈ ಸಂಸಾರವನ್ನು ನಿರ್ಮೂಲವಾಗಿ ಕತ್ತರಿಸುವುದಕ್ಕೆ, ನನ್ನ ಉಪಾಸನಾರೂಪವಾದ ಜ್ಞಾನವೇ ತೀಕ್ಷ್ಣವಾದ ಕತ್ತಿಯೆಂದು ತಿಳಿ! ಹೀಗೆ ಆತ್ಮಜ್ಞಾನದಿಂದ ಸಂಸಾರವನ್ನು ಛೇದಿಸಬೇಕೆಂಬ ಅಪೇಕ್ಷೆಯುಳ್ಳವನು, ಶುಭಾಶ್ರಯವೆಂಬ ನನ್ನ ರೂಪವನ್ನು ಧ್ಯಾನಿಸುತ್ತ, ಶಬ್ದಾದಿವಿಷಯಗಳಲ್ಲಿ ಆಸೆಯನ್ನು ತೊರೆದು ನಿಸ್ಸಂಗನಾಗಿ, ಭೂಸಂಚಾರಮಾಡುತ್ತಿರಬೇಕು. ದೇಹಾತ್ಮಗಳಿಗಿರುವ ಪರಸ್ಪರವೈಲಕ್ಷಣ್ಯವನ್ನು ವಿವೇಚನೆಯಿಂದ ತಿಳಿಯುವುದೂ, ಶಾಸ್ತ್ರಾಧ್ಯಯನವೂ, ತಪ

ಸ್ಸೆಂಬ ಕರ್ಮಯೋಗವೂ, ಪ್ರತ್ಯಕ್ಷಾನುಭವವೂ, ಗುರೂಪದೇಶವೂ, ಅನು ಮಾನವೂ, ಇವೆಲ್ಲವೂ ಜ್ಞಾನಸಾಧನಗಳು. ಇವುಗಳಿಂದ ಪಡೆಯಬೇಕಾದ ಜ್ಞಾನಸ್ವರೂಪವೆಂತದೆಂದರೆ, ಶರೀರಕ್ಕೆ ಮೊದಲೂ, ಆ ಶರೀರವು ಬಿದ್ದು ಹೋದಮೇಲೆಯೂ, ಯಾವುದು ಶರೀರರಹಿತವಾಗಿ ತಾನುಮಾತ್ರ ನಿಲ್ಲುವು ದೋ, ಆ ಆತ್ಮಸ್ವರೂಪವೇ ಮಧ್ಯಕಾಲದಲ್ಲಿಯೂ ಎಂದರೆ ಶರೀರವಿರು ವಾಗಲೂ ಪ್ರಧಾನವೆನಿಸಿರುವುದೇ ಹೊರತು, ಶರೀರಕ್ಕೇ ಆತ್ಮತ್ವವು ಬಾರ ದೆಂದೂ, ಭಗವಂತನ ಸಂಕಲ್ಪರೂಪವಾದ ಕಾಲವೇ ಆತ್ಮನಿಗೆ ಈ ವಿಧ ವಾದ ಶರೀರಸಂಬಂಧಕ್ಕೆ ಕಾರಣವೆಂದೂ ತಿಳಿಯುವುದೇ ಜ್ಞಾನವು. ಚೆ ನ್ನಾಗಿ ಪುಟಹಾಕಿ ಶೋಧಿಸಿದ ಬಂಗಾರವನ್ನು, ಬೇರೆಬೇರೆ ಆಭರಣಗಳ ನ್ನಾಗಿ ಮಾಡುವಾಗ, ಅದಕ್ಕೆ ಇತರಲೋಹಗಳ ಪುಡಿಯನ್ನಿಟ್ಟು ಬೆಸುಗೆ ಹಾಕುವರು. ಆ ಒಡವೆಗಳನ್ನು ಕರಗಿಸಿ ತಿರುಗಿ ಪುಟಹಾಕಿದರೆ, ಮೊದಲಿ ನಂತೆ ಶುದ್ಧವಾದ ಬಂಗಾರವೇ ಉಳಿಯುವುದು. ಈ ನಡುವೆ ಆಭರಣಾ ವಸ್ಥೆಯಲ್ಲಿದ್ದ ಮಿಶ್ರಲೋಹವನ್ನೇ ಶುದ್ಧವಾದ ಬಂಗಾರವೆಂದು ಹೇಳುವುದು ಭ್ರಾಂತಿಯಲ್ಲವೆ? ತಿಳಿದವರಾದರೋ, ಆ ಆಭರಣಾವಸ್ಥೆಗೆ ಮೊದಲೂ,ಆ ಆಭರಣವನ್ನು ಕರಗಿಸಿ ಪುಟಹಾಕಿದಮೇಲೆಯೂ ನಿಲ್ಲತಕ್ಕುದು ಯಾವುದೋ, ಆ ಲೋಹಾಂಶವನ್ನು ಮಾತ್ರವೇ ಆ ಮಧ್ಯದಶೆಯಲ್ಲಿಯೂ ಬಂಗಾರವೆಂದು ವ್ಯವಹರಿಸುವರೇಹೊರತು, ಆಭರಣವನ್ನೇ ಮೊತ್ತಕ್ಕೆ ಶುದ್ಧವಾದ ಬಂಗಾರವೆಂದು ಹೇಳಲಾರರು. ಅದರಂತೆಯೇ "ಅಹಂ"ಎಂಬ ಶಬ್ದವು, ದೇಹಸಂಬಂಧವಿರುವಾಗಲೂ ದೇಹವಿಲಕ್ಷಣವಾದ ಆತ್ಮದ ಲ್ಲಿಯೇ ವರ್ತಿಸುವುದೇ ಹೊರತು, ಆ ಅಹಂಶಬ್ದಕ್ಕೆ ಆತ್ಮದೊಡನೆ ದೇಹ ವನ್ನೂ ಸೇರಿಸಿ ಗ್ರಹಿಸುವುದು ಕೇವಲಭ್ರಾಂತಿಯು. ಆ ಭ್ರಾಂತಿಯಿಲ್ಲದೆ, ಅಹಂಶಬ್ದಕ್ಕೆ ಆತ್ಮವನ್ನುಮಾತ್ರ ಗ್ರಹಿಸುವುದೇ ಜ್ಞಾನವು. ಮತ್ತು ಇಂದ್ರಿಯ ಶರೀರಾಹಂಕಾರಗಳೆಂಬ ಮೂರು ಬಗೆಯುಳ್ಳುದಾಗಿ, ಉತ್ಪತ್ತಿ ಸ್ಥಿತಿ ಲಯಗಳೆಂಬ ಮೂರವಸ್ಥೆಯನ್ನು ಹೊಂದತಕ್ಕು ದಾಗಿ, ಸತ್ವಾದಿಗುಣತ್ರಯಪರಿಣಾಮರೂಪವಾದ ಅಚೇತನಪದಾರ್ಥವು. ಈ ಮೂರವಸ್ಥೆಗಳೂ ಇಲ್ಲದೆ ತುರೀಯವೆನಿಸಿಕೊಂಡ ಯಾವುದರ ಸಂಬಂ

ಥದಿಂದಲೇ ಪ್ರವೃತ್ತಿಸಮರ್ಥವಾಗುತ್ತ, ಅದು ತನ್ನೊಳಗಿಲ್ಲದಿದ್ದಾಗ ಪ್ರವೃತ್ತಿಶೂನ್ಯವಾಗಿರುವುದೋ, ಅದೇ ಆತ್ಮತತ್ವವೆಂದೂ, ಆ ಆತ್ಮ ತತ್ವವು ವಿಕಾರರಹಿತವಾದುದೆಂದೂ ತಿಳಿಯುವುದುಕೂಡ ಜ್ಞಾನವೆನಿ ಸುವುದು. ಶರೀರದಲ್ಲಿ ಆತ್ಮವು ಸೇರಿರುವಾಗಲ್ಲವೇ ದೇಹಾತ್ಮ ಭ್ರಮವುಳ್ಳ ವರಿಗೆ ಆ ಶರೀರವೇ ಆತ್ಮವೆಂದು ತೋರುವುದು. ಉತ್ಪತ್ತಿಗೆ ಮೊದಲೂ, ಮರಣಾನಂತರದಲ್ಲಿಯೂ ಆ ಶರೀರವು ಹೇಗೆ ಆತ್ಮವೆನಿಸುವುದಿಲ್ಲವೋ,ಅದ ರಂತೆ ಜೀವಕಾಲದಲ್ಲಿಯೂ ಅದಕ್ಕೆ ಆತ್ಮತ್ವವಿಲ್ಲವೆಂದೂ, ಆ ಶರೀರ ವನ್ನು ಆತ್ಮನೆಂದು ವ್ಯವಹರಿಸುವುದು ಕೇವಲಭ್ರಾಂತಿಮೂಲಕವಾದ ವ್ಯವಹಾರಮಾತ್ರವೆಂದೂ, ಆ ದೇಹಕ್ಕಿಂತ ಮೊದಲೂ, ಆ ದೇಹವು ಬಿದ್ದುಹೋದಮೇಲೆಯೂ ನಿಲ್ಲತಕ್ಕುದೆಂದು ಪ್ರಮಾಣಸಿದ್ಧವಾದ ಆತ್ಮ ತತ್ವವು ಯಾವುದುಂಟೋ, ಅದು, ಸದಾ ಏಕರೂಪವಾಗಿರತಕ್ಕುದೆಂದೂ ತಿಳಿಯುವುದು ಜ್ಞಾನವು. ಮತ್ತು ಪ್ರಕೃತಿವಿಕಾರಭೂತವಾಗಿಯೂ, ರ ಜೋಗುಣಪ್ರಾಚುರ್ಯದಿಂದ ಪ್ರವೃತ್ತಿಸ್ವಭಾವವುಳ್ಳುದಾಗಿಯೂ ಇರುವ ಶರೀರವೆಂಬ ಸೃಜ್ಯಪದಾರ್ಥಕ್ಕೆ,ಆತ್ಮದೊಡನೆ ಸ್ವತಃ ಸಂಬಂಧವಿಲ್ಲವಾದರೂ, ಅದು ಆತ್ಮನಿಗೆ ಅಭಿಮಾನವಿಷಯವಾಗಿ ತೋರುತ್ತಿರುವುದು.ಬ್ರಹ್ಮನೊಡನೆ ಸಮಾನಗುಣವುಳ್ಳುದರಿಂದ ಬ್ರಹ್ಮಶಬ್ದವಾದ ಶುದ್ಧಾತ್ಮಸ್ವರೂಪವು, ಆದೇಹಸಂಬಂಧವನ್ನು ಬಿಟ್ಟಾಗಲೂ ಸ್ವಯಂಪ್ರಕಾಶಸ್ವರೂಪವಾಗಿ ಬೆಳಗ ಬಲ್ಲುದು.ದೇಹಕಾರಣವಾದ ಪ್ರಕೃತಿಯಾದರೋ,ವಿಷಯೇಂದ್ರಿಯರೂಪಗ ಳಾದ ವಿಕಾರಗಳಿಂದ ನಾನಾಬಗೆಯಾಗಿ ಕಾಣುವುದೆಂದು ತಿಳಿಯುವುದೂ ಜ್ಞಾನವೆನಿಸುವುದು. ಹೀಗೆ ಮೇಲೆ ಹೇಳಿದ ವಿವೇಚನೆಗಳಿಂದ, ಕ್ರಮವಾಗಿ ಈ ದೇಹೋತ್ಪತ್ತಿಗೆ ಮೊದಲೂ, ದೇಹವು ಬಿದ್ದುಹೋದಮೇಲೆಯೂ, ಇವುಗಳ ಮಧ್ಯಕಾಲದಲ್ಲಿಯೂ ಅನುವರ್ತಿಸುತ್ತಿರುವುದೇ ಆತ್ಮವೆಂದೂ, ಆದುದರಿಂದಲೇ ಅದು ದೇಹಕ್ಕಿಂತಲೂ ವಿಲಕ್ಷಣವೆಂದೂ ತಿಳಿಯುವು ದೊಂದು; ದೇಹಸಂಬಂಧವಿದ್ದಾಗ ಆತ್ಮನಿಗೆ ಆ ದೇಹದಲ್ಲಿ ತಾನೆಂಬ ಬುದ್ಧಿಯು ಕೇವಲಭ್ರಾಂತಿಯೆಂದು ತಿಳಿದುಕೊಳ್ಳುವುದೊಂದು, ಆತ್ಮ ವಿದ್ದಾಗಲೇ ದೇಹಕ್ಕೆ ಪ್ರವೃತ್ತಿಸಾಮರ್ಥ್ಯವೆಂದು ತಿಳಿಯುವುದೊಂದು,

ದೇಹಸಂಬಂಧವಿಲ್ಲದಿದ್ದರೂ ಆತ್ಮವು ಸ್ವಯಂಪ್ರಕಾಶವಾಗಿ ಬೆಳಗುತ್ತಿ ರುವುದೆಂಬ ತಿಳಿವಳಿಕೆಯೊಂದು, ಈ ನಾಲ್ಕು ಬಗೆಯ ಜ್ಞಾನಗಳೂ ಸಂ ಸಾರಕಾರಣವಾದ ದೇಹಾತ್ಮಾಭಿಮಾನವನ್ನು ತಪ್ಪಿಸುವುದಕ್ಕೆ ಉಪಾಯ ಭೂತಗಳೆಂದು ತಿಳಿಯಬೇಕು. ಹೀಗೆಯೇ ಪರಮಾತ್ಮನು ಪ್ರಕೃತಿಪುರುಷರಿ ಗಿಂತಲೂ ವಿಲಕ್ಷಣನೆಂಬುದನ್ನು ಸ್ಪಷ್ಟವಾಗಿ ನಿರ್ಣಯಿಸುವುದಕ್ಕೆ ಕಾರಣ ವಾದ ಊಹಾಪೋಹವಿಚಾರಗಳಿಂದಲೂ, ದೇಹೇಂದ್ರಿಯಾದಿಗಳಿಗೆ ಆ ತ್ಮತ್ವವಿಲ್ಲವೆಂದು ತಿಳಿಯುವ ಬುದ್ಧಿನೈಪುಣ್ಯದಿಂದಲೂ, ದೇಹಾಭಿಮಾನ ಸ್ವತಂತ್ರಾಭಿಮಾನಗಳೆಂಬ ಮೋಹವನ್ನು ನೀಗಿ,ಕರ್ಮಪ್ರವಣರಾದ ಕಾಮು ಕಜನರೊಡನೆ ಸಂಗವನ್ನು ತ್ಯಜಿಸಿ, ಆತ್ಮಾನುಭವದಿಂದುಂಟಾದ ಆನಂದ ದಲ್ಲಿಯೇ ಸಂತುಷ್ಟನಾಗಿರಬೇಕು. ಉದ್ಧವಾ ! ಪಾರ್ಥಿವವಾದ ಈ ಶರೀ ರವೂ ಆತ್ಮವಲ್ಲ. ದೇವತೆಗಳೆಂದು ವ್ಯವಹರಿಸಲ್ಪಡುವ ಇಂದ್ರಿಯಗಳೂ ಆತ್ಮವಲ್ಲ! ಪ್ರಾಣಗಳೂ ಆತ್ಮವಲ್ಲ. ಪಂಚಭೂತಗಳಲ್ಲಿ ಸೇರಿದ ಅಗ್ನಿ, ಜಲ, ವಾಯ್ವಾಕಾಶಗಳಾಗಲಿ, ಮನಸ್ಸು, ಬುದ್ಧಿ, ಅಂತಃಕರಣ, ಅಹಂಕಾರವೆಂ ಬಿವುಗಳಾಗಲಿ ಆತ್ಮವಲ್ಲ. ಆ ದೇಹಾದಿಗಳೆಲ್ಲವೂ ಪ್ರಕೃತಿಯ ಪರಿಣಾಮ ರೂಪಗಳಾದುದರಿಂದ ಅವೆಲ್ಲವೂ ಸಮಾನಗಳೇ! ಪ್ರಕೃತಿಯೇ ಆತ್ಮ ಕ್ಕಿಂತಲೂ ಬೇರೆನಿಸಿರುವಾಗ, ಅದರ ಪರಿಣಾಮರೂಪಗಳಾದ ದೇಹಾದಿ ಗಳು ಹೇಗೆತಾನೇ ಆತ್ಮವೆನಿಸುವುವು? ಉದ್ಧವಾ ! ಈ ಆತ್ಮಸ್ವರೂಪವಿವೇ ಚನೆಯಿಂದ ಸ್ವಾತ್ಮಾನುಭವದಲ್ಲಿ ತುಷ್ಟನಾದವನು, ಕಾಮುಕರೊಡನೆ ಸಂಗವನ್ನು ಬಿಟ್ಟುಬಿಡಬೇಕೆಂದು ಹೇಳಿದೆನಲ್ಲವೆ ? " ನನ್ನ ಸ್ವರೂಪ ವನ್ನು ಸ್ಫುಟವಾಗಿ ಕಂಡುಕೊಂಡು, ಅದರಲ್ಲಿ ನಟ್ಟ ಮನಸ್ಸುಳ್ಳವರಿಗೆ ಇಂದ್ರಿಯಗಳು ಯಾವಾಗಲೂ ಎಚ್ಚರಗೊಂಡೇ ಇರುವುದರಿಂದ, ಅಂತವರಲ್ಲಿ ರಜಸ್ಸು ಮೊದಲಾದ ಗುಣಗಳೇನೂ ತಲೆದೋರಲಾರವು. ಅವರು ಇಂದ್ರಿಯಗಳನ್ನು ಯಥೇಷ್ಟವಾಗಿಬಿಟ್ಟರೂ ದೋಷವಿಲ್ಲ.ಏಕೆಂದರೆ, ಮೇಘಗಳು ಸೂರ್ಯನಿಗೆ ಅಡ್ಡಲಾಗಿ ಬರುವುದರಿಂದ ಅವನಿಗೊಂದು ಹಾನಿಯಿಲ್ಲ ! ಅವು ಬಿಟ್ಟುಹೋಗುವುದರಿಂದ ಅವನಿಗೆ ಗುಣವೂ ಇಲ್ಲ. ಅದರಂತೆಯೇ ಆತ್ಮನಿಷ್ಠನಾದವನಿಗೆ, ವಿಷಯಗಳು ಸನ್ನಿಹಿತವಾಗಿದ್ದರೂ

ಅದರಿಂದ ಹಾನಿಯಿಲ್ಲ. ಆದರೆ, ಸೂರ್ಯನಿಗೂ, ಮೇಘಗಳಿಗೂ ಅನ್ಯೋನ್ಯ ಸಂಬಂಧವೇ ಇಲ್ಲದುದರಿಂದ, ಆ ಮೇಘಗಳ ಮರೆಯಿಂದ ಅವನಿಗೆ ದೋಷವಿಲ್ಲದಿರಬಹುದು. ಆತ್ಮಕ್ಕೂ ಇಂದ್ರಿಯಗಳಿಗೂ ಇರುವ ಸಂಬಂಧವು ವಿಶೇಷಸಮೀಪವಾದುದಲ್ಲವೆ?" ಎಂದರೆ. ಆಕಾಶದೃಷ್ಟಾಂತದಿಂದ ಇದನ್ನು ಇನ್ನೂ ವ್ಯಕ್ತವಾಗಿ ತಿಳಿಯಬಹದು. ವಾಯುವು ಶೋಷಿಸುತ್ತಿದ್ದರೂ, ಅಗ್ನಿಯು ದಹಿಸಿದರೂ, ಮಳೆಯ ನೀರಿನಿಂದ ನೆನೆದರೂ, ನೆಲದ ಧೂಳು ಮುಚ್ಚಿಕೊಂಡರೂ ಆಕಾಶವು, ಅವುಗಳ ಗುಣಗಳನ್ನಾಗಲಿ, ಶೀತೋಷ್ಣಾದಿ ಋತುಧರ್ಮಗಳನ್ನಾಗಲಿ ತನ್ನಲ್ಲಿ ಅಂಟಿಸಿಕೊಳ್ಳದಂತೆ, ಪ್ರಕೃತಿವಿಲಕ್ಷಣವಾಗಿಯೂ. ಯಾವಾಗಲೂ ಒಂದೇರೂಪವುಳ್ಳದಾಗಿಯೂ, ಇರುವ ಆತ್ಮಸ್ವರೂಪವೂಕೂಡ, ಸಂಸಾರಕಾರಣಗಳಾದ ಸತ್ವಾದಿಗುಣಗಳಿಂದಲಾಗಲಿ, ಅವುಗಳ ಕಾರ್ಯದಿಂದಾಗಲಿ ಸಂಬಂಧಿಸಲಾರದು. ಆದುದರಿಂದ, ಪರಮಾತ್ಮನಿಷ್ಠೆಯುಳ್ಳ ಆತ್ಮಕ್ಕೆ, ಕಾಮುಕರ ಸಂಬಂಧವಿದ್ದಾಗಲೂ ಆ ದೋಷವು ಅಂಟಲಾರದು. ಆದರೆ ನನ್ನಲ್ಲಿ ದೃಢವಾದ ಭಕ್ತಿಯೋಗವು ಹುಟ್ಟಿ, ಆದರಿಂದ, ಮನಃಕಷಾಯರೂಪವಾದ ರಜೋಗಣವೂ, ಆ ರಜೋಗುಣಕಾರ್ಯಗಳೆನಿಸಿದ ಕಾಮಕ್ರೋಧಾದಿಗಳೂ ಪೂರ್ಣವಾಗಿ ಬಹಿಷ್ಕರಿಸಲ್ಪಡುವವರೆಗೆಮಾತ್ರ, ಶಬ್ದಾದಿವಿಷಯಗಳ ಸಂಗವಿಲ್ಲದಂತೆ ಎಚ್ಚರಿಕೆಯಿಂದಿರಬೇಕು. ಭಕ್ತಿಯೋಗವು ನಿಷ್ಪನ್ನವಾಗಬೇಕಾದರೆ, ಅದಕ್ಕೆ ವಿರೋಧಿಯಾದ ರಜೋಗುಣವನ್ನು ನೀಗಿಸುವುದೇ ಉತ್ತಮವಾದ ಉಪಾಯವೆನಿಸಿರುವುದು. ಆ ರಜಸ್ಸನ್ನು ನೀಗಿಸದೆ ಭಕ್ತಿಯೋಗವು ಕೈಗೂಡದು. ಆದುದರಿಂದ ಆ ರಜೋಗುಣವು ನೀಗುವವರೆಗೆ ಶಬ್ದಾದಿವಿಷಯಗಳಲ್ಲಿ ಸಂಗವಿಲ್ಲದಂತಿರಬೇಕು. ರೋಗವನ್ನು ನಿಶ್ಶೇಷವಾಗಿ ಮುರಿಯದಿದ್ದರೆ, ಅದು ಆಗಾಗ ಮನುಷ್ಯನನ್ನು ಬಾಧಿಸುತ್ತಲೇ ಇರುವುದಲ್ಲವೆ? ಅದರಂತೆಯೇ ಮೋಕ್ಷೋಪಾಯವಿರೋಧಿಗಳಾದ ಪ್ರಾಚೀನಕರ್ಮಗಳನ್ನು ಕಳೆಯದ ಕುಯೋಗಿಯ ಮನಸ್ಸು, ಆಗಾಗ ವಿಷಯಾಸಕ್ತವಾಗಿ, ಅವನ ಯೋಗವನ್ನು ಕೆಡಿಸುವುದು. ಉದ್ಧವಾ! ಇಂದ್ರಾದಿದೇವತೆಗಳು ಇತರರ ಶ್ರೇಯಸ್ಸನ್ನು ನೋಡಿ ಸಹಿಸಲಾರರು. ದೇವತೆಗಳಿಗೆ

ಈ ಅಸಹನವೆಂಬುದು ಸಹಜಸ್ವಭಾವವು. ಆದುದರಿಂದ ಅವರೇ ಯೋಗಿಯ ಮನಸ್ಸನ್ನು ಕೆಡಿಸುವುದಕ್ಕಾಗಿ, ಮನುಷ್ಯರೂಪದಿಂದ ಕಾಮುಕರನ್ನು ಸೃಷ್ಟಿಸಿ ಕಳುಹಿಸುವರು. ಆ ಕಾಮುಕರು ಬಂದು ನಾನಾವಿಧವಿಘ್ನಗಳಿಂದ ಯೋಗಿಯ ಮನಸ್ಸನ್ನು ಕೆಡಿಸುವುದಕ್ಕೆ ಯತ್ನಿಸುವರು. ಇಂತಹ ಸಂದರ್ಭಗಳಲ್ಲಿ ಯೋಗಪರಿಪಾಕವಿಲ್ಲದ ಕುತ್ಸಿತಯೋಗಿಗಳು, ಪೂರ್ವವಾಸನೆಯಿಂದ ಆಕರ್ಷಿಸಲ್ಪಟ್ಟು, ತಮ್ಮ ಯೋಗದಲ್ಲಿ ಗಮನವಿಲ್ಲದೆ, ತಿರುಗಿ ಕರ್ಮತಂತ್ರವನ್ನೇ ಅವಲಂಬಿಸಿ ಸಂಸಾರದಲ್ಲಿ ಬೀಳುವರು. ಸಾಮಾನ್ಯವಾಗಿ ಯಾವ ಜಂತುವಾದರೂ, ಶರೀರವು ಬಿದ್ದುಹೋಗುವವರೆಗೆ, ತಾನಾಗಿಯೋ, ಅಥವಾ ಬೇರೆಯವರಿಂದ ಪ್ರೇರಿತವಾಗಿಯೋ, ಯಾವುದಾದರೂ ಕರ್ಮವನ್ನು ನಡೆಸುತ್ತಲೇ ಇರುವುದು.ಇದು ಲೋಕಸ್ವಭಾವವು.ಆದುದರಿಂದ ಶರೀರವನ್ನೆತ್ತಿದಮೇಲೆ ಯಾವನೂ ಕರ್ಮರಹಿತನಾಗಿರಲಾರನು. ಹಾಗಿದ್ದರೂ, ಕರ್ಮಗಳಿಂದುಂಟಾಗುವ ಅನರ್ಥವನ್ನು ತಿಳಿದ ವಿದ್ವಾಂಸನು, ವಿಷಯಾಭಿಲಾಷೆಯನ್ನು ನೀಗಿ, ಆತ್ಮಾನುಭವವೆಂಬ ಆನಂದದಲ್ಲಿಯೇ ಮಗ್ನನಾಗಿರುವುದರಿಂದ, ತಾನು ದೇಹದಲ್ಲಿದ್ದಾಗಲೂ, ಆ ದೇಹಸಂಬಂಧವಿಲ್ಲದವನಂತೆಯೂ, ಕಾರ್ಯಗಳನ್ನು ನಡೆಸುವಾಗಲೂ ಕರ್ಮರಹಿತನಂತೆಯೂ ಇರುವನು. ಇಂತವನು ತಾನು ನಿಂತಿದ್ದರೂ, ಕುಳಿತಿದ್ದರೂ, ಮಲಗಿದ್ದರೂ ಸಂಚರಿಸುತಿದ್ದರೂ, ಮಲಮೂತ್ರಗಳನ್ನು ಬಿಡುತಿದ್ದರೂ, ಭೋಜನ ಮಾಡುತಿದ್ದರೂ, ಹೀಗೆಯೇ ತನಗೆ ಸ್ವಭಾವಪ್ರಯುಕ್ತವಾದ ಬೇರೆ ಯಾವ ಕಾರ್ಯಗಳನ್ನು ಮಾಡುತಿದ್ದರೂ, ಅವನ ಬುದ್ಧಿಯು ಯಾವಾಗಲೂ ಆತ್ಮಧ್ಯಾನದಲ್ಲಿಯೇ ತಗುಲಿರುವುದರಿಂದ,ಆ ದೇಹವ್ಯಾಪಾರಗಳೊಂದನ್ನೂ ತಿಳಿಯಲಾರನು. ಇಂತಹ ತತ್ವಜ್ಞಾನವುಳ್ಳ ವಿದ್ವಾಂಸನು, ತನ್ನ ಶರೀರವನ್ನಾಗಲಿ, ಸುಖದುಃಖಕಾರಣಗಳಾದ ಶಬ್ದಾದಿವಿಷಯಗಳನ್ನಾಗಲಿ, ನೋಡುತಿದ್ದರೂ, ನಿದ್ರೆಯಿಂದೆಚ್ಚರಗೊಂಡವನು, ಸ್ವಪ್ನವಿಷಯಗಳನ್ನು ಹೇಗೋಹಾಗೆ, ತನ್ನ ವಿವೇಚನೆಯಿಂದ ಅವುಗಳನ್ನು ನಿಜವೆಂದು ಗ್ರಹಿಸಲಾರನು. ಸತ್ವಾದಿಗುಣಮೂಲಕಗಳಾದ ಕರ್ಮಗಳಿಗೆ ತಕ್ಕಂತೆ ನಾನಾವಿಧಗಳಾದ ದೇವಮನುಷ್ಯಾದಿಶರೀರಗಳೂ, ದೇಹಾತ್ಮಾಭಿಮಾನರೂಪ

ವಾದ ಅಜ್ಞಾನವೂ, ಜ್ಞಾನೋತ್ಪತ್ತಿಗೆ ಮೊದಲು ಆತ್ಮನಲ್ಲಿ ಸಹಜವೆಂದು ತೋರುತಿದ್ದರೂ, ಜ್ಞಾನೋದಯವಾದಮೇಲೆ ಆ ಭ್ರಾಂತಿಯು ಬಿಟ್ಟು ಹೋಗುವುದು. ಆಗ ಆತ್ಮನಲ್ಲಿ ದೇಹಕ್ಕೆ ಸಂಬಂಧಪಟ್ಟ ಆಕಾರಭೇದಗಳಾಗಲಿ, ವೃದ್ಧಿಕ್ಷಯಗಳಾಗಲಿ ತೋರಲಾರವು. ಸೂರ್ಯೋದಯವು ಪ್ರಾಣಿಗಳ ಕಣ್ಣಿಗೆ ಕತ್ತಲೆಯನ್ನು ನೀಗಿಸುವುದೇಹೊರತು, ಅದಕ್ಕೆ ಅವಕಾಶಕೊಡಲಾರದಷ್ಟೆ? ಅದರಂತೆಯೇ ನನ್ನ ವಿಷಯವಾದ ಜ್ಞಾನವು ಮನುಷ್ಯನ ಬುದ್ಧಿಯಲ್ಲಿರುವ ಮೋಹಾಂಧಕಾರವನ್ನು ನಿಶ್ಶೇಷವಾಗಿ ನೀಗಿಸುವುದು. ಈ ಮೋಹಾಂಧಕಾರವನ್ನು ನೀಗಿದ ಶುದ್ಧಾತ್ಮಸ್ವರೂಪವು ಸ್ವಯಂಪ್ರಕಾಶವುಳ್ಳುದು. ಜನ್ಮಾದಿವಿಕಾರರಹಿತವಾದುದು. ಪ್ರತ್ಯಕ್ಷಾದಿಪ್ರಮಾಣಗಳಿಂದ ನಿರ್ಣಯಿಸಲಸಾಧ್ಯವಾದುದು. ಅಪರಿಚ್ಛಿನ್ನಜ್ಞಾನಸ್ವರೂಪವಾದುದು. ಸರ್ವಾರ್ಥಗಳನ್ನೂ ಗೋಚರಿಸತಕ್ಕ ಶಕ್ತಿಯುಳ್ಳುದು. ಎಲ್ಲೆಲ್ಲಿಯೂ ಏಕಸ್ವರೂಪವಾದುದು. ದೇಹಾದಿಗಳಿಲ್ಲದುದು. ದೇವಮನುಷ್ಯಾದಿವ್ಯವಹಾರಗಳಿಲ್ಲದುದು. ಇಂತಹ ಆತ್ಮನ ಪ್ರೇರಣೆಯಿಂದಲೇ ಪ್ರಾಣಗಳೂ, ವಾಕ್ಕೂ ಕಾರ್ಯವನ್ನು ನಡೆಸಬಲ್ಲುವು. "ಜೀವಾತ್ಮನಿಗೆ ಸಂಸಾರಕಾರಣವಾದ ಮೋಹವೆಂಬುದಾವುದು?" ಎಂದು ಕೇಳುವೆಯಾ? ಜ್ಞಾನೈಕಾಕಾರವಾದ ಆತ್ಮಸ್ವರೂಪವನ್ನು ತಿಳಿಯಲಾರದೆ, ಆ ಆತ್ಮನಲ್ಲಿ ದೇವಮನುಷ್ಯಾದ್ಯಾಕಾರಗಳನ್ನಾರೋಪಿಸಿ "ನಾನು ದೇವನು, ನಾನು ಮನುಷ್ಯನು; ನಾನು ದೊಡ್ಡವನು, ಅವನು ಸಣ್ಣವನು" ಎಂಬೀ ಅಭಿಮಾನಭೇದವನ್ನಿಡುವುದೂ, ಮತ್ತು ದೇವಮನುಷ್ಯಾದ್ಯಾಕಾರಭೇದಗಳಿಂದ ಗೋಚರಿಸತಕ್ಕುದಾಗಿಯೂ, ಪಂಚಭೂತಾತ್ಮಕವಾಗಿಯೂ ಇರುವ ದೇಹವನ್ನೂ, ಆ ಶರೀರಕ್ಕೆ ಭೋಗ್ಯವೆನಿಸಿದ ಸ್ವರ್ಗಾದಿಪುರುಷಾರ್ಥಗಳನ್ನೂ ನಿತ್ಯವೆಂದು ತಿಳಿಯುವುದೂ, ಆತ್ಮಗತವಾದ ಮೋಹವೆನಿಸುವುದು. ಹೀಗೆ ದೇಹಗತವಾದ ಆಕಾರಭೇದಗಳನ್ನು ಆತ್ಮನಲ್ಲಿ ಆರೋಪಿಸುವುದೂ, ಅನಿತ್ಯವಾದ ಆ ಶರೀರವನ್ನು ನಿತ್ಯವೆಂದು ತಿಳಿಯುವುದೂ ಇವೆರಡೂ ಕೇವಲಭ್ರಾಂತಿಯೇಹೊರತು ವಾಸ್ತವವಲ್ಲ! ತತ್ವವನ್ನು ತಿಳಿಯಲಾರದಿದ್ದರೂ, ತಾವೇ ಪಂಡಿತರೆಂಬ ಅಭಿಮಾನವುಳ್ಳವರುಮಾತ್ರ ಹೀಗೆ

ಭ್ರಮಿಸುವರು. ಆದರೆ, “ಜ್ಞಾನಯೋಗವು ಪರಿಪಕ್ವವಾಗಿ, ಪರಮಾತ್ಮ ಸ್ವರೂಪವನ್ನು ಯಥಾಸ್ಥಿತವಾಗಿ ತಿಳಿದಮೇಲಲ್ಲವೇ ಶರೀರಾಭಿಮಾನವು ಬಿಟ್ಟು ಹೋಗಬೇಕು ? ಅಷ್ಟರಲ್ಲಿಯೇ ಆಧಿ, ವ್ಯಾಧಿ, ಮೊದಲಾದ ವಿಘ್ನ ಗಳಿಂದ ಯೋಗಕ್ಕೆ ಭಂಗವುಂಟಾದರೆ ಮಾಡುವುದೇನು ?” ಎಂದು ನೀನು ಶಂಕಿಸಬಹುದು. ಯೋಗವು ಪರಿಪಕ್ವವಾಗುವುದರೊಳಗಾಗಿ ದೇಹಕ್ಕೆ ರೋಗಾದ್ಯುಪದ್ರವಗಳುಂಟಾಗಿ, ಆ ಯೋಗಕ್ಕೆ ನಡುನಡುವೆ ವಿಘ್ನಗ ಳುಂಟಾಗುವುದೇನೋ ಸಹಜವೇ ! ಇಂತಹ ವಿಘ್ನಗಳಿಗೆ ನಾನಾಬಗೆಯ ಪ್ರತೀಕಾರಗಳೂ ಏರ್ಪಟ್ಟಿರುವುವು. ಧಾರಣಾಯೋಗದಿಂದ ಶೀತೋಷ್ಣ ಗಳನ್ನೂ, ವಾಯುವನ್ನು ತಡೆಯತಕ್ಕ ಆಸನಯೋಗದಿಂದ ವಾತಾದಿ ರೋಗಗಳನ್ನೂ, ತಪಸ್ಸು, ಮಂತ್ರಶಕ್ತಿ, ಮುಂತಾದುವುಗಳಿಂದ ದುಷ್ಟ ಗ್ರಹಬಾಧೆ,ಸರ್ಪಬಾಧೆ ಮುಂತಾದುವುಗಳನ್ನೂ, ಮದೇಕಧ್ಯಾನದಿಂದಲೂ, ನನ್ನ ನಾಮಸಂಕೀರ್ತನಾದಿಗಳಿಂದಲೂ ಕಾಮಕ್ರೋಧಾದಿಕಲ್ಮಷಗ ಳನ್ನೂ, ಸದಾಚಾರ್ಯಸೇವಾನುವರ್ತನಗಳಿಂದ ಡಂಭಾದಿಗಳನ್ನೂ, ನಿಗ್ರ ಹಿಸಬಹುದು. ಯೋಗನಿಷ್ಠನಾದವನು ಹೀಗೆ ಬೇರೆಬೇರೆ ಸದುಪಾ ಯಗಳಿಂದ ತನ್ನ ಯೋಗಸಿದ್ಧಿಗೆ ಸಂಭವಿಸುವ ವಿಘ್ನಗಳನ್ನು ತಡೆದು, ಆ ಯೋಗವು ಪರಿಪೂರ್ಣವಾಗುವವರೆಗೆ ದೃಢಚಿತ್ತನಾಗಿರಬೇಕು. ಇದನ್ನು ಬಿಟ್ಟು ಕೆಲವರು, ಮೊದಲು ತಮ್ಮ ದೇಹಪೋಷಣೆಯನ್ನೇ ಮುಖ್ಯೋ ದ್ದೇಶವಾಗಿಟ್ಟು,ಮುಪ್ಪಿನಿಂದ ಜೀರ್ಣವಾದ ಶರೀರವನ್ನೂ ಕೂಡ,ಮಂತ್ರೌ ಷಧಗಳೇ ಮೊದಲಾದ ವಿವಿಧೋಪಾಯಗಳಿಂದ ದೃಢಪಡಿಸಿಕೊಂಡು, ಆಮೇಲೆ ಪರಕಾಯಪ್ರವೇಶಾದಿಗಳಿಗಾಗಿಯೇ ಯೋಗವನ್ನಾಚರಿಸುವರು. ವಿದ್ವಾಂಸರಾದರೋ ಈ ವಿಧವಾದ ಯೋಗವನ್ನಾಚರಿಸಲಾರರು. ಏಕೆಂ ದರೆ,ಆದೇಹದಾರ್ಢ್ಯಕ್ಕಾಗಿ ಶ್ರಮಪಡುವುದು ಕೇವಲನಿಷ್ಪ್ರಯೋಜನವು. ಶರೀರವೆಂಬುದು ಎಂದಿದ್ದರೂ ಬಿದ್ದು ಹೋಗತಕ್ಕುದೆ ! ಆದುದರಿಂದ ಈ ಮಂತ್ರೌಷಧಾದಿಗಳು ಕೆಲವು ಕಾಲದವರೆಗೆ ಇಂದ್ರಿಯಗಳನ್ನು ಬಲ ಪಡಿಸಬಹುದಾದರೂ, ಮನುಷ್ಯನ ಆಯುಸ್ಸನ್ನು ಹೆಚ್ಚಿಸಲಾರದು. ಹೀಗಿರುವಾಗ ತಮಗಿರುವ ಅಲ್ಪಾಯುಸ್ಸಿನಲ್ಲಿ ಆ ಯೋಗಾ

ಭ್ಯಾಸವನ್ನು ಬಿಟ್ಟು, ದೇಹದಾರ್ಢ್ಯಕ್ಕಾಗಿ ಕಾಲವನ್ನು ವ್ಯರ್ಥಮಾಡು ವುದು ಯುಕ್ತವಲ್ಲ! ಆಕಾಲವನ್ನೂ ಕೂಡ, ಯೋಗಕ್ಕಾಗಿಯೇ ಉಪಯೋ ಗಿಸಬೇಕು. ಸ್ಥಿರವಾದ ಗಿಡದಲ್ಲಿ, ಆಗಾಗ ಹಣ್ಣುಗಳು ಬಿಟ್ಟು ಉದಿರಿ ಹೋಗುವಂತೆ, ಆತ್ಮವೊಂದೇ ಸ್ಥಿರವಾಗಿ ನಿಂತು, ದೇಹವು ಆಗಾಗ ಬಿದ್ದು ಹೋಗತಕ್ಕುದು. ಇದಲ್ಲದೆ ಸಮಾಧಿಗೆ ಅಂಗವಾಗಿಯೇ ಪ್ರಾಣಾಯಾ ಮವೇ ಮೊದಲಾದುವುಗಳನ್ನು ನಡೆಸುತಿದ್ದರೂ, ಅದರಿಂದ ಜರಾರೋ ಗಾದಿಗಳು ಬಿಟ್ಟುಹೋಗಿ ದೇಹವು ದೃಢವಾಗುವುದುಂಟು. ಹಾಗಿದ್ದರೂ ಬುದ್ಧಿಶಾಲಿಯಾದವನು ಆ ದೇಹದಾರ್ಢ್ಯವನ್ನು ನಂಬಿ ಸಮಾಧಿಯನ್ನು ಬಿ ಟ್ಟು ಕಾಲವನ್ನು ಕಳೆಯಬಾರದು. ಹೀಗೆ ದೇಹಾಭಿಮಾನವನ್ನು ಬಿಟ್ಟು, ನನ್ನ ನ್ನೇ ನಂಬಿ ಯೋಗಚರ್ಯೆಯನ್ನು ನಡೆಸತಕ್ಕವನು, ನಡುನಡುವೆ ಲಭಿಸತಕ್ಕ ಅ ಣಿಮಾದಿಸಿದ್ಧಿಗಳಿಗೂ ಆಸೆಪಡದೆ, ಆ ಸಮಾಧಿಯನ್ನು ಪೂರ್ಣವಾಗುವವರೆಗೆ ಸಾಧಿಸಬೇಕು. ಅಂತವನು ಹೊರಗಿನ ವ್ಯಾಪಾರವನ್ನೇ ತಿಳಿಯದೆ, ಆತ್ಮಾನು ಭವವೆಂಬ ಆನಂದವೊಂದರಲ್ಲಿಯೇ ಮಗ್ನನಾಗಿರುವುದರಿಂದ, ಎಂತಹ ವಿಘ್ನಗಳೂ ಅವನಿಗೆ ಭಂಗವನ್ನುಂಟುಮಾಡಲಾರವು." ಎಂದನು ಇದು ಇಪ್ಪತ್ತೆಂಟನೆಯ ಅಧ್ಯಾಯವು

---

{ಶ್ರೀಕೃಷ್ಣನು ಉದ್ಧವನಿಗೆ ತಿರುಗಿ ಭಕ್ತಿಯೋಗ ವನ್ನು ಸಂಗ್ರಹಿಸಿ ಹೇಳಿದುದು}

ಉದ್ಧವನು ಪ್ರಶ್ನೆಮಾಡುವನು "ಓ ಅಚ್ಯುತಾ! ಕೃಷ್ಣಾ! ಇಂದ್ರಿಯಜಯವಿಲ್ಲದವನಿಗೆ, ನೀನು ಇದುವರೆಗೆ ಹೇಳಿದ ಯೋಗಚರ್ಯೆಯು ಬಹಳ ದುಷ್ಕರವೆಂದು ನನಗೆ ತೋರುವುದು. ಇದನ್ನು ಬಿಟ್ಟು ಬೇರೆ ಸುಲ ಭೋಪಾಯದಿಂದ, ಅನಾಯಾಸವಾಗಿ ಮೋಕ್ಷಸಿದ್ಧಿಯನ್ನು ಹೊಂದುವು ದಕ್ಕೆ ಉಪಾಯವೇನಾದರೂ ಇದ್ದರೆ, ಅದನ್ನು ನನಗೆ ತಿಳಿಸಬೇಕು. ಓ ಪುಂಡರೀಕಾಕ್ಷಾ! ಯೋಗಾಭ್ಯಾಸದಲ್ಲಿ ಪ್ರವರ್ತಿಸತಕ್ಕವರು, ಮನಸ್ಸನ್ನು ವಶೀಕರಿಸುವುದಕ್ಕಾಗಿ ಉಪವಾಸಾದಿವ್ರತಗಳನ್ನು ಹಿಡಿದು, ದೇಹವನ್ನು ದಂಡಿಸಬೇಕಾಗುವುದು. ದೇಹದಂಡನೆಯಿಂದ ಮನಸ್ಸು ದುರ್ಬಲವಾಗಿ,

ಮತ್ತಷ್ಟು ಚಾಂಚಲ್ಯವನ್ನು ಹೊಂದುವುದು. ಹೀಗೆ ಮನಸ್ಸಮಾಧಾನ ವಿಲ್ಲದವರು ಯೋಗಭ್ರಷ್ಟರಾಗುವರು. ಆದುದರಿಂದ ಯೋಗಚರ್ಯೆಯಲ್ಲಿ ಸಿದ್ಧಿಯನ್ನು ಹೊಂದುವುದು ಸುಲಭಸಾಧ್ಯವಲ್ಲ. ಇದನ್ನು ಪರ್ಯಾಲೋಚಿಸಿಯೇ ವಿವೇಕಿಗಳಾದ ಕೆಲವರು, ಆ ಯೋಗಮಾರ್ಗಕ್ಕೆ ಪ್ರಯತ್ನಿಸದೆ, ನಿರ್ಭಯಾನಂದವನ್ನು ಕರೆಯತಕ್ಕ ನಿನ್ನ ಪಾದಾರವಿಂದಗಳನ್ನೇ ಆಶ್ರಯಿಸಿ, ಸುಲಭವಾಗಿ ತಮ್ಮ ಇಷ್ಟಸಿದ್ಧಿಯನ್ನು ಪಡೆಯುವರು. ಇದಲ್ಲದೆ ಕರ್ಮಗಳನ್ನಾಚರಿಸುವವರೂ, ಯೋಗಾಭ್ಯಾಸವನ್ನು ಹಿಡಿದವರೂ, ತಾವೇ ದೊಡ್ಡ ಕರ್ಮನಿಷ್ಠರೆಂದೂ, ಯೋಗನಿಷ್ಠರೆಂದೂ, ಗರ್ವಪಟ್ಟು, ನಿನ್ನ ಮಾಯೆಯಿಂದ ವಂಚಿತರಾಗುವುದೂ ಉಂಟು. ಇದರಿಂದ ಅವರ ಪ್ರಯತ್ನಗಳೆಲ್ಲವೂ ನಡುವೆ ವಿಘಾತವನ್ನು ಹೊಂದುವುವು. ನಿನ್ನನ್ನೇ ಆಶ್ರಯಿಸಿ, ನಿನ್ನಲ್ಲಿ ಭಕ್ತಿಯೋಗವನ್ನು ಹಿಡಿದವರಿಗೆ, ಅಂತಹ ಗರ್ವವೂ ಹುಟ್ಟಲಾರದು. ನಿನ್ನನ್ನಾಶ್ರಯಿಸಿದವರನ್ನು ನೀನೇ ಆ ಮಾಯೆಯಿಂದ ದಾಟಿಸುವೆ! ಭಕ್ತಪರಾಧೀನನಾದ ನಿನ್ನಲ್ಲಿ ಇದೊಂದಾಶ್ಚರ್ಯವಲ್ಲ! ಏಕೆಂದರೆ, ಲೋಕೇಶ್ವರರೆನಿಸಿದ ಬ್ರಹ್ಮಾದಿದೇವತೆಗಳೆಲ್ಲರೂ, ತಮ್ಮ ಕಿರೀಟಾಗ್ರದಿಂದ ನಿನ್ನ ಪಾದಾರವಿಂದವನ್ನು ಸೋಕಿಸಿ ನಮಸ್ಕರಿಸುವರು. ಇಂತಹ ಮಹಾಮಹಿಮೆಯುಳ್ಳವನಾಗಿದ್ದರೂ, ನೀನು ಹಿಂದೆ ಬೃಂದಾವನದಲ್ಲಿ ಮೃಗಗಳೊಡನೆ ವಿಹರಿಸಿದುದೂ, ರಾಮಾವತಾರದಲ್ಲಿ ಕಪಿಗಳೊಡನೆ ಆಟವಾಡುತಿದ್ದುದೂ, ನಿನ್ನ ಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿಗಳನ್ನು ಲೋಕಕ್ಕೆ ಪ್ರಕಾಶಗೊಳಿಸಿರುವುದು. ಹೀಗೆ ಸರ್ವಸುಲಭನಾಗಿಯೂ, ಸರ್ವೇಶ್ವರನಾಗಿಯೂ, ಸರ್ವಾರ್ಥಪ್ರದನಾಗಿಯೂ ಇರುವ ನಿನ್ನನ್ನು ಕೃತಜ್ಞತಾಬುದ್ಧಿಯುಳ್ಳ ಯಾವನು ತಾನೇ ಮರೆಯುವನು? ನಿನ್ನಿಂದಾಗುವ ಉಪಕಾರವನ್ನು ತಿಳಿದವನು ಯಾವನು ತಾನೇ ನಿನ್ನನ್ನು ಬಿಟ್ಟು ಇತರ ದೈವವನ್ನು ಭಜಿಸುವನು? ಪರಮಾತ್ಮಸ್ಮರಣವನ್ನು ತಪ್ಪಿಸತಕ್ಕ, ಐಶ್ವರ್ಯಕ್ಕೂ ಅವನು ಅಪೇಕ್ಷಿಸಲಾರನು. ಅಥವಾ! ನಿನ್ನ ಪಾದಾಶ್ರಿತರಿಗೆ ಅಪೇಕ್ಷೆಯುಂಟಾದಪಕ್ಷದಲ್ಲಿ ಯಾವ ಕೋರಿಕೆಯು ತಾನೇ ದುರ್ಲಭವು? ! ಆದರೆ ನಿನ್ನ ಸೇವಾನಿರತರು, ಬೇರೆ ಯಾವ ಪುರುಷಾರ್ಥವನ್ನೂ ಮನಸ್ಸಿನಿಂದಲೂ

ಕೋರಲಾರರು. “ಆದರೆ ಅವರಿಗೆ ನಿನ್ನಿಂದಾಗುವ ಬೇರೆ ಉಪಕಾರ ವೇನು” ಎಂದು ಕೇಳುವೆಯಾ ? ಓ ಈಶಾ ! ಹೊರಗೆ ಆಚಾರ್ಯರೂಪದಿಂ ದಲೂ, ಒಳಗೆ ಅಂತರಾತ್ಮಸ್ವರೂಪದಿಂದಲೂ ಇದ್ದು, ನೀನೇ ಸಮಸ್ತ ಚೇತನರಿಗೂ ಅಶುಭಗಳೆಲ್ಲವನ್ನೂ ನೀಗಿಸಿ,ನಿನ್ನ ಯಾಥಾತ್ಮ್ಯವನ್ನು ಪ್ರಕಾ ಶಗೊಳಿಸತಕ್ಕವನು. ಇಂತಹ ನಿನ್ನ ಉಪಕಾರವನ್ನು ಬಲ್ಲವರಾದ ಬ್ರಹ್ಮ ಜ್ಞಾನಿಗಳು, ಆ ನಿನ್ನ ಸ್ಮರಣಕಾಲಪಲ್ಲೆಲ್ಲಾ ಉತ್ಕಟಾನಂದಪರವಶ ರಾಗುವರು. ನಿನ್ನಿಂದ ಪಡೆದ ಉಪಕಾರಕ್ಕೆ, ಅವರು ಬ್ರಹ್ಮಾಯುಸ್ಸಿನ ಕಾಲದಲ್ಲಿಯೂ ಪ್ರತ್ಯುಪಕಾರಮಾಡಿ ತೀರಿಸಲಾರರು” ಎಂದನು. ಓ ಪರೀಕ್ಷಿದ್ರಾಜಾ ! ಲೋಕವೆಲ್ಲವನ್ನೂ ತನ್ನ ಲೀಲೆಯಿಂದ ಆಡಿಸತಕ್ಕವ ನಾಗಿಯೂ, ತ್ರಿಮೂರ್ತಿರೂಪದಿಂದ ಸೃಷ್ಟಿಸ್ಥಿತಿಸಂಹಾರಗಳನ್ನು ನಡೆಸ ತಕ್ಕವನಾಗಿಯೂ, ಬ್ರಹ್ಮಾದಿಗಳಿಗೂ ಈಶ್ವರನಾಗಿಯೂ ಇರುವ ಕೃಷ್ಣನು, ಉದ್ಧವನು ಭಕ್ತಿಪೂರ್ವಕವಾಗಿ ಪ್ರಶ್ನೆಮಾಡಿದುದನ್ನು ಕೇಳಿ ಸಂತೋಷಗೊಂಡು,ಪ್ರೇಮಪೂರ್ವಕವಾದ ಮಂದಹಾಸದೊಡನೆ ಹೀಗೆಂದು ಹೇಳುವನು. “ಭಲೆ ! ಶಹಬಾಸು ! ಉದ್ಧವಾ ! ನೀನು ಸಾರವತ್ತಾದ ಪ್ರಶ್ನೆ ಯನ್ನು ಕೇಳಿದೆ! ಯಾವ ಮಾರ್ಗವನ್ನು ಶ್ರದ್ಧೆಯಿಂದನುಸರಿಸುವ ಮನು ಷ್ಯನು, ದುರ್ಜಯವಾದ ಮೃತ್ಯುವನ್ನೂ ಸುಲಭವಾಗಿ ಜಯಿಸಬಹುದೋ, ಅಂತಹ ಭಾಗವತಧರ್ಮಗಳೆಲ್ಲವನ್ನೂ ನಿನಗೆ ತಿಳಿಸುವೆನು ಕೇಳು ! ಅವುಗಳ ಕ್ರಮವೇನೆಂದರೆ, ನನ್ನಲ್ಲಿ ಭಕ್ತಿಯನ್ನು ಸಾಧಿಸಬೇಕೆಂಬ ಉದ್ದೇಶವುಳ್ಳ ವನು, ತಾನು ನಡೆಸತಕ್ಕ ವರ್ಣಾಶ್ರಮಧರ್ಮಗಳೆಲ್ಲವನ್ನೂ, ನನ್ನ ಆರಾ ಧನರೂಪವೆಂದೇ ಮನಸ್ಸಿನಲ್ಲಿ ನೆನೆಸುತ್ತ, ತನ್ನ ಸರ್ವವಿಧಮನೋವ್ಯಾ ಪಾರಗಳನ್ನೂ ನನ್ನಲ್ಲಿಯೇ ಅರ್ಪಿಸಿಡಬೇಕು. ನನ್ನ ಭಕ್ತರು ವಿಶೇಷವಾಗಿ ನೆಲೆಸಿರತಕ್ಕ ಪುಣ್ಯಸ್ಥಳಗಳನ್ನೇ ಆಶ್ರಯಿಸುತ್ತ, ದೇವಾಸುರಮನುಷ್ಯರಲ್ಲಿ ನನ್ನ ಭಕ್ತರಾದವರ ನಡತೆಗಳನ್ನೇ ಅನುಸರಿಸುತ್ತಿರಬೇಕು. ಶಕ್ತಿಯಿದ್ದರೆ ತಾನೊಬ್ಬನೇ ಆಗಲಿ, ಇಲ್ಲವೇ ಇತರರೊಡನೆ ಸೇರಿಯಾಗಲಿ, ನನ್ನ ಮಹೋತ್ಸವಗಳನ್ನೂ, ಜಾತ್ರೆಗಳನ್ನೂ ನೃತ್ಯ ಗೀತ ವಾದ್ಯಾದಿ ವೈಭವಗ ಳೊಡನೆಯೂ, ಇತರ ರಾಜೋಪಚಾರಗಳೊಡನೆಯೂ ನಡೆಸಬೇಕು !

ಮತ್ತು ನನ್ನ ಭಕ್ತನು ಶುದ್ಧಮನಸ್ಸುಳ್ಳವನಾಗಿ, ತನ್ನ ಮತ್ತು ಇತರ ಸಮಸ್ತಭೂತಗಳ ಒಳಗೂ, ಹೊರಗೂ ಆಕಾಶದಂತೆ ನಾನು ವ್ಯಾಪಿಸಿರುವೆ ನೆಂಬುದನ್ನು ವಿಮರ್ಶಿಸಿ ತಿಳಿದಿರಬೇಕು. ಹೀಗೆ ನಾನು ಸರ್ವಾಂತರ್ಯಾಮಿ ಯಾದುದರಿಂದ, ಸಮಸ್ತಭೂತಗಳನ್ನೂ ನನ್ನಂತೆಯೇ ಭಾವಿಸಿ, ಎಲ್ಲವನ್ನೂ ಸಮಬುದ್ಧಿಯಿಂದ ಗೌರವಿಸುತ್ತಿರಬೇಕು. ಬ್ರಾಹ್ಮಣನಾಗಿದ್ದರೂ, ಅಥವಾ ಚಂಡಾಲನಾಗಿದ್ದರೂ, ಬ್ರಾಹ್ಮಣಪ್ರಿಯನಾಗಿದ್ದರೂ, ಬ್ರಹ್ಮ ಸ್ವಾಪಹಾರಿಯಾಗಿದ್ದರೂ, ಕ್ರೂರನಾಗಿದ್ದರೂ, ಸಾಧುವಾಗಿದ್ದರೂ, ಎಲ್ಲರನ್ನೂ ಸಮವಾಗಿ ಭಾವಿಸುತ್ತ, ತೇಜೋನಿಧಿಯಾದ ಸೂರ್ಯನಲ್ಲಿಯೂ, ಒಂದು ಸಣ್ಣ ಕಿಡಿಯಲ್ಲಿಯೂ ತಾರತಮ್ಯಬುದ್ಧಿಯಿಲ್ಲದವನು ಯಾವನೋ ಅಂತವನೇ ಮಹಾಜ್ಞಾನಿಯಾದ ಪಂಡಿತನೆಂದು ನನ್ನ ಮತವು. ಸಮಸ್ತ ಭೂತಗಳನ್ನೂ ನನ್ನಂತೆ ಭಾವಿಸತಕ್ಕವನಿಗೆ ಬೇರೆಯವರಲ್ಲಿ ದ್ವೇಷ, ಅಸೂಯೆ, ತಿರಸ್ಕಾರ, ದಂಭ, ಮುಂತಾದ ದುರ್ಗುಣಗಳೊಂದೂ ತಲೆ ದೋರಲಾರವು. ಮನಸ್ಸಿನಲ್ಲಿ ತಾನೇ ದೊಡ್ಡವನೆಂಬ ಅಹಂಕಾರವನ್ನೂ, ಬಂಧುಗಳು ತನ್ನನ್ನು ಹಾಸ್ಯಮಾಡಿನಗಬಹುದೆಂಬ ಲಜ್ಜೆಯನ್ನೂ ಎಣಿಸದೆ, ಕತ್ತೆ, ನಾಯಿ, ಚಂಡಾಲರು, ಪಶುಗಳು ಮುಂತಾದ ನೀಚಪ್ರಾಣಿಗ ಳನ್ನೂ ನನ್ನ ಶರೀರವೆಂದೇ ಭಾವಿಸಿ ಅವುಗಳಿಗೆ ನಮಸ್ಕರಿಸಬೇಕು ! ಹೀಗೆ ಸಮಸ್ತಭೂತಗಳೂ ನಾನೇ ಎಂಬ ದೃಢಜ್ಞಾನವು ಹುಟ್ಟುವವ ರೆಗೂ, ಕಂಡಕಂಡ ಭೂತಗಳಿಗೆಲ್ಲಾ ಮನೋವಾಕ್ಕಾಯಗಳೆಂಬ ತ್ರಿಕರಣ ಗಳಿಂದಲೂ ನನ್ನನ್ನೇ ಉದ್ದೇಶಿಸಿ ನಮಸ್ಕರಿಸಬೇಕು. ಹೀಗೆ ಎಡೆಬಿಡದೆ ಉಪಾಸನಮಾಡತಕ್ಕವನಿಗೆ, ಸಮಸ್ತವೂ ಬ್ರಹ್ಮಾತ್ಮಕವೆಂಬ ದೃಢಾಧ್ಯವ ಸಾಯವು ಹುಟ್ಟುವುದು. ಈ ಅಧ್ಯವಸಾಯವು ಯಾವಾಗ ಹುಟ್ಟು ವುದೋ, ಆಗ ಪುರುಷನಿಗೆ ದೇಹಾತ್ಮಭ್ರಮೆ, ಸ್ವತಂತ್ರಾತ್ಮಭ್ರಮೆ, ಮುಂತಾದ ಭಾವನೆಗಳೆಲ್ಲವೂ ಬಿಟ್ಟುಹೋಗುವುವು. ಮನೋವಾಕ್ಕಾಯಗ ಳೆಂಬ ತ್ರಿಕರಣಗಳಿಂದಲೂ, ಸಮಸ್ತಭೂತಗಳೂ ನಾನೇ ಎಂಬ ಭಾವನೆ ಯನ್ನಿಟ್ಟು ಉಪಾಸಿಸುವುದೇ ಪುರುಷಾರ್ಥಸಾಧನೆಗೆ ಅತ್ಯುತ್ತಮವಾದ ಉಪಾಯವೆಂದು ನನ್ನ ಮತವು. ಉದ್ಧವಾ ! ಹೀಗೆ ಸಮಸ್ತವನ್ನೂ

ಬ್ರಹ್ಮಾತ್ಮಕವೆಂದು ತಿಳಿದು ಉಪಾಸಿಸತಕ್ಕ ಈ ಧರ್ಮವನ್ನು ಉಕ್ರಮಿಸಿದ ಮೇಲೆ, ಇದಕ್ಕೆ ಯಾವವಿಧವಾದ ವಿಘ್ನಗಳೂ ಭಂಗವನ್ನುಂಟುಮಾಡ ಲಾರವು. ಈ ಧರ್ಮವು ಯಾವ ವಿಧದಿಂದಲೂ ನಿಷ್ಫಲವಾಗಿ ಹೋಗ ಲಾರದು. ಏಕೆಂದರೆ, ಈ ಧರ್ಮವು ಯಾವಫಲವನ್ನೂ ಉದ್ದೇಶಿಸದೆ ನಡೆಸ ತಕ್ಕುದಾದುದರಿಂದ, ಗುಣಸಂಬಂಧವಿಲ್ಲದುದು. ರಜಸ್ಸು ಮೊದಲಾದ ಗುಣ ಗಳೇ ಮನಸ್ಸನ್ನು ಕಲಗಿಸತಕ್ಕವುಗಳಾದುದರಿಂದ, ಆ ಗುಣಗಳ ಸಂಬಂಧ ವಿಲ್ಲದ ಧರ್ಮಕ್ಕೆ ಎಂದಿಗೂ ಲೋಪವು ಬಾರದು. ಇದಲ್ಲದೆ ಲೋಕದಲ್ಲಿ ನಿಷ್ಪ್ರಯೋಜನಗಳೆಂದು ತೋರಿಬಂದ ವ್ಯಾಪಾರಗಳನ್ನೂ ಕೂಡ, ಫಲಾ ಭಿಸಂಧಿಯಿಲ್ಲದೆ ನನ್ನನ್ನೇ ಉದ್ದೇಶಿಸಿ ನಡೆಸಿದಪಕ್ಷದಲ್ಲಿ, ಅವೂ ಫಲಕಾರಿ ಗಳೇ ಆಗುವುವು. ಹೇಗೆಂದರೆ, ಕಂಸನು ನನ್ನ ವಿಷಯದಾದ ಭಯದಿಂದಲೂ, ಗೋಪಸ್ತ್ರೀಯರು ಮೋಹದಿಂದಲೂ, ಶಿಶುಪಾಲನು ದ್ವೇಷದಿಂದಲೂ ಉತ್ತಮಫಲವನ್ನು ಹೊಂದಿದರಲ್ಲವೆ? ಮುಖ್ಯವಾಗಿ ಅನಿತ್ಯವೆನಿಸಿಕೊಂಡ ಈ ಮನುಷ್ಯಶರೀರದಿಂದ, ನಿತ್ಯನೂ, ನಿರ್ವಿಕಾರನೂ ಆದ ನನ್ನನ್ನು ಪಡೆಯುವುದಕ್ಕೆ ತಕ್ಕ ಸಾಧನಗಳನ್ನು ಸಮರ್ಥಿಸುವುದೇ ಬುದ್ಧಿವಂತರ ಬುದ್ಧಿಗೂ, ವಿವೇಕಿಗಳಲ್ಲಿರುವ ಯುಕ್ತಾಯುಕ್ತವಿವೇಚನೆಗೂ ಫಲವೆಂದು ತಿಳಿ! ಉದ್ಧವಾ! ವೇದಾಂತಾರ್ಥಗಳ ಸಾರವೆಲ್ಲವೂ ಇಷ್ಟೇ! ದೇವತೆ ಗಳಿಗೂ ದುರ್ಲಭವಾದ ಈ ಜ್ಞಾನಸಾರವನ್ನು ನಿನಗೆ ಪೂರ್ಣವಾಗಿ ವಿಸ್ತ ರಿಸಿಯೂ, ಸಂಗ್ರಹವಾಗಿ ಕ್ರೋಡೀಕರಿಸಿಯೂ ಹೇಳಿರುವೆನು. ಇದಲ್ಲದೆ ನಿನಗೆ ಇದುವರೆಗೆ ನಾನು ಮಾಡಿದ ಉಪದೇಶಗಳಿಂದ, ಪ್ರಕೃತಿ ಪುರುಷೇ ಶ್ವರರೆಂಬ ತತ್ವತ್ರಯವಿವೇಚನಾತ್ಮಕವಾಗಿಯೂ, ಈಶ್ವರೋಪಾಸ ನಾತ್ಮಕವಾಗಿಯೂ ಇರುವ ಜ್ಞಾನಪ್ರಕಾರವನ್ನೂ, ಸ್ಪಷ್ಟವಾದ ಯುಕ್ತಿ ಗಳಿಂದ ಚೆನ್ನಾಗಿ ಉಪಪಾದಿಸಿರುವೆನು. ಈ ಜ್ಞಾನವನ್ನು ಪಡೆದ ಮನು ಷ್ಯನು, ಸಮಸ್ತಸಂಶಯಗಳನ್ನೂ ನೀಗಿ, ಮುಕ್ತಿಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ! ನೀನು ಕೇಳಿದ ಆಯಾಪ್ರಶ್ನೆಗಳಿಗೆ ನಾನು ವಿವರವಾಗಿ ತಿಳಿಸಿದ ಉಪಪಾದನೆಗಳೆಲ್ಲವನ್ನೂ ಯಾವನು ಮನಸ್ಸಿನಲ್ಲಿ ಚೆನ್ನಾಗಿ ಧಾರಣಮಾಡುವನೋ, ಅವನು ಸನಾತನವಾಗಿಯೂ, ವೇದಾಂತೈಕವೇದ್ಯ

ವಾಗಿಯೂ ಇರುವ ಪರಬ್ರಹ್ಮದ ಸಾಯುಜ್ಯವನ್ನು ಹೊಂದುವನು. ಮತ್ತು ಈ ತತ್ವವನ್ನು ಯಾವನು ಅನುಕೂಲರಾದವರಿಗೆ ಯಥಾಕ್ರಮ ವಾಗಿ ಉಪದೇಶಿಸುವನೋ,ಅವನಿಗೆ ನಾನು ನನ್ನನ್ನೇ ಒಪ್ಪಿಸಿಕೊಡುವೆನು. ಆತ್ಮವನ್ನು ಪವಿತ್ರೀಕರಿಸತಕ್ಕ ಪರಮಪವಿತ್ರವಾದ ಈ ತತ್ವವನ್ನು ಅನು ಸಂಧಾನಮಾಡತಕ್ಕವನು, ದಿನದಿನಕ್ಕೆ ಪ್ರಕಾಶಹೊಂದತಕ್ಕ ಜ್ಞಾನದೀಪ ದಿಂದ, ನನ್ನನ್ನು ಸಾಕ್ಷಾತ್ಕರಿಸುತ್ತ, ಮೋಕ್ಷ ಪ್ರತಿಬಂಧಕಗಳಾದ ಎಲ್ಲಾ ದೋಷಗಳಿಂದಲೂ ಬಿಡಲ್ಪಡುವನು. ಈ ತತ್ವವನ್ನು ಪ್ರತಿದಿನವೂ ಶ್ರದ್ಧೆ ಯಿಂದ ಶ್ರವಣಮಾಡತಕ್ಕವನು ನನ್ನಲ್ಲಿ ಭಕ್ತಿಪರಿಪಾಕವನ್ನು ಹೊಂದಿ ಕರ್ಮಗಳಿಂದ ಮುಕ್ತನಾಗುವನು. ಓ ಮಿತ್ರಾ! ಉದ್ಧವಾ! ಇದುವರೆಗೆ ನಾನು ಹೇಳಿದ ವಿಷಯಗಳಿಂದ ನಿನಗೆ ಬ್ರಹ್ಮಸ್ವರೂಪವೂ, ಆ ಬ್ರಹ್ಮ ಪ್ರಾಪ್ತಿಗೆ ಸಾಧನಗಳೂ ಚೆನ್ನಾಗಿ ತಿಳಿಯಿತಲ್ಲವೆ? ದೇಹಾತ್ಮ ಭ್ರಮಾದಿ ರೂಪವಾದ ಮೋಹಗಳೂ, ತಾಪತ್ರಯದಿಂದಲೂ, ಅಜ್ಞಾನದಿಂದಲೂ ನಿನ್ನ ಮನಸ್ಸಿನಲ್ಲಿ ಹುಟ್ಟಿದ ಶೋಕವೂ ಸಂಪೂರ್ಣವಾಗಿ ನೀಗಿದುವ ಲ್ಲವೆ? ನೀನು ಇತರರಿಗೆ ಈ ಜ್ಞಾನೋಪದೇಶವನ್ನು ಮಾಡುವಾಗ ಬಹಳ ಎಚ್ಚರಿಕೆಯಿಂದಿರಬೇಕು. ದಾಂಭಿಕರಿಗೂ, ನಾಸ್ತಿಕರಿಗೂ, ಮೂರ್ಖರಿಗೂ, ಶ್ರದ್ಧೆಯಿಲ್ಲದವರಿಗೂ, ಅಭಕ್ತರಿಗೂ, ಅವಿನೀತರಿಗೂ ನೀನು ಈ ಬ್ರಹ್ಮ ಜ್ಞಾನವನ್ನುಪದೇಶಿಸಬಾರದು. ಮೇಲೆ ಹೇಳಿದ ದೋಷಗಳೊಂದೂ ಇಲ್ಲ ದವರಾಗಿಯೂ, ಬ್ರಾಹ್ಮಣಪ್ರಿಯರಾಗಿಯೂ, ನನ್ನಲ್ಲಿ ನಿಜವಾದ ಪ್ರೀತಿ ಯುಳ್ಳವರಾಗಿಯೂ, ಸಾಧುಗಳಾಗಿಯೂ, ಶುದ್ಧರಾಗಿಯೂ ಇರುವವರಿಗೆ ಮಾತ್ರವೇ ಇದನ್ನುಪದೇಶಿಸಬಹುದು. ಕೊನೆಗೆ ಶೂದ್ರನಾಗಲಿ, ಸ್ತ್ರೀಯಾ ಗಲಿ, ಶ್ರದ್ಧೆಯುಳ್ಳವರಾಗಿದ್ದರೆ, ಅಂತವರಿಗೂಕೂಡ ಇದನ್ನುಪದೇಶಿಸಬಹು ದು. ತತ್ವಜ್ಞಾನವನ್ನು ಪಡೆಯಬೇಕೆಂಬ ಅಪೇಕ್ಷೆಯುಳ್ಳವರಿಗೆ, ನಾನು ಹೇಳಿದ ಈ ವಿಷಯವನ್ನು ತಿಳಿದುಕೊಂಡಮೇಲೆ, ಬೇರೆ ತಿಳಿಯಬೇಕಾದು ದೊಂದೂ ಇರುವುದಿಲ್ಲ! ಅಮೃತವನ್ನು ಕುಡಿದಮೇಲೆ, ಕುಡಿಯಬೇಕಾದ ಬೇರೆ ಪಾನದ್ರವ್ಯವಾವುದುಂಟು? ಅಪ್ಪಾ! ಉದ್ಧವಾ! ಕರ್ಮಜ್ಞಾನ ಯೋಗಗಳಿಂದಾಗಲಿ,ಕೃಷಿವಾಣಿಜ್ಯಾದಿ ವೃತ್ತಿಗಳಿಂದಾಗಲಿ, ರಾಜನೀತಿಯಲ್ಲಿ

ಹೇಳಲ್ಪಡುವ ಸಾಮಾದ್ಯುಪಾಯಗಳಿಂದಾಗಲಿ, ಹೊಂದಬಹುದಾದ ಯಾವಯಾವ ಪುರುಷಾರ್ಥಗಳುಂಟೋ, ಧರ್ಮಾರ್ಥಕಾಮಮೋಕ್ಷಗಳೆಂಬ ಆ ನಾಲ್ಕುಬಗೆಯ ಪುರುಷಾರ್ಥಗಳೂ ನಿನ್ನಂತಹ ಭಕ್ತರಿಗೆ ನಾನೇ ಆಗಿರುವೆನು. ಅನನ್ಯಶರಣರಾಗಿ ನನ್ನನ್ನೇ ನಂಬಿದ ಭಕ್ತರನ್ನು ಅನುಗ್ರಹಿಸಬೇಕೆಂಬುದೇ ನನ್ನ ಮುಖ್ಯಸಂಕಲ್ಪವು. ಆದುದರಿಂದ ಯಾವನು ತನ್ನ ರಕ್ಷಣಭಾರವೆಲ್ಲವನ್ನೂ ನನ್ನಮೇಲೆಯೇ ಹೊರಿಸಿ, ತಾನು ನಡೆಸತಕ್ಕ ವರ್ಣಾಶ್ರಮಧರ್ಮಗಳೆಲ್ಲವನ್ನೂ ನನ್ನ ಆರಾಧನರೂಪವಾಗಿಯೇ ನಡೆಸುತ್ತ, ಬೇರೆವಿಧಗಳಾದ ಕಾಮ್ಯಕರ್ಮಗಳೆಲ್ಲವನ್ನೂ ಪರಿತ್ಯಜಿಸುವನೋ, ಅಂತವನು ನನ್ನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ, ಪಾಪರಹಿತ್ಯವೇ ಮೊದಲಾದ ಸಹಜಗುಣಗಳುಳ್ಳ ಶುದ್ಧಾತ್ಮಸ್ವರೂಪದಿಂದ ನನ್ನೊಡನೆ ಸಮಾನಧರ್ಮವನ್ನು ಹೊಂದಿ, ಮುಕ್ತಿಯನ್ನು ಪಡೆಯುವನು" ಎಂದನು.

ಓ ಪರೀಕ್ಷಿದ್ರಾಜಾ! ಹೀಗೆ ಭಗವಂತನು ತನ್ನ ಉಪಾಸನಾರೂಪವಾದ ಯೋಗಮಾರ್ಗವನ್ನು ಉಪದೇಶಿಸಲು, ಉದ್ಧವನು ಅದನ್ನು ಕೇಳಿ ಆನಂದಪರವಶನಾಗಿ, ಕಣ್ಣುಗಳಲ್ಲಿ ಆನಂದಬಾಷ್ಪವನ್ನು ತುಳುಕಿಸುತ್ತ, ಗದ್ಗದಕಂಠನಾಗಿ, ಯಾವ ಮಾತನ್ನೂ ಆಡಲಾರದೆ, ಆ ಶ್ರೀಕೃಷ್ಣನ ಮುಂದೆ ಬದ್ಧಾಂಜಲಿಯಾಗಿ ಸ್ವಲ್ಪಹೊತ್ತಿನವರೆಗೆ ಸುಮ್ಮನೆ ಸ್ತಬ್ಧನಾಗಿ ನಿಂತಿದ್ದನು. ಹೀಗೆ ಪ್ರೀತಿಪರವಶವಾದ ಮನಸ್ಸನ್ನು ಆಮೇಲೆ ಮೆಲ್ಲಗೆ ಸ್ಥಿರಪಡಿಸಿಕೊಂಡು, ಆ ಕೃಷ್ಣನ ಪಾದಗಳನ್ನಪ್ಪಿ ಸಾಷ್ಟಾಂಗವಾಗಿ ನಮಸ್ಕರಿಸಿ, ಮೇಲೆದ್ದು ನಿಂತು, ಕೈಮುಗಿದು ಹೀಗೆಂದು ವಿಜ್ಞಾಪಿಸುವನು. "ಕೃಷ್ಣಾ! ಈಗ ನಿನ್ನ ಸನ್ನಿಧಾನಮಾತ್ರದಿಂದಲೇ, ನನ್ನಲ್ಲಿ ಬಹುಕಾಲದಿಂದ ನೆಲೆಗೊಂಡಿದ್ದ ಮೋಹವೆಂಬ ಮಹಾಂಧಕಾರವು ಬಿಟ್ಟುಹೋಯಿತು. ಸೂರ್ಯನ ಸಮೀಪವನ್ನು ಸೇರಿದವನಿಗೆ, ಅಂಧಕಾರಭಯವಾಗಲಿ, ಶೀತಭಯವಾಗಲಿ ಎಲ್ಲಿಯದು? ಪರಮದಯಾಳುವಾದ ನೀನು, ಭೃತ್ಯನಾದ ನನಗೆ ಮಹಾಮೋಹಾಂಧಕಾರವನ್ನು ನೀಗಿಸತಕ್ಕ ಜ್ಞಾನಪ್ರದೀಪವನ್ನು ಅನುಗ್ರಹಿಸಿದೆ! ಹೀಗೆ ನೀನು ಆಶ್ರಿತರಿಗೆ ಪರಮೋಪಕಾರಿಯೆಂಬುದನ್ನು ತಿಳಿದವನು ಯಾವನು ತಾನೇ, ನಿನ್ನ ಪಾದಮೂಲವನ್ನು ಬಿಟ್ಟು ಬೇರೊಬ್ಬ

ರನ್ನಾಶ್ರಯಿಸುವನು ? ಇದುವರೆಗೆ ನೀನೇ ನಿನ ಮಾಯೆಯಿಂದ ನನಗೆ, ವೃಷ್ಣಿಗಳು, ಅಂಧಕರು, ದಾಶಾರ್ಹರು,ಸಾತ್ವತರು ಮುಂತಾದ ಯಾದವ ಕುಲದವರಲ್ಲಿ, ನನ್ನವರೆಂಬ ಅಭಿಮಾನವನ್ನು ಹುಟ್ಟಿಸಿ, ಸಂಸಾರಾಭಿವೃದ್ಧಿ ಗಾಗಿ, ದೃಢವಾದ ಸ್ನೇಹಪಾಶದಿಂದ ನನ್ನನ್ನು ಬಂಧಿಸಿದ್ದರೂ, ಈಗ ಜ್ಞಾ ನೋಪದೇಶವೆಂಬ ಕತ್ತಿಯಿಂದ ಅದನ್ನು ನೀನೇ ಛೇದಿಸಿದೆ.ಓ ಯೋಗೀಶ್ವರಾ! ನಿನಗೆ ವಂದನವು ? ಶರಣಾಗತನಾದ ನನಗೆ ಎಂದೆಂದಿಗೂ ನಿನ್ನ ಪಾದಾರ ವಿಂದದಲ್ಲಿ ಅವಿಚ್ಛಿನ್ನವಾದ ಭಕ್ತಿಯು ನೆಲೆಗೊಂಡಿರುವಂತೆ ಅನುಗ್ರಹಿಸಿ ಕಾಪಾಡಬೇಕು" ಎಂದನು.

ಆಗ ಕೃಷ್ಣನು ಉದ್ಧವನನ್ನು ಕುರಿತು "ಉದ್ಧವಾ ! ಇನ್ನು ನೀನು ನನ್ನ ಆಜ್ಞಾನುಸಾರವಾಗಿ, ನಾರಾಯಣಾಶ್ರಮವೆಂಬ ಹೆಸರಿನಿಂದ ನನಗೆ ಸ್ಥಾನವಾದ ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ನನ್ನ ಪಾದತೀರ್ಥವೆನಿಸಿದ ಗಂಗೆಯಲ್ಲಿ ಸ್ನಾನಾಚಮನಗಳನ್ನು ಮಾಡಿ ಪರಿಶುದ್ಧನಾಗು ! ಆ ಗಂಗಾ ದರ್ಶನದಿಂದ ನಿನ್ನ ಕಲ್ಮಷಗಳೆಲ್ಲವನ್ನೂ ನೀಗಿ, ನಾರುಮಡಿಯನ್ನುಟ್ಟು, ದೇಹಸುಖದಲ್ಲಿ ಆಸೆಯನ್ನು ತೊರೆದು, ಗಡ್ಡೆ ಗೆಣಸುಗಳಿಂದಲೇ ಜೀವಧಾ ರಣವನ್ನು ಮಾಡುತ್ತ, ಆತ್ಮಾನುಭವದಿಂದ ಆನಂದಿಸುತ್ತಿರು ! ಶೀತೋ ಷ್ಣಾದಿ ದ್ವಂದ್ವಗಳನ್ನು ಜಯಿಸಿ, ಡಂಭಾದಿಗಳನ್ನು ಬಿಟ್ಟು, ಕೇವಲ ಋಜು ಸ್ವಭಾವದಿಂದ ಜಿತೇಂದ್ರಿಯನಾಗಿರು. ತತ್ವತ್ರಯವಿವೇಚನಾರೂಪ ವಾದ ಜ್ಞಾನದಿಂದಲೂ, ಬ್ರಹ್ಮೋಪಾಸನಾರೂಪವಾದ ವಿಜ್ಞಾನದಿಂದ ಲೂ, ನಿಶ್ಚಲಮನಸ್ಕನಾಗಿರು! ಇದುವರೆಗೆ ನಾನು ನಿನಗೆ ಬೇರೆಬೇರೆಯಾ ಗಿ ವಿವರಿಸಿ ತಿಳಿಸಿದ ತತ್ವವಿಚಾರಗಳನ್ನೇ ಮನಸ್ಸಿನಲ್ಲಿ ದೃಢವಾಗಿ ಮನನ ಮಾಡುತ್ತ, ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ ನನ್ನನ್ನೇ ಉ ಪಾಸನೆಮಾಡುತ್ತ, ದೇಹಾವಸಾನದವರೆಗೂ ನಿರೀಕ್ಷಿಸುತ್ತಿರು! ಈ ವಿಧ ವಾಗಿ ನಿನ್ನ ಪ್ರಾರಬ್ಧಕರ್ಮವನ್ನು ಕಳೆದಮೇಲೆ. ನೀನು ಸಾತ್ವಿಕ ರಾಜಸ, ತಾಮಸಗಳೆಂಬ ಮೂರುಗತಿಗಳನ್ನೊಳಕೊಂಡ ಪ್ರಕೃತಿಮಂಡಲಕ್ಕಿಂತಲೂ ಆಚೆಗಿರುವ ನನ್ನ ಸ್ಥಾನವನ್ನು ಸೇರುವೆ" ಎಂದನು.

ಶ್ರೀಕೃಷ್ಣನು ಹೀಗೆಂದು ಹೇಳಿದಮೇಲೆ, ಉದ್ಧವನು ಅವನಿಗೆ ಪ್ರದಕ್ಷಿಣಮಾಡಿ, ಅವನ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಆ ಉದ್ಧವನು ಭಗವದಾಜ್ಞೆಯಂತೆ ತಾನು ಸುಖದುಃಖಗಳನ್ನು ಜಯಿಸಿದವನಾಗಿದ್ದರೂ, ಆ ಶ್ರೀಕೃಷ್ಣನನ್ನು ಬಿಟ್ಟು ಹೊರಡುವಾಗ, ಅವನಿಗೆ ಆತನಲ್ಲಿರುವ ಭಕ್ತಿವಿಶೇಷದಿಂದ, ಕಣ್ಣುಗಳಲ್ಲಿ ಧಾರಧಾರೆಯಾಗಿ ನೀರು ತುಳುಕುತ್ತಿತ್ತು. ಕೃಷ್ಣನಲ್ಲಿ ತನಗಿದ್ದ ಸುಸ್ತ್ಯಜವಾದ ಸ್ನೇಹದಿಂದ, ಉದ್ಧವನು ಆತನನ್ನು ಬಿಟ್ಟು ಹೋಗಲಾರದೆ, ಸಂಕಟದಿಂದಲೂ, ಭಯದಿಂದಲೂ ತತ್ತಳಿಸುತ್ತ, ಕೊನೆಗೆ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ದೃಢಪಡಿಸಿಕೊಂಡು, ಆಗಾಗ ಆ ಪ್ರಭುವಿನ ಪಾದುಕೆಗಳನ್ನು ಶಿರಸ್ಸಿನಲ್ಲಿಟ್ಟು ಒತ್ತಿಕೊಳ್ಳುತ್ತ, ಮತ್ತೊಮ್ಮೆ ಆತನ ಪಾದಗಳನ್ನು ಹಿಡಿದು ನಮಸ್ಕರಿಸಿ, ಬಹಳ ಕಷ್ಟದಿಂದ ಆ ಸ್ಥಳವನ್ನು ಬಿಟ್ಟು ಹೊರಟನು. ಮಹಾ ಭಾಗವತೋತ್ತಮನಾದ ಉದ್ಧವನು, ತನ್ನ ಪ್ರಭುವಾದ ಆ ಕೃಷ್ಣನನ್ನೇ ಹೃದಯದಲ್ಲಿಟ್ಟು ಧ್ಯಾನಿಸುತ್ತ, ಆತನ ಆಜ್ಞಾನುಸಾರವಾಗಿ ಬದರಿಕಾಶ್ರಮವನ್ನು ಸೇರಿ, ಅಲ್ಲಿ ತಪೋನಿರತನಾಗಿದ್ದು ಕೊನೆಗೆ ಉತ್ತಮಗತಿಯನ್ನೂ ಹೊಂದಿದನು?

ಓ ಪರೀಕ್ಷಿದ್ರಾಜಾ! ಯೋಗೀಶ್ವರರೆಲ್ಲರೂ ಯಾವನ ಪಾದಮೂಲವನ್ನು ಭಕ್ತಿಯಿಂದ ಸೇವಿಸುತ್ತಿರುವರೋ ಅಂತಹ ಶ್ರೀಹರಿಯು, ವೇದಾಂತವೆಂಬ ಸಮುದ್ರದಿಂದೆತ್ತಿ, ಮಹಾಭಾಗವತೋತ್ತಮನಾದ ಉದ್ಧವನಿಗೆ ಅನುಗ್ರಹಿಸಿಕೊಟ್ಟ ಈ ಜ್ಞಾನಾಮೃತವನ್ನು, ಯಾವನು ಶ್ರದ್ಧೆಯಿಂದ ಸೇವಿಸುವನೋ, ಅವನೊಬ್ಬನು ಮಾತ್ರವಲ್ಲದೆ, ಅವನ ಸಂಬಂಧವುಳ್ಳ ಜಗತ್ತೆಲ್ಲವೂ ಕೂಡ ಸದ್ಗತಿಯನ್ನು ಹೊಂದುವುದು. ಹೀಗೆ ಆ ಪರಮಪುರುಷನು, ಮೊದಲು ತನ್ನ ನಿಶ್ವಾಸರೂಪದಿಂದ ವೇದಗಳೆಲ್ಲವನ್ನೂ ಹೊರಪಡಿಸಿದುದಲ್ಲದೆ, ಸಮುದ್ರದಿಂದ ಅಮೃತವನ್ನೆತ್ತಿದಂತೆ, ಆವೇದಗಳಲ್ಲಿ ಅತ್ಯಂತಸಾರಭೂತವಾದ ಜ್ಞಾನವಿಜ್ಞಾನಗಳೆಂಬ ಆತ್ಮಪರಮಾತ್ರತತ್ವವನ್ನು ಸಂಗ್ರಹಿಸಿ ತೆಗೆದು, ಉದ್ಧವನಿಗೆ ಉಪದೇಶಿಸುವನೆವದಿಂದ ಲೋಕದಲ್ಲಿ ತನ್ನ ಭೃತ್ಯವರ್ಗವೆಲ್ಲವನ್ನೂ ಸಂಸಾರಭಯದಿಂದದಾಟಿಸುವುದಕ್ಕಾಗಿ, ಪ್ರಚಾರಗೊಳಿಸಿದನು. ಕೃಷ್ಣರೂಪಿಯಾದ ಅಂತಹ ಪರಮಾತ್ಮನನ್ನು ನಮಸ್ಕರಿಸುವೆವು." ಎಂದನು. ಇದು ಇಪ್ಪತ್ತೊಂಬತ್ತನೆಯ ಅಧ್ಯಾಯವು.

ಬ್ರಾಹ್ಮಣಶಾಪದಿಂದ ಯಾದವರಲ್ಲಿ ಪರಸ್ಪರ ಕಲಹ
ವುಂಟಾಗಿ, ಯಾದವರೆಲ್ಲರೂ ನಾಶಹೊಂದಿದುದು.
ಬಲರಾಮನಿರ್ಯಾಣವು.

ಪರೀಕ್ಷಿದ್ರಾಜನು ಶುಕಮುನಿಯನ್ನು ಪ್ರಶ್ನೆಮಾಡುವನು. "ಓ ಮಹರ್ಷೀ! ಉದ್ಧವನು ಬದರ್ಯಾಶ್ರಮಕ್ಕೆ ಹೋದಮೇಲೆ, ಶ್ರೀಕೃಷ್ಣನು ದ್ವಾರಕೆಯಲ್ಲಿ ನಡೆಸಿದ ಕಾರ್ಯವೇನು? ಬ್ರಾಹ್ಮಣಶಾಪದಿಂದ ತನ್ನ ಕುಲವೆಲ್ಲವೂ ನಷ್ಟವಾದಾಗ, ಆ ಭಗವಂತನು ತಾನು ಕೈಕೊಂಡಿದ್ದ ಕೃಷ್ಣದೇಹವನ್ನು ಇಲ್ಲಿಯೇ ಬಿಟ್ಟುಹೋದನೆ? ಅಥವಾ ಸರ್ವೇಂದ್ರಿಯಗಳಿಗೂ ಆಹ್ಲಾದಕರವಾಗಿ, ಲೋಕಮೋಹನವೆನಿಸಿದ ಆ ದಿವ್ಯವಿಗ್ರಹದೊಡನೆಯೇ ತನ್ನ ಲೋಕಕ್ಕೆ ಹೋದನೆ? ಸ್ತ್ರೀಯರು ಯಾವ ದಿವ್ಯವಿಗ್ರಹದಮೇಲೆ ಬಿದ್ದ ಕಣ್ಣುಗಳನ್ನು ಹಿಂತಿರುಗಿಸುವುದಕ್ಕೆ ಶಕ್ತರಾಗುತ್ತಿರಲಿಲ್ಲವೋ, ಯಾವ ದೇಹದ ಸೌಂದರ್ಯವು ಕರ್ಣರಂಧ್ರದ ಮೂಲಕವಾಗಿ ಸತ್ಪುರುಷರ ಹೃದಯದಲ್ಲಿ ಸೇರಿದಮೇಲೆ, ಅಲ್ಲಿಯೇ ಚಿತ್ರಿಸಲ್ಪಟ್ಟಂತೆ ಸ್ಥಿರವಾಗಿ ನಿಂತು, ಅಲ್ಲಿಂದ ಬಿಟ್ಟು ಕದಲದಂತಿದ್ದಿತೋ, ಯಾವ ದಿವ್ಯದೇಹದ ಕಾಂತಿಯು, ಕೀರ್ತಿಸುವ ಕವಿಗಳ ವಾಕ್ಯಶೈಲಿಗೆ ಮತ್ತಷ್ಟು ಶೋಭಾತಿಶಯವನ್ನುಂಟುಮಾಡುತಿದ್ದಿತೋ, ಅರ್ಜುನನ ರಥಾಗ್ರದಲ್ಲಿದ್ದ ಯಾವ ದಿವ್ಯಮೂರ್ತಿಯನ್ನು ನೋಡಿದಮಾತ್ರದಿಂದ, ಕುರುಕ್ಷೇತ್ರದಲ್ಲಿ ಹತರಾದವರೆಲ್ಲರೂ ಆ ಭಗವಂತನೊಡನೆ ಸಾರೂಪ್ಯವನ್ನು ಹೊಂದಿದರೋ, ಅಂತಹ ದೇಹವನ್ನು ಭಗವಂತನು ಕೊನೆಗೆ ಯಾವರೀತಿಯಲ್ಲಿ ಬಿಟ್ಟುಹೋದನು? ಇದನ್ನು ನನಗೆ ತಿಳಿಸಬೇಕು" ಎಂದನು. ಅದಕ್ಕಾ ಶುಕಮುನಿಯು "ರಾಜೇಂದ್ರಾ! ಕೇಳು! ಕೃಷ್ಣನು ಭೂಮ್ಯಾಕಾಶಗಳಲ್ಲಿಯೂ ಅಂತರಿಕ್ಷದಲ್ಲಿಯೂ ಉತ್ಪಾತಗಳು ಕಾಣಿಸಿದೊಡನೆ, ಸುಧರ್ಮಾಸಭೆಯಲ್ಲಿ ತನ್ನೊಡನೆ ಕುಳಿತಿದ್ದ ಯಾದವರೆಲ್ಲರನ್ನೂ ಕುರಿತು "ಓ ಯದುಕುಮಾರರೆ! ಈಗ ದ್ವಾರಕೆಯಲ್ಲಿ ಅತಿಭಯಂಕರಗಳಾದ ಮಹೋತ್ಪಾತಗಳು ವಿಶೇಷವಾಗಿ ಕಾಣಿಸುತ್ತಿರುವುವು. ಇವೆಲ್ಲವೂ ಯಾದವರಿಗೆ ನಾಶವನ್ನು ಸೂಚಿಸುತ್ತಿರುವುವು. ಇನ್ನುಮೇಲೆ ನಾವು ಮುಹೂರ್ತಮಾತ್ರವೂ ಇಲ್ಲಿ ನಿಲ್ಲಬಾರದು. ಆದುದರಿಂದ ನಮ್ಮ ಕಡೆಯ

ಸ್ತ್ರೀ ಬಾಲ ವೃದ್ಧರೆಲ್ಲರೂ, ಇಲ್ಲಿಂದ ಹೊರಟು, ಶಂಖೋದ್ಧಾರವೆಂಬ ಸ್ಥಳಕ್ಕೆ ಹೋಗಿ ಸೇರಲಿ! ನಾವೂ ಪ್ರಭಾಸತೀರ್ಥಕ್ಕೆ ಹೋಗುವೆವು. ಅಲ್ಲಿ ಸರಸ್ವತೀನದಿಯು ಪಶ್ಚಿಮಾಭಿಮುಖವಾಗಿ ಪ್ರವಹಿಸಿ, ಅಲ್ಲಿಂದ ಮುಂದೆ ಸಮುದ್ರವನ್ನು ಸೇರುವ ಸಂಗಮಸ್ಥಳವಿರುವುದು. ಅಲ್ಲಿ ನಾವು ಸ್ನಾನಮಾಡಿ ಶುದ್ಧರಾಗಿ, ಉಪವಾಸವಿದ್ದು, ನಮ್ಮನಮ್ಮ ಇಷ್ಟದೇವತೆಗಳನ್ನು ಅಭಿಷೇಕದಿಂದಲೂ, ಗಂಧಪುಷ್ಪಾಕ್ಷತೆಗಳೇ ಮೊದಲಾದ ಪೂಜೋಪಕರಣಗಳಿಂದಲೂ ಆರಾಧಿಸುವೆವು. ಮತ್ತು ಆಕಾಲದಲ್ಲಿ ಬ್ರಾಹ್ಮಣೋತ್ತಮರಿಗೆ, ಗೋವುಗಳನ್ನೂ, ಭೂಮಿಯನ್ನೂ, ವಸ್ತ್ರಗಳನ್ನೂ, ಭೂರಿದಕ್ಷಿಣೆಗಳನ್ನೂ, ಗಜಾಶ್ವರಥಗಳನ್ನೂ, ಗೃಹಗಳನ್ನೂ ದಾನಮಾಡಿ, ಅವರನ್ನು ಯಥೋಚಿತವಾಗಿ ಸತ್ಕರಿಸಿ, ಅವರಿಂದ ಶಾಂತಿಕರ್ಮಗಳನ್ನೂ ನಡೆಸುವೆವು. ಇದರಿಂದ ನಮಗೆ ಅನಿಷ್ಟನಿವಾರಣವಾಗಿ, ಶ್ರೇಯಸ್ಸುಂಟಾಗುವುದು ಗೋವುಗಳನ್ನೂ, ಬ್ರಾಹ್ಮಣರನ್ನೂ, ದೇವತೆಗಳನ್ನೂ ಆರಾಧಿಸುವುದು, ಯಾವಾಗಲೂ ಅಭ್ಯುದಯಕರವು." ಎಂದನು.

ಯದುವೃದ್ಧರೆಲ್ಲರೂ ಕೃಷ್ಣನ ಮಾತಿಗೆ ಅನುಮೋದಿಸಿ, ಆಗಲೇ ಪ್ರಯಾಣಸನ್ನದ್ಧರಾದರು. ಮೊದಲು ನಾವೆಗಳಿಂದ ಸಮುದ್ರವನ್ನು ದಾಟಿ, ಅಲ್ಲಿಂದ ಮುಂದೆ ರಥವನ್ನೇರಿ, ಪ್ರಭಾಸತೀರ್ಥವನ್ನು ಸೇರಿದರು. ಅಲ್ಲಿ ಆ ಯಾದವರೆಲ್ಲರೂ ಶ್ರೀಕೃಷ್ಣಾಜ್ಞೆಯಂತೆ ತಮ್ಮ ಶ್ರೇಯಸ್ಸಿಗಾಗಿ ಪೂಜಾದಿಕರ್ಮಗಳನ್ನು ನಡೆಸಿದರು. ಏನು ಮಾಡಿದರೇನು? ಆ ಕರ್ಮಗಳೆಲ್ಲವೂ ಮುಗಿದಮೇಲೆ, ಅವರಿಗೆ ವಿನಾಶಕಾಲಕ್ಕೆ ತಕ್ಕಂತೆ ದೈವಪ್ರೇರಣೆಯಿಂದ ವಿಪರೀತಬುದ್ಧಿಯೇ ಹುಟ್ಟಿತು. ಎಲ್ಲರೂ ಸಂತೋಷದಿಂದ ಗುಂಪುಗೂಡಿ, ಮಹಾಮದಕರವಾದ ಮೈರೇಯವೆಂಬ ಮದ್ಯವನ್ನು ಪಾನಮಾಡಿದರು. ಆ ಮದ್ಯಪಾನದಿಂದ ಎಲ್ಲರಿಗೂ ಬುದ್ಧಿಭ್ರಂಶವುಂಟಾಯಿತು. ಆ ಯಾದವರೆಲ್ಲರೂ ಸಹಜವಾಗಿಯೇ ವೀರ್ಯೋತ್ಸಾಹವುಳ್ಳವರು. ಇದರಮೇಲೆ ಮದ್ಯಪಾನದಿಂದ ಅವರಿಗೆ ಮೇಲೆಮೇಲೆ ಉತ್ಸಾಹವೂ, ಹಟವೂ ಹೆಚ್ಚುತ್ತ ಬಂದಿತು. ಶ್ರೀಕೃಷ್ಣನ ಮಾಯೆಯಿಂದ ಮೊದಲೇ ಮೋಹಿತರಾಗಿದ್ದ ಆಯಾದವರೆಲ್ಲರೂ, ಮದ್ಯಮದದಿಂದ ಮತ್ತೇರಿ ಮೈತಿಳಿಯದಿದ್ದಾಗ,

ಅವರಲ್ಲಿ ಮಾತಿಗೆ ಮಾತು ಬೆಳೆದು ದೊಡ್ಡ ಕಲಹವುಂಟಾಯಿತು. ಒಬ್ಬರ ನ್ನೊಬ್ಬರು ಕೊಲ್ಲಬೇಕೆಂಬ ಹಟದಿಂದ, ಕತ್ತಿ, ಬಿಲ್ಲು, ಈಟಿ, ಗದೆ, ಮುಂ ತಾದ ಆಯುಧಗಳನ್ನು ಹಿಡಿದು, ಆ ಸಮುದ್ರತೀರದಲ್ಲಿಯೇ ಯುದ್ಧವ ನ್ನಾರಂಭಿಸಿದರು. ಧ್ವಜಸಹಿತಗಳಾದ ರಥಗಳು, ಆನೆಗಳು, ಕುದುರೆಗಳು, ಕಾಲಾಳುಗಳು, ಒಂಟೆಗಳು, ಕತ್ತೆಗಳು, ಹೇಸರಗತ್ತೆಗಳು, ಎಮ್ಮೆಗಳು, ಎತ್ತು ಗಳು, ಮೊದಲಾದ ಎಲ್ಲಾ ಬಗೆಯ ಯುದ್ಧಸಾಧನಗಳನ್ನೂ ಸಂಗ್ರಹಿಸಿ ಕೊಂಡು, ಮದದಿಂದ ಒಬ್ಬರಿಗೊಬ್ಬರು ಮೇಲೆ ಬೀಳುತ್ತ, ಆನೆ ಗಳು ತಮ್ಮ ಕೊಂಬುಗಳಿಂದ ಕಾಡನ್ನು ನಾನಾಕಡೆಯಲ್ಲಿಯೂ ಮು ರಿದು ಕೆಡಹುವಂತೆ, ಅವರವರು ತಮ್ಮ ತಮ್ಮ ಕೈಗೆ ಸಿಕ್ಕಿದವರನ್ನು ಕೊಲ್ಲುತ್ತ ಬಂದರು. ಒಂದುಕಡೆಯಲ್ಲಿ ಪ್ರದ್ಯುಮ್ನನೂ, ಸಾಂಬನೂ ಒಬ್ಬರಿ ಗೊಬ್ಬರು ಹಟದಿಂದ ಕೈಕಲೆತು ಯುದ್ಧಮಾಡತೊಡಗಿದರು. ಮತ್ತೊಂ ದು ಕಡೆಯಲ್ಲಿ ಅಕ್ರೂರನೂ, ಭೋಜನೂ ಪರಸ್ಪರಯುದ್ಧಕ್ಕೆ ನಿಂತರು. ಇನ್ನೊಂದು ಕಡೆಯಲ್ಲಿ ಅನಿರುದ್ಧನೂ, ಸಾತ್ಯಕಿಯೂ ಜಗಳಕ್ಕೆ ನಿಂ ತರು. ಬೇರೊಂದುಕಡೆಯಲ್ಲಿ ಸುಭದ್ರನೂ, ಸಂಗ್ರಾಮಜಿತ್ತೂ ಯು ದ್ಧೋದ್ಯುಕ್ತರಾದರು. ಒಂದುಕಡೆಯಲ್ಲಿ ಸುಚಾರುವಿನೊಡನೆ ಗದನೂ, ಮತ್ತೊಂದು ಕಡೆಯಲ್ಲಿ ಸುಮಿತ್ರನೊಡನೆ ಸುರಥನೂ ಹೋರಾಡತೊಡಗಿ ದರು. ಹೀಗೆಯೇ ಅಲ್ಲಲ್ಲಿ, ನಿಶಠ, ಉಲ್ಮುಕ, ಸಹಸ್ರಜಿತ್ತು, ಶತಜಿತ್ತು, ಭಾನು, ಮುಂತಾದ ಯಾದವವೀರರೆಲ್ಲರೂ ಕೃಷ್ಣನ ಮಾಯೆಯಿಂದ ಮೋಹಗೊಂಡು, ಮದಾಂಧರಾಗಿ, ಒಬ್ಬರನ್ನೊಬ್ಬರು ಕೊಲ್ಲುತ್ತ ಬಂದರು. ಹೀಗೆ ದಾಶಾರ್ಹರು, ಅಂಧಕರು, ಭೋಜರು, ಸಾತ್ವತರು, ಮಧುಗಳು, ವೃಷ್ಣಿಗಳು, ಅರ್ಬುದರು, ಮಾಥುರರು, ಶೂರಸೇನರು, ವಿಸರ್ಜನರು, ಕುಕುರರು, ಕುಂತಿಗಳು ಮುಂತಾದ ಯಾದವಕುಲದವರೆಲ್ಲರೂ ಸ್ವಜನಾಭಿಮಾನವನ್ನು ತೊರೆದು, ಒಬ್ಬರನ್ನೊಬ್ಬರು ಕೊಲ್ಲುತಿದ್ದರು. ಮದ್ಯಮದದಿಂದ ಉನ್ಮತ್ತರಾದ ಆ ಯಾದವರೆಲ್ಲರೂ, ತಂದೆಯೆಂದೂ, ಮಗನೆಂದೂ, ಸಹೋದರರೆಂದೂ, ಭಾವನೆಂದೂ, ಮೈದುನನೆಂದೂ, ಅಳಿ ಯನೆಂದೂ, ಮಾವನೆಂದೂ, ಅಜ್ಜನೆಂದೂ, ಮುಮ್ಮಗನೆಂದೂ, ಮಿತ್ರನೆಂ

ದೂ, ಬಂಧುವೆಂದೂ ನೋಡದೆ, ಒಬ್ಬರನ್ನೊಬ್ಬರು ಕೊಲ್ಲುತಿದ್ದರು. ಕೊನೆ ಕೊನೆಗೆ ಅವರಲ್ಲಿದ್ದ ಬಾಣಗಳೆಲ್ಲವೂ ತೀರಿಹೋದುವು. ಧನುಸ್ಸುಗಳೆಲ್ಲವೂ ಮುರಿದು ಬಿದ್ದುವು. ಶಸ್ತ್ರಾಸ್ತ್ರಗಳೂ ಮುಗಿದುಹೋದುವು. ಹೀಗೆ ಯುದ್ಧ ಸಾಧನಗಳೆಲ್ಲವೂ ವ್ಯಯವಾದಮೇಲೆ, ಅವರು ಮುಷ್ಟಿಗಳಿಂದ ಆ ಸಮುದ್ರತೀರದಲ್ಲಿ ಬೆಳೆದಿದ್ದ ಹೊಡಕೆಗಳನ್ನು ಕಿತ್ತುಕೊಂಡು, ಅದರಿಂದ ಒಬ್ಬರನ್ನೊಬ್ಬರು ಹೊಡೆದಾಡುವುದಕ್ಕೆ ತೊಡಗಿದರು.ಅವರು ಕೈಗೆ ಕಿತ್ತುಕೊಂಡಕೂಡಲೇ, ದೈವಯೋಗದಿಂದ ಆ ಹೊಡಕೆಯ ಹುಲ್ಲುಗಳೇ ವಜ್ರಸಮಾನವಾದ ಪರಿಘಾಯುಧಗಳಂತಾದುವು. ಕೃಷ್ಣನು ಬೇಡಬೇಡವೆಂದು ಅನೇಕವಿಧವಾಗಿ ತಡೆಯುತಿದ್ದರೂ ಕೇಳದೆ, ಒಬ್ಬರಿಗೊಬ್ಬರು ಹೊಡೆದಾಡುತ್ತ, ಕೊನೆಗೆ ಆ ಕೃಷ್ಣನಮೇಲೆಯೇ ತಿರುಗಿ, ಅವನನ್ನೂ ಹೊಡೆಯುವುದಕ್ಕೆ ಯತ್ನಿಸಿದರು ಹೀಗೆ ಮದಾಂಧರಾದ ಆ ಯಾದವರು, ಭಗವನ್ಮಾಯೆಯಿಂದ ಬುದ್ಧಿಗೆಟ್ಟು, ಕೃಷ್ಣಬಲರಾಮರನ್ನೇ ತಮಗೆ ಶತ್ರುಗಳಂತೆ ಭಾವಿಸಿ, ಅವರನ್ನು ಕೊಲ್ಲಬೇಕೆಂದು ಮೇಲೆಬಿದ್ದು ಬಂದರು. ಆದರೆ ಕೃಷ್ಣ ಬಲರಾಮರಿಬ್ಬರೂ, ತಮ್ಮಮೇಲೆ ಹದ್ದುಮೀರಿ ಬರುತ್ತಿರುವ ಆ ಯಾದವರನ್ನು ನಿವಾರಿಸುವುದಕ್ಕೆ ಬೇರೆ ಉಪಾಯವಿಲ್ಲದೆ, ತಾವೂ ಕೋಪದಿಂದ ಕೆಲವು ಹೊಡಕೆಗಳನ್ನು ಕಿತ್ತುಕೊಂಡು, ಅದನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತ, ತಮಗಿದಿರಾದವರನ್ನು ಹೊಡೆದೋಡಿಸುತ್ತ ಬಂದರು ಓ ಪರೀಕ್ಷಿದ್ರಾಜಾ!ಕೃಷ್ಣನ ಮಾಯೆಯಿಂದ ಮೋಹಿತರಾಗಿ,ಬ್ರಾಹ್ಮಣಶಾಪದಿಂದ ಮೊದಲೇ ಹತಪ್ರಾಯರಾಗಿದ್ದ ಆ ಯಾದವರಿಗೆ, ಅನ್ಯೋನ್ಯಸ್ಪರ್ಧೆಯೂ, ಅದರಿಂದ ಒಬ್ಬರಮೇಲೊಬ್ಬರಿಗೆ ತಡೆಯಲಾರದ ಕೋಪವೂ ಹೆಚ್ಚುತ್ತಬಂದು, ಬಿದಿರುಮೆಳೆಯಲ್ಲಿ ಹುಟ್ಟಿದ ಬೆಂಕಿಯು ವನವೆಲ್ಲವನ್ನೂ ಸುಡುವಂತೆ, ಆಯಾದವಕುಲವನ್ನೇ ನಿರ್ಮೂಲಮಾಡುವಂತಾಯಿತು. ಹೀಗೆ ತನ್ನ ಕುಲದವರೆಲ್ಲರೂ ಅನ್ಯೋನ್ಯಕಲಹದಿಂದ ಹತರಾಗಿ ಬಿದ್ದುದನ್ನು ಕಂಡು, ಕೃಷ್ಣನು, ಭೂಭಾರಪರಿಹಾರವೆಂಬ ತನ್ನ ಉದ್ದೇಶವು ಇಂದಿಗೆ ತೀರಿತೆಂದು ತಿಳಿದುಕೊಂಡನು ಇಷ್ಟರಲ್ಲಿ ಬಲರಾಮನು, ಆ ಸಮುದ್ರತೀರದಲ್ಲಿಯೇ ಬೇರೊಂದುಕಡೆಯಲ್ಲಿ, ಪರಮಾತ್ಮಧ್ಯಾನರೂಪವಾದ

ಯೋಗವನ್ನು ಹಿಡಿದು, ಮನುಷ್ಯಶರೀರದಲ್ಲಿ ಅದುವರೆಗೆ ನೆಲೆಸಿದ್ದ ತನ್ನ ಸಂಕರ್ಷಣಾಂಶವನ್ನು, ನಿಜಸ್ವರೂಪವುಳ್ಳ ಸಂಕರ್ಷಣನೊಡನೆ ಐಕ್ಯ ಹೊಂದಿಸಿದಂತೆ ಧ್ಯಾನಿಸುತ್ತ,ತಾನು ಅಂಗೀಕರಿಸಿದ್ದ ಮನುಷ್ಯರೂಪವನ್ನು ಪರಿತ್ಯಜಿಸಿದನು. ಹೀಗೆ ತನ್ನಣ್ಣನಾದ ಬಲರಾಮನು ಮೊದಲಿನಂತೆ ತನ್ನ ಅಸಾಧಾರಣಸ್ವರೂಪವನ್ನು ಹೊಂದಿದುದನ್ನು ತಿಳಿದು, ಭಗವಂತನಾದ ಶ್ರೀಕೃಷ್ಣನು, ಸಮೀಪದಲ್ಲಿದ್ದ ಒಂದಾನೊಂದು ಆಲದಮರದ ಕೆಳಕ್ಕೆ ಬಂದು, ಅಲ್ಲಿನ ಬರೀನೆಲದಮೇಲೆ ಮೌನದಿಂದ ಕುಳಿತನು. ಆಗ ಅವನು, ಚತುರ್ಭುಜಗಳಿಂದ ಕೂಡಿದ ತನ್ನ ಅಸಾಧಾರಣದಿವ್ಯರೂಪದಿಂದೊಪ್ಪು ತಿದ್ದನು. ಆಗ ಅವನ ದಿವ್ಯತೇಜಸ್ಸು, ಹೊಗೆಯಿಲ್ಲದ ಬೆಂಕಿಯಂತೆ, ನಿಷ್ಕ ಲ್ಮಷವಾದ ಕಾಂತಿವಿಶೇಷದಿಂದ ದಿಕ್ಕುಗಳೆಲ್ಲವನ್ನೂ ಬೆಳಗುತಿದ್ದಿತು. ಮತ್ತು ಆಗ ಅವನಿಗೆ ಮೇಘದಂತೆ ಶ್ಯಾಮಲವಾದ ಮೈ! ಎದೆಯಲ್ಲಿ ಶ್ರೀ ವತ್ಸವೆಂಬ ಮಚ್ಚೆಯ ಗುರುತು! ಪುಟಹಾಕಿದ ಚಿನ್ನದಂತೆ ಹೊಳೆಯುವ ಎರಡು ಪಟ್ಟೆಮಡಿ (ಪೀತಾಂಬರ) ಗಳು! ಮಂಗಳಕರವಾದ ಮೂರ್ತಿ! ಅರಳಿದ ಕಮಲದಂತೆ ಮಂದಹಾಸವಿಶಿಷ್ಟವಾದ ಮುಖದ ಸೊಗಸು! ಆ ಮುಖಕ್ಕೆ ರೇಖೆಕಟ್ಟಿದಂತೆ ಶೋಭಿಸುವ ಕಪ್ಪಾದ ಮುಂಗುರುಳುಗಳು! ಪುಂಡರೀಕದಂತೆ ಮನೋಹರವಾದ ಕಣ್ಣುಗಳು! ಕಿವಿಯಲ್ಲಿ ಮಕರಕುಂಡಲ ಗಳು! ಕಿರೀಟ, ಕೈಬಳೆ, ಬಂದಿ,ಉಡೆದಾರ, ತೋಳ್ಬಳೆ, ಹಾರ, ಕಾಲಂದುಗೆ, ಕೈಯುಂಗುರ,ಕೌಸ್ತುಭಮಣಿ, ಮುಂತಾದ ಸರ್ವಾಭರಣಗಳಿಂದಲೂ ಝಗ ಝಗಿಸುವ ದಿವ್ಯಮೂರ್ತಿ! ಬ್ರಹ್ಮಸೂತ್ರ(ಜನಿವಾರ)ದಿಂದಲೂ, ವನಮಾ ಲಿಕೆಯಿಂದಲೂ ಶೋಭಿತವಾದ ಕೊರಲು! ಇಂತಹ ದಿವ್ಯಲಕ್ಷಣಗಳಿಂ ದೊಪ್ಪುತ್ತಿರುವ ಆ ಶ್ರೀಕೃಷ್ಣನ ಸುತ್ತಲೂ, ಸುದರ್ಶನ, ಪಾಂಚಜ ನ್ಯಗಳೇ ಮೊದಲಾದ ಪಂಚಾಯುಧಗಳೂ ಪುರುಷಾಕಾರದಿಂದ ನಿಂತು ಸೇವೆಮಾಡುತ್ತಿರುವುವು. ಈ ವಿಧವಾದ ದಿವ್ಯವೈಭವದೊಡನೆ ಶ್ರೀ ಕೃಷ್ಣನು, ಆಲದ ಮರದ ಕೆಳಗೆ,ಕಮಲದಂತೆ ಸುಂದರವಾದ ತನ್ನ ಬಲದ ಕಾಲನ್ನು ಎಡದ ತೊಡೆಯಮೇಲಿಟ್ಟು ಮೌನದಿಂದ ಕುಳಿತಿದ್ದನು. ಆ ಕಾಲಕ್ಕೆ ಸರಿಯಾಗಿ, ಜರೆಯೆಂಬ ಒಬ್ಬಾನೊಬ್ಬ ಬೇಡನು ಬೇಟೆಯಾಡುತ್ತ

ಆ ವನಪ್ರದೇಶಕ್ಕೆ ಬಂದನು. ಓ ಪರೀಕ್ಷಿದ್ರಾಜಾ! ಹಿಂದೆ ಬ್ರಾಹ್ಮಣಶಾಪದಿಂದ ಯಾದವಕುಲನಾಶಕ್ಕಾಗಿ ಸಾಂಬನೆಂಬ ಯಾದವನ ಗರ್ಭದಲ್ಲಿ ಒಂದು ಮುಸಲವು ಹುಟ್ಟಿದುದಾಗಿಯೂ, ಅದನ್ನು ಯಾದವರು ಗಂಧದಂತೆ ಅರೆದು ತೇಲುಬಿಟ್ಟುದಾಗಿಯೂ, ಅದರಲ್ಲಿದ್ದ ಒಂದು ಉಕ್ಕಿನ ಮೊಳೆಯನ್ನು ಮಾತ್ರ ಅಲ್ಲಿಯೇ ಬಿಸುಟುಹೋದುದಾಗಿಯೂ ಹೇಳಿದ್ದೆನಲ್ಲವೆ? ಆ ಉಕ್ಕಿನ ಮೊಳೆಯು ಈ ಬೇಡನ ಕೈಗೆ ಸಿಕ್ಕಿದುದರಿಂದ, ಅದನ್ನೇ ಅವನು ತನ್ನ ಬಾಣದ ಅಲಗಾಗಿ ಮಾಡಿಟ್ಟಿದ್ದನು. ಅದೇಬಾಣವನ್ನು ಕೈಯಲ್ಲಿ ಹಿಡಿದಿದ್ದ ಆ ಬೇಡನು, ಆ ವನಪ್ರದೇಶದಲ್ಲಿ ಸುತ್ತುತ್ತ ಬರುವಾಗ, ದೂರದಿಂದ ಶ್ರೀಕೃಷ್ಣನು ಕುಳಿತಿದ್ದುದನ್ನು ಕಂಡನು. ವಕ್ರವಾಗಿದ್ದ ಆ ಭಗವಂತನ ಪಾದವು, ಆ ಬೇಡನಿಗೆ ಒಂದು ಮೃಗದ ಆಕಾರವಾಗಿ ಕಾಣಿಸಿದುದರಿಂದ, ಬೇಡನು ಅಂದೊಂದು ಮೃಗವೆಂದು ಭ್ರಮಿಸಿ, ತನ್ನ ಕೈಯಲ್ಲಿದ್ದ ಬಾಣವನ್ನು ಆ ಪಾದಕ್ಕೆ ಗುರಿಯಿಟ್ಟು ಹೊಡೆದನು. ಆಮೇಲೆ ಸಮೀಪಕ್ಕೆ ಬಂದು, ಚತುರ್ಭುಜವುಳ್ಳ ಆ ದಿವ್ಯಮೂರ್ತಿಯನ್ನು ಕಂಡಾಗ, ಅವನಿಗೆ ಭಯದಿಂದ ಮೈನಡುಗಿತು. ತಾನು ಮಾಡಿದ ಮಹಾಪರಾಧಕ್ಕಾಗಿ ಪಶ್ಚಾತ್ತಾಪಪಟ್ಟು, ದುಃಖದಿಂದ ತತ್ತಳಿಸುತ್ತ, ಆ ಭಗವಂತನ ಪಾದಗಳ ಮೇಲೆ ಬಿದ್ದು ದೈನ್ಯದಿಂದ ಹೀಗೆಂದು ಪ್ರಾರ್ಥಿಸುವನು. "ಓ ಪುಣ್ಯಕೀರ್ತೀ! ಮಧುಸೂದನಾ! ಪಾಪಿಯಾದ ನಾನು ತಿಳಿಯದೆ ಮಾಡಿದ ಈ ನನ್ನ ಅಪರಾಧವನ್ನು ಕ್ಷಮಿಸಬೇಕು. ಯಾವನ ಸ್ಮರಣಮಾತ್ರವೇ ಮನುಷ್ಯರಿಗೆ ಅಜ್ಞಾನಾಂಧಕಾರವನ್ನು ನೀಗಿಸತಕ್ಕುದೆಂದು ಹೇಳುವರೋ! ಅಂತಹ ಪರಮಪುರುಷನಾದ ನಿನ್ನಲ್ಲಿಯೇ ನಾನು ಮಹಾಪರಾಧವನ್ನು ಮಾಡಿದೆನು. ಆದುದರಿಂದ ಓ ವೈಕುಂಠಾ! ಮೃಗಗಳನ್ನು ಕೊಂದು ಪಾಪಜೀವನದಿಂದಲೇ ಕಾಲವನ್ನು ಕಳೆಯುತ್ತಿರುವ ನನ್ನನ್ನು ಈಗಲೇ ನೀನು ನಿನ್ನ ಕೈಯಿಂದ ಸಂಹರಿಸಿ, ಮುಂದೆಯಾದರೂ ನನ್ನಿಂದ ಇಂತಹ ದುರತಿಕ್ರಮವು ನಡೆಯದಂತೆ ಮಾಡು! ಬ್ರಹ್ಮರುದ್ರಾದಿದೇವಶ್ರೇಷ್ಠರಾಗಲಿ, ಬ್ರಹ್ಮಪುತ್ರರಾದ ಮರೀಚಿ ಮೊದಲಾದವರಾಗಲಿ, ವೇದವಿದರಾದ ಮಹರ್ಷಿಗಳಾಗಲಿ, ನೀನು ಆಗಾಗ ನಿನ್ನ ಸಂಕಲ್ಪಾಧೀನವಾಗಿ ಪರ

ಗ್ರಹಿಸತಕ್ಕ ರೂಪಗಳನ್ನು ಹೀಗೆಂದು ನಿರ್ಣಯಿಸಿ ತಿಳಿಯಲಾರರು. ಏಕೆಂದರೆ, ಅವರೂ ನಿನ್ನ ಮಾಯೆಯಿಂದ ಮೋಹಿತರಾಗಿ, ಕಣ್ಣು ಕಾಣದವರಂತೆ ಕಳವಳಿಸುವರು. ಹೀಗಿರುವಾಗ ನೀಚಜನ್ಮದಲ್ಲಿ ಹುಟ್ಟಿದ ನಮ್ಮಂತವರ ಪಾಡೇನು ? ನಿನ್ನ ಮಾಯೆಯಿಂದಲೇ ಮೋಹಿತನಾಗಿ ನಾನು ಅಜ್ಞಾನದಿಂದ ಮಾಡಿದ ಈ ಅಪರಾಧವನ್ನು ಕ್ಷಮಿಸಬೇಕು" ಎಂದನು.

ಆಗ ಭಗವಂತನು ಆ ಬೇಡನನ್ನು ನೋಡಿ, ಮಂದಹಾಸಪೂರ್ವಕವಾಗಿ "ಓ ಜರಾ! ಭಯಪಡಬೇಡ! ಏಳು! ನನ್ನ ಸಂಕಲ್ಪದಿಂದಲೇ ಈ ಕಾರ್ಯವು ನಡೆದಿರುವುದು. ಆದುದರಿಂದ ಇದರಲ್ಲಿ ನಿನ್ನ ದೋಷವೇನೂ ಇರುವುದಿಲ್ಲ! ಇದೋ! ಈಗ ನಾನು ನಿನಗೆ ಪುಣ್ಯಪುರುಷರಿಗೆ ಲಭಿಸತಕ್ಕ ಸ್ವರ್ಗವನ್ನು ಅನುಗ್ರಹಿಸಿರುವೆನು. ಇನ್ನು ನೀನು ಹೊರಡಬಹುದು" ಎಂದನು. ಈ ಭಗವದಾಜ್ಞೆಯನ್ನು ಕೇಳಿದೊಡನೆ ಆ ಬೇಡನು, ಸ್ವೇಚ್ಛಾಶರೀರಿಯಾದ ಕೃಷ್ಣನಿಗೆ ಮೂರಾವರ್ತಿ ಪ್ರದಕ್ಷಿಣಮಾಡಿ, ಅವನ ಪಾದಗಳಿಗೆ ನಮಸ್ಕರಿಸಿದನು. ಇಷ್ಟರಲ್ಲಿಯೇ ಅಲ್ಲಿ ಒಂದು ದಿವ್ಯವಿಮಾನವು ಸಿದ್ಧವಾಗಿ ಬಂದು ನಿಂತಿತು. ಒಡನೆಯೇ ಬೇಡನು ಆ ವಿಮಾನದಲ್ಲಿ ಕುಳಿತು ದೇವಲೋಕವನ್ನು ಸೇರಿದನು.

ಓ ಪರೀಕ್ಷಿದ್ರಾಜಾ ! ಇಷ್ಟರಲ್ಲಿ ಕೃಷ್ಣನಿಗೆ ಸಾರಥಿಯಾಗಿದ್ದ ದಾರುಕನು, ತನ್ನ ಪ್ರಭುವಾದ ಕೃಷ್ಣನನ್ನು ಹುಡುಕುತ್ತ ಬಂದು, ತುಲಸೀಗಂಧಮಿಶ್ರವಾದ ವಾಯುವಿನಿಂದ ಕೃಷ್ಣನಿರುವ ಈ ಸ್ಥಳವನ್ನು ಗುರುತು ಹಿಡಿದುಕೊಂಡು, ಅಲ್ಲಿಗೆ ಬಂದು ಸೇರಿದನು. ಅಲ್ಲಿ ಒಂದಾನೊಂದು ಅರಳಿಯ ಮರದ ಕೆಳಗೆ, ಸೂರ್ಯತೇಜಸ್ಸಿನಿಂದ ಜ್ವಲಿಸುತ್ತ, ಪುರುಷಾಕಾರವುಳ್ಳ ಪಂಚಾಯುಧಗಳಿಂದ ಪರಿವೃತನಾಗಿ ಕುಳಿತಿದ್ದ ಕೃಷ್ಣನನ್ನು ಕಂಡೊಡನೆ, ಥಟ್ಟನೆ ರಥದಿಂದ ಕೆಳಕ್ಕಿಳಿದು, ಪ್ರೇಮಾರ್ದ್ರಹೃದಯನಾಗಿ ಆನಂದಬಾಷ್ಪವನ್ನು ಸುರಿಸುತ್ತ ಮುಂದೆಬಂದು, ಆ ಕೃಷ್ಣನ ಪಾದಗಳಮೇಲೆ ಬಿದ್ದು ನಮಸ್ಕರಿಸಿ ಹೀಗೆಂದು ಪ್ರಾರ್ಥಿಸುವನು "ಓ ಪ್ರಭೂ ! ಇದುವರೆಗೆ ನಿನ್ನ ಪಾದಾರವಿಂದದರ್ಶನವಿಲ್ಲದಿದ್ದುದರಿಂದ, ನನಗೆ ತಮಸ್ಸಿನಲ್ಲಿ ಮುಳುಗಿದಂತೆ ಕಣ್ಣೇ ಕಾಣದಂತಾಯಿತು. ಮನಸ್ಸಿನ ಶಾಂತಿಯೂ ತಪ್ಪಿತು.

ಚಂದ್ರಶೂನ್ಯವಾದ ರಾತ್ರಿಯಲ್ಲಿ ಹೇಗೋಹಾಗೆ, ನನಗೆ ದಿಕ್ಕುಗಳೇ ತೋರ ದಂತಾದುವು" ಎಂದನು.

ದಾರುಕನು ಹೀಗೆಂದು ಹೇಳುತ್ತಿರುವಾಗಲೇ, ಅವನು ಅಲ್ಲಿಗೆ ತಂದಿದ್ದ ಗರುಡಧ್ವಜವುಳ್ಳ ಕೃಷ್ಣನ ರಥವು, ಅವನು ನೋಡುತಿದ್ದ ಹಾಗೆಯೇ ಹೂಡಿದ್ದ ಕುದುರೆಗಳೊಡನೆ ಗಂಭೀರಧ್ವನಿಯಿಂದ ಆಕಾಶಕ್ಕೆ ಹಾರಿತು. ಇತ್ತಲಾಗಿ ಪುರುಷಾಕಾರದಿಂದ ಕೃಷ್ಣನನ್ನು ಸೇವಿಸುತಿದ್ದ ಶಂಖಚಕ್ರಾದ್ಯಾಯುಧಗಳೂ ಆ ರಥವನ್ನು ಹಿಂಬಾಲಿಸಿ ಅಂತರಿಕ್ಷಕ್ಕೆ ಹಾರಿ, ಅದೃಶ್ಯವಾದುವು. ಇವೆಲ್ಲವನ್ನೂ ನೋಡಿ ಆಶ್ಚರ್ಯದಿಂದ ಸ್ತಬ್ಧನಾಗಿ ನಿಂತಿದ್ದ ದಾರುಕನನ್ನು ಕರೆದು ಭಗವಂತನು ಹೀಗೆಂದು ಹೇಳುವನು.

“ಓ ಸೂತಾ! ದಾರುಕಾ! ಇನ್ನು ನೀನು ದ್ವಾರಕೆಗೆ ಹೊರಡು! ನಮ್ಮ ಜ್ಞಾತಿಗಳಾದ ಯಾದವರ ಮರಣವನ್ನೂ, ಬಲರಾಮನಿರ್ಯಾಣ ವನ್ನೂ, ಈಗ ನನ್ನ ಸ್ಥಿತಿಯನ್ನೂ, ಅಲ್ಲಿರುವ ನನ್ನ ಬಂಧುಗಳಿಗೆ ತಿಳಿಸು! ಮತ್ತು ಅವರಿಗೆ ತಮ್ಮತಮ್ಮ ಬಂಧುಗಳೊಡನೆ ಈಗಲೇ ದ್ವಾರಕೆಯನ್ನು ಬಿಟ್ಟು ಹೊರಟು ಹೋಗಬೇಕೆಂದು ಹೇಳು! ಏಕೆಂದರೆ, ನಾನು ಯಾದವ ಪುರಿಯನ್ನು ಬಿಟ್ಟುಹೋದೊಡನೆ, ಸಮುದ್ರವು ಉಕ್ಕಿ ಬಂದು, ಆ ಪಟ್ಟಣ ವನ್ನು ಕೊಚ್ಚಿಸಿಬಿಡುವುದು. ಆದುದರಿಂದ ಅಲ್ಲಿನ ನಿವಾಸಿಗಳೆಲ್ಲರೂ ತಮ್ಮ ತಮ್ಮ ಪರಿವಾರಸಾಮಗ್ರಿಗಳನ್ನು ಸಾಗಿಸಿಕೊಂಡು, ನನ್ನ ತಂದೆತಾಯಿಗ ಳನ್ನೂ ಸಂಗಡ ಕರೆದುಕೊಂಡು, ಅರ್ಜುನನಿಂದ ರಕ್ಷಿತರಾಗಿ, ಇಂದ್ರ ಪ್ರಸ್ಥಕ್ಕೆ ಹೋಗಿಸೇರಲಿ! ನೀನು ಇನ್ನುಮೇಲೆ ಭಾಗವತಧರ್ಮವನ್ನು ಹಿಡಿದು, ನನ್ನಲ್ಲಿ ಭಕ್ತಿಯೋಗನಿಷ್ಠನಾಗಿ, ವಿಷಯಾಸಕ್ತಿಯನ್ನು ನೀಗಿ, ಈ ಜಗತ್ತೆಲ್ಲವೂ ನನ್ನ ಮಾಯೆಯಿಂದ ಕಲ್ಪಿತವೆಂಬುದನ್ನು ತಿಳಿದು, ರಾಗಾದಿದೋಷರಹಿತನಾಗಿ ಶಾಂತಿಯಿಂದಿರು!” ಎಂದನು. ಇವನ್ನು ಕೇಳಿ ದಾರುಕನು, ಕೃಷ್ಣನಿಗೆ ಬಾರಿಬಾರಿಗೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತ, ಅವನ ಪಾದಗಳನ್ನು ತನ್ನ ತಲೆಗೆ ಒತ್ತಿಕೊಳ್ಳುತ್ತ, ಕೊನೆಗೆ ಅತಿದುಃಖದಿಂದ ಆ ಸ್ಥಳವನ್ನು ಬಿಟ್ಟು ದ್ವಾರಕೆಗೆ ಬಂದನು. ಇದು ಮೂವ ತ್ತನೆಯ ಅಧ್ಯಾಯವು.

{ ಶ್ರೀಕೃಷ್ಣನು ಭೂಲೋಕವನ್ನು ಬಿಟ್ಟು ನಿಜಸ್ಥಾನವಾದ ವೈಕುಂಠವನ್ನು ಸೇರಿದುದು. }

ಓ ಪರೀಕ್ಷಿದ್ರಾಜಾ! ಕೃಷ್ಣಾಜ್ಞೆಯಿಂದ ದಾರುಕನು ಅಲ್ಲಿಂದ ಹೊರಟು ಹೋದಕೂಡಲೆ, ಅಲ್ಲಿಗೆ, ಚತುರ್ಮುಖಬ್ರಹ್ಮನೂ, ಪಾರ್ವತೀ ಸಮೇತನಾದ ರುದ್ರನೂ, ಇಂದ್ರಾದಿದಿಕ್ಪಾಲಕರೂ, ಪಿತೃದೇವತೆಗಳೂ, ಸಿದ್ಧ, ಗಂಧರ್ವ, ವಿದ್ಯಾಧರ, ಯಕ್ಷ, ರಾಕ್ಷಸ, ಪನ್ನಗ, ಚಾರಣ, ಗರುಡ, ಕಿನ್ನರಾದಿದೇವಜಾತಿಯವರೂ, ಅಪ್ಸರಸ್ಸುಗಳೂ, ಶ್ರೀಕೃಷ್ಣನಿರ್ಯಾಣವನ್ನು ನೋಡಬೇಕೆಂಬ ಕುತೂಹಲದಿಂದ, ಗಾನನರ್ತನಗಳೊಡನೆ ಆ ಭಗವಂತನ ಗುಣಗಳನ್ನು ಕೊಂಡಾಡುತ್ತ, ಪರಮಸಂತೋಷದಿಂದ ಹೊರಟರು. ವಿಮಾನಾರೂಢರಾಗಿ ಆಕಾಶದಿಂದ ಬರುವಾಗಲೇ ಕೃಷ್ಣನಮೇಲೆ ಪುಷ್ಪವರ್ಷವನ್ನು ಕರೆದು, ಪರಮಭಕ್ತಿಯಿಂದ ಜಯಘೋಷವನ್ನು ಮಾಡುತ್ತ ಸಮೀಪಕ್ಕೆ ಬಂದು ನಿಂತರು. ಆಗ ಕೃಷ್ಣನು ತನ್ನ ವಿಭೂತಿಗಳೆನಿಸಿದ ಆ ಬ್ರಹ್ಮಾದಿದೇವತೆಗಳೆಲ್ಲರನ್ನೂ ಒಂದಾವರ್ತಿ ಪ್ರಸನ್ನದೃಷ್ಟಿಯಿಂದ ನೋಡಿ, ತಾನು ಯಾವ ಅಂಶದಿಂದ ಅವತರಿಸಿದ್ದನೋ, ಆ ಪರಮಾತ್ಮನಲ್ಲಿ ಏಕೀಭವಿಸಿದಂತೆ ಮನಸ್ಸಿನಲ್ಲಿ ಧ್ಯಾನಿಸಿ, ಕಮಲದಳದಂತಿರುವ ಕಣ್ಣುಗಳನ್ನು ಮುಚ್ಚಿಕೊಂಡನು. ಮತ್ತು ಲೋಕಮೋಹನವಾಗಿಯೂ, ಧ್ಯಾನಧಾರಣಗಳಿಗೆ ಶುಭಾಶ್ರಯಭೂತವಾಗಿಯೂ ಇದ್ದ ತನ್ನ ಮನುಷ್ಯದೇಹವನ್ನು * ಆಗ್ನೇಯಿಯೆಂಬ ಯೋಗಧಾರಣೆಯಿಂದ ದಹಿಸದಂತೆ, ಆ ದೇಹದೊಡನೆಯೇ ತನ್ನ ನಿಜಸ್ಥಾನವಾದ ವೈಕುಂಠವನ್ನು ಸುಖವಾಗಿ ಪ್ರವೇಶಿಸಿದನು. ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯು ಸುರಿಯಿತು. ಅನುವರಿಗೆ ಭೂಮಿಯಲ್ಲಿ ನೆಲೆಗೊಂಡಿದ್ದ ಸತ್ಯ, ಧರ್ಮ, ಧೃತಿ, ಕೀರ್ತಿ, ಇವೆಲ್ಲವೂ ಆ ಕೃಷ್ಣನನ್ನು ಹಿಂಬಾಲಿಸಿ ಹೊರಟುಹೋದುವು. ಹೀಗೆ ಕೃಷ್ಣನು ತನ್ನ ಗತಿಯು ಯಾರಿಗೂ ತಿಳಿಯದಂತೆ

---

* ಸ್ವೇಚ್ಛಾಮರಣವುಳ್ಳ ಯೋಗಿಗಳು ತಮ್ಮ ದೇಹವನ್ನು ಆಗ್ನೇಯಿಯೆಂಬ ಯೋಗಧಾರಣೆಯಿಂದ ದಹಿಸಿ ಲೋಕಾಂತರವನ್ನು ಹೊಂದುವರು ಭಗವಂತನು ಹಾಗೆ ದಹಿಸದೆಯೇ ತನ್ನ ಶರೀರವನ್ನು ಅದೃಶ್ಯವಾಗಿ ಮಾಡಿದನೆಂದು ಭಾವವು.

ನಿಜಸ್ಥಾನಕ್ಕೆ ಪ್ರವೇಶಿಸಿದಾಗ, ಅಲ್ಲಿದ್ದ ಬ್ರಹ್ಮಾದಿದೇವತೆಗಳೆಲ್ಲರೂ ಅವನ ದೇಹವೇನಾಯಿತೆಂದು ತಿಳಿಯದೆ ಆಶ್ಚರ್ಯಭರಿತರಾಗಿದ್ದರು. ಮನುಷ್ಯರು ಮೇಘದಿಂದ ಹೊರಟ ಮಿಂಚಿನ ಗತಿಯನ್ನು ತಿಳಿಯಲಾರದಂತೆ, ಆ ದೇವತೆಗಳೂ, ಶ್ರೀ ಕೃಷ್ಣನ ಯೋಗಗತಿಯನ್ನು ತಿಳಿಯಲಾರದೆ, ಆಶ್ಚರ್ಯಭರಿತರಾಗಿ ನೋಡುತಿದ್ದು, ಆಮೇಲೆ ಆ ಶ್ರೀಕೃಷ್ಣನ ಗುಣಗಳನ್ನು ಕೊಂಡಾಡುತ್ತ ತಮ್ಮ ತಮ್ಮ ಸ್ಥಾನಗಳಿಗೆ ಹಿಂತಿರುಗಿಹೋದರು. ಓ ಪರೀಕ್ಷಿದ್ರಾಜಾ! ಪರಮಪುರುಷನು ಹೀಗೆ ಯಾದವಾದಿಮನುಷ್ಯದೇಹದಿಂದ ಹುಟ್ಟಿ, ಆ ಜನ್ಮವನ್ನು ಬಿಟ್ಟಂತೆ ತೋರಿಸುವ ಚೇಷ್ಟೆಗಳೆಲ್ಲವೂ, ನಾಟಕದಲ್ಲಿ ವೇಷಧಾರಿಗಳಾದ ನಟರ ಚೇಷ್ಟೆಯಂತೆ ಆ ಭಗವಂತನ ಮಾಯಾವಿಡಂಬನಗಳೆಂದೇತಿಳಿ! ಆ ಪರಮಪುರುಷನು, ಚೇತನಾಚೇತನಾತ್ಮಕವಾದ ಈ ಜಗತ್ತನ್ನು ತಾನೇ ಸೃಷ್ಟಿಸಿ, ತಾನೂ ಅವುಗಳಲ್ಲಿ ಅಂತರ್ಯಾಮಿಯಾಗಿ ಆಯಾಕಾರ್ಯಗಳಲ್ಲಿ ಪ್ರೇರಿಸುತಿದ್ದು, ಕೊನೆಗೆ ಅವೆಲ್ಲವನ್ನೂ ತನ್ನಲ್ಲಿಯೇ ಉಪಸಂಹರಿಸಿಟ್ಟುಕೊಳ್ಳುವನು. ಈನಡುವೆ ತನ್ನ ಅಂಶಗಳಿಂದ ತಾನೂ ಒಂದೊಂದವತಾರವನ್ನೆತ್ತಿ, ನಾನಾವಿಧಲೀಲೆಗಳನ್ನು ತೋರಿಸುವನು. ಪ್ರಳಯಕಾಲದಲ್ಲಿ ಕೇವಲಸ್ವಾತ್ಮಾನುಭವದಿಂದ ಜಗದ್ವ್ಯಾಪಾರಗಳನ್ನು ಬಿಟ್ಟು ಸುಮ್ಮನಿರುವನು. ಇಂತಹ ಅಪಾರಮಹಿಮೆಯುಳ್ಳ ಭಗವಂತನಲ್ಲಿ ಇದೇನೂ ಆಶ್ಚರ್ಯವಲ್ಲವೆಂದು ತಿಳಿ! ಓ ಪರೀಕ್ಷಿದ್ರಾಜಾ! ಆ ಭಗವಂತನ ಅಪಾರಮಹಿಮೆಯನ್ನೂ, ಆಶ್ಚರ್ಯಚೇಷ್ಟಿತಗಳನ್ನೂ ಎಷ್ಟು ಹೇಳಿದರೆ ತಾನೇ ತೀರುವುದು? ಈ ಕೃಷ್ಣಾವತಾರದಲ್ಲಿಯೇ ಅತನು,ಯಮಲೋಕಕ್ಕೆ ಸಾಗಿಸಲ್ಪಟ್ಟಿದ್ದ ತನ್ನ ಗುರುಪುತ್ರನನ್ನು ಬದುಕಿಸಿ, ಅದೇ ಮನುಷ್ಯದೇಹದಿಂದ ಹಿಂತಿರುಗಿ ಕರೆತಂದನು. ನಿನ್ನ ತಾಯಿಯ ಗರ್ಭದಲ್ಲಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಗ್ಧನಾಗುತಿದ್ದ ನಿನ್ನನ್ನು ರಕ್ಷಿಸಿದನು ಬಾಣಾಸುರಯುದ್ಧವು ನಡೆದಾಗ, ಅದರಲ್ಲಿ ಮೃತ್ಯುವಿಗೂ ಮೃತ್ಯುವಾದ (ಯಮನನ್ನು ಜಯಿಸಿದ) ರುದ್ರನನ್ನು ಜಯಿಸಿದನು. ತನ್ನ ಪಾದಗಳಿಗೆ ಬಾಣವನ್ನು ಬಿಟ್ಟು ಮಹಾಪರಾಧವನ್ನು ಮಾಡಿದ 'ಬೇಡನಿಗೆ ಸಶರೀರ ಸ್ವರ್ಗವನ್ನು ಅನುಗ್ರಹಿಸಿದನು. ಇಂತಹ ಅಪಾರಮಹಿಮೆಯುಳ್ಳ ಭಗ

ವಂತನ ವ್ಯಾಪಾರವನ್ನು ಹೀಗೆಂದು ನಿರ್ಣಯಿಸಿ ತಿಳಿಯುವುದಕ್ಕೆ ಯಾರು ತಾನೇ ಸಮರ್ಥರು ? "ಅವನು ಹಾಗೆ ಸರ್ವಶಕ್ತನಾಗಿರುವಾಗ, ಭೂಲೋಕ ದಲ್ಲಿಯೇ ಸ್ಥಿರವಾಗಿ ಆ ಕೃಷ್ಣರೂಪದಿಂದ ನಿಂತಿರಬಾರದೇಕೆ?" ಎಂದು ಕೇಳುವೆಯಾ ? ಓ ರಾಜಾ ! ಅವನು ಸರ್ವಶಕ್ತನಾಗಿ, ತಾನೇ ಸೃಷ್ಟಿ ಸ್ಥಿತಿ ಲಯಗಳನ್ನು ನಿರ್ವಹಿಸಬಲ್ಲವನಾಗಿದ್ದರೂ, ಮನುಷ್ಯದೇಹವು ಎಂದಿದ್ದರೂ ಮರಣಶೀಲವೆಂಬದನ್ನು ಲೋಕಕ್ಕೆ ತೋರಿಸುವುದಕ್ಕಾಗಿ, ತಾನು ಕೈಕೊಂಡಿದ್ದ ಆ ಮನುಷ್ಯರೂಪವನ್ನು ಬಹುಕಾಲದವರೆಗೆ ಸ್ಥಿರವಾಗಿ ನಿಲ್ಲಿಸುವುದಕ್ಕೆ ಇಷ್ಟಪಡದೆ ಹೋದನು. ಓ ಪರೀಕ್ಷಿದ್ರಾಜಾ ! ಯಾವನು ಪ್ರಾತಃಕಾಲದಲ್ಲಿ ನಿದ್ರೆಯಿಂದೆದ್ದಕೂಡಲೆ,ಮೇಲೆ ಹೇಳಿದಂತೆ ಶ್ರೀಕೃಷ್ಣ ನು ಕೈಕೊಂಡ ವಿಲಕ್ಷಣವಾದ ಗತಿಯನ್ನು ಭಕ್ತಿಯಿಂದ ಕೀರ್ತಿಸುವನೋ, ಅವನೂಕೂಡ ದೇಹಾವಸಾನದಲ್ಲಿ ಆ ಭಗವಂತನ ಗತಿಯನ್ನೇ ಹೊಂದುವನು. ಅತ್ತಲಾಗಿ ದಾರುಕನು ದ್ವಾರಕೆಗೆ ಹೋಗಿ, ಅಲ್ಲಿ ಉಗ್ರಸೇನವಸುದೇವ ರನ್ನು ಕಂಡು, ಕೃಷ್ಣವಿಯೋಗದುಃಖದಿಂದ ಕಣ್ಣೀರುಬಿಡುತ್ತ ಅವರ ಪಾದಗಳಿಗೆ ನಮಸ್ಕರಿಸಿ, ಯಾದವರೆಲ್ಲರ ಮರಣವನ್ನೂ ಯಥಾಕ್ರಮ ವಾಗಿ ತಿಳಿಸಿದನು. ಈ ವೃತ್ತಾಂತವನ್ನು ಕೇಳಿದೊಡನೆ ಆ ದ್ವಾರಕೆಯ ಲ್ಲಿದ್ದವರೆಲ್ಲರೂ ದುಃಖದಿಂದ ಮೂರ್ಛಿತರಾದರು. ಮತ್ತು ಶ್ರೀ ಕೃಷ್ಣನೂ ತಮ್ಮನ್ನು ಬಿಟ್ಟುಹೋಗುವನೆಂಬ ಸೂಚನೆಯನ್ನು ಕೇಳಿ, ದುಃಖದಿಂದ ಬಾಯಿಬಡಿದುಕೊಳ್ಳುತ್ತ, ತಮ್ಮ ಜ್ಞಾತಿಗಳು ಮೃತರಾಗಿ ಬಿದ್ದಿದ್ದಸ್ಥಳಕ್ಕೆ ಬಂದು ಸೇರಿದರು. ದೇವಕೀದೇವಿಯೂ, ರೋಹಿಣಿಯೂ, ವಸುದೇವನೂ, ಆಹುಕನೂ, ಇನ್ನೂ ಕೆಲವು ಯಾದವಪ್ರಧಾನರೂ ಪ್ರಭಾಸತೀರ್ಥಕೆ, ಬಂದು, ಅಲ್ಲಿ ಬಲರಾಮನನ್ನಾಗಲಿ, ಶ್ರೀಕೃಷ್ಣನನ್ನಾಗಲಿ ಕಾಣದೆ, ದುಃಖದಿಂದ ಮೂರ್ಛಿತರಾದರು ವಸುದೇವಾದಿಯಾದವರೆಲ್ಲರೂ ಭಗವಂ ತನ ವಿಯೋಗವನ್ನು ಸಹಿಸಲಾರದೆ, ಅಲ್ಲಿಯೇ ಪ್ರಾಣಗಳನ್ನು ತ್ಯಜಿಸಿ ದರು. ಇವರೊಡನೆ ಬಂದಿದ್ದ ಯಾದವಸ್ತ್ರೀಯರೆಲ್ಲರೂ, ಅಲ್ಲಿ ಮೃತಿಹೊಂ ದಿದ ತಮ್ಮತಮ್ಮ ಪತಿಗಳ ದೇಹವನ್ನಾಲಿಂಗಿಸಿ, ಆ ಪತಿದೇಹದೊಡನೆ ಚಿತೆ ಯನ್ನೇರಿ ಸಹಗಮನಮಾಡಿದರು. ಹಾಗೆಯೇ ಬಲರಾಮ, ವಸುದೇವ,

ಪ್ರದ್ಯುಮ್ನಾದಿಗಳ ಪತ್ನಿಯರೂ, ತಮ್ಮ ತಮ್ಮ ಪತಿದೇಹವನ್ನಾಲಿಂಗಿಸಿ ಅಗ್ನಿಪ್ರವೇಶಮಾಡಿದರು. ಕೃಷ್ಣಪತ್ನಿಯರಾದ ರುಕ್ಮಿಣಿ ಮೊದಲಾದವರೆಲ್ಲರೂ, ತಮ್ಮ ಪತಿಯಾದ ಆ ಭಗವಂತನನ್ನೇ ಧ್ಯಾನಿಸುತ್ತ ಅಗ್ನಿಪ್ರವೇಶ ಮಾಡಿದರು. ಅರ್ಜುನನೂ ತನಗೆ ಪರಮಪ್ರಿಯನಾದ ಕೃಷ್ಣನ ವಿಯೋಗವನ್ನು ಸಹಿಸಲಾರದೆ ದುಃಖದಿಂದ ಕೊರಗುತಿದ್ದು, ಕೊನೆಗೆ ಆ ಶ್ರೀಕೃಷ್ಣನ ಗುಣಸ್ಮರಣದಿಂದಲೂ, ತನ್ನ ಹಿತೈಷಿಗಳು ಹೇಳಿದ ಸಮಾಧಾನವಾಕ್ಯಗಳಿಂದಲೂ, ಪ್ರಯತ್ನಪೂರ್ವಕವಾಗಿ ತನ್ನ ಮನಸ್ಸನ್ನು ತಾನೇ ಸಮಾಧಾನಕ್ಕೆ ತಂದುಕೊಂಡನು. ಆ ಮೇಲೆ ಅರ್ಜುನನು, ಸಂತಾನವಿಲ್ಲದೆ ಮೃತಿಹೊಂದಿದ ಆ ಯಾದವರೆಲ್ಲರಿಗೂ ತಾನೇ ಮುಂದಾಗಿನಿಂತು ಅಪರಕ್ರಿಯೆಗಳನ್ನು ಮಾಡಿಸಿದನು. ಅತ್ತಲಾಗಿ ಶ್ರೀಕೃಷ್ಣನು ಈ ಲೋಕವನ್ನು ಬಿಟ್ಟು ನಿಜಲೋಕಕ್ಕೆ ಹೋದೊಡನೆ, ಇತ್ತಲಾಗಿ ಸಮುದ್ರವು ಉಕ್ಕಿಬಂದು, ಶ್ರೀಕೃಷ್ಣನು ವಾಸಮಾಡುತಿದ್ದ ಅರಮನೆಯೊಂದನ್ನು ಬಿಟ್ಟು ದ್ವಾರಕಾನಗರವೆಲ್ಲವನ್ನೂ ಕೊಚ್ಚಿಸಿ ಬಿಟ್ಟಿತು. ಸ್ಮರಣಮಾತ್ರದಿಂದಲೇ ಅಶುಭಗಳೆಲ್ಲವನ್ನೂ ನೀಗಿಸತಕ್ಕ ಸಾಕ್ಷಾದ್ಭಗವಂತನು, ಎಲ್ಲಿ ನಿತ್ಯನಿವಾಸ ಮಾಡುತಿದ್ದನೋ, ಆ ಭಗವಂತನ ಸಾನ್ನಿಧ್ಯದಿಂದ ಯಾವುದು ಸಮಸ್ತ ಮಂಗಳಗಳಿಗೂ ಮಂಗಳವೆನಿಸಿಕೊಂಡಿದ್ದಿತೋ, ಅಂತಹ ಭಗವನ್ಮಂದಿರವನ್ನು ಸಮುದ್ರವು ತಾನೇ ಏನು ಮಾಡಬಲ್ಲುದು ? ಆಮೇಲೆ ಅರ್ಜುನನು, ಅಲ್ಲಿ ಮೃತಶೇಷರಾಗಿದ್ದ ಸ್ತ್ರೀಬಾಲವೃದ್ಧರೆಲ್ಲರನ್ನೂ ತನ್ನೊಡನೆ ಇಂದ್ರಪ್ರಸ್ಥಪುರಿಗೆ ಕರೆತಂದು, ಅಲ್ಲಿ ದೈವಾನುಗ್ರಹದಿಂದ ಬದುಕಿದ್ದ ವಜ್ರನೆಂಬ ಯಾದವನಿಗೆ, ಯಾದವರಾಜ್ಯದಲ್ಲಿ ಪಟ್ಟಾಭಿಷೇಕವನ್ನು ನಡೆಸಿದನು. ಓ ಪರೀಕ್ಷಿದ್ರಾಜಾ ! ನಿನ್ನ ತಾತಂದಿರಾದ ಧರ್ಮಜಾದಿಗಳೆಲ್ಲರೂ, ಅರ್ಜುನನಮೂಲಕವಾಗಿ, ತಮ್ಮ ಬಂಧುಗಳಾದ ಯಾದವರೆಲ್ಲರೂ ಮೃತಿಹೊಂದಿದುದನ್ನು ಕೇಳಿ ದುಃಖಿತರಾಗಿ, ನಿನ್ನೊಬ್ಬನನ್ನು ವಂಶೋದ್ಧಾರಕ್ಕಾಗಿ ನಿಲ್ಲಿಸಿ, ಎಲ್ಲರೂ ಒಟ್ಟಾಗಿ ಮಹಾಪ್ರಸ್ಥಾನಕ್ಕೆ ಹೊರಟರು. ಓ ರಾಜೇಂದ್ರಾ! ಹೀಗೆ ದೇವದೇವನಾದ ಶ್ರೀಕೃಷ್ಣನ ಜನ್ಮಕರ್ಮಾದಿಗಳನ್ನು ಯಾವನು ಶ್ರದ್ಧೆಯಿಂದ ಕೀರ್ತಿಸುವನೋ, ಅವನು ಸರ್ವಪಾಪಗಳಿಂದ ವಿಮುಕ್ತ

ನಾಗುವನು. ಹೀಗೆಯೇ ಆ ಭಗವಂತನು ಆಗಾಗ ಕೈಕೊಂಡ ಅವತಾರ ಚರಿತ್ರಗಳನ್ನೂ, ಕೃಷ್ಣಾವತಾರದಲ್ಲಿ ಆತನು ಬಾಲ್ಯ, ಪೌಗಂಡ, ಯೌವ ನಾದಿದಶೆಗಳಲ್ಲಿ ಕ್ರಮವಾಗಿ ತೋರಿಸಿದ ಅದ್ಭುತಕಾರ್ಯಗಳನ್ನೂ, ಈ ಶ್ರೀ ಮದ್ಭಾಗವತಪುರಾಣದಿಂದಲೂ, ಇತರಪುರಾಣಗಳಿಂದಲೂ ಶ್ರದ್ಧೆಯಿಂದ ಕೇಳಿದವನು, ಇಹಲೋಕದಲ್ಲಿ ಸಮಸ್ತಶ್ರೇಯಸ್ಸುಗಳಿಗೂ ಭಾಗಿಯಾಗಿ, ಪರಮಹಂಸರಾದ ಮಹಾಯೋಗಿಗಳಿಗೂ ಗತಿಯೆನಿಸಿಕೊಂಡ ಆ ಭಗವಂತ ನಲ್ಲಿ ಉತ್ತಮವಾದ ಭಕ್ತಿಪರಿಪಾಕವನ್ನು ಹೊಂದುವನು. ಇದು ಮೂವ ತ್ತೊಂದನೆಯ ಅಧ್ಯಾಯವು.

ಏಕಾದಶಸ್ಕಂಧವು ಸಮಾಪ್ತವು.

ಶ್ರೀ ರುಕ್ಮಿಣೀ ಸತ್ಯಭಾಮಾಸಮೇತ ಶ್ರೀಗೋಪಾಲಕೃಷ್ಣ

ಪರಬ್ರಹ್ಮಣೇ ನಮಃ.

ಶ್ರೀರಸ್ತು.

---



ಶ್ರೀಃ.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

# ಶ್ರೀಮದ್ಭಾಗವತವು

## ದ್ವಾದಶಸ್ಕಂಧವು.

---

ಪರೀಕ್ಷಿದ್ರಾಜನು ತಿರುಗಿ ಶುಕಮುನಿಯನ್ನು ಪ್ರಶ್ನೆಮಾಡುವನು. ''ಓ ಮುನೀಂದ್ರಾ! ಯಾದವರೆಲ್ಲರೂ ಮೃತರಾಗಿ, ಶ್ರೀಕೃಷ್ಣನೂ ಈ ಭೂಮಿಯನ್ನು ಬಿಟ್ಟು ನಿಜಸ್ಥಾನಕ್ಕೆ ಹೋದಮೇಲೆ, ಚಂದ್ರವಂಶವು ಯಾರಿಂದ ಮುಂದುವರಿಯಿತೆಂಬುದನ್ನು ನನಗೆ ತಿಳಿಸಬೇಕು" ಎನಲು, ಶುಕಮುನಿಯು ''ಓ ರಾಜೇಂದ್ರಾ! ಹಿಂದೆ ನಾನು (ನವಮಸ್ಕಂಧದಲ್ಲಿ) ಮುಂದೆ ನಡೆಯುವ ಪೂರುವಂಶವಿಸ್ತಾರವನ್ನು ತಿಳಿಸುವಾಗ, ಮಾರ್ಜಾರಿ ಯೆಂಬವನಿಗೆ ಶ್ರುತಶ್ರವನೇ ಮೊದಲಾಗಿ *ಇಪ್ಪತ್ತುಮಂದಿ ಪುತ್ರರು ಜನಿಸು ವುದಾಗಿ ಹೇಳಿದೆನಲ್ಲವೆ?. ಅವರಲ್ಲಿ ಪುರಂಜಯನೆಂಬವನು ಕನಿಷ್ಠನು. ಇವನು ಬೃಹದ್ರಥವಂಶದವನಾದುದರಿಂದ ಬಾರ್ಹದ್ರಥನೆಂದು ಪ್ರಸಿದ್ಧನಾಗುವ ನು. ಈ ಪುರಂಜಯನಿಗೆ ಶುನಕನೆಂಬ ಮಂತ್ರಿಯೊಬ್ಬನಿದ್ದು, ಅವನು ಸ್ವಾಮಿ ದ್ರೋಹಿಯಾಗಿ, ತನ್ನ ಪ್ರಭುವಾದ ಪುರಂಜಯನನ್ನೇ ಕೊಲ್ಲಿಸಿ ಅವನ ಮಗನಾದ ಪ್ರದ್ಯೋತನೆಂಬವನನ್ನು ರಾಜ್ಯದಲ್ಲಿರಿಸುವನು. ಆ ಪ್ರದ್ಯೋ

---

* ಇಲ್ಲಿ ಮಾರ್ಜಾರಿ ಮೊದಲಾಗಿ ಪುರಂಜಯನವರೆಗೆ ಇಪ್ಪತ್ತುಮಂದಿರಾಜರ ಆಳ್ವಿಕೆಯು ಹಿಂದು ಸಾವಿರವರ್ಷಗಳ ಕಾಲವೆಂದು ಹಿಂದೆ ನವಮಸ್ಕಂಧದಲ್ಲಿ ಹೇಳಲ್ಪಟ್ಟಿದೆ.

ತನಿಗೆ ಅಲಕನೆಂಬ ಮಗನಾಗುವನು. ಅವನಿಂದ ವಿಶಾಖಯೂಪನೂ, ವಿಶಾಖಯೂಪನಿಂದ ರಾಜಕನೂ, ರಾಜಕನಿಂದ ನಂದಿವರ್ಧನನೂ ಹುಟ್ಟು ವರು. ಪ್ರದ್ಯೋತನನ ಪರಂಪರೆಯವರಾದ ಬಂದ ಈ ಐದುಮಂದಿ ರಾಜರೂ, ನೂರಮೂವತ್ತೆಂಟು ವರ್ಷಗಳವರೆಗೆ ರಾಜ್ಯಭಾರಮಾಡುವರು. ಅದರಿಂದಾಚೆಗೆ ಇದೇವಂಶದಲ್ಲಿ ಕ್ರಮವಾಗಿ ಪುತ್ರಪರಂಪರೆಯಿಂದ, ಶಿಶುನಾಗ, ಕಾಕವರ್ಣ, ಕ್ಷೇಮಧರ್ಮ, ಕ್ಷೇತ್ರಜ್ಞ, ವಿಧಿಸಾರ, ಅಜಾತ ಶತ್ರು, ದರ್ಭಕ, ಅಜಯ, ನಂದಿವರ್ಧನ, ಮಹಾನಂದಿಯೆಂಬವರು ಹುಟ್ಟು ವರು. ಶಿಶುನಾಗನು ಮೊದಲಾದ ಈ ರಾಜರೆಲ್ಲರೂ ಕಲಿಯುಗದಲ್ಲಿ ಮುನ್ನೂ ರರುವತ್ತು ವರ್ಷಗಳವರೆಗೆ ರಾಜ್ಯಭಾರಮಾಡುವರು. ಆಮೇಲೆ ಆ ಮಹಾ ನಂದಿಯೆಂಬವನಿಗೆ, ಒಬ್ಬ ಶೂದ್ರಸ್ತ್ರೀಯ ಗರ್ಭದಲ್ಲಿ, ನಂದನೆಂಬ ಮಗನು ಹುಟ್ಟಿ, ಅವನು ಮಹಾಪದ್ಮಸಂಖ್ಯೆಯಷ್ಟು ಸೇನೆಗೂ, ಧನಕ್ಕೂ ಅಧಿಪತಿ ಯೆನಿಸಿಕೊಂಡು, ಮಹಾಬಲಶಾಲಿಯೆಂದು ಪ್ರಸಿದ್ಧಿಹೊಂದುವನು. ಇವ ನಿಂದ ಅನೇಕಕ್ಷತ್ರಿಯಕುಲವು ನಷ್ಟವಾಗುವುದು. ಶೂದ್ರಸ್ತ್ರೀಗರ್ಭದಲ್ಲಿ ಹುಟ್ಟಿದ ಈ ನಂದನಿಂದಾಚೆಗೆ ಹುಟ್ಟುವ ರಾಜರೆಲ್ಲರೂ, ಶೂದ್ರಪ್ರಾಯ ರಾಗಿಯೇ ಇದ್ದು, ಅಧಾರ್ಮಿಕರೆನಿಸುವರು. ಆ ಮಹಾಪದ್ಮನೆಂದು ಪ್ರಸಿದ್ಧ ನಾದ ನಂದನು, ಎರಡನೆಯ ಪರಶುರಾಮನೋ ಎಂಬಂತೆ ಮಹಾಪರಾ ಕ್ರಮಿಯೆನಿಸಿ, ನಿರಂಕುಶವಾದ ಆಜ್ಞೆಯಿಂದ ಏಕಛತ್ರಾಧಿಪತಿಯಾಗಿ ರಾಜ್ಯವನ್ನಾಳುವನು. ಈ ನಂದನಿಗೆ ಸುಮಾಲ್ಯನೇ ಮೊದಲಾದ ಎಂಟು ಮಂದಿ ಪುತ್ರರು ಹುಟ್ಟಿ, ನೂರುವರ್ಷಗಳವರೆಗೆ ರಾಜ್ಯವನ್ನಾಳುವರು. ತಂದೆಯಾದ ನಂದನೊಡನೆ ಸೇರಿ ನವನಂದರೆಂದು ಪ್ರಸಿದ್ಧರಾದ ಈ ಒಂ ಬತ್ತುಮಂದಿಯೂ, ಕೌಟಿಲ್ಯನೆಂಬ ಬ್ರಾಹ್ಮಣನೊಬ್ಬನನ್ನು ಆಶ್ರಯಿ ಸಿದ್ದು, ಕೊನೆಗೆ ಅವನಿಂದಲೇ ವಂಚಿತರಾಗಿ ಸಾಯುವರು. ನಂದರು ಮೃತರಾದಮೇಲೆ, ಮೌರ್ಯರೆಂಬವರು ರಾಜ್ಯವನ್ನಾಳುವರು. ನಂದಸಂಹಾರ ಕನಾದ ಆ ಕೌಟಿಲ್ಯನೆಂಬ ಬ್ರಾಹ್ಮಣನು, ಆ ಮೌರ್ಯರಲ್ಲಿ ತನಗೆ ಪುತ್ರ ಪ್ರಾಯನಾದ ಚಂದ್ರಗುಪ್ತನೆಂಬವನನ್ನು ರಾಜ್ಯಾಧಿಕಾರದಲ್ಲಿರಿಸುವನು. ಆ ಚಂದ್ರಗುಪ್ತನಿಗೆ ವಾರಿಸಾರನೆಂಬ ಪುತ್ರನಾಗುವನು. ಅವನಿಂದ

ಅಶೋಕವರ್ಧನನೆಂಬ ಪುತ್ರನು ಜನಿಸುವನು. ಅವನಿಂದ ಸುಯಶನೆಂಬವನು ಹುಟ್ಟುವನು. ಹಾಗೆಯೇ ಸುಯಶನಿಂದ ಸಂಗತನೂ, ಅವನಿಂದ ಶಾಲಿಶುಕನೂ, ಅವನಿಂದ ಸೋಮಶರ್ಮನೂ, ಅವನಿಂದ ಶತಧನ್ವನೂ, ಶತಧನ್ವನಿಂದ ಬೃಹದ್ರಥನೂ ಹುಟ್ಟುವರು. ಮೌರ್ಯಕುಲದವರಾದ ಈ ಹತ್ತುಮಂದಿರಾಜರು, ನೂರಮೂವತ್ತೇಳುವರ್ಷಗಳವರೆಗೆ ರಾಜ್ಯಭಾರ ಮಾಡುವರು. ಇವರಲ್ಲಿ ಕೊನೆಯವನಾದ ಬೃಹದ್ರಥನಿಗೆ ಪುಷ್ಯಮಿತ್ರನೆಂಬ ಸೈನ್ಯಾಧಿಪತಿಯೊಬ್ಬನಿದ್ದು, ಅವನು ತನ್ನ ರಾಜನನ್ನು ಕೊಂದು ತಾನೇ ರಾಜ್ಯವನ್ನಾಕ್ರಮಿಸುವನು. ಈ ಪುಷ್ಯಮಿತ್ರನಿಂದ ಅಗ್ನಿಮಿತ್ರನೂ, ಅವನಿಂದ ಸುಜ್ಯೇಷ್ಠನೂ, ಸುಜ್ಯೇಷ್ಠನಿಂದ ವಸುಮಿತ್ರನೂ, ಅವನಿಂದ ಭದ್ರಕನೂ, ಭದ್ರಕನಿಂದ ಪುಳಿಂದನೂ, ಅವನಿಂದ ಘೋಷನೂ, ಘೋಷನಿಂದ ವಜ್ರಮಿತ್ರನೂ, ವಜ್ರಮಿತ್ರನಿಂದ ಭಾಗವತನೂ, ಭಾಗವತನಿಂದ ದೇವಭೂತಿಯೂ ಹುಟ್ಟುವರು. ಅಗ್ನಿಮಿತ್ರನೇ ಮೊದಲಾದ ಈ ಸಂತಾನದವರು ಒಂಭತ್ತುಮಂದಿಯೂ, ಶುಂಗರೆಂಬವರೂ ಸೇರಿ, ಈ ಹತ್ತುಮಂದಿಯೂ ನೂರಹನ್ನೆರಡು ವರ್ಷಗಳವರೆಗೆ ರಾಜ್ಯವನ್ನಾಳುವರು. ಅದರಿಂದಾಚೆಗೆ! ಈ ಭೂಮಿಯು, ನೀಚಗುಣವುಳ್ಳ ಕಾಣ್ವರೆಂಬ ಕೆಲವು ರಾಜರ ಕೈಗೆ ಸೇರುವುದು. ಹೇಗೆಂದರೆ ಶುಂಗನೆಂಬ ನಾಮಾಂತರವುಳ್ಳ ದೇವಭೂತಿಗೆ ಕಣ್ವನೆಂಬ ಮಂತ್ರಿಯೊಬ್ಬನಿದ್ದು, ಅವನು ತನ್ನ ರಾಜನು ಕೇವಲಸ್ತ್ರೀಲೋಲನಾಗಿರುವುದನ್ನು ನೋಡಿ, ಚಾತುರ್ಯದಿಂದ ಅವನನ್ನು ಕೊಂದು, ತಾನೇ ರಾಜ್ಯವನ್ನು ನಡೆಸುವನು. ಇವನಿಗೆ ವಸುದೇವನೆಂದೂ ನಾಮಾಂತರವುಂಟು. ಇವನಿಗೆ ಭೂಮಿತ್ರನೆಂಬ ಮಗನು ಹುಟ್ಟುವನು. ಅವನಿಗೆ ನಾರಾಯಣನೆಂಬ ಪುತ್ರನಾಗುವನು. ಆ ನಾರಾಯಣನಿಗೆ ಸುಶರ್ಮನೆಂಬ ಪುತ್ರನು ಹುಟ್ಟುವನು. ಈ ಕಣ್ವಸಂತಾನದವರು ಮುನ್ನೂರನಾಲ್ವತ್ತೈದು ವರ್ಷಗಳವರೆಗೆ ರಾಜ್ಯವನ್ನಾಳುವರು. ಕೊನೆಗೆ ಕಣ್ವವಂಶದ ಆ ಸುಶರ್ಮನನ್ನು, ಅವನಿಗೆ ಭೃತ್ಯನಾಗಿದ್ದ ಪರಮನೀಚನಾದ ಆಂಧ್ರದೇಶದ ಬಲೀಕನೆಂಬವನೊಬ್ಬನು ಕೊಂದು, ತಾನೇ ಸ್ವಲ್ಪಕಾಲದವರೆಗೆ ರಾಜ್ಯವನ್ನಾಳುವನು. ಆಮೇಲೆ ಅವನ ಸಹೋದರನಾದ ಕೃಷ್ಣನೆಂಬ

ವನು ಪಟ್ಟವನ್ನು ವಹಿಸುವನು. ಇವನ ಮಗನು ಶಾಂತಕರ್ಣನು. ಅವನ ಮಗನು ಪೌರ್ಣಮಾಸನು ಅವನಿಗೆ ಲಂಬೋದರನೆಂಬ ಮಗನಾಗುವನು. ಹೀಗೆಯೇ ಇವನಿಂದಾಚೆಗೆ, ಪುತ್ರಪರಂಪರೆಯಿಂದ, ಚಿವಿಲಕ, ಮೇಘಸ್ವಾತಿ, ಅಟಮಾನ, ಅರಿಷ್ಟಕರ್ಮ, ಹಾಲೇಯ, ತಲಕ, ಪುರುಷಭಾನು, ಸುನಂದನ, ಚಕೋರ, ಶಿವಸ್ವಾತಿ, ಗೋಮತಿ, ಪುರೀಮಂತ, ವೇದಶಿರಸ್ಸು, ಶಿವಸ್ಕಂದ, ಯಜ್ಞಶ್ರೀ, ವಿಜಯ, ಚಂದ್ರವಿಜ್ಞ, ಸುಲೋಮಧಿಯೆಂಬವರು ಹುಟ್ಟುವರು. ಹೀಗೆ ವಲೀಕರೆಂಬ ಕರೆಯಲ್ಪಡುವದ ಇಪ್ಪತ್ತೈದು ಮಂದಿ ರಾಜರ ಆಳ್ವಿಕೆಯು ನಾನೂರೈವತ್ತಾರುವರ್ಷಗಗಳ ಕಾಲ ನಡೆಯುವುದು. ಆದರಿಂದಾಚೆಗೆ ಅಭೀರವಂಶದವರಾದ ಒಂಭತ್ತುಮಂದಿ ಅರಸರು ಅವಭೃತಿಯೆಂಬ ನಗರದಲ್ಲಿದ್ದು, ರಾಜ್ಯಭಾರವನ್ನು ಮಾಡುವರು ಆಮೇಲೆ ಗಾರ್ದಭರೆಂಬ ಹತ್ತುಮಂದಿ ಅರಸರು ರಾಜ್ಯವಾಳುವರು. ಅದರಿಂದಾಚೆಗೆ ಹದಿನಾರುಮಂದಿ ಕಂಕಕುಲದವರು ಅತ್ಯಂತಕಾಮುಕರಾಗಿ ರಾಜ್ಯವನ್ನು ನಡೆಸುವರು. ಆಮೇಲೆ ಕ್ರಮವಾಗಿ ಎಂಟುಮಂದಿ ಯವನ ಜಾತಿಯವರೂ, ಹದಿನಾಲ್ಕುಮಂದಿ ತುರುಷ್ಕರೂ, ಹದಿಮೂರುಮಂದಿ ಮುರುಂಡರೂ, ಹನ್ನೊಂದುಮಂದಿ ಮೌನಸಂತತಿಯವರೂ ರಾಜ್ಯವನ್ನಾಳುವರು. ಮೌನಸಂತತಿಯವರುಹೊರತು, ಅದಕ್ಕೆ ಹಿಂದಿನ ರಾಜರ ಆಳ್ವಿಕೆಯು ಒಂದು ಸಾವಿರದ ತೊಂಬತ್ತೊಂಬತ್ತು ವರ್ಷಗಳವರೆಗೆ ನಡೆಯುವುದು. ಮೌನರ ಆಳ್ವಿಕೆಯು ಮುನ್ನೂರುಸಂವತ್ಸರಗಳವರೆಗೆ ಸಾಗುವುದು. ಇವರ ಕಾಲಾನಂತರದಲ್ಲಿ, ಕಿಲಂಕಿಲೆಯೆಂಬ ಪಟ್ಟಣದಲ್ಲಿ, ಭೂತನಂದ, ಯವಂಹರ, ಶಿಶುನಂದ, ಇವನ ತಮ್ಮನಾದ ಯಶೋನಂದಿ, ಪ್ರವೀರಕರೆಂಬವರು ನೂರಾರು ಸಂವತ್ಸರಗಳವರೆಗೆ ರಾಜ್ಯಭಾರ ಮಾಡುವರು. ಇವರಿಗೆ ಬಾಹ್ಲೀಕನೇ ಮೊದಲಾದ ಹದಿಮೂರುಮಂದಿ ಪುತ್ರರು ಜನಿಸುವರು. ಬಾಹ್ಲೀಕನಿಗೆ ಪುಷ್ಯಮಿತ್ರನೆಂಬ ಮಗನು ಹುಟ್ಟಿ ರಾಜ್ಯವನ್ನು ವಹಿಸುವನು. ಇವನಿಗೆ ದುರ್ಮಿತ್ರನೆಂಬ ಮಗನಾಗುವನು. ಇವನ ಕಾಲಾನಂತರದಲ್ಲಿ ಏಳುಮಂದಿ ಆಂಧ್ರರೂ, ಏಳುಮಂದಿ ಕೋಸಲರೂ, ಕೆಲವುಮಂದಿ ವೈಡೂರರೂ,ಮತ್ತೆ ಕೆಲವುಮಂದಿ ನಿಷಧರೂ, ಸಣ್ಣ

ಸಣ್ಣ ರಾಜ್ಯಗಳನ್ನೇರ್ಪಡಿಸಿ ಆಯಾದೇಶದ ಹೆಸರಿನಿಂದಲೇ ಖ್ಯಾತರಾಗಿ ರಾಜ್ಯಭಾರಮಾಡುವರು ಹೆಚ್ಚುಕಡಿಮೆಯಾಗಿ ಇವರೆಲ್ಲರೂ ಸಮಾನ ಕಾಲಿಕರು. ಮತ್ತು ಎಲ್ಲರೂ ಬಾಹ್ಲೀಕಸಂತತಿಯವರು. ಇವರಲ್ಲಿ ಮಗಧ ರಾಜರಲ್ಲಿ ವಿಶ್ವಸ್ಫೂರ್ಜಿಯೆಂಬವನು,ಹಿಂದೆ ಹೇಳಿದ ಪುರಂಜಯನಿಗಿಂತಲೂ ಬಲದಲ್ಲಿ ಮೇಲೆನಿಸುವನು. ಆದರೆ ಇವನು ಬಾಹ್ಮಣಾದಿವರ್ಣಗಳೆಲ್ಲ ವನ್ನೂ ಕೆಡಿಸಿ, ತನ್ನ ರಾಜ್ಯವನ್ನೆಲ್ಲಾ ಪುಲಿಂದ ಯದು ಮದ್ರಕಗಳೆಂಬ ಹೆಸರಿನಿಂದ ಮ್ಲೇಚ್ಛಪ್ರಾಯಗಳನ್ನಾಗಿ ಮಾಡುತ್ತ, ತನ್ನ ಪ್ರಜೆಗಳೆಲ್ಲರೂ ವರ್ಣಾಶ್ರಮಧರ್ಮಗಳನ್ನು ಬಿಟ್ಟುಬಿಡುವಹಾಗೆ ನಿರ್ಬಂಧಿಸಿ ರಾಜ್ಯ ವನ್ನು ನಡೆಸುವನು. ಈತನು ಬಹಳ ಪರಾಕ್ರಮಿಯಾಗಿ, ಪದ್ಮವತಿ ಯೆಂಬ ಪಟ್ಟಣದಲ್ಲಿ ವಾಸಮಾಡುತ್ತಾ, ಕ್ಷತ್ರವಂಶವನ್ನೇ ನಿರ್ಮೂಲವಾಗಿ ಕೆಡಿಸುವನು. ಗಂಗಾದ್ವಾರದಿಂದ ಪ್ರಯಾಗದವರೆಗಿನ ಸಮಸ್ತದೇಶವೂ ಇವನ ಕೈವಶವಾಗುವುದು. ಇವನ ಕಾಲದಲ್ಲಿ ಸೌರಾಷ್ಟ್ರ, ಅವಂತಿ, ಅಭೀರ, ಅರ್ಬುದ, ಮಾಲವ, ಮೊದಲಾದ ದೇಶದಲ್ಲಿರುವ ಬ್ರಾಹ್ಮಣ ರೆಲ್ಲರೂ. ಉಪನಯನನಾದಿ ಸಂಸ್ಕಾರಗಳನ್ನು ಬಿಟ್ಟು,ಶೂದ್ರಪ್ರಾಯರಾಗು ವರು. ಕೊನೆಕೊನೆಗೆ ಸಮಸ್ತಪ್ರದೇಶಗಳೂ ಶೂದ್ರಪ್ರಚುರವಾಗುವುವು. ಸಿಂಧುನದಿಯ, ಮತ್ತು ಚಂದ್ರಭಾಗಾನದಿಯ ತೀರದೇಶಗಳೂ, ಕುಂತಿ ಕಾಶ್ಮೀರಮಂಡಲಗಳೂ ಪತಿತರಾದ ಬ್ರಾಹ್ಮಣರಿಗೂ, ಶೂದ್ರರಿಗೂ, ಮ್ಲೇಚ್ಛರಿಗೂ,ಬ್ರಹ್ಮವರ್ಚಸ್ಸಿಲ್ಲದ ಇತರ ನೀಚಜಾತಿಯವರಿಗೂ ಆಶ್ರಯ ಗಳಾಗಿ ಅವರಿಂದಲೇ ಆಳಲ್ಪಡುವುವು ಓ ಪರೀಕ್ಷಿದ್ರಾಜಾ! ಹಿಂದೆ ಹೇಳಿ ದಂತೆ ಮ್ಲೇಚ್ಛಪ್ರಾಯರಾದ ಈ ರಾಜರೆಲ್ಲರೂ ಒಂದೇ ಕಾಲದಲ್ಲಿರುವರು. ಇವರೆಲ್ಲರೂ ಅಧರ್ಮದಲ್ಲಿಯೂ, ಅನೃತದಲ್ಲಿಯೂ, ನಿರತರಾಗುವರು. ಇವರಿಗೆ ಔದಾರ್ಯಬುದ್ಧಿಯಿರದು. ಇವರು ಬಹಳ ತೀವ್ರ ಕೋಪವುಳ್ಳವ ರಾಗಿ, ಸ್ತ್ರೀಹತ್ಯೆ, ಗೋಹತ್ಯೆ, ಶಿಶುಹತ್ಯೆ, ಬ್ರಹ್ಮಹತ್ಯೆ, ಮುಂತಾದ ಪಾಪ ಕಾರ್ಯಗಳಿಗೆ ಹಿಂಜರಿಯಲಾರರು. ಪರಸ್ತ್ರೀಯರನ್ನೂ, ಪರದ್ರವ್ಯವನ್ನೂ, ಅಪಹರಿಸುವುದರಲ್ಲಿಯೇ ನಿರತರಾಗುವರು. ಇವರ ಕೋಪಪ್ರಸಾದಗಳು ಕ್ಷಣಿಕಗಳು! ಇವರಿಗೆ ಆಯುಸ್ಸೂ, ದೇಹಬಲವೂಕೂಡ ಬಹಳ ಸ್ವಲ್ಪವಾ

ಗಿರುವುವು. ಇವರ ಕಾಲದಲ್ಲಿ ಗರ್ಭಾದಾನ ಮೊದಲಾದ ಸಂಸ್ಕಾರಗಳೊಂದೂ ಇಲ್ಲದೆ. ಜನರೆಲ್ಲರೂ ಕ್ರಿಯಾಹೀನರಾಗಿ, ರಜಸ್ತಮೋಗುಣಗಳಿಂದಲೇ ತುಂಬಿರುವರು. ಹೀಗೆ ಮ್ಲೇಚ್ಛರು ರಾಜರೂಪದಿಂದಿದ್ದು ಪ್ರಜೆಗಳನ್ನು ಬಹಳವಾಗಿ ಹಿಂಸಿಸುವರು. ಈ ಮ್ಲೇಚ್ಛರೇ ಭೂಮಿಯನ್ನು ಪಾಲಿಸತಕ್ಕವರಾದುದರಿಂದ, “ಯಥಾ ರಾಜಾ ತಥಾ ಪ್ರಜಾಃ” ಎಂಬಂತೆ, ಪ್ರಜೆಗಳೆಲ್ಲರೂ, ಅವರ ಆಚಾರವ್ಯವಹಾರಗಳನ್ನೇ ಅನುಸರಿಸುತ್ತಾ ಬರುವರು. ಹಾಗಿದ್ದರೂ ಆ ರಾಜರ ವಿಶ್ವಾಸಕ್ಕೆ ಪಾತ್ರರಾಗದೆ,ಅವರಿಂದ ನಾನಾವಿಧವಾದ ಹಿಂಸೆಗಳನ್ನನುಭವಿಸುತ್ತ, ತಮ್ಮೊಳಗೆ ತಾವು ಅಂತಃಕಲಹದಿಂದಲೂ ಒಬ್ಬರನ್ನೊಬ್ಬರು ಪೀಡಿಸುತ್ತ,ಕೆಟ್ಟು ಹೋಗುವರು. ಇದು ಮೊದಲನೆಯ ಅಧ್ಯಾಯವು.

---

(ಕಲಿಯುಗಪ್ರಾದುರ್ಭಾವದ ಲಕ್ಷಣಗಳು.
ಕಲ್ಯವತಾರಕ್ರಮವು.)

ಓ ರಾಜೇಂದ್ರಾ! ಆಗ ದಿನದಿನಕ್ಕೆ ಜನರಲ್ಲಿ ಕಲಿಕಾಲದೋಷದಿಂದ, ಧರ್ಮ, ಸತ್ಯ, ಕ್ಷಮೆ, ದಯೆ, ಶೌಚಾಚಾರಗಳು, ಆಯುಸ್ಸು, ದೇಹಬಲ, ಸ್ಮರಣಶಕ್ತಿ, ಮುಂತಾದುವೆಲ್ಲಾ ಕ್ಷಯಿಸುತ್ತ ಬರುವುವು ಆ ಕಲಿಕಾಲದಲ್ಲಿ ಹಣವೊಂದೇ ಮನುಷ್ಯರಿಗೆ ಕುಲವನ್ನೂ, ಆಚಾರವನ್ನೂ, ಸದ್ಗುಣಗಳನ್ನೂ ಉಂಟುಮಾಡತಕ್ಕುದು. ಹಣವಿದ್ದವನಿಗೆಮಾತ್ರವೇ ಎಲ್ಲಾಭಾಗದಲ್ಲಿಯೂ ಪೂಜ್ಯತೆ! ನ್ಯಾಯಧರ್ಮವ್ಯವಸ್ಥೆಗಳಿಗೂ ಧನಬಲವೇ ಮುಖ್ಯಕಾರಣವು. ದಾಂಪತ್ಯನಿರ್ಣಯಕ್ಕೆ ಮನಸ್ಸಿನ ಅನುರಾಗವೊಂದೇ ಮುಖ್ಯವೇ ಹೊರತು ಕುಲಶೀಲಾದಿಗಳ ವಿಮರ್ಶೆಯಿಲ್ಲ! ಕ್ರಯವಿಕ್ರಯಾದಿವ್ಯಾಪಾರಗಳಲ್ಲಿ ವಂಚನೆಯೇ ಪ್ರಧಾನವು. ರತಿಚಾತುರ್ಯವೊಂದೇ ಸ್ತ್ರೀ ಪುರುಷರಿಗೆ ಪ್ರಾಶಸ್ತ್ಯವನ್ನು ಪ್ರಕಾಶಗೊಳಿಸತಕ್ಕುದು. ಜನಿವಾರವೊಂದೇ ಬ್ರಾಹ್ಮಣಲಕ್ಷಣವು.ತ್ರಿದಂಡ ಮೊದಲಾದಗುರುತುಗಳುಮಾತ್ರವೇ ಆಯಾ ಆಶ್ರಮಗಳನ್ನು ತಿಳಿಸತಕ್ಕ ಲಕ್ಷಣಗಳೇ ಹೊರತು! ಆಶ್ರಮಧರ್ಮಗಳಿಲ್ಲ. ಒಂದಾಶ್ರಮವನ್ನು ಬಿಟ್ಟು ಮತ್ತೊಂದಾಶ್ರಮವನ್ನು ಕೈಕೊಳ್ಳುವುದಕ್ಕೂ,

ಹಿಡಿದ ನ್ಯಾಯವು ದುರ್ಬಲವಾಗುವುದಕ್ಕೂ, ದಾರಿದ್ರ್ಯವೇ ಮುಖ್ಯಕಾರಣವು. ಬಾಯಾಳಿತನವೇ ಪಾಂಡಿತ್ಯವನ್ನು ತೋರಿಸತಕ್ಕುದೇಹೊರತು ಜ್ಞಾನವಲ್ಲ! ಒಬ್ಬನು ನಿಕೃಷ್ಟನೆನಿಸಿಕೊಳ್ಳುವುದಕ್ಕೆ ದಾರಿದ್ರ್ಯವೇ ಕಾರಣವೇಹೊರತು ದುರ್ಗುಣಗಳಲ್ಲ! ದೇಹಾಲಂಕಾರಾದಿದಂಭಗಳಿಂದಲೇ ಮನುಷ್ಯರಿಗೆ ಉತ್ಕೃಷ್ಟತೆ! ಸ್ವೀಕರಿಸುವುದೊಂದೇ ವಿವಾಹವೇಹೊರತು ಶಾಸ್ತ್ರೀಯವಾದ ವಿಧಿಗಳಲ್ಲ. ಮೈಯಲ್ಲಿರುವ ಕೊಳೆಯನ್ನು ನೀಗಿಸುವುದೊಂದೇ ಸ್ನಾನವೇಹೊರತು, ಶುದ್ಧತೀರ್ಥಗಳಲ್ಲಿ ಸ್ನಾನಮಾಡುವುದಲ್ಲ! ಊರ ಹೊರಗಿನ ಕಟ್ಟೆಗಳೇ ಮಹಾಪುಣ್ಯತೀರ್ಥಗಳೇಹೊರತು ಗಂಗಾದಿಗಳಲ್ಲ! ಸೊಗಸಿಗಾಗಿ ತಲೆಕೂದಲನ್ನು ಕತ್ತರಿಸಿಕೊಳ್ಳುವುದೇ ಕ್ಷೌರವೇಹೊರತು, ಶಾಸ್ತ್ರೋಕ್ತವಾದ ರೀತಿಯಿಂದ ಮೈಕೂದಲನ್ನು ತೆಗೆಯಿಸುವುದಲ್ಲ. ಉದರಭರಣವೊಂದೇ ಸಕಲಪುರುಷಾರ್ಥವು. ಬಾಯಿಬಡಿಯುವುದೇ ಸತ್ಯವೇಹೊರತು ಸುಳ್ಳಾಡದಿರುವುದಲ್ಲ. ಕುಟುಂಬಭರಣವೇ ಮನುಷ್ಯನಿಗೆ ದೊಡ್ಡ ಸಾಮರ್ಥ್ಯವೆನಿಸುವುದೇಹೊರತು, ಧರ್ಮಾದಿಪುರುಷಾರ್ಥಸಾಧನೆಯಲ್ಲ! ದಾನಧರ್ಮಗಳು ಯಶಸ್ಸಿಗಾಗಿಯೇ ಹೊರತು ಪರಲೋಕಸಾಧನೆಗಲ್ಲ! ಹೀಗೆ ಕಲಿಕಾಲದಲ್ಲಿ ಭೂಮಿಯೆಲ್ಲವೂ ದುಷ್ಟಪ್ರಜೆಗಳಿಂದ ತುಂಬಿ ಹೋದಾಗ, ವರ್ಣನಿಯಮವಿಲ್ಲದೆ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಲ್ಲಿ, ಯಾವನು ಬಲವಂತನೋ ಅವನೇ ರಾಜನಾಗುವನು. ಇಂತಹ ರಾಜರು, ಲುಬ್ಧರೂ, ದಯಾಶೂನ್ಯರೂ, ಚೋರಸ್ವಭಾವವುಳ್ಳವರೂ ಆಗಿದ್ದು, ಪ್ರಜೆಗಳ ಧನವನ್ನೂ, ಸ್ತ್ರೀಯರನ್ನೂ ಬಲಾತ್ಕಾರದಿಂದ ಅಪಹರಿಸುವುದಕ್ಕೆ ಯತ್ನಿಸುವರು. ಈ ರಾಜರ ಬಾಧೆಯನ್ನು ತಡೆಯಲಾರದೆ ಪ್ರಜೆಗಳು ತಮ್ಮ ಸರ್ವಸ್ವವನ್ನೂ ಸೂರೆಗೊಟ್ಟು, ಕಾಡುಪಾಲಾಗಿ ಓಡಿಹೋಗುತ್ತ, ಅಲ್ಲಿ ಕಾಲಕಾಲಕ್ಕೆ ಆಹಾರವಿಲ್ಲದೆ, ಗಡ್ಡೆ ಗೆಣಸುಗಳನ್ನೂ, ಹಣ್ಣುಹಂಪಲುಗಳನ್ನೂ, ಮೃಗಮಾಂಸ, ಜೇನು, ಹೂಗಳು, ಕಾಳುಗಳು ಇವೇ ಮುಂತಾದುವನ್ನೂ ತಿಂದು, ರೋಗಪೀಡಿತರಾಗಿ ಸಾಯುವರು. ಒಮ್ಮೊಮ್ಮೆ ಅನಾವೃಷ್ಟಿಯ ದೆಸೆಯಿಂದ ಆ ಗಡ್ಡೆಗೆಣಸುಗಳೂ ಸಿಕ್ಕದೆ, ಹಸಿವು ಬಾಯಾರಿಕೆಗಳಿಂದಲೂ, ಬಿಸಿಲಿನ ಬೇಗೆಯಿಂದಲೂ ಸಾಯುವರು.

ಕೊನೆಕೊನೆಗೆ ಕಲಿಯುಗಾಂತ್ಯದಲ್ಲಿ,ಪ್ರಜೆಗಳ ಆಯುಃಪರಿಮಾಣವು ಹೆಚ್ಚೆಂದರೆ ಇಪ್ಪತ್ತು, ಅಥವಾ ಮೂವತ್ತುವರ್ಷಗಳಿಗೆ ಮೇಲಿರದು. ಪ್ರಾಣಿಗಳ ದೇಹವೂ ಬಹಳವಾಗಿ ಕ್ಷೀಣಿಸಿರುವುವು.ವರ್ಣಾಶ್ರಮಧರ್ಮವುಳ್ಳವರಲ್ಲಿಯೂ ಕೂಡ ವೇದೋಕ್ತಧರ್ಮಗಳು ನಷ್ಟವಾಗುವುವು. ಆಗ ಪಾಷಂಡಧರ್ಮವೇ ಪ್ರಧಾನಧರ್ಮವೆನಿಸುವುದು. ರಾಜರೆಲ್ಲರೂ ಚೋರಧರ್ಮವುಳ್ಳವರಾಗುವರು, ಅದಕ್ಕೆ ತಕ್ಕಂತೆ ಪ್ರಜೆಗಳೆಲ್ಲರೂ, ಕಳವು, ಸುಳ್ಳು, ವಂಚನೆ, ಪ್ರಾಣಿಹಿಂಸೆ ಮೊದಲಾದ ನಾನಾ ದುರ್ವೃತ್ತಿಗಳಿಂದಲೇ ಜೀವನವನ್ನು ನಡೆಸುವರು. ವರ್ಣಗಳೆಲ್ಲವೂ ಒಂದಾಗಿ ಕಲೆತು ಶೂದ್ರಪ್ರಾಯವಾಗುವುವು. ಹಸುಗಳು ಮೇಕೆಗಳಂತೆ ಅಲ್ಪಪ್ರಮಾಣವುಳ್ಳವುಗಳಾಗಿ,ಸ್ವಲ್ಪಮಾತ್ರವೇ ಹಾಲನ್ನು ಕೊಡುವುವು. ಮೈಥುನಸುಖಪ್ರಧಾನವಾದ ಗೃಹಾಶ್ರಮವೇ ಮುಖ್ಯಾಶ್ರಮವೆನಿಸುವುದು ಯೋನಿಸಂಬಂಧಮಾತ್ರದಿಂದಲೇ ಬಂಧುತ್ವವು ಬೆಳಗುವುವು.ಧಾನ್ಯಗಳೆಲ್ಲವೂ ಅಣುಪ್ರಾಯಗಳಾಗುವುವು. ವೃಕ್ಷಗಳೆಲ್ಲವೂ, ಫಲವನ್ನು ಕೊಡುವುದರಲ್ಲಿಯೂ, ಪ್ರಮಾಣದಲ್ಲಿಯೂ ಬನ್ನಿಯಮರದಂತೆ ಅತ್ಯಲ್ಪವಾಗುವುವು. ಮೇಘಗಳಲ್ಲಿ ಮಿಂಚಿನ ಆರ್ಭಟವೇ ಹೆಚ್ಚಾಗುವುದು. ಮನೆಗಳೆಲ್ಲವೂ ಅತಿಥಿಭೋಜನಾದಿಗಳಿಲ್ಲದೆ ಶೂನ್ಯಪ್ರಾಯವಾಗುವುವು. ಹೀಗೆ ಕಲಿದೋಷವು ಅತ್ಯುಚ್ಚದಶೆಯಿಂದ ಜನಗಳಲ್ಲಿ ಪ್ರವೇಶಿಸಿದಾಗ, ಭಗವಂತನು ಧರ್ಮರಕ್ಷಣಾರ್ಥವಾಗಿ ಶುದ್ಧಸತ್ವಮಯವಾದ ದೇಹದಿಂದ ಒಂದವತಾರವನ್ನೆತ್ತುವನು. ಸರ್ವಾತ್ಮಕನಾಗಿ, ಸಕಲಚರಾಚರಗುರುವೆನಿಸಿಕೊಂಡ ಭಗವಂತನು, ಧರ್ಮರಕ್ಷಣಕ್ಕಾಗಿಯೂ, ಜನರಲ್ಲಿ ಸಂಸಾರಕಾರಣಗಳಾದ ಕರ್ಮದೋಷಗಳನ್ನು ತೊಲಗಿಸುವುದಕ್ಕಾಗಿಯೂ ಕೈಕೊಳ್ಳುವ ಆ ಅವತಾರರಹಸ್ಯವನ್ನು ತಿಳಿಸುವೆನು ಕೇಳು! ಶಂಬಲವೆಂದ ಒಂದಾನೊಂದು ಗ್ರಾಮದಲ್ಲಿ, ಮಹಾತ್ಮನಾದ ವಿಷ್ಣುಯಶನೆಂಬ ಒಬ್ಬ ಬ್ರಾಹ್ಮಣನಿರುವನು. ಲೋಕನಾಯಕನಾದ ಶ್ರೀವಿಷ್ಣುವು ಅವನ ಮನೆಯಲ್ಲಿ ಕಲ್ಕಿಯೆಂಬ ಹೆಸರಿನಿಂದ ಅವತರಿಸುವನು. ಆ ಕಲ್ಕಿಪುರುಷನು ಅಣಿಮಾದ್ಯಷ್ಟೈಶ್ವರ್ಯಗಳಿಂದಲೂ, ಶೌರ್ಯವೀರ್ಯಾದಿಗುಣಗಳಿಂದಲೂ, ಎಣೆಯಿಲ್ಲದ ದಿವ್ಯತೇಜಸ್ಸಿನಿಂದಲೂ ಕೂಡಿದವನಾಗಿ,

ಮಹಾವೇಗವುಳ್ಳ ದೇವದತ್ತವೆಂಬ ಒಂದಾನೊಂದು ಉತ್ತಮಾಶ್ವವನ್ನೇರಿ, ದುಷ್ಟನಿಗ್ರಹಾರ್ಥವಾಗಿ ಒಂದು ಕತ್ತಿಯನ್ನು ಕೈಯಲ್ಲಿ ಹಿಡಿದು, ಅತಿ ವೇಗದಿಂದ ಭೂಮಿಯನ್ನು ತಿರುಗುತ್ತಾ, ರಾಜರೆಂಬ ನೆವದಿಂದ ಪ್ರಜೆಗಳ ನ್ನು ಪೀಡಿಸುತ್ತಿರುವ ದುಷ್ಟರನ್ನೆಲ್ಲಾ ಕೋಟಿಕೋಟಿಯಾಗಿ ಸಂಹರಿ ಸುವನು. ಹೀಗೆ ಆ ದಸ್ಯುಗಳೆಲ್ಲರೂ ಹತರಾದಮೇಲೆ, ಪ್ರಜೆಗಳ ಮನಸ್ಸಿಗೆ ನೆಮ್ಮದಿಯುಂಟಾಗುವುದು. ಆ ಭಗವಂತನ ದೇಹಾನುಲೇಪನದ ಸುಗಂಧ ದಿಂದ ಕೂಡಿದ ಗಾಳಿಯು ಸೋಕಿದೊಡನೆ,[1] ಎಲ್ಲರ ಮನಸ್ಸೂ ನಿಷ್ಕಲ್ಮ ಷವಾಗುವುದು. ಆಗ ಎಲ್ಲರ ಮನಸ್ಸಿಗೂ ಸತ್ವಮೂರ್ತಿಯಾದ ಆ ಭಗವಂ ತನ ಸ್ಮರಣೆಯು ಹುಟ್ಟಿ, ಅದರಿಂದ ಅವರ ಮನಸ್ಸು ಸತ್ವಗುಣಪ್ರಚುರ ವಾಗುವುದು ಆಗ ಜನರಿಗೆ ವೈರಾಗ್ಯಬುದ್ಧಿಯು ಹುಟ್ಟಿ, ಪುತ್ರಕಳತ್ರಾದಿ ಪ್ರಪಂಚವೇ ಭಾರವಾಗಿ ತೋರುವುದು. ಭಗವಂತನಾದ ಕಲ್ಕಿಯು ಅವ ತರಿಸಿದೊಡನೆಯೇ, ಕಾಲವು ಕೃತಯುಗವಾಗಿ ಮಾರ್ಪಡುವುದು. ಅಲ್ಲಿಂ ದಾಚೆಗೆ, ಪ್ರಜಾವೃದ್ಧಿಯು ಸತ್ವಗುಣಪ್ರಧಾನವಾಗಿಯೇ ಇರುವುದು. ಚಂದ್ರನೂ, ಸೂರ್ಯನೂ, ಬೃಹಸ್ಪತಿಯೂ, ಈ ಮೂರುಗ್ರಹಗಳೂ ಪುಷ್ಯಯೋಗವೆಂಬ ಏಕರಾಶಿಯಲ್ಲಿ ಸೇರಿದಾಗ ಕೃತಯುಗಾರಂಭವೆಂದು ತಿಳಿ! ಓ ಪರೀಕ್ಷಿದ್ರಾಜಾ! ಇದುವರೆಗೆ ಹೇಳಿದ ವಿಷಯಗಳಿಂದ ನಿನಗೆ ನಾನು ಚಂದ್ರಸೂರ್ಯವಂಶಗಳೆರಡರಲ್ಲಿಯೂ ಹಿಂದೆ ಹುಟ್ಟಿದ ರಾಜರನ್ನೂ, ಈಗಿನ ಕಾಲದವರನ್ನೂ, ಮುಂದೆ ಹುಟ್ಟತಕ್ಕವರನ್ನೂ, ಅವರ ಉತ್ಪತ್ತಿ ಕ್ರಮವನ್ನೂ ವಿವರವಾಗಿ ತಿಳಿಸಿದುದಾಯಿತು. ನಿನ್ನಿಂದಾಚೆಗೆ ನಂದಾ ಭಿಷೇಕದವರೆಗೆಮಾತ್ರವೇ ಶುದ್ಧವಾದ ಚಂದ್ರವಂಶವು ಅನುವರ್ತಿಸುತ್ತ ಬರುವುದು. ಇವೆರಡರ ಮಧ್ಯಕಾಲವು * ಒಂದುಸಾವಿರದ ನೂರ ಹದಿ ನೈದುವರ್ಷಗಳು. ಕೃತಯುಗದ ಆರಂಭಕಾಲಲಕ್ಷಣವನ್ನು ತಿಳಿಸಿದೆನಲ್ಲವೆ?

---

* ಪರೀಕ್ಷಿತ್ತಿನ ಕಾಲದಿಂದಹಿಡಿದು ನಂದನ ಕಾಲದವರೆಗೆ, ಹಿಂದಿನ ಸಂಖ್ಯೆಯ ನ್ನನುಸರಿಸಿ ಎಂದರೆ (ಬಾರ್ಹದ್ರಥರ ೧೦೦೦ ವರ್ಷಗಳು ಸೇರಿ) ೧೪೯೮ ವರ್ಷಗ ಳಾಗುವುವು. ಇಲ್ಲಿ ೧೧೧೫ ವರ್ಷಗಳೆಂದು ಹೇಳಿರುವುದು ಅದರಲ್ಲಿ ಯಾವುದೋ ಒಂದು ಅವಾಂತರಸಂಖ್ಯೆಯೆಂದು ತಿಳಿಯಬೇಕು.

ಕಲಿಯುಗಾರಂಭಕಾಲದ ಲಕ್ಷಣವನ್ನೂ ಸೂಚಿಸುವೆನು ಕೇಳು ! ಈ ನಿನ್ನ ಕಾಲದಲ್ಲಿ ಕಲಿಯುಗಾರಂಭವು. ಆಕಾಶದಲ್ಲಿ ಪೂರ್ವದಿಕ್ಕಿಗೆ ಅಭಿಮುಖ ವಾದ ಒಂದುಬಂಡಿಯ ಆಕಾರಕ್ಕೆ ಕಾಣುವ ನಕ್ಷತ್ರಸಮೂಹವೇ *ಸಪ್ತರ್ಷಿಮಂಡಲವು ಈ ಸಪ್ತರ್ಷಿಗಳಲ್ಲಿ, ಪ್ರಾತಃಕಾಲದಲ್ಲಿ ಮೊದಲು ಉದಯಿಸಿ ಕಾಣತಕ್ಕವರು ಪುಲಹಕ್ರತುಗಳೆಂಬವರಿಬ್ಬರು. ಈ ಎರಡು ನಕ್ಷತ್ರಗಳಿಗೂ ಸಮವಾದ ಮಧ್ಯಸ್ಥಾನದಲ್ಲಿ, ಸ್ವಲ್ಪಬಲಭಾಗಕ್ಕೆ, ರಾತ್ರಿಯ ಕಾಲದಲ್ಲಿ ಅಶ್ವಿನಿ ಮೊದಲಾದ ತಾರೆಗಳೊಳಗೆ ಯಾವುದಾದರೂ ಒಂದು ಕಾಣುತ್ತಿರುವುದು. ಈ ಒಂದೊಂದು ನಕ್ಷತ್ರವೂ ಈ ಸಪ್ತರ್ಷಿಮಂಡಲ ದೊಡನೆ ಮನುಷ್ಯರ ನೂರುವರ್ಷಗಳ ಕಾಲದವರೆಗೆ ಕಾಣಿಸುತ್ತಿರುವುದು. ಓ ಪರೀಕ್ಷಿದ್ರಾಜಾ ! ಈ ನಿನ್ನ ಕಾಲದಲ್ಲಿ ಆ ಸಪ್ತರ್ಷಿಮಂಡಲವು ಮಘಾ ನಕ್ಷತ್ರದೊಡನೆ ಸೇರಿರುವುದು. ಇದೇ ಕಲಿಯುಗದ ಆರಂಭಕಾಲವು. ಭಗವಂತನಾದ ಕೃಷ್ಣನು ಈ ಭೂಲೋಕವನ್ನು ಬಿಟ್ಟು ಹೋದೊಡನೆ, ಕಲಿಪುರುಷನು ಇಲ್ಲಿಗೆ ಕಾಲಿಡುವನು. ಅವನ ಪ್ರೇರಣೆಯಿಂದ ಜನರು ಪಾಪನಿರತರಾಗುವರು. ಶ್ರೀಕೃಷ್ಣನ ಅವತಾರಕಾಲವಾದ ಯುಗಸಂ ಧಿಯಲ್ಲಿಯೇ ಕಲಿಯುಗವು ಆರಂಭಿಸಿದ್ದರೂ, ಲಕ್ಷ್ಮೀಪತಿಯಾದ ಶ್ರೀಕೃಷ್ಣನ ಪಾದಸ್ಪರ್ಶವಿರುವವರೆಗೂ ಕಲಿಪುರುಷನು ಈ ಭೂಮಿ ಯನ್ನಾಕ್ರಮಿಸುವುದಕ್ಕೆ ಶಕ್ತನಾಗದೆ ಹೋದನು ಆದುದರಿಂದ ಸಪ್ತರ್ಷಿ ಗಳು ಮಘಾನಕ್ಷತ್ರದೊಡನೆ ಸೇರಿದಕಾಲದಲ್ಲಿ ಕಲಿಯುಗಾರಂಭವು. ಈ

---

* ಸಪ್ತರ್ಷಿಮಂಡಲವೆಂಬುದು, ಪೂರ್ವದಿಕ್ಕಿಗೆ ಅಭಿಮುಖವಾಗಿ ಒಂದು ಬಂಡಿಯ ಆಕಾರಕ್ಕೆ ಕಾಣುವ ಏಳುನಕ್ಷತ್ರಗಳ ಸಮೂಹವು ಇವುಗಳಲ್ಲಿ ಬಂಡಿಯ ಮೂಕಿಯಕೊನೆಯಲ್ಲಿ ಸ್ವಲ್ಪ ಎತ್ತರವಾಗಿದ್ದಂತೆ ಕಾಣುವವನು ಮರೀಚಿ ಅದರ ಹಿಂದೆ ಸ್ವಲ್ಪತಗ್ಗಾಗಿ ನೊಗದ ಸ್ಥಾನದಲ್ಲಿ ಅರುಂಧತೀಸಮೇತನಾದ ವಸಿಷ್ಠನು. ಅದಕ್ಕೆ ಹಿಂದೆ ಸ್ವಲ್ಪ ಎತ್ತರವಾದ ಮೂಕಿಯ ಬುಡದಲ್ಲಿ ಕಾಣುವವನು ಪುಲಸ್ತ್ಯನು. ಅದರಹಿಂದೆ ಬಂಡಿಯ ಚೌಕಟ್ಟಿನ ನಾಲ್ಕುಮೂಲೆಗಳಲ್ಲಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತುಗಳೆಂಬ ನಾಲ್ವರು. ಉದಯಕಾಲದಲ್ಲಿ ಮೊದಲು ಪುಲಹಕ್ರತುಗಳೆಂಬವರು ಗೋಚರಿಸುವರೆಂದು ಗ್ರಾಹ್ಯವು

ಯುಗದ ಕಾಲಪರಿಮಾಣವು (ಯುಗಸಂಧಿಕಾಲದೊಡನೆಸೇರಿ) ದೇವಮಾನ ದಲ್ಲಿ ಒಂದು ಸಾವಿರದ ಇನ್ನೂರುವರ್ಷಗಳು. ಸಪ್ತರ್ಷಿಗಳು ಮಖಾನಕ್ಷತ್ರ ವನ್ನು ದಾಟಿ, ಪೂರ್ವಾಷಾಢಾನಕ್ಷತ್ರಗಳಿಗೆ ಯಾವಾಗ ಹೋಗುವರೋ, ಆಗಿ ನಿಂದ ಕಲಿಯು ವೃದ್ಧಿಯನ್ನು ಹೊಂದುವುದು. ಆಗಲೇ ನಂದರಾಜ್ಯಾ ರಂಭವು. ಕಾಲಜ್ಞರಾದ ಪೂರ್ವಿಕರು, ಕೃಷ್ಣನು ಈ ಭೂಮಿಯನ್ನು ಬಿಟ್ಟು ತನ್ನಲೋಕಕ್ಕೆ ಹೋದದಿನವೇ, ಆ ಹಗಲಿನಲ್ಲಿಯೇ, ಕಲಿಯು ಆ ರಂಭವೆಂದರೆ ಕಲಿಪ್ರವೇಶವೆಂದು ಹೇಳಿರುವರು. ನಾಲ್ಕನೆಯ ಯುಗವಾದ ಈ ಕಲಿಯುಗದ ಕಾಲಪ್ರಮಾಣವು, ದೇವಮಾನದ ಲೆಕ್ಕದಲ್ಲಿ ಒಂದು ಸಾವಿರವರ್ಷಗಳು. ಇದಕ್ಕೆ ಹಿಂದಿನ ಯುಗಸಂಧಿಕಾಲವಾದ ಇನ್ನೂರುವರ್ಷ ಗಳೂ ಸೇರಿ ಒಂದು ಸಾವಿರದ ಇನ್ನೂರು ದೇವಮಾನಗಳಾಗುವುವು. ಕಲಿ ಯುಗದ ಸಾವಿರದೇವಮಾನಗಳು ಕಳೆದೊಡನೆ, ತಿರುಗಿ ಕೃತಯುಗಾ ರಂಭವು. ಜನರ ಮನಸ್ಸು ಆತ್ಮಸ್ವರೂಪವಿವೇಚನಕ್ಕೆ ಯಾವಾಗ ಸಮರ್ಥವಾಗುತ್ತ ಬರುವುದೋ, ಆಗಲೇ ಕೃತಯುಗಾರಂಭವೆಂದು ತಿಳಿ! ಓ ರಾಜೇಂದ್ರಾ! ಇದುವರೆಗೆ ನಾನು ವೈವಸ್ವತಮನು ಮೊದಲಾದ ರಾಜ ವಂಶಕ್ಕೆ ಯಾವವಿಧವಾದ ಉಚ್ಚನೀಚಾವಸ್ಥೆಗಳನ್ನು ಹೇಳುತ್ತಬಂ ದೆನೋ, ಅದೇವಿಧವಾಗಿ ಬ್ರಹ್ಮ ವೈಶ್ಯ ಶೂದ್ರವರ್ಣದವರಿಗೂ, ಆಯಾ ಯುಗಭೇದದಿಂದ ಉಚ್ಚನೀಚಾವಸ್ಥೆಗಳುಂಟು. ಹಿಂದೆ ಹೇಳಿದ ರಾಜವಂ ಶೀಯರಾದ ಮಹಾತ್ಮರ ಹೆಸರುಮಾತ್ರವೇ ಈಗ ಭೂಲೋಕದಲ್ಲಿ ನಿಂತಿರು ವುವೇ ಹೊರತು, ಅವರಲ್ಲಿ ಯಾರನ್ನೂ ಈಗ ಕಾಣುವುದಕ್ಕಿಲ್ಲ. ಆದರೆ ಚಂದ್ರವಂಶದಲ್ಲಿ,ಶಂತನುವಿನ ಸಹೋದರನಾದ ದೇವಾಪಿ, ಇಕ್ಷ್ವಾಕುಕುಲ ದಲ್ಲಿ ಮರುತ್ತು, ಇವರಿಬ್ಬರುಮಾತ್ರ, ಮಹಾತ್ಮರಾದ ತಮ್ಮ ಯೋಗಬಲದಿಂ ದ, ಬದರ್ಯಾಶ್ರಮದಲ್ಲಿ, ಯೋಗಿಗಳಿಗೆ ನಿವಾಸಸ್ಥಾನವಾದ ಕಲಾಪವೆಂಬ ಗ್ರಾಮದಲ್ಲಿ ಇನ್ನೂ ಬದುಕಿರುವರು. ಕಲಿಯುಗವು ಕಳೆದಮೇಲೆ ಕೃತ ಯುಗಾರಂಭದಲ್ಲಿ, ಅವರು ಭಗವಂತನಿಂದ ವರ್ಣಾಶ್ರಮಧರ್ಮಗಳನ್ನು ಉಪ ದೇಶಹೊಂದಿ, ತಾವು ಅದನ್ನು ಲೋಕಕ್ಕೆ ತೋರಿಸಿಕೊಟ್ಟು, ಪೂರ್ವಸ್ಥಿತಿಗೆ ತರುವರು. ಕೃತ, ತ್ರೇತಾ, ದ್ವಾಪರ, ಕಲಿಗಳೆಂಬೀ ನಾಲ್ಕೂ ಸೇರಿ, ಚತು

ಯುಗವೆನಿಸುವುದು. ಈ ಆವೃತ್ತಿಕ್ರಮದಿಂದ ಪ್ರತಿಚತುರ್ಯುಗವೂ, ಪ್ರಾಣಿಗಳ ಗುಣಸ್ವಭಾವಭೇದಗಳಿಗೆನಿವಿಃತ್ತವಾಗಿ ಪ್ರವರ್ತಿಸುತ್ತಿರುವುದು. ಓ ರಾಜಾ! ನಾನು ಇದುವರೆಗೆ ಹೇಳಿದ ರಾಜರಲ್ಲಿ ಅನೇಕರು, ವಿವೇಕ ಹೀನರಾಗಿ, ಈ ಭೂಮಿಯು "ನನ್ನದು, ತನ್ನ"ದೆಂಬ ಮಮತೆಯನ್ನಿಟ್ಟು ಮದಾಂಧರಾಗಿದ್ದರು. ಆದರೇನು? ಕೊನೆಗೆ ಅವರು, ರಾಜ್ಯಸುಖವನ್ನನುಭ ವಿಸಬೇಕಾಗಿದ್ದ ಪುಣ್ಯಫಲವು ತೀರಿದಮೇಲೆ, ಸಾಯುವಾಗಲೂ ಆ ಮಮತೆ ಯನ್ನುಮಾತ್ರ ಬಿಡದೆ, ಅದರೊಡನೆಯೇ ನರಕದಲ್ಲಿ ಬಿದ್ದರೇಹೊರತು, ಈ ಭೂಮಿಯು ಅವರಲ್ಲಿ ಯಾರನ್ನೂ ಹಿಂಬಾಲಿಸಲಿಲ್ಲ. ಅರಸನಾದರೇನು? ಆಳಾದರೇನು? ಸತ್ತಮೇಲೆ ಎಲ್ಲರ ದೇಹವೂ ಕ್ರಿಮಿಗಳಾಗಿಯೋ, ಅಮೇಧ್ಯ ರೂಪವಾಗಿಯೋ, ಭಸ್ಮವಾಗಿಯೋ ಮಾರ್ಪಟ್ಟು, ಆ ಹೆಸರಿನಿಂದಲೇ ಕರೆಯಲ್ಪಡುವುದಲ್ಲದೆ ಬೇರೆಯಲ್ಲ. ಇಂತಹ ನೀಚವಾದ ದೇಹಕ್ಕಾಗಿ ಅನೇಕರು ಇತರ ಭೂತಗಳಿಗೆ ದ್ರೋಹವನ್ನು ಮಾಡಿ ನರಕದಲ್ಲಿ ಬೀಳುವರೇ ಹೊರತು, ಆತ್ಮಹಿತಕ್ಕೆ ದಾರಿಯನ್ನು ಯೋಚಿಸಲಾರರು. ಆ ರಾಜರು ತಮ್ಮಲ್ಲಿ ತಾವು ಈಗಾಗ "ಆಹಾ! ಅಖಂಡವಾದ ಈ ಭೂಮಂಡಲ ವನ್ನು ನಮ್ಮ ಪೂರ್ವಿಕರು ಅನುಭವಿಸುತ್ತಿದ್ದರು. ಈಗ ನಾವೂ ಇದನ್ನು ಧರಿಸಿರುವೆವು. ಮುಂದೆ ನಮ್ಮ ಮಕ್ಕಳೂ, ಮುಮ್ಮಕ್ಕಳೂ, ಮರಿಮಕ್ಕಳೂ ಹೀಗೆಯೇ ಅನುಭವಿಸಬಹುದಲ್ಲವೆ?" ಎಂದು ನಾನಾವಿಧಮನೋರಥಗ ಳನ್ನಿಟ್ಟುಕೊಂಡು, ಮನಸ್ಸಿನಲ್ಲಿ ಗುಣಿಸುತ್ತಿರುವರು. ಇವರ ಮೂಢತ್ವ ವನ್ನೇನೆಂದು ಹೇಳಬಹುದು? ಓ ರಾಜಾ! ಮನುಷ್ಯದೇಹವೆಂಬುದು ಅನ್ನ, ನೀರು, ತೇಜಸ್ಸೆಂಬ ಈ ಮೂರುದ್ರವ್ಯಗಳಿಂದೇರ್ಪಟ್ಟಿರುವುದು. ಮೂಢರಾದ ರಾಜರು, ಈ ದೇಹವನ್ನೇ ಆತ್ಮವೆಂದೂ, ಭೂಮಿಯನ್ನು ತಮ್ಮದೆಂದೂ ಭ್ರಮಿಸಿದ್ದು, ಕೊನೆಗೆ, ಪ್ರಾರಬ್ಧಾವಸಾನದಲ್ಲಿ ಆ ದೇಹ ವನ್ನೂ, ಆ ಭೂಮಿಯನ್ನೂ ಇವೆರಡನ್ನೂ ಬಿಟ್ಟೇ ಹೋದರು. ಆದುದ ರಿಂದ ಓ ಪರೀಕ್ಷಿದ್ರಾಜಾ! ಅನೇಕರಾಜರು ತಮ್ಮ ಪೌರುಷದಿಂದ ವಿಸ್ತಾರವಾದ ಭೂಮಿಯನ್ನನುಭವಿಸಿದವರಾಗಿದ್ದರೂ, ಅವರೆಲ್ಲರೂ ಕೊನೆಗೆ ಕಾಲಬಲದಿಂದ ನಿಗ್ರಹಿಸಲ್ಪಟ್ಟವರೇಹೊರತು, ಆ ಕಾಲವನ್ನು ಜಯಿ

ಸುವುದಕ್ಕೆ ಶಕ್ತರಾಗದೆ ಹೋದರು. ಹೀಗೆ ಕಾಲವಶರಾದ ಅವರ ಹೆಸರು ಮಾತ್ರ ಈಗ ಕಿವಿಗೆ ಬೀಳುವುದೇ ಹೊರತು; ಯಾರೂ ಈಗ ಕಣ್ಣಿಗೆ ಕಾಣ ತಕ್ಕವರಲ್ಲ.” ಇದು ಎರಡನೆಯ ಅಧ್ಯಾಯವು.

---

### { ರಾಜರ ಮಮತೆಯನ್ನು ನೋಡಿ ಭೂಮಿಯ ಹಾಸ್ಯ ವಚನಗಳು. }

ಓ ಪರೀಕ್ಷಿದ್ರಾಜಾ ! ಈ ಭೂಮಿಯೂಕೂಡ ತನ್ನನ್ನು ಸಾಧಿಸಬೇ ಕೆಂದು ತವಕಿಸುತ್ತಿರುವ ಆರಾಜರನ್ನು ನೋಡಿ ಹೀಗೆಂದು ಹಾಸ್ಯಮಾಡು ತ್ತಿರುವುದು “ ಅಯ್ಯೋ ! ಈ ರಾಜರ ಅವಿವೇಕವನ್ನೇನೆಂದು ಹೇಳ ಬಹುದು ? ಮೃತ್ಯುವಿನ ಕೈಯಲ್ಲಿ ಆಟದ ಬೊಂಬೆಯಂತೆ ಸಿಕ್ಕಿಬಿದ್ದಿರುವ ಈ ರಾಜರು, ನನ್ನನ್ನು ಜಯಿಸಿ ಭೋಗಿಸಬೇಕೆಂದು ಯತ್ನಿಸುತ್ತಿರುವರು. ತಮ್ಮ ಪಿತೃಪಿತಾಮಹಾದಿಗಳ ಮರಣವನ್ನು ಕಣ್ಣಾರೆ ನೋಡಿ, ತಾವೂ ಹಾಗೆಯೇ ಮೃತ್ಯುವಶರೆಂಬುದನ್ನು ತಿಳಿದವರಾಗಿದ್ದೂ, ಇವರು ನನ್ನನ್ನು ತಮ್ಮ ವಶಮಾಡಿಕೊಳ್ಳಬೇಕೆಂದು ಆತುರಪಡುತ್ತಿರುವರೇಹೊರತು, ಈ ಕೋರಿಕೆಯು ಕೇವಲನಿರರ್ಥಕವೆಂಬುದನ್ನು ತಿಳಿಯಲಾರರು ನೀರಿನ ಗುಳ್ಳೆ ಯಂತೆ ಈಗಲೋ ನಾಳೆಯೋ ನಾಶಹೊಂದತಕ್ಕ ತಮ್ಮ ದೇಹದಲ್ಲಿ ತಮ ಗೆ ನಂಬಿಕೆಯಿರುವುದರಿಂದಲ್ಲವೇ ಇವರಿಗೆ ಈ ವ್ಯರ್ಥಮನೋರಥಗಳೆಲ್ಲವೂ ಹುಟ್ಟುವುವು. ಇವರು ತಮ್ಮೊಳಗೆ ತಾವು ” ಮೊದಲು ಇಂದ್ರಿ ಯನಿಗ್ರಹವನ್ನು ಸಾಧಿಸಿ, ಅದರಿಂದ ದೇವತೆಗಳನ್ನು ಪಾಸಿಸಿ, ಆ ದೇವತೆ ಗಳ ಅನುಗ್ರಹವನ್ನು ಸಂಪಾದಿಸಬೇಕು ಆ ಅನುಗ್ರಹಬಲದಿಂದ ಇತರ ರಾಜರನ್ನೂ, ರಾಜಮಂತ್ರಿಗಳನ್ನೂ, ರಾಜ್ಯಾಧಿಕಾರಿಗಳನ್ನೂ, ಪುರಜನ ರನ್ನೂ, ಅವರ ಆಪ್ತಜನವನ್ನೂ, ಗಜಾಧಿಪತಿಗಳನ್ನೂ, ಆಮೇಲೆ ಲೋಕಕಂ ಟಕರಾದ ದುಷ್ಟರನ್ನೂ ಕ್ರಮವಾಗಿ ಜಯಿಸುತ್ತಬಂದು, ಸಮುದ್ರಾಂತ ವಾದ ಸಮಸ್ತಭೂಮಿಯನ್ನೂ ಜಯಿಸಿಬಿಡಬೇಕು.” ಎಂಬೀ ಆಶೋತ್ತರ ಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಗುಣಿಸುತ್ತಿರುವರೇಹೊರತು, ತಮ್ಮ ಬೆನ್ನಹಿಂದೆ ಕಾದಿರುವ ಮೃತ್ಯುವನ್ನು ಕಾಣಲಾರರು. ಒಂದುವೇಳೆ ದೈವಾ

ನುಗ್ರಹಬಲದಿಂದ ಸಮುದ್ರಾಂತವಾದ ಸಮಸ್ತಭೂಮಿಯನ್ನೂ ಸ್ವಾಧೀನ ಪಡಿಸಿಕೊಂಡಮೇಲೆಯೂ ಅವರಿಗೆ ಆಸೆಯು ತೀರದು. ಸಮುದ್ರವನ್ನು ದಾಟಿ ದ್ವೀಪಾಂತರಗಳನ್ನು ಜಯಿಸುವುದಕ್ಕೆ ಆಶೆಪಡುವರು. ಇವರು ಎಷ್ಟು ರಾಜ್ಯಗಳನ್ನು ಜಯಿಸಿದರೇನು ? ತಮ್ಮನ್ನು ತಾವು ಜಯಿಸಲಾರದೆ ಹೋದವರಲ್ಲವೆ ? ಏಕೆಂದರೆ, ಆತ್ಮಜಯವೇ ಮನುಷ್ಯನಿಗೆ ಜಯವೆನಿಸು ವುದು. ಆತ್ಮಜಯಕ್ಕೆ ಮುಕ್ತಿಯೇ ಪ್ರಧಾನಫಲವು. ಆ ಫಲವನ್ನು ಸಾಧಿಸ ದಿದ್ದಮೇಲೆ ಅವರ ಇಂದ್ರಿಯಜಯವೂ ನಿಷ್ಫಲವೇ ಆಗುವುದಲ್ಲವೆ? ಲೋಕಪ್ರಸಿದ್ಧರಾದ ಮನುಗಳೂ, ಅವರ ಮಕ್ಕಳೂ, ಏಕಚ್ಛತ್ರಾಧಿಪತ್ಯ ದಿಂದ ನನ್ನನ್ನು ಅನುಭವಿಸುತಿದ್ದರೂ, ಕೊನೆಗೆ ನಾನಿದ್ದಲ್ಲಿಯೇ ನನ್ನನ್ನು ಬಿಟ್ಟು, ತಾವು ಬಂದಹಾಗೆ ಹೊರಟುಹೋದರಲ್ಲವೆ ? ಅಂತಹ ನನ್ನನ್ನು ಯುದ್ಧದಲ್ಲಿ ಸಾಧಿಸಬೇಕೆಂದು ಆತುರಪಡುವ ರಾಜರನ್ನು ಬುದ್ಧಿಹೀನರೆಂ ದು ಹೇಳುವುದರಲ್ಲಿ ಸಂದೇಹವೇನಿದೆ ? ರಾಜ್ಯದಲ್ಲಿ "ನನ್ನದು ತನ್ನ" ದೆಂಬ ಮಮತೆಯುಳ್ಳ ಮೂಢಜನರಿಗೆ, ನನ್ನಮೂಲಕವಾಗಿಯೇ ತಂದೆಮಕ್ಕ ಳಲ್ಲಿಯೂ, ಒಡಹುಟ್ಟಿದ ಸಹೋದರರಲ್ಲಿಯೂ ಅನ್ಯೋನ್ಯವೈರವು ಹುಟ್ಟು ವುದು. ನನ್ನ ನಿಮಿತ್ತವಾಗಿಯೇ ಮೂಢಜನರಲ್ಲಿ ಒಬ್ಬರಿಗೊಬ್ಬರಿಗೆ ಸ್ಪರ್ಧೆ ಹುಟ್ಟಿ "ಈ ಭೂಮಿಯು ನಿನ್ನದಲ್ಲ ' ನನ್ನದು ! ನಾನೇ ಇದಕ್ಕೆ ಭಾಗಿಯೇ ಹೊರತು ನೀನಲ್ಲ!" ಎಂಬೀ ವಾದಗಳು ಹೊರಟು, ಒಬ್ಬರನ್ನೊಬ್ಬರು ಕೊಲ್ಲು ವರು. ತಾವೂ ಪ್ರಾಣವನ್ನು ಬಿಡುವರು. ಪೃಥು, ಪುರೂರವಸ್ಸು, ಗಾಧಿ, ನಹುಷ, ಭರತ, ಕಾರ್ತವೀರ್ಯಾರ್ಜುನ, ಮಾಂಧಾತೃ, ಸಗರ, * ರಾಮ, ಖಟ್ವಾಂಗ, ಧುಂಧುಮಾರ, ರಘು, ತೃಣಬಿಂದು, ಯಯಾತಿ, ಶಂತನು, ಗಯ, ಭಗೀರಥ, ಕುವಲಯಾಶ್ವ, ಕಕುತ್ಥ್ಸ, ನೈಷಧ, ನೃಗ, ಮುಂತಾದ ರಾಜರೂ, ಹಿರಣ್ಯಕಶಿಪು, ವೃತ್ರ, ರಾವಣ, ನಮುಚಿ, ಶಂಬರ, ನರಕ, ಹಿರ ಣ್ಯಾಕ್ಷ, ತಾರಕನೇ ಮೊದಲಾದ ದೈತ್ಯರೂ, ಇನ್ನೂ ಎಷ್ಟೋಮಂದಿ ಕ್ಷತ್ರಿಯರೂ, ದಾನವರೂ, ರಾಜ್ಯವನ್ನಾಳಿದರು. ಪ್ರಾಯಕವಾಗಿ ಇವ

* ಈತನು ದಶರಥಪುತ್ರನಾದ ರಾಮನಲ್ಲ! ರಾಮನೆಂಬ ಹೆಸರುಳ್ಳ ಬೇರೊಬ್ಬ ರಾಜನೆಂದು ವೀರರಾಘವೀಯ ವ್ಯಾಖ್ಯಾನವು.

ರೆಲ್ಲರೂ ಅನೇಕವಿಷಯಗಳನ್ನು ಬಲ್ಲವರು! ಮಹಾಶೂರರು! ಯಾರಿಂದಲೂ ಜಯಿಸಲ್ಪಡದವರು! ಹಾಗಿದ್ದರೂ ಮನುಷ್ಯಧರ್ಮವಾದ ಮರಣವನ್ನು ಮಾತ್ರ ಯಾರೂ ಜಯಿಸಲಾರದೆ ಹೋದರು. ಇವರೆಲ್ಲರೂ ನನ್ನಲ್ಲಿ ವಿಶೇಷಮಮತೆಯನ್ನಿಟ್ಟಿದ್ದವರು! ಆದರೇನು? ತಮ್ಮ ಭೋಗಾಭಿಲಾಷೆಯು ತೀರುವುದಕ್ಕೆ ಮೊದಲೇ ಕಾಲವಶದಿಂದ, ಅಕೃತಾರ್ಥರಾಗಿಯೇ ನನ್ನನ್ನು ಬಿಟ್ಟು ಹೋದರಲ್ಲವೆ?" ಎಂದು ಭೂಮಿಯು ಅಂತಹ ಪ್ರಸಿದ್ಧ ರಾಜರ ಸ್ಥಿತಿಗಾಗಿಯೇ ನಗುತ್ತಿರುವುದು. ಓ ರಾಜಾ! ನಾನು ಇದುವರೆಗೆ ಸೂರ್ಯ ಚಂದ್ರ ವಂಶದಲ್ಲಿ ಹುಟ್ಟಿದ ಅನೇಕರಾಜರ ಚರಿತ್ರಗಳನ್ನು ನಿನಗೆ ಹೇಳಿದ ಉದ್ದೇಶವೇನೆಂದು ಬಲ್ಲೆಯಾ? ರಾಜ್ಯಭೋಗಗಳೆಲ್ಲವೂ ನಿಸ್ಸಾರಗಳೆಂಬುದನ್ನು ತಿಳಿಸಿ ಅದರಲ್ಲಿ,ನಿನಗೆ ವೈರಾಗ್ಯವನ್ನು ಹುಟ್ಟಿಸುವುದಕ್ಕಾಗಿಯೇ ನಾನು,ಕೀರ್ತಿಶೇಷರಾದ ಆ ರಾಜರ ಕಥೆಗಳನ್ನು ತಿಳಿಸಿದೆನು.ರಾಜ್ಯಭೋಗಗಳೆಲ್ಲವೂ ಅನಿತ್ಯಗಳು. ಭಗವದ್ಗುಣಾನುಸಂಧಾನವೊಂದೇ ಸಾರವಾದುದು. ಅಮಂಗಲವನ್ನು ನೀಗಿಸಿ, ಮನುಷ್ಯನಿಗೆ ಸ್ಥಿರವಾದ ಶ್ರೇಯಸ್ಸನ್ನು ಕೈಗೂಡಿಸತಕ್ಕುದೂ ಆ ಭಗವದ್ಗುಣಾನುಸಂಧಾನವೇ! ಭಕ್ತಿಯೋಗದಲ್ಲಿ ಸಿದ್ಧಿಯನ್ನು ಕೋರುವವನು, ಆ ಶ್ರೀಹರಿಯ ಗುಣಗಳನ್ನು ಆಗಾಗ ಕೇಳುತ್ತಿರಬೇಕು." ಎಂದನು.

ಪರೀಕ್ಷಿದ್ರಾಜನು ತಿರುಗಿ ಪ್ರಶ್ನೆಮಾಡುವನು. "ಓ ಮುನೀಂದ್ರಾ! ಕಲಿಯುಗದಲ್ಲಿ ಜನರು, ದಿನದಿನಕ್ಕೆ ಹೆಚ್ಚಿ ಬರುತ್ತಿರುವ ಕಲಿದೋಷದಿಂದ ತಪ್ಪಿಸಿಕೊಳ್ಳುವುದಕ್ಕೆ ಉಪಾಯವೇನೆಂಬುದನ್ನು ತಿಳಿಸಬೇಕು. ಮತ್ತು ಚತುರ್ಯುಗಗಳ ಸ್ವರೂಪವನ್ನೂ, ಆಯಾ ಯುಗಧರ್ಮಗಳನ್ನೂ, ಬೇರೆಬೇರೆ ವಿಧವಾದ ಪ್ರಳಯಗಳ ರೀತಿಯನ್ನೂ, ಕಾಲರೂಪಿಯಾದ ಸರ್ವೇಶ್ವರನ ಪ್ರವೃತ್ತಿಕ್ರಮವನ್ನೂ ತಿಳಿಸಬೇಕು." ಎಂದನು. ಅದಕ್ಕಾ ಶುಕಮುನಿಯು "ಓ ರಾಜೇಂದ್ರಾ! ಕೇಳು! ಮೊದಲನೆಯದಾದ ಕೃತಯುಗದಲ್ಲಿ ಧರ್ಮವೆಂಬುದು, ಸತ್ಯ, ದಯೆ, ತಪಸ್ಸು, ದಾನಗಳೆಂಬ ನಾಲ್ಕುಪಾದಗಳಿಂದ ಆ ಕಾಲದ ಜನಗಳಲ್ಲಿ ನೆಲೆಗೊಂಡಿರುವುದು. * ಪ್ರಾಯಿಕವಾಗಿ ಆಗಿನ ಜನ

---

* ಎಲ್ಲರೂ ಇಂತಹಗುಣವುಳ್ಳವರಾಗಿಯೇ ಇದ್ದಲ್ಲಿ, ಎಲ್ಲರೂ ಮುಕ್ತರಾಗ

ರೆಲ್ಲರೂ, ನಿತ್ಯಸಂತುಷ್ಟರು, ದಯಾಳುಗಳು, ಸರ್ವಭೂತಹಿತರು, ಶಾಂತರು ದಾಂತರು, ಸುಖದುಃಖಾದಿದ್ವಂದ್ವಗಳನ್ನು ಸಹಿಸತಕ್ಕವರು. ಆತ್ಮಾನುಭವದಿಂದಲೇ ಆನಂದಿಸತಕ್ಕವರು. ಜಾತಿಗುಣಾದಿತಾರತಮ್ಯಗಳನ್ನೆಣಿಸದೆ ಎಲ್ಲರಲ್ಲಿಯೂ ಭಗವದಾತ್ಮಕತ್ವಭಾವನೆಯಿಟ್ಟು ಸಮದೃಷ್ಟಿಯಿಂದ ನೋಡತಕ್ಕವರು. ಯೋಗನಿಷ್ಠೆಗಳಲ್ಲಿ ದೇಹವನ್ನು ದಂಡಿಸತಕ್ಕವರು.

ತ್ರೇತಾಯುಗದಲ್ಲಿ ಮೆಲ್ಲಮೆಲ್ಲಗೆ ಧರ್ಮಗಳಲ್ಲಿ ಒಂದುಪಾಲು ಕಡಿಮೆಯಾಗುತ್ತ ಬಂದು, ಅಧರ್ಮಪಾದಗಳೆನಿಸಿಕೊಂಡ, ಅನೃತ, ಹಿಂಸೆ, ಅಸಂತುಷ್ಟಿ, ಭೂತದ್ರೋಹಗಳೆಂಬೀ ನಾಲ್ಕೂ ತಲೆದೋರುವುವು. ಆ ಕಾಲದ ಜನರು ಪ್ರಾಯಕವಾಗಿ ಕರ್ಮನಿಷ್ಠರೆನಿಸುವರು. ಆಗಿನ ಜನರಲ್ಲಿ ಪ್ರಾಣಿಹಿಂಸೆ, ವಿಷಯಾಸಕ್ತಿ ಇವೆರಡೂ ಕಂಡುಬಂದರೂ, ಅವು ಅಧಿಕವಾಗಿರಲಾರದು. ಆಗಿನ ಜನರಿಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಲ್ಲಿ ಅಭಿರುಚಿಯು ಹೆಚ್ಚು! ತ್ರೈವರ್ಣಿಕರು ವೈದಿಕಕರ್ಮಗಳಲ್ಲಿ ನಿಷ್ಠೆಯುಳ್ಳವರಾಗುವರು. ಆಗ ಬ್ರಾಹ್ಮಣಜಾತಿಯು ಪ್ರಧಾನವೆನಿಸುವುದು.

ದ್ವಾಪರಯುಗದಲ್ಲಿ ತಪಸ್ಸು, ಸತ್ಯ ದಯೆ, ದಾನವೆಂಬ ಧರ್ಮದ ನಾಲ್ಕುಪಾದಗಳಲ್ಲಿ ಅರ್ಧಭಾಗವನ್ನು, ಅಧರ್ಮಪಾದಗಳೆನಿಸಿಕೊಂಡ, ಅನೃತ, ಹಿಂಸೆ,ಅಸಂತುಷ್ಟಿ, ದ್ವೇಷಗಳೆಂಬಿವು ಆಕ್ರಮಿಸುವುವು. ಆಗಿನ ಜನರು ಪ್ರಾಯಕವಾಗಿ ಯಶಃಕಾಮರಾಗಿಯೂ, ದೊಡ್ಡದೊಡ್ಡಯಜ್ಞಕರ್ಮಗಳಲ್ಲಿ ನಿರತರಾಗಿಯೂ, ಶ್ರೋತ್ರಿಯರಾಗಿಯೂ, ಭಾಗ್ಯಶಾಲಿಗಳಾಗಿಯೂ, ಕುಟುಂಬಿಗಳಾಗಿಯೂ, ಹೆಮ್ಮೆಗೊಂಡವರಾಗಿಯೂ ಇರುವರು. ಆಗ ಬ್ರಾಹ್ಮಣಕ್ಷತ್ರಿಯವರ್ಣಗಳೆರಡೂ ಸಮಪ್ರಾಧಾನ್ಯವನ್ನು ಹೊಂದುವುವು.

ಕಲಿಯುಗದಲ್ಲಿ ಮೊದಲುಮೊದಲು ಧರ್ಮದ ನಾಲ್ಕನೆಯ ಒಂದುಭಾಗವುಮಾತ್ರವೇ ಅವಶಿಷ್ಟವಾಗಿದ್ದು, ಕೊನೆಕೊನೆಗೆ ಅಧರ್ಮಪ್ರಾಚುರ್ಯದಿಂದ ಅದೂ ಪೂರ್ಣವಾಗಿ ಕ್ಷಯಿಸುವುದು.ಆ ಕಾಲದ ಜನರು,ಲುಬ್ಧರೂ, ದುರಾಚಾರಿಗಳೂ, ದಯಾಶೂನ್ಯರೂ, ನಿಷ್ಕಾರಣವೈರಬುದ್ಧಿಯುಳ್ಳವರೂ,

---

ಬೇಕಾಗುವುದು. ಆಗ ಯುಗಾಂತರಗಳಿಗೆ ಸಂಭವವೇ ಇಲ್ಲದಂತಾಗುವುದು. ಆದುದರಿಂದಲೇ ಇಲ್ಲಿ "ಪ್ರಾಯಕವಾಗಿ" ಎಂಬ ವಿಶೇಷಣವು.

ಭಾಗ್ಯಹೀನರೂ, ವಿಶೇಷವಾಗಿ ಅರ್ಥಕಾಮಾಸಕ್ತರೂ ಆಗುವರು. ಇವರಲ್ಲಿ ಶೂದ್ರರೂ,ಕೈವರ್ತಕಾದಿಬಾಹ್ಯಜಾತಿಯವರೂ ಪ್ರಧಾನರೆನಿಸಿಕೊಳ್ಳುವರು.

ಓ ರಾಜೇಂದ್ರಾ! ಹೀಗೆ ಯುಗಭೇದದಿಂದ ಮನುಷ್ಯರ ಸ್ವಭಾವಗಳಲ್ಲಿ ವ್ಯತ್ಯಾಸವುಂಟಾಗುವುದಕ್ಕೆ ಕಾರಣವೇನೆಂದು ಕೇಳುವೆಯಾ ? ಮನುಷ್ಯನಲ್ಲಿ ಸತ್ವ, ರಜಸ್ಸು, ತಮಸ್ಸೆಂಬ ಈ ಮೂರುಗುಣಗಳು ಕಲೆತಿರುವುವು. ಈ ಗುಣಗಳೇ ಕಾಲಪ್ರೇರಿತಗಳಾಗಿ ಹೆಚ್ಚುತ್ತಲೂ, ತಗ್ಗುತ್ತಲೂ ಆಯಾಮನುಷ್ಯನ ಮನಸ್ಸಿನಲ್ಲಿ ತಮ್ಮ ಕಾರ್ಯಗಳನ್ನು ತೋರಿಸುವುವು. ಮನಸ್ಸು, ಬುದ್ಧಿ, ಇಂದ್ರಿಯಗಳು, ಇವೆಲ್ಲವೂ ಸತ್ವಗುಣಪ್ರಚುರವಾಗಿದ್ದಾಗ, ಜನರಿಗೆ ಜ್ಞಾನಮಾರ್ಗದಲ್ಲಿಯೂ, ತಪಸ್ಸಿನಲ್ಲಿಯೂ ಅಭಿರುಚಿಯು ಹೆಚ್ಚುವುದು. ಇದೇ ಕೃತಯುಗಲಕ್ಷಣವು. ಮನುಷ್ಯರಿಗೆ ಹೆಚ್ಚಾಗಿ ಕಾಮ್ಯಕರ್ಮಗಳಲ್ಲಿ ಅಭಿರುಚಿಯು ಹೆಚ್ಚಿದಾಗ ರಜೋಗುಣಪ್ರಧಾನವಾದ ತ್ರೇತಾಯುಗವೆಂದೂ, ಮನುಷ್ಯರಲ್ಲಿ ಕಾಮ್ಯಕರ್ಮಾಭಿರುಚಿಯೊಡನೆ, ಕಾಮ, ಅಸಂತುಷ್ಟಿ, ದಂಭ, ಅಹಂಭಾವ, ಮಾತ್ಸರ್ಯ, ಮುಂತಾದ ದುರ್ಗುಣಗಳೂ ಕಲೆತಿರುವುವೋ, ಆಗ ರಸ್ತಮೋಗುಣಗಳೆರಡರಿಂದಲೂ ಕಲೆತ ದ್ವಾಪರಯುಗವೆಂದೂ, ಮಾಯೆ, ಅನೃತ ಸೋಮಾರಿತನ, ನಿದ್ರೆ, ಹಿಂಸೆ, ಮನೋವ್ಯಾಧಿ, ಶೋಕ, ಮೋಹ, ಭಯ, ಕಾರ್ಪಣ್ಯ,ಮುಂತಾದುವು ಜನರಲ್ಲಿ ಹೆಚ್ಚಿದಾಗ, ಕೇವಲ ತಮಃಪ್ರಚುರವಾದ ಕಲಿಯುಗವೆಂದೂ ತಿಳಿಯಬೇಕು ಈ ಕಲಿಯುಗದಲ್ಲಿ ವಿವೇಕಜ್ಞಾನವೂ ಕಡಿಮೆ! ಭಾಗ್ಯವೂ ಕಡಿಮೆ! ಆದರೆ, ತಿನ್ನುವುದೂ, ಕಾಮವೂ ಹೆಚ್ಚು! ಭೋಗಸಾಧನವಾದ ಧನವು ಕಡಿಮೆ! ಸ್ತ್ರೀಯರೆಲ್ಲರೂ ಪ್ರಾಯಕವಾಗಿ ವ್ಯಭಿಚಾರಿಣಿಯರು. ದೇಶದಲ್ಲಿ ಕಳ್ಳರು ಹೆಚ್ಚುವರು. ಪಾಷಂಡಿಗಳ ಪ್ರಾಬಲ್ಯದಿಂದ ವೇದಗಳೆಲ್ಲವೂ ಕ್ಷಯಿಸುವುವು. ರಾಜರು ಪ್ರಜೆಗಳನ್ನು ಬಲಾತ್ಕಾರದಿಂದ ಹಿಂಸಿಸಿ, ಹಣವನ್ನು ಸುಲಿಯುವರು. ಬ್ರಾಹ್ಮಣರೂಕೂಡ, ತಮ್ಮ ಕರ್ಮಗಳಲ್ಲಿ ಶ್ರದ್ಧೆಯಿಲ್ಲದೆ, ಶಿಶ್ನೋದರಪರಾಯಣರಾಗುವರು. ಬ್ರಹ್ಮಚರ್ಯೆಯಲ್ಲಿರುವವರು, ತಮ್ಮ ವ್ರತಗಳನ್ನೆಲ್ಲಾ ಬಿಟ್ಟು, ಆಚಾರಹೀನರಾಗುವರು. ಕುಟುಂಬಿಗಳೇ ಭ

ನ್ಯಾಸಿವೇಷದಿಂದ ತಿರುಗುವರು. ತಪಸ್ವಿಗಳು ವಿವಿಕ್ತವಾದ ಸ್ಥಳವನ್ನು ಬಿಟ್ಟು ಗ್ರಾಮಗಳಲ್ಲಿಯೇ ವಾಸಮಾಡುವರು. ಸನ್ಯಾಸಿಗಳು ಹಣದಾಶೆ ಯಿಂದ ಧನಾರ್ಜನೆಯಲ್ಲಿಯೇ ನಿರತರಾಗುವರು. ಸ್ತ್ರೀಯರು ಆಕಾರದಲ್ಲಿ ಕುಳ್ಳು! ತಿನ್ನುವುದು ಮಾತ್ರ ಹೆಚ್ಚು! ವಿಶೇಷವಾಗಿ ಮಕ್ಕಳನ್ನು ಹಡೆಯು ವರು. ಅವರಿಗೆ ಸ್ವಾಭಾವಿಕವಾದ ಲಜ್ಜೆಯೂ ಬಿಟ್ಟುಹೋಗುವುದು. ಯಾವಾಗಲೂ ಕಟುವಾಗಿ ಮಾತನಾಡುವರು. ಮೋಸದಲ್ಲಿಯೂ, ಕಳ್ಳ ತನದಲ್ಲಿಯೂ, ಸಾಹಸಕಾರ್ಯಗಳಲ್ಲಿಯೂ ಪ್ರವರ್ತಿಸುವರು. ವರ್ತಕರು ಸಂಘವಾಗಿ ಸೇರಿ, ಕ್ರಯವಿಕ್ರಯಾದಿಗಳನ್ನು ನಡೆಸುತ್ತ, ಅವುಗಳಲ್ಲಿ ಏ ನಾದರೂ ತಮಗೆ ಲೋಪವು ಕಂಡುಬಂದರೆ, ನೀಚಕೃತ್ಯಗಳಿಗೆ ಪ್ರವರ್ತಿ ಸುವರು. ಜನರು ತಮಗೆ ಆಪತ್ತೇನೂ ಇಲ್ಲದಿದ್ದಾಗಲೂ, ಹೀನವೃತ್ತಿಯ ನ್ನವಲಂಬಿಸಿ, ಅದರಿಂದ ಧನಾರ್ಜನೆಗೆ ಯತ್ನಿಸುವರು ಭೃತ್ಯರು ತಮ್ಮ ಯಜಮಾನನು ಎಷ್ಟೇ ಗುಣಾಢ್ಯನಾಗಿದ್ದರೂ, ಅವನಿಗೆ ಕಷ್ಟಕಾಲವು ಬಂದಾಗ ಅವನನ್ನು ತಕ್ಷಣವೇ ಬಿಟ್ಟುಹೋಗುವರು. ಹಾಗೆಯೇ ಪ್ರಭು ಗಳೂಕೂಡ, ತಮ್ಮಲ್ಲಿ ಬಹುಕಾಲದಿಂದ ವಿಶ್ವಾಸಪೂರ್ವಕವಾಗಿ ಸೇವೆಮಾ ಡುವ ಭೃತ್ಯರನ್ನು ಆಪತ್ಕಾಲದಲ್ಲಿ ಕೈಬಿಡುವರು. ಮತ್ತು ಜನರು ತಮ್ಮ ಕುಲಪರಂಪರೆಯಾಗಿ ಬಂದ ಧರ್ಮಗಳನ್ನು ತ್ಯಜಿಸುವರು. ಬಹುಕಾಲದಿಂದ ಮನೆಯಲ್ಲಿ ಬೆಳೆಸಿದ್ದರೂ ಹಸುಗಳನ್ನು ಅವು ಹಾಲು ಕೊಡದಿದ್ದಾಗ ಆಗಲೇ ತೊರೆದುಬಿಡುವರು. ಕಲಿಯುಗದಲ್ಲಿ ಜನರು, ತಂದೆ, ತಾಯಿ, ಸಹೋದ ರರು, ಇಷ್ಟಮಿತ್ರರು, ಬಂಧುಗಳು ಮೊದಲಾಗಿ ಯಾರನ್ನೂ ಲಕ್ಷ್ಯಮಾ ಡದೆ, ಸ್ತ್ರೀವಶ್ಯರಾಗಿ, ಹೆಂಡತಿಯನ್ನೂ, ಹೆಂಡತಿಯ ಕಡೆಯವರಾದ ಮೈ ದುನರು, ಮಾವಂದಿರು ಮೊದಲಾದವರನ್ನೂ ಪ್ರೀತಿಸುತ್ತ, ಅವರಲ್ಲಿಯೇ ಪೂರ್ಣವಿಶ್ವಾಸವನ್ನಿಟ್ಟು, ಅವರೊಡನೆಯೇ ಕಾರ್ಯಾಲೋಚನೆಗಳನ್ನು ಮಾ ಡುವರು. ಶೂದ್ರರು ತಪಸ್ಸಿನಿಂದಲೂ, ವಿದ್ಯೆಯಿಂದಲೂ, ಪ್ರತಿಗ್ರಹಾದಿ ಬ್ರಾಹ್ಮಣವೃತ್ತಿಗಳಿಂದಲೂ ಜೀವಿಸತೊಡಗುವರು. ಧರ್ಮಲೇಶವನ್ನೂ ತಿಳಿಯದವರು ಲೋಕಕ್ಕೆ ಧರ್ಮೋಪದೇಶಕರಾಗಿ, ಗುರುಪೀಠವನ್ನೇರುವ ರು. ಕಲಿಯುಗದಲ್ಲಿ ಪ್ರಜೆಗಳ ಮನಸ್ಸಿಗೆ ಯಾವಾಗಲೂ ಶಾಂತಿಯಿರದು.

ಜನರೆಲ್ಲರೂ, ಅನಾವೃಷ್ಟಿಯಿಂದಲೂ, ಇತರವಿಧವಾದ ದುರ್ಭಿಕ್ಷಗಳಿಂದಲೂ, ರಾಜಬಾಧೆಯಿಂದಲೂ ಪೀಡಿತರಾಗಿ, ಹೊಟ್ಟೆಗೆ ಅನ್ನವಿಲ್ಲದೆ ದುಃಖಿಸುವರು. ಮತ್ತು ಕಲಿಯುಗದಲ್ಲಿ ಪ್ರಜೆಗಳು, ತಮ್ಮ ಸೌಕರ್ಯಕ್ಕೆ ಬೇಕಾದಷ್ಟು ಅನ್ನಪಾನ ವಸ್ತ್ರಾದಿಗಳಿಲ್ಲದೆ, ಸ್ನಾನಭೂಷಣಾದಿಗಳೂ ಇಲ್ಲದೆ ಹೀನಸ್ಥಿತಿಯನ್ನು ಹೊಂದಿ ಪಿಶಾಚಗಳಂತೆ ಕಾಣಿಸುವರು. ಕಲಿಯುಗದಲ್ಲಿ ಜನರು ಒಂದು ಕವಡೆಯಷ್ಟು ದ್ರವ್ಯಕ್ಕಾದರೂ ದೊಡ್ಡ ಜಗಳವನ್ನಾರಂಭಿಸಿ, ಬಂಧುಮಿತ್ರರೆಂಬ ದಾಕ್ಷಿಣ್ಯವನ್ನು ತೋರದೆ, ಒಬ್ಬರನ್ನೊಬ್ಬರು ಕೊಲ್ಲುವುದಕ್ಕೆ ಯತ್ನಿಸಿ, ತಾವೂ ಪ್ರಾಣವನ್ನು ಕಳೆದುಕೊಳ್ಳುವರು. ಮತ್ತು ಯುವಕರೆಲ್ಲರೂ ಕೇವಲಶಿಶ್ನೋದರಪರಾಯಣರಾಗಿ, ವೃದ್ಧರಾದ ತಂದೆತಾಯಿಗಳನ್ನಾಗಲಿ, ಹೊಟ್ಟೆಯಲ್ಲಿ ಹುಟ್ಟಿದ ಎಳಮಕ್ಕಳನ್ನಾಗಲಿ, ಕೈಹಿಡಿದ ಹೆಂಡತಿಯನ್ನಾಗಲಿ ಪೋಷಿಸದೆ, ತಮ್ಮ ಸುಖದಲ್ಲಿ ತಾವು ನಿರತರಾಗಿರುವರು. ರಾಜಾ! ಕಲಿಯುಗದಲ್ಲಿ ಪಾಷಂಡಿಗಳ ಬೋಧನೆಯಿಂದ ಜನರಿಗೆ ವಿಷ್ಣುವಿನಲ್ಲಿ ಭಕ್ತಿಯು ತಗ್ಗುತ್ತ ಬರುವುದು. ಆದುದರಿಂದ ತ್ರೈಲೋಕ್ಯನಾಥನಾಗಿಯೂ, ಲೋಕಗುರುವಾಗಿಯೂ, ಬ್ರಹ್ಮಾದಿದೇವತೆಗಳಿಂದಲೂ ಪೂಜಿಸಲ್ಪಟ್ಟ ಪಾದಾರವಿಂದಗಳುಳ್ಳವನಾಗಿಯೂ ಇರುವ ಶ್ರೀ ವಿಷ್ಣುವನ್ನು ಆರಾಧಿಸತಕ್ಕವರೇ ಕಡಿಮೆಯಾಗುವರು. ಮರಣದಶೆಯಲ್ಲಿರುವವನಾಗಲಿ, ದುಃಖಿತನಾಗಲಿ, ಪತಿತನಾಗಲಿ, ಆಚಾರಭ್ರಷ್ಟನಾಗಲಿ, ಬಾಯಿತಪ್ಪಿಯಾದರೂ ಒಮ್ಮೆ, ಯಾವನ ನಾಮೋಚ್ಚಾರಣವನ್ನು ಮಾಡಿದ ಮಾತ್ರದಿಂದ, ತನ್ನ ಪ್ರಾರಬ್ಧಕರ್ಮದೋಷಗಳಿಂದ ವಿಮುಕ್ತನಾಗಿ, ಉತ್ತಮಗತಿಯನ್ನು ಹೊಂದುವನೋ ಅಂತಹ ಶ್ರೀಮನ್ನಾರಾಯಣನನ್ನು ಅನೇಕರು ಮರೆತುಹೋಗುವರು. ರಾಜಾ! ಈ ಕಲಿದೋಷವನ್ನು ನೀಗಿಸತಕ್ಕ ಉಪಾಯವೇನೆಂದು ಕೇಳಿದೆಯಲ್ಲವೆ ?

ಪರಮದಯಾಳುವಾದ ಶ್ರೀಹರಿಯ ಸ್ಮರಣಮಾತ್ರದಿಂದಲೇ ಜನರಿಗೆ, ದ್ರವ್ಯ, ದೇಶ, ಕಾಲ, ಸಂಬಂಧವಾಗಿಯೂ, ತಮ್ಮತಮ್ಮ ಮನಸ್ಸಿಗೆ ಸಂಬಂಧಿಸಿದುದಾಗಿಯೂ ಇರುವ ಕಲಿದೋಷಗಳೆಲ್ಲವೂ ನೀಗುವುವು. ಆ ಶ್ರೀಮನ್ನಾರಾಯಣನ ನಾಮವನ್ನು ಒಂದಾವರ್ತಿ ಕಿವಿಯಿಂದ ಕೇಳಿದರೂ,

ಬಾಯಿಂದ ನುಡಿದರೂ, ಮನಸ್ಸಿನಿಂದ ಧ್ಯಾನಿಸಿದರೂ, ಅವನನ್ನು ಪೂಜಿಸಿದರೂ, ಆದರಿಸಿದರೂ, ಆ ಪರಮಪುರುಷನು ಅನೇಕಜನ್ಮಾರ್ಜಿತಗಳಾದ ಅಶುಭಗಳೆಲ್ಲವನ್ನೂ ನೀಗಿಸುವನು. ಅಗ್ನಿಯು ಲೋಹಮಿಶ್ರವಾದ ಬಂಗಾರದಲ್ಲಿರುವ ದೋಷವನ್ನು ನೀಗಿಸಿ, ಅದನ್ನು ಶುದ್ಧೀಕರಿಸುವಂತೆ, ವಿಷ್ಣುವು, ತನ್ನನ್ನು ಧ್ಯಾನಿಸತಕ್ಕವರ ಹೃದಯದಲ್ಲಿದ್ದಾಗ, ಅದರಿಂದ, ಉಂಟಾಗುವಷ್ಟು ಶುದ್ಧಿಯು, ವಿದ್ಯೆ, ತಪಸ್ಸು, ಪ್ರಾಣಾಯಾಮ, ಭೂತದಯೆ, ತೀರ್ಥಸ್ನಾನ, ಉಪವಾಸಾದಿವ್ರತಗಳು, ದಾನಧರ್ಮಗಳು, ಮಂತ್ರಜಪಗಳೇ ಮೊದಲಾದ ಯಾವ ಉಪಾಯಗಳಿಂದಲೂ ಸಿದ್ಧಿಸಲಾರದು. ಆದುದರಿಂದ ಓ ಪರೀಕ್ಷಿದ್ರಾಜಾ! ನೀನು ಸರ್ವವಿಧದಿಂದಲೂ ಆ ಭಗವಂತನನ್ನು ಬಿಡದೆ ಹೃದಯದಲ್ಲಿ ಧರಿಸಿರು! ಸಾಯುವಾಗಲೂ ಎಚ್ಚರತಪ್ಪದೆ ಆ ಶ್ರೀಹರಿಯನ್ನು ಮನಸ್ಸಿನಲ್ಲಿಟ್ಟಿದ್ದರೆ, ನಿನಗೆ ಕಲಿದೋಷಗಳಾವುವೂ ತಟ್ಟವು ಉತ್ತಮಗತಿಯೂ ಲಭಿಸುವುದು, ಮುಖ್ಯವಾಗಿ ಮರಣಕಾಲದಲ್ಲಿ ಪ್ರತಿಯೊಬ್ಬನೂ ಆ ಭಗವಂತನನ್ನು ಅವಶ್ಯವಾಗಿ ಧ್ಯಾನಿಸಬೇಕು ಸರ್ವಾತ್ಮಕನಾಗಿಯೂ, ಸರ್ವಾಧಾರನಾಗಿಯೂ ಇರುವ ವಿಷ್ಣುವು ಅಷ್ಟುಮಾತ್ರದಿಂದಲೇ ಪ್ರಸನ್ನನಾಗಿ ಅವನಿಗೆ ತನ್ನ ಸಾಮ್ಯವನ್ನು ಕೊಡುವನು. ಓ ರಾಜೇಂದ್ರ! ಕಲಿಯು ದೋಷಗಳಿಗೆಲ್ಲಾ ನಿಧಿಯಾಗಿದ್ದರೂ, ಅದರಲ್ಲಿ ಅತ್ಯುತ್ತಮವಾದ ಒಂದು ಗುಣವುಂಟು! ಏನೆಂದರೆ, ಆ ಕಲಿಯುಗದಲ್ಲಿ ಶ್ರೀಕೃಷ್ಣನ ನಾಮಸಂಕೀರ್ತನಮಾತ್ರದಿಂದಲೇ ಮನುಷ್ಯನು ಬಂಧಮುಕ್ತನಾಗಬಹುದು ಕೃತಯುಗದಲ್ಲಿ ಧ್ಯಾನಯೋಗದಿಂದಲೂ, ತ್ರೇತಾಯುಗದಲ್ಲಿ ಯಾಗಮೂಲಕವಾದ ಆರಾಧನದಿಂದಲೂ, ದ್ವಾಪರಯುಗದಲ್ಲಿ ಆ ಭಗವಂತನ ಪೂಜಾಕ್ರಮಗಳಿಂದಲೂ, ಲಭಿಸತಕ್ಕ ಫಲಗಳೆಲ್ಲವೂ ಕಲಿಯುಗದಲ್ಲಿ, ಆ ಶ್ರೀಕೃಷ್ಣನ ನಾಮಸಂಕೀರ್ತನಮಾತ್ರದಿಂದಲೇ ಅತಿಸುಲಭವಾಗಿ ಕೈಗೂಡುವುವು. ಇದು ಮೂರನೆಯ ಅಧ್ಯಾಯವು.

---

## ಕಲ್ಪಪ್ರಳಯಗಳ ಕಾಲಪರಿಮಾಣವು.

ಓ ರಾಜಾ! ನಿನಗೆ ಪರಮಾಣು ಮೊದಲಾಗಿ, ದ್ವಿಪರಾರ್ಧದವರೆಗಿರುವ ಕಾಲವಿಭಾಗಗಳನ್ನೂ, ಯುಗಪರಿಮಾಣವನ್ನೂ ಹಿಂದೆಯೇ ತಿಳಿ

ಸಿರುವೆನು.ಇನ್ನು *ಕಲ್ಪಭೇದಗಳನ್ನೂ, ಪ್ರಳಯಗಳನ್ನೂ ತಿಳಿಸುವೆನು ಕೇಳು! ಮನುಷ್ಯರ ಲೆಕ್ಕದಲ್ಲಿ ಒಂದು ಸಹಸ್ರಚತುರ್ಯುಗಗಳು ಬ್ರಹ್ಮನಿಗೆ ಒಂದು ಹಗಲೆನಿಸುವುದು. ಈ ಒಂದುಹಗಲಲ್ಲಿಯೇ ಕ್ರಮವಾಗಿ † ಚತುರ್ದಶಮನುಗಳ ಕಾಲವೂ ಕಳೆದುಹೋಗುವುದು ಅದಾದಮೇಲೆ ಎಂದರೆ, ‡ ಈ ಸಹಸ್ರಚತುರ್ಯುಗಗಳ ಕೊನೆಗೆ,ಪ್ರಳಯವು ನಡೆಯುವುದು. ಈ ಪ್ರಳಯಕಾಲವೂ ಅದೇ ಪರಿಮಾಣವುಳ್ಳುದು (ಎಂದರೆ ಒಂದು ಸಹಸ್ರಚತುರ್ಯುಗಗಳವರೆಗೆ ನಿಲ್ಲುವುದು)ಇದು ಬ್ರಹ್ಮನಿಗೆ ಒಂದು ರಾತ್ರಿಯಾಗಿರುವುದು. ಆ ರಾತ್ರಿಯಲ್ಲಿ ಭೂಮಿ ಮೊದಲಾದ ಮೂರುಲೋಕಗಳೂ ಲಯಹೊಂದುವುವು. ಇದಕ್ಕೆ ನೈಮಿತ್ತಿಕಪ್ರಳಯವೆಂದು ಹೆಸರು. ಈ ಪ್ರಳಯದಲ್ಲಿ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನು, ತಾನು ಸೃಷ್ಟಿಸಿದ ಪ್ರಪಂಚವನ್ನೆಲ್ಲಾ ಉಪಸಂಹರಿಸಿಕೊಂಡು, ಶೇಷಶಾಯಿಯಾದ ಭಗವಂತನ ನಾಭಿಪದ್ಮದಲ್ಲಿ ಶಯನಿಸಿರುವನು. ಈ ಬ್ರಹ್ಮನಿಗೆ ಎರಡುಪರಾರ್ಧಕಾಲವು ಕಳೆದಮೇಲೆ, ಮಹತ್ತು, ಅಹಂಕಾರ, ಪಂಚಭೂತಗಳೆಂಬ ಏಳುಪ್ರಕೃತಿಗಳೂ ಲಯಹೊಂದುವುವು ಇದಕ್ಕೆ ಪ್ರಾಕೃತಪ್ರಳಯವೆಂದು ಹೆಸರು. ಈ ವಿಧವಾದ ನಾಶಕ್ಕೆ ಆರಂಭಿಸಿದಾಗ,ಮೊದಲು, ಮಹತ್ತು ಮೊದಲಾದ ಏಳುಪ್ರಕೃತಿಗಳ ಸಮುದಾಯರೂಪವಾದ ಅಂಡಕೋಶವು ಲಯಿಸುವುದು.ಅದರ ನಾಶಕ್ರಮವೇನೆಂದರೆ;ಆಗ ಪರ್ಜನ್ಯನು ನೂರು

* ಕಲ್ಪಗಳಲ್ಲಿ ದೈನಂದಿನಕಲ್ಪವೆಂದೂ, ಮಹಾಕಲ್ಪವೆಂದೂ ಎರಡು ಭೇದಗಳು ಇಲ್ಲಿ ದೈನಂದಿನಕಲ್ಪವು ಹೇಳಲ್ಪಡುವುದು.

† ಮನುಗಳ ಕಾಲವೆಂದರೆ ಮನ್ವಂತರಗಳು. ಒಬ್ಬೊಬ್ಬ ಮನುವಿನ ಆಳ್ವಿಕೆಯು ಎಪ್ಪತ್ತೊಂದು ಚತುರ್ಯುಗಗಳ ಕಾಲವು ಇದು ಹಿಂದೆ ತೃತೀಯಸ್ಕಂಧದಲ್ಲಿ ವಿವರಿಸಲ್ಪಟ್ಟಿದೆ.

‡ ಪ್ರಳಯಗಳಲ್ಲಿ, ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕಗಳೆಂದು ನಾಲ್ಕುಭೇದಗಳು. ಒಂದು ಸಾವಿರ ಚತುರ್ಯುಗಪರಿಮಾಣವುಳ್ಳ ತನ್ನ ಒಂದು ಹಗಲು ಕಳೆದಮೇಲೆ, ಬ್ರಹ್ಮನು, ಜಗದ್ವ್ಯಾಪಾರವನ್ನು ಬಿಟ್ಟು ಶಯನಿಸುವನು. ಇದೇ ನೈಮಿತ್ತಿಕಪ್ರಳಯವು.

ವರ್ಷಗಳವರೆಗೆ ಮಳೆಯನ್ನು ಸುರಿಸದೆ ನಿಲ್ಲಿಸುವನು. ಪ್ರಜೆಗಳು ಅನ್ನವಿಲ್ಲದೆ ಒಬ್ಬರನ್ನೊಬ್ಬರು ಕೊಂದು ಭಕ್ಷಿಸುವರು. ಹೀಗೆ ಅನೇಕಪ್ರಾಣಿಗಳು ಕ್ಷಯಹೊಂದುವುವು. ಆ ಪ್ರಳಯಕಾಲದ ಸೂರ್ಯನು, ಸಮುದ್ರದಲ್ಲಿಯೂ, ಭೂಮಿಯಲ್ಲಿಯೂ, ಪ್ರಾಣಿಗಳ ದೇಹದಲ್ಲಿಯೂ ಇರುವ ದ್ರವವನ್ನೆಲ್ಲಾ ಶೋಷಿಸುತ್ತ,ತಿರುಗಿ ಆ ನೀರನ್ನು ಈಗಿನಂತೆ ಹೊರಕ್ಕೆ ಬಿಡದೆ,ಯಾವುದೂ ಉಳಿಯದಂತೆ ಎಲ್ಲವನ್ನೂ ತನ್ನ ಕಿರಣಗಳಿಂದ ದಹಿಸಿಬಿಡುವನು. ಆಮೇಲೆ ಸಂಕರ್ಷಣರೂಪಿಯಾದ ಭಗವಂತನ ಮುಖದಿಂದ ಹೊರಟ ಪ್ರಳಯಾಗ್ನಿಯು, ಪ್ರಚಂಡವಾಯುವಿನ ಸಹಾಯದಿಂದ ಜಾಜ್ವಲ್ಯಮಾನವಾಗಿ, ಪಾತಾಳಾದಿವಿವರಗಳನ್ನೂ ದಹಿಸುತ್ತ ಬರುವುದು ಹೀಗೆ ಸೂರ್ಯಾಗ್ನಿಗಳ ಜ್ವಾಲೆಗಳಿಂದ ಮೇಲೆಯೂ, ಕೆಳಗೂ, ನಾನಾಪಕ್ಕಗಳಲ್ಲಿಯೂ ಬ್ರಹ್ಮಾಂಡವು ದಗ್ಧವಾಗುತ್ತ ಬಂದು, ಸುಟ್ಟ ಬೆರಣಿಯಂತಾಗುವುದು. ಆಮೇಲೆ ಪ್ರಚಂಡವಾದ ಬಿರುಗಾಳಿಯೊಂದು ಹೊರಟು,ನೂರಾರು ವರ್ಷಗಳವರೆಗೆ ಬೀಸುತ್ತ, ಆಕಾಶವೆಲ್ಲವನ್ನೂ ಧೂಳಿನಿಂದ ಮುಚ್ಚಿಬಿಡುವುದು. ಆಮೇಲೆ ವಿಚಿತ್ರವರ್ಣಗಳುಳ್ಳ ಮೇಘಗಳು ಹೊರಟು, ಭಯಂಕರ ಧ್ವನಿಯಿಂದ ಗರ್ಜಿಸುತ್ತ ನೂರುವರ್ಷಗಳವರೆಗೆ ಮಳೆಯನ್ನು ಕರೆಯುವುವು. ಇದರಿಂದ ಬ್ರಹ್ಮಾಂಡವಿವರದಲ್ಲಿ ಅಡಗಿರುವ ಪ್ರಪಂಚವೆಲ್ಲವೂ ಜಲಮಯವಾಗಿ ಏಕಾರ್ಣವವಾಗುವುದು ಹೀಗೆ ಜಗತ್ತೆಲ್ಲವೂ ಜಲದಲ್ಲಿ ಮುಳುಗಿದಾಗ, ಭೂಮಿಯಲ್ಲಿರುವ ಗಂಧಗುಣವು ಜಲದಿಂದ ಆಕರ್ಷಿಸಲ್ಪಟ್ಟು, ಭೂಮಿಯೂ ಜಲದಲ್ಲಿ ಲಯಿಸುವುದು. ಆಮೇಲೆ ಜಲದಲ್ಲಿರುವ ರಸವೆಂಬ ಗುಣವು ತೇಜಸ್ಸಿನಿಂದ ಗ್ರಸಿಸಲ್ಪಡುವುದು, ಆಜಲವು ತೇಜಸ್ಸಿನಲ್ಲಿ ಲಯಿಸುವುದು. ಹೀಗೆಯೇ ತೇಜಸ್ಸು ವಾಯುವಿನಿಂದ ಅಪಹರಿಸಲ್ಪಟ್ಟ ರೂಪಗುಣವುಳ್ಳುದಾಗಿ, ತಾನೂ ವಾಯುವಿನಲ್ಲಿಯೇ ಲಯಿಸುವುದು. ವಾಯುಗುಣವಾದ ಸ್ಪರ್ಶವನ್ನು ಆಕಾಶವು ಗ್ರಸಿಸುವುದರಿಂದ, ಗುಣಹೀನವಾದ ಆ ವಾಯುವು ಆಕಾಶದಲ್ಲಿ ಐಕ್ಯಹೊಂದುವುದು. ಆಮೇಲೆ ಆಕಾಶಗುಣವಾದ ಶಬ್ದವು ಭೂತಾದಿಯೆನಿಸುವ ತಾಮಸಾಹಂಕಾರದಿಂದ ಆಕರ್ಷಿಸಲ್ಪಡುವುದು. ಆಮೇಲೆ ನಿರ್ಗುಣವಾದ ಆಕಾಶವು, ಆ ತಾಮ

ಸಾಹಂಕಾರದಲ್ಲಿಯೇ ಲಯಹೊಂದುವುದು. ಆಮೇಲೆ ರಾಜಸಾಹಂಕಾರ ಸಹಿತವಾದ ಸಾತ್ವಿಕಾಹಂಕಾರವು, ಜ್ಞಾನೇಂದ್ರಿಯಗಳನ್ನೂ, ಅವುಗಳ ವ್ಯಾಪಾರವನ್ನೂ ಗ್ರಸಿಸುವುದು. ಆಮೇಲೆ ಆ ಮೂರುಬಗೆಯ ಅಹಂಕಾರ ಗಳನ್ನೂ ಮಹತ್ತತ್ವವು ಗ್ರಸಿಸುವುದು. ಆ ಮಹತ್ತತ್ವವನ್ನು ಸತ್ವಾದಿ ಗುಣಗಳು (ಎಂದರೆ ತ್ರಿಗುಣಾತ್ಮಕವಾದ ಪ್ರಕೃತಿಯು) ಗ್ರಸಿಸುವುದು. ಆಮೇಲೆ ಪ್ರಧಾನವೆನಿಸಿಕೊಂಡ ವಿಕಾರಶೂನ್ಯವಾದ ಆ ಪ್ರಕೃತಿಯು, ತನ್ನಲ್ಲಿರುವ ಸತ್ವಾದಿಗುಣಗಳನ್ನು ಗ್ರಸಿಸುವುದು. ಎಂದರೆ ಆ ಗುಣಗ ಳಲ್ಲಿರುವ ವಿಷಮಾವಸ್ಥೆಯನ್ನು ನೀಗಿಸಿ ಸಮಸ್ಥಿತಿಗೆ ತರುವುದು. ಕೊನೆಗೆ ಆ ಪ್ರಕೃತಿಯು ಪರಬ್ರಹ್ಮನಲ್ಲಿ ಐಕ್ಯಹೊಂದುವುದು. ಓ ರಾಜೇಂದ್ರಾ! ಆ ಪರಮಾತ್ಮನ ಸ್ವರೂಪವುಮಾತ್ರ ಆದ್ಯಂತವಿಲ್ಲದುದು. ಅದು ಕಾಲಾವಯವಗಳೆನಿಸಿಕೊಂಡ, ರಾತ್ರಿ, ಹಗಲು, ಮುಂತಾದುವುಗಳಿಂದ ಪರಿಣಾಮವನ್ನು ಹೊಂದತಕ್ಕುದಲ್ಲ. ಇಂದ್ರಿಯಗಳಿಗೆ ಗೋಚರಿಸದುದ ರಿಂದ ಅವ್ಯಕ್ತವೆನಿಸುವುದು. ನಾಶವಿಲ್ಲದುದರಿಂದ ನಿತ್ಯವೆನಿಸಿರುವುದು. ಅವ್ಯಕ್ತವೇ ಮೊದಲಾಗಿ, ಪೃಥಿವಿಯವರೆಗಿನ ಜಗತ್ತಿಗೆಲ್ಲಾ ಅದೇ ಕಾರಣ ಭೂತವಾಗಿರುವುದು. ಹಾಗಿದ್ದರೂ ಕಾರ್ಯಗತವಾದ ದೋಷಗಳಿಗೆ ಈಡಾಗ ಲಾರದು. ಮನಸ್ಸು, ವಾಕ್ಕು, ಸತ್ವರಜಸ್ತಮೋಗುಣಗಳು, ಮಹತ್ತು ಮೊದಲಾದ ತತ್ವಗಳು, ಪ್ರಾಣಗಳು, ಬುದ್ಧಿ, ಕರ್ಮೇಂದ್ರಿಯ ಜ್ಞಾನೇಂ ದ್ರಿಯಗಳು, ಲೋಕಸೃಷ್ಟಿಗೆ ಆಧಾರವೆನಿಸಿದ ಬ್ರಹ್ಮಾಂಡ ಸನ್ನಿವೇಶವು, ಇವೊಂದೂ ಆ ಬ್ರಹ್ಮಸ್ವರೂಪಕ್ಕೆ ಸಂಬಂಧಿಸಿಲ್ಲ! ಮತ್ತು ಆ ಪರ ಬ್ರಹ್ಮನಿಗೆ, ಜೀವನಿಗೆ ಹೇಗೋಹಾಗೆ ಜ್ಞಾನದ ಸಂಕೋಚವಿಕಾಸರೂಪ ಗಳಾದ,ಎಚ್ಚರ,ಕನಸು ಸುಷುಪ್ತಿ, ಎಂಬ ಅವಸ್ಥಾಭೇದಗಳೂ ಇಲ್ಲ! ಮತ್ತು ಆ ಬ್ರಹ್ಮಸ್ವರೂಪವು ಆಕಾಶ, ಜಲ, ಭೂಮಿ, ವಾಯು, ಅಗ್ನಿ, ಸೂರ್ಯ ಎಂಬಿವುಗಳಲ್ಲಿಯೂ ಸೇರಿದುದಲ್ಲ. ಗಾಢನಿದ್ರೆಯಲ್ಲಿರುವಂತೆ, ಹೊರಗೆ ಬ್ರಾಹ್ಮಣತ್ವಾದಿವಿಕಾರಗಳಿಗಾಗಲಿ, ಒಳಗೆ ಸುಖದುಃಖಾದಿ ವಿಕಾರಗಳಿ ಗಾಗಲಿ, ಈಡಾಗುವುದಲ್ಲ. ಮತ್ತು ಆಕಾಶದಂತೆ ತಾನು ಸಮಸ್ತದ್ರವ್ಯಗ ಳಲ್ಲಿಯೂ ಸೇರಿದ್ದರೂ, ಅವುಗಳ ದೋಷಕ್ಕೀಡಾಗದೆ ನಿರ್ಮಲವಾಗಿರು

ವುದು. ಆ ಪರಮಾತ್ಮಸ್ವರೂಪವನ್ನು ಹೀಗೆಂದು ತರ್ಕಿಸುವುದಕ್ಕೂ ಶಕ್ಯವಲ್ಲ. ಈ ಪರಬ್ರಹ್ಮಸ್ವರೂಪವೇ ಅವ್ಯಕ್ತವೆನಿಸಿಕೊಂಡ ಪ್ರಧಾನಕ್ಕೆ ಲಯಸ್ಥಾನವೆಂದು ವೇದಾಂತಗಳು ನಿರ್ಧರಿಸುವುವು. ಓ ಪರೀಕ್ಷಿದ್ರಾಜಾ ! ಇದೇ ಪ್ರಾಕೃತಪ್ರಳಯವು. ಇದರಲ್ಲಿ*ಪುರುಷನೂ, ಪ್ರಕೃತಿಯೂ ಈಶ್ವರನಲ್ಲಿ ಲಯಿಸುವುವು. ಹೀಗೆ ಪೃಥಿವಿ ಮೊದಲಾಗಿ ಮಹತ್ತಿನವರೆಗಿರುವ ತತ್ವಗಳೆಲ್ಲವೂ ಕಾಲದಿಂದ ಪ್ರೇರಿತಗಳಾಗಿ ತಮ್ಮ ತಮ್ಮ ಕಾರಣತತ್ವಗಳಲ್ಲಿ ಲಯಿಸುತ್ತಬಂದು, ಆ ಪರಬ್ರಹ್ಮಸ್ವರೂಪವೊಂದೇ ಉಳಿಯುವುದು. ಜ್ಞಾನಶಬ್ದವಾಚ್ಯನಾದ ಆ ಪರಮಾತ್ಮನು, ಬುದ್ಧಿ, ಇಂದ್ರಿಯಗಳು, ಮೊದಲಾದ ಸರ್ವವಸ್ತು ಶರೀರಕನಾಗಿ, ಅವೆಲ್ಲಕ್ಕೂ ಧಾರಕನಾಗಿರುವನು. ಬುದ್ಧೀಂದ್ರಿಯಾದಿಗಳೆಲ್ಲವೂ ಪರಮಾತ್ಮನನ್ನು ಬಿಟ್ಟು ಪ್ರತ್ಯೇಕವಾಗಿ ಇರಲಾರದುದರಿಂದಲೂ, ಅವು ಪರಮಾತ್ಮನಿಗೆ ಶರೀರವಾಗಿರುವಂತೆಯೇ ಅನೇಕಪ್ರಮಾಣಗಳಿಂದ ತಿಳಿಯಬರುವುದರಿಂದಲೂ, ಅವುಗಳನ್ನು ಪರಮಾತ್ಮನಿಗೆ ಶರೀರಭೂತಗಳೆಂದೇ ಪ್ರಾಮಾಣಿಕರ ನಿಶ್ಚಯವು. ಮತ್ತು ಬುದ್ಧೀಂದ್ರಿಯಾದಿಗಳು ಪರಮಾತ್ಮಸ್ವರೂಪದಂತೆ ನಿತ್ಯವಲ್ಲ! ಆದ್ಯಂತಗಳುಳ್ಳುದು. ಯಾವಾಗಲೂ ವಿಕಾರಹೊಂದತಕ್ಕ ಸ್ವಭಾವವುಳ್ಳವು. ತೇಜಸ್ಸಿನ ಕಾರ್ಯವೆನಿಸಿದ ದೀಪವೂ, ತೇಜಸ್ಸಿನಿಂದ ಸಹಕರಿಸಲ್ಪಡಬೇಕಾದ ನೇತ್ರೇಂದ್ರಿಯವೂ, ತೇಜೋಧರ್ಮವೆನಿಸಿದ ರೂಪವೂ, ಇವು ಮೂರೂ ಆ ತೇಜಸ್ಸನ್ನು ಬಿಟ್ಟು ಹೇಗೆ ಪ್ರತ್ಯೇಕವಾಗಿರಲಾರವೋ,ಹಾಗೆಯೇ,ಇಂದ್ರಿಯಗಳೂ,ಅಂತಃಕರಣವೂ, ವಿಷಯಗಳೂ, ಪರಮಾತ್ಮನಿಂದಲೇ ಸೃಜಿಸಲ್ಪಟ್ಟು, ಅವನಿಂದಲೇ ಸಹಕರಿಸಲ್ಪಡತಕ್ಕವುಗಳಾಗಿ,ಅವನನ್ನೇ ಆಶ್ರಯವಾಗಿ ಹೊಂದಿರುವುವು. ಆದುದರಿಂದ, ಅವು ತಮಗಿಂತಲೂ ವಿಲಕ್ಷಣನಾಗಿಯೂ,ಜ್ಞಾನಶಬ್ದವಾಚ್ಯನಾಗಿಯೂ ಇರುವ ಪರಮಾತ್ಮನನ್ನು ಬಿಟ್ಟು ಪ್ರತ್ಯೇಕವಾಗಿರಲಾರವು. ಓ ರಾಜಾ! ಜೀವನ ಜ್ಞಾನಕ್ಕೆ, ಜಾಗರ,ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾ

---

* ಪುರುಷನಿಗೆ ಲಯವೆಂದರೆ ಅತ್ಯಂತಜ್ಞಾನಸಂಕೋಚದಿಂದ ಪರಮಾತ್ಮನೊಡನೆ ಸಂಶ್ಲೇಷವು. ಅವ್ಯಕ್ತವಾದ ಪ್ರಕೃತಿಗೆ ಲಯವೆಂದರೆ, ಮಹದಾದಿ ವಿಭಾಗಗಳಿಲ್ಲದೆ ಏಕೀಭಾವರೂಪವಾದ ಅವಸ್ಥೆಯನ್ನು ಹೊಂದುವುದು.

ಭೇದಗಳು ಪ್ರಕೃತಿಸಂಬಂಧದಿಂದುಂಟಾಗತಕ್ಕವುಗಳೇಹೊರತು ಸಹಜ ವಲ್ಲ! ಆಕಾಶದಲ್ಲಿ ಮೇಘಗಳು ಒಮ್ಮೊಮ್ಮೆ ದೃಶ್ಯವಾಗಿಯೂ,ಮತ್ತೊಮ್ಮೆ ಅದೃಶ್ಯವಾಗಿಯೂ ಇರುವಂತೆ, ಈ ದೃಶ್ಯಪ್ರಪಂಚವೆಲ್ಲವೂ, ಆ ಬ್ರಹ್ಮ ನಲ್ಲಿಯೇ ಸೃಷ್ಟಿದಶೆಯಲ್ಲಿ ಹೊರಕ್ಕೆ ಕಾಣುತ್ತಲೂ, ಲಯದಶೆಯಲ್ಲಿ ಅವ ನಲ್ಲಿಯೇ ಲಯಿಸಿ ಅಗೋಚರವಾಗುತ್ತಲೂ ಇರುವುದು. ಆದರೆ ಜಗತ್ತನ್ನು ಅಸತ್ಯವೆಂದು ಕೆಲವರು ಭ್ರಮಿಸುವರು. ಹಾಗೆ ತಿಳಿಯಬಾರದು. ಏಕೆಂ ದರೆ, ಅವಯವವಿಶಿಷ್ಟವಾದ ಸಮಸ್ತವಸ್ತುಗಳಿಗೂ ಅವಯವಗಳು ಸತ್ಯವೆಂದೇ ಗ್ರಹಿಸಲ್ಪಡಬೇಕು. ಅವಯವಗಳನ್ನು ಬಿಟ್ಟು ಅವಯವಿಯು ಬೇರೆಯಾಗಿರಲಾರದು. ನೂಲೆಳೆಗಳನ್ನು ಬಿಟ್ಟು ವಸ್ತ್ರವೆನಿಸಲಾರದಲ್ಲವೆ? ಹಾಗೆಯೇ ಜಗದ್ರೂಪವಾದ ಕಾರ್ಯವು, ಅದಕ್ಕೆ ಕಾರಣವೆನಿಸಿಕೊಂಡ ಬ್ರಹ್ಮಸಿಗಿಂತಲೂ ಬೇರೆಯಾಗಿರಲಾರದು. ಆದುದರಿಂದ, ಚಿತ್ತು, ಅಚಿತ್ತು, ಈಶ್ವರರೆಂಬ ಈ ಮೂರರ ಸಂಘಾತವೇ ಜಗದ್ರೂಪವಾದ ಪರಿಣಾಮವಿಶೇಷವನ್ನು ಹೊಂದಿ, ಕಾರ್ಯಪ್ರಪಂಚವೆನಿಸಿಕೊಳ್ಳುವುದು. ಸತ್ತೆನಿಸಿದ ಕಾರಣದ್ರವ್ಯಗಳ ಸಮುದಾಯವೇ ಕಾರ್ಯವಾದುದರಿಂದ,ಕಾರ್ಯ ವಸ್ತುವೂ ಸತ್ತೆನಿಸುವುದೇಹೊರತು ಅಸತ್ತೆನಿಸದು. ಕಾರಣವೆನಿಸಿದ ಮಣ್ಣು ಕಾರ್ಯಾವಸ್ಥೆಯಲ್ಲಿ ಗಡಿಗೆಯೆನಿಸುವುದು. ಆಗ ಆ ಕಾರ್ಯಕಾರಣ ವಸ್ತುಗಳಿಗೆ ಘಟವೆಂದೂ, ಮಣ್ಣೆಂದೂ ಮನೋಭಾವನೆಯಲ್ಲಿಯೂ, ವ್ಯವಹಾರದಲ್ಲಿಯೂ ಭೇದವು ಏರ್ಪಟ್ಟರೂ, ಈ ಆಕಾರಭೇದಕ್ಕೇ ದ್ರವ್ಯಾಂತರತ್ವವನ್ನು ತಿಳಿಯುವುದು ಕೇವಲಭ್ರಮವಲ್ಲವೆ? ಏಕೆಂದರೆ, ಸಾಮಾನ್ಯವೆನಿಸಿಕೊಂಡ ಮಣ್ಣೂ, ಅದರ ಆಕಾರವಿಶೇಷವೆನಿಸಿಕೊಂಡ ಗಡಿಗೆಯೂ, ಆಧಾರಾಧೇಯಭಾವದಿಂದ ಒಂದನ್ನೊಂದು ಆಶ್ರಯಿಸಿಯೇ ಇರುವುವೇಹೊರತು,ಅವು ಒಂದನ್ನೊಂದು ಬಿಟ್ಟು ಪ್ರತ್ಯೇಕವಾಗಿ ದ್ರವ್ಯಾಂ ತರವೆನಿಸಲಾರದು. ಹೀಗೆಯೇ ಚಿದಚಿದೀಶ್ವರಸಮುದಾಯವೇ ಕಾರ್ಯ ಕಾರಣಗಳೆಂಬ ಎರಡವಸ್ಥೆಗಳನ್ನೂ ಹೊಂದುವುದರಿಂದ, ಅವುಗಳಿಗೆ ಭೇದ ವಿಲ್ಲ! ಅವುಗಳ ಕಾರ್ಯರೂಪವಾದ ಜಗತ್ತನ್ನು ಅಸತ್ತೆಂದೂ ತಿಳಿಯಬಾರದು. ಮೇಲೆ ಹೇಳಿದ ಮೂರುತತ್ವಗಳೂ, ಕಾರ್ಯಾವಸ್ಥೆಯನ್ನು ಹೊಂದಿದಾಗ

ಅವುಗಳಲ್ಲಿ ಪ್ರಕೃತಿವಿಕಾರವೆನಿಸಿಕೊಂಡ ಶರೀರಕ್ಕೆಮಾತ್ರ ಆದ್ಯಂತಗಳುಂಟು. ಆತ್ಮಕ್ಕೆ ಆ ವಿಧವಾದ ವಿಕಾರಗಳಿಲ್ಲ! ಆದುದರಿಂದ ಶರೀರವು ಆತ್ಮವಸ್ತುವೆನಿಸಲಾರದು. ದೇಹದಲ್ಲಿ ಆತ್ಮಾಭಿಮಾನವುಳ್ಳವನಿಗೆ, ಜಾತಿ, ಗುಣ, ಕ್ರಿಯೆ, ಜನ್ಮ, ವೃದ್ಧಿ, ಮೊದಲಾದ ದೇಹಗತವಿಕಾರಗಳು ಆತ್ಮನಲ್ಲಿರುವಂತೆ ತೋರುವುವು. ಅವು ಶರೀರಕ್ಕೇಹೊರತು ಪ್ರತ್ಯಗಾತ್ಮನಿಗೆ ಎಷ್ಟುಮಾತ್ರವೂ ಉಂಟಾಗಲಾರವು ಆ ಆತ್ಮಕ್ಕೆ ಯಾವ ವಿಧವಾದ ವಿಕಾರವನ್ನೂ ನಿರೂಪಿಸುವುದಕ್ಕಿಲ್ಲ. ಅದಕ್ಕೆ ಅಣುಮಾತ್ರವಾದರೂ ವಿಕಾರವಿರುವುದಾದರೆ, ಮುಕ್ತಾತ್ಮನೂ ಅಚೇತನಜಾತಿಯಲ್ಲಿಯೇ ಸೇರಿದಂತಾಗುವುದು. ಶುದ್ಧಾತ್ಮಸ್ವರೂಪಕ್ಕೆ ದೇವಮನುಷ್ಯಾದಿನಾನಾತ್ವವಿಲ್ಲ. ಯಾವನು ಆತ್ಮನಿಗೆ ನಾನಾತ್ವವುಂಟೆಂದು ತಿಳಿಯುವನೋ, ಅವನು ದೇಹಾಭಿಮಾನವುಳ್ಳ ಮೂಢನೇಹೊರತು ಆತ್ಮತತ್ವವನ್ನು ತಿಳಿದ ವಿದ್ವಾಂಸನೆನಿಸಲಾರನು. ಆಕಾಶವೂ, ಬೆಳಕೂ, ವಾಯುವೂ ಎಲ್ಲೆಲ್ಲಿಯೂ ಒಂದೇ ಆಗಿದ್ದರೂ, ಅವು ವ್ಯಾಪಿಸಿರತಕ್ಕ ಸ್ಥಳಭೇದದಿಂದ ಘಟಾಕಾಶ, ಮೊದಲಾದ ನಾನಾಂತರಗಳಿಂದ ವ್ಯವಹರಿಸಲ್ಪಡುವುವೇಹೊರತು ಅವುಗಳಿಗೆ ನಾನಾತ್ವವಿಲ್ಲವಲ್ಲವೆ? ಹಾಗೆಯೇ ಹಿಂದುಮುಂದಿನ ದೇಹಸಂಬಂಧದಿಂದ ಆತ್ಮಕ್ಕೆ ನಾನಾತ್ವವು ತೋರುವುದೇಹೊರತು, ಸಹಜವಾಗಿ ಅದಕ್ಕೆ ನಾನಾತ್ವವಿಲ್ಲ. ಉದ್ಧವಾ! ಈ ವಿಚಾರಗಳಿಂದ ದೇಹಕ್ಕೂ, ಆತ್ಮನಿಗೂ, ಪರಮಾತ್ಮನಿಗೂ, ಇರುವ ಪರಸ್ಪರಭೇದಗಳೆಲ್ಲವೂ ವ್ಯಕ್ತವಾದುವಷ್ಟೆ? ಪರಮಾತ್ಮನು ಚಿದಚಿತ್ತುಗಳೊಡನೆ ಸೇರಿದಂತೆಯೇ ಜಗದ್ರೂಪನಾಗಿ ಪರಿಣಮಿಸುವನು. ಈ ಪ್ರಪಂಚಕ್ಕೆ ಕಾರಣಭೂತಗಳಾದ ಆ ಮೂರುತತ್ವಗಳೇ ಕಾರ್ಯರೂಪಕ್ಕೆ ತಿರುಗುವುದರಿಂದ, ಈ ಜಗತ್ತೂ ಸತ್ಯವೇಹೊರತು ಮಿಥ್ಯೆಯಲ್ಲ. ಬೇರೆಬೇರೆ ಪ್ರಯೋಜನಕ್ಕಾಗಿಯೂ, ಬೇರೆಬೇರೆ ವ್ಯವಹಾರಗಳಿಗಾಗಿಯೂ, ಬಂಗಾರವೊಂದೇ ನಾನಾವಿಧರಚನೆಗಳಿಂದ, ಕಿರೀಟಕುಂಡಲಾದಿ ನಾನಾರೂಪವಾಗಿ ಮಾಡಲ್ಪಡುವಂತೆ, ಸೂಕ್ಷ್ಮಚಿದಚಿದ್ವಿಶಿಷ್ಟನಾದ ಆ ಪರಮಪುರುಷನೇ ಜಗದ್ರೂ

ಪವಾಗಿ ಪರಿಣಮಿಸಿ, * ಲೌಕಿಕ ವೈದಿಕ ವಾಕ್ಯಗಳಿಂದ ನಾನಾವಿಧವಾಗಿ ವ್ಯವಹರಿಸಲ್ಪಡುವನು. ಕಿರೀಟಕುಂಡಲಾದಿಗಳು ತಮಗೆ ಕಾರಣವಾದ ಸುವರ್ಣಕ್ಕಿಂತಲೂ ಬೇರೆನಿಸಿಕೊಳ್ಳದಿರುವಂತೆ, ಈ ಜಗತ್ತೂ ಕೂಡ ಆ ಪರಮಪುರುಷನಿಗಿಂತ ಭಿನ್ನವೆನಿಸಲಾರದು. ಮತ್ತು ಸೂರ್ಯನಿಂದಲೇ ಹುಟ್ಟಿ, ಸೂರ್ಯನ ಸಹಾಯದಿಂದಲೇ ದೃಷ್ಟಿಗೋಚರವಾಗತಕ್ಕ ಮೇಘವು, ಸೂರ್ಯಾಂಶಭೂತವಾದ ನೇತ್ರೇಂದ್ರಿಯಕ್ಕೆ, ಆ ಸೂರ್ಯನೇ ಕಾಣದ ಹಾಗೆ ಮರೆಸುವುದಲ್ಲವೆ? ಅದರಂತೆಯೇ ಪರಮಾತ್ಮನಿಗೆ ವಿಶೇಷಣಭೂತವೆನಿಸಿಕೊಂಡು, ಆ ಪರಮಾತ್ಮನಿಂದಲೇ ಪ್ರಕಾಶಗೊಳಿಸಲ್ಪಡತಕ್ಕ ದೇಹವು, ಆ ಪರಮಾತ್ಮನ ಅಂಶಭೂತನಾದ ಜೀವಾತ್ಮನ ಜ್ಞಾನವನ್ನು ಮರೆಸಿ, ಆ ಪರಮಾತ್ಮನನ್ನೇ ತಿಳಿಯದಹಾಗೆ ಮಾಡುವುದು. ಈ ವಿಧವಾದ ಜ್ಞಾನಪ್ರತಿಬಂಧವೇ ಸಂಸಾರಬಂಧವೆಂದು ತಿಳಿ! ಗಾಳಿಯಿಂದ ಮೇಘಗಳು ಚದರಿಹೋದೊಡನೆ, ಸೂರ್ಯನು ಕಣ್ಣಿಗೆ ಕಾಣುವಂತೆ, ಜೀವನಿಗೆ ವಿವೇಚನಾಪೂರ್ವಕವಾದ ಆತ್ಮೋಪಾಸನೆಯಿಂದ, ಆ ದೇಹವೆಂಬ ಉಪಾಧಿಯು ತಪ್ಪಿದಾಗ, ಪರಮಾತ್ಮಸಾಕ್ಷಾತ್ಕಾರವುಂಟಾಗುವುದು ಉದ್ಧವಾ! ಹೀಗೆ ವಿವೇಕಪೂರ್ವಕವಾದ ಪರಮಾತ್ಮೋಪಾಸನವೆಂಬ ಶಸ್ತ್ರದಿಂದ, ಪ್ರಕೃತಿಮಯವಾಗಿ, ಅಹಂಕಾರಪರಿಣಾಮವೆನಿಸಿಕೊಂಡ ದೇಹಸಂಬಂಧರೂಪವಾದ ಆತ್ಮಬಂಧವನು ಛೇದಿಸಿ, ತನಗೆ ಅಂತರಾತ್ಮನಾದ ಅಚ್ಯುತನನ್ನು ಅನು

---

* "ಕಟಕಮುಕುಟಕರ್ಣಿಕಾದಿಭೇದೈಃ ಕನಕಮಭೇದಮಪೀಷ್ಯತೇ ಯಥೈಕಂ। ಸುರನರಪಶುಪಾದಪಾದಿಭೇದೈರ್ಹರಿರಖಿಲೋಽಪಿ ಉಪೀಕ್ಷ್ಯತೇ ತಥೈಕಃ" ಇತ್ಯಾದಿಗಳು ಲೌಕಿಕವಾಕ್ಯಗಳು. "ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಲೋಹಮಣಿತ್ಯೇವಸತ್ಯಂ" ಇತ್ಯಾದಿಗಳು ವೈದಿಕ ವಚನಗಳು. ಇಲ್ಲಿ ಕಟಕಾದಿಗಳ ದೃಷ್ಟಾಂತದಿಂದ ಆ ಕಟಕಾದಿಗಳು ಸತ್ಯವಾಗಿಯೂ, ತಮಗೆ ಕಾರಣವಾದ ಬಂಗಾರಕ್ಕಿಂತ ಬೇರೆನಿಸದೆಯೂ ಇರುವಂತೆ, ಜಗತ್ತೂ ಸತ್ಯವಾಗಿ, ತನಗೆ ಕಾರಣವಾದ ಬ್ರಹ್ಮಕ್ಕಿಂತ ಅಭಿನ್ನವೆಂದು ಗ್ರಾಹ್ಯವು. ಮತ್ತು ನಿರ್ವಿಕಾರನಾದ ಭಗವಂತನಿಗೆ ಜಗದ್ರೂಪವಿಕಾರವನ್ನು ಹೇಳುವುದು ಹೇಗೆ" ಎಂದರೆ, ಭಗವಂತನಿಗೆ ಚಿದಚಿದ್ವಿಶಿಷ್ಟವಾದ ವೇಷದಲ್ಲಿ ವಿಕಾರವೇ ಹೊರತು, ಸ್ವರೂಪದಿಂದಲ್ಲವೆಂದೂ ಗ್ರಾಹ್ಯವು

ಭವಿಸುವುದೇ ಆತ್ಯಂತಿಕಪ್ರಳಯವೆಂದು ಹೇಳುವರು. ಎಂದರೆ, ದೇಹೋ ಪಾಧಿಯು ಬಿಟ್ಟು ಹೋಗುವುದೇ ಆತ್ಯಂತಿಕಪ್ರಳಯವು. ಬ್ರಹ್ಮಾದಿ ಸಮಸ್ತಭೂತಗಳಲ್ಲಿಯೂ, ಪ್ರತಿಕ್ಷಣವೂ ಉತ್ಪತ್ತಿ ಪ್ರಳಯಗಳು ನಡೆಯು ತ್ತಿರುವುವೆಂದು ಸೂಕ್ಷ್ಮಜ್ಞರಾದವರು ಹೇಳುವರು. ಎಂದರೆ ಬ್ರ ಹ್ಮಾದಿ ಸಮಸ್ತಶರೀರಗಳೂ, ಯಾವಾಗಲೂ ಪರಿಣಾಮಹೊಂದುತ್ತ ಲೇ ಇರುವುದರಿಂದ, ಪೂರ್ವಾವಸ್ಥೆಯನ್ನು ಬಿಡುವುದೇ ಪ್ರಳಯವೆಂದೂ, ಉತ್ತರಾವಸ್ಥೆಯನ್ನು ಹೊಂದುವುದೇ ಉತ್ಪತ್ತಿಯೆಂದೂ ತಿಳಿಯಬೇಕು ಇದೇ ನಿತ್ಯೋತ್ಪತ್ತಿ ಪ್ರಳಯವೆನಿಸುವುದು. ಇದು ಸ್ಥೂಲದೃಷ್ಟಿಯುಳ್ಳ ವರಿಗೆ ತಿಳಿಯಲಾರದು ಪ್ರವಾಹ ವೇಗದಿಂದ ಎಳೆಯಲ್ಪಡುತ್ತಿರುವ ಹು ಲ್ಲು ಕಡ್ಡಿಗಳು, ಒಮ್ಮೆ ಮೇಲೇರುತ್ತಲೂ, ಮತ್ತೊಮ್ಮೆ ತಗ್ಗುತ್ತಲೂ ಹೋಗುವಂತೆ, ಕಾಲವೇಗದಿಂದ ಕ್ಷಣಕ್ಷಣಕ್ಕೂ ವಿಕಾರಹೊಂದುತ್ತಿರುವ ದೇಹಗಳಿಗೆ, ಆಗಾಗ ಉಂಟಾಗತಕ್ಕ ಅವಸ್ಥಾಭೇದಗಳೇ ಉತ್ಪತ್ತಿ ವಿನಾಶ ಕಾರಣಗಳೆನಿಸುವುವು. ಈಶ್ವರಶರೀರವೆನಿಸಿಕೊಂಡು, ಆದ್ಯಂತಗಳಿಲ್ಲದೆ ನಡೆಯುತ್ತಿರುವ ಕಾಲವಶದಿಂದ,ಭೂತಗಳಲ್ಲಿ ನಿತ್ಯವೂ ನಡೆಯುತ್ತಿರುವ ಈ ಅವಸ್ಥಾಭೇದಗಳು,ಆಕಾಶದಲ್ಲಿ ಗ್ರಹಗಳ ಚಲನವು ಹೇಗೋ ಹಾಗೆ ನಮ್ಮ ದೃಷ್ಟಿಗೆ ಗೋಚರಿಸಲಾರವು. ಓ ಪರೀಕ್ಷಿದ್ರಾಜಾ ! ಹೀಗೆ ಪ್ರಳಯದಲ್ಲಿ ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕವೆಂಬ ನಾಲ್ಕು ಭೇದಗಳನ್ನೂ ನಿನಗೆ ತಿಳಿಸಿದೆನು. ಕಾಲಗತಿಯು ಈ ವಿಧವಾದುದು. ಲೋಕಸೃಷ್ಟಿಕ ರ್ತನಾಗಿಯೂ, ಸಕಲಭೂತಾಶ್ರಯನಾಗಿಯೂ, ಸಮಸ್ತಚೇತನರಿಗೂ ಸದ್ಗತಿಯಾಗಿಯೂ ಇರುವ ಆ ಭಗವಂತನ ಲೀಲಾಚರಿತ್ರಗಳನ್ನೂ ನಿನಗೆ ಸಂಕ್ಷೇಪಿಸಿ ತಿಳಿಸಿರುವೆನು. ಅದನ್ನು ಪೂರ್ಣವಾಗಿ ವಿವರಿಸುವುದಕ್ಕೆ ಬ್ರಹ್ಮದೇವನೂ ಶಕ್ತನಲ್ಲ. ತಾಪತ್ರಯದಿಂದ ಪೀಡಿತರಾಗಿ, ಸಂಸಾರಸ ಮುದ್ರವನ್ನು ದಾಟಬೇಕೆಂಬ ಅಪೇಕ್ಷೆಯುಳ್ಳವರಿಗೆ, ಪುರುಷೋತ್ತಮ ನಾದ ಆ ಭಗವಂತನ ಕಥಾಮೃತಸೇವನೆಗಿಂತಲೂ ಬೇರೆ ಉಪಾಯ ವೊಂದೂ ಇಲ್ಲವೆಂದು, ತಿಳಿ! ವೇದಸಾರವೆನಿಸಿದ ಈ ಭಾಗವತಸಂಹಿತೆ ಯನ್ನು, ಮೊದಲು, ಅನಿರುದ್ಧರೂಪಿಯಾದ ಭಗವಂತನು, ಚತುರ್ಮುಖನಿಗೆ

ಉಪದೇಶಿಸಿದನು. ಆ ಚತುರ್ಮುಖನು ತನ್ನ ಮಗನಾದ ನಾರದನಿಗೆ ಹೇಳಿದನು. ಆ ನಾರದಮುನಿಯು ಪೂರ್ವದಲ್ಲಿ ನನ್ನ ಜನಕನಾದ ವ್ಯಾಸಮಹರ್ಷಿಗೆ ಉಪದೇಶಿಸಿದನು. ಆ ನನ್ನ ಜನಕನಿಂದ ನಾನು ಉಪದೇಶಹೊಂದಿದೆನು. ಓ ರಾಜೇಂದ್ರಾ! ಇದೇ ಸಂಹಿತೆಯನ್ನು ಮುಂದೆ ನೈಮಿಶಾರಣ್ಯದಲ್ಲಿ ಭಗವತ್ಕಥಾಶ್ರವಣರೂಪವಾದ ಒಂದಾನೊಂದು ಸತ್ರಯಾಗವು ನಡೆಯುವಾಗ, ಶೌನಕಾದಿಮುನಿಗಳ ಪ್ರಾರ್ಥನೆಯಮೇಲೆ, ಈ ಸೂತಪೌರಾಣಿಕನು ಅಲ್ಲಿನ ಮಹರ್ಷಿಗಳಿಗೆಲ್ಲಾ ಉಪದೇಶಿಸುವನು. ಇದು ನಾಲ್ಕನೆಯ ಅಧ್ಯಾಯವು.

---

**{ ಭಾಗವತ ಸಂಹಿತೆಯಲ್ಲಿ ಪ್ರಧಾನಪ್ರತಿಪಾದ್ಯವಾದ ವಿಷಯವು. }**

ಓ ಪರೀಕ್ಷಿದ್ರಾಜಾ! ಮುಖ್ಯವಾಗಿ ಈ ಭಾಗವತ ಸಂಹಿತೆಯಲ್ಲಿ ಆಶ್ರಿತದುಃಖನಿವಾರಕನಾಗಿಯೂ, ವಿಶ್ವಾತ್ಮಕನಾಗಿಯೂ ಇರುವ ಶ್ರೀಮನ್ನಾರಾಯಣನ ಗುಣಗಳನ್ನೂ, ಚರಿತ್ರಗಳನ್ನೂ ವರ್ಣಿಸುವುದೇ ಪ್ರಧಾನ ವಿಷಯವು. ಯಾವನ ಪ್ರಸಾದದಿಂದ (ಅನುಗ್ರಹದಿಂದ) ಬ್ರಹ್ಮನೂ, ಯಾವನ ಕ್ರೋಧದಿಂದ ರುದ್ರನೂ ಜನಿಸಿದರೋ, ಅಂತಹ ಜಗತ್ಕಾರಣನಾದ ಶ್ರೀಹರಿಯೇ ಸಮಸ್ತಚೇತನರಿಗೂ ಮುಖ್ಯವಾದ ಧ್ಯೇಯವಸ್ತುವೆಂಬುದನ್ನು ತಿಳಿಸುವುದಕ್ಕಾಗಿಯೇ ಈ ಪುರಾಣದಲ್ಲಿ ಆ ಭಗವಂತನ ಗುಣಗಳೇ ವಿಶೇಷವಾಗಿ ವರ್ಣಿಸಲ್ಪಟ್ಟಿವೆ. ಓ ರಾಜಾ! ನಿನಗಾದರೋ ಈಗ ಋಷಿಶಾಪದಿಂದ ಸರ್ಪದಷ್ಟನಾಗಿ ಸಾಯುವ ಕಾಲವು ಸಮೀಪಿಸಿತು. ಆದರೆ ನೀನುಮಾತ್ರ ಈಗ ಆ ಸಾವಿಗಾಗಿ ಚಿಂತಿಸಬಾರದು. ಮರಣಕ್ಕಾಗಿ ಭಯಪಡುವುದು ಕೇವಲ ಪಶುಬುದ್ಧಿಯೆಂದು ತಿಳಿ! ಏಕೆಂದರೆ, ಮರಣಕ್ಕೆ ವಿಷಯವಾದುದು ನಿನ್ನ ದೇಹವೇಹೊರತು ನೀನಲ್ಲ! ದೇಹದಂತೆ ನೀನು ಮೊದಲಿಲ್ಲದಿದ್ದು, ಈಗ ಹೊಸದಾಗಿ ಹುಟ್ಟಿದವನಲ್ಲ! ಈ ದೇಹವು ಬಿದ್ದುಹೋಗುವುದರಿಂದ ನೀನು ಸಾಯತಕ್ಕವನೂ ಇಲ್ಲ! ಈಗ ಹುಟ್ಟಿದ ನೀನೇ ಬೀಜಾಂಕುರದಂತೆ ಮುಂದೆ ಪುತ್ರಪೌತ್ರಾದಿರೂಪದಿಂದ ತಿರುಗಿ ಜನಿಸು

ವವನೂ ಅಲ್ಲ! ಕಾಷ್ಠದಲ್ಲಿರುವ ಬೆಂಕಿಯು, ಆ ಕಾಷ್ಠಕಿಂತಲೂ ಬೇರೆಯಾಗಿರುವಂತೆ, ನೀನೂ ಈ ದೇಹಕ್ಕಿಂತಲೂ ಭಿನ್ನನಾಗಿರುವೆ. ಮನುಷ್ಯನು ಕನಸಿನಲ್ಲಿ ತನ್ನ ತಲೆಯು ಕತ್ತರಿಸಿ ಬಿದ್ದುಹೋದಂತೆ ತಾನೇ ಕಂಡರೂ, ಆ ಸ್ವಪ್ನದೇಹಕ್ಕಿಂತಲೂ ತಾನು ಬೇರೆಯಾಗಿರುವಂತೆ, ಜಾಗರಾವಸ್ಥೆಯಲ್ಲಿಯೂ ಕೂಡ, ಮರಣಾದಿಗಳನ್ನು ಹೊಂದುವ ದೇಹಕ್ಕಿಂತಲೂ ತಾನು ಭಿನ್ನನೆಂದೇ ತಿಳಿಯಬೇಕು. ಆತ್ಮವು ದೇಹಕ್ಕಿಂತಲೂ ಭಿನ್ನವಾದುದು. ಆ ಆತ್ಮಕ್ಕೆ ಜನನವೂ ಇಲ್ಲ. ಮರಣವೂ ಇಲ್ಲ. ಗಡಿಗೆಯು ಒಡೆದು ಹೋದ ಮೇಲೆ, ಅದರೊಳಗಿನ ಘಟಾಕಾಶವು ನಿರುಪಾಧಿಕವಾಗಿ ಮೊದಲಿನಂತೆ ಮಹಾಕಾಶದೊಡನೆ ಸಾಮ್ಯಹೊಂದುವಂತೆ, ದೇಹಗತನಾದ ಜೀವನೂ ಕೂಡ, ಆ ದೇಹವು ನಶಿಸಿಹೋದಮೇಲೆ (ಎಂದರೆ, ಪರಮಾತ್ಮೋಪಾಸನೆಯಿಂದ ಪ್ರಕೃತಿಸಂಬಂಧವು ನಿಶ್ಶೇಷವಾಗಿ ಬಿಟ್ಟುಹೋದಮೇಲೆ) ಪರಿಶುದ್ಧಾವಸ್ಥೆಯನ್ನು ಹೊಂದಿ, ಪರಮಾತ್ಮನೊಡನೆ ಸಾಮ್ಯವನ್ನು ಹೊಂದುವನು ಮನಸ್ಸೇ ಜೀವನಿಗೆ ಕರ್ಮಗಳ ಮೂಲಕವಾಗಿ, ಗುಣಮಯಗಳಾದ ದೇಹಗಳನ್ನು ತಂದು ಕೂಡಿಸುವುದು. ಆ ಮನಸ್ಸನ್ನು ಕರ್ಮಪ್ರವೃತ್ತವಾಗಿ ಮಾಡುವುದು ಮಾಯೆಯು. ಆದುದರಿಂದ ಮಾಯೆ, ಮನಸ್ಸು, ದೇಹ, ಕರ್ಮಗಳು, ಇವೆಲ್ಲವುಗಳಿಂದ ಜೀವನಿಗೆ ಸಂಸಾರಬಂಧವುಂಟಾಗುವುದು. ಎಣ್ಣೆ, ಬತ್ತಿ, ಪಾತ್ರೆ, ಇವಿಷ್ಟನ್ನೂ ಸೇರಿಸಿ, ಅಗ್ನಿಸಂಯೋಗವನ್ನು ಮಾಡಿದಾಗಲ್ಲವೇ ದೀಪವು ಉರಿಯುವುದು, ಅದರಂತೆಯೇ ಸಂಸಾರವೂ ಕೂಡ, ಕರ್ಮಾರಬ್ಧಗಳಾದ ದೇಹೇಂದ್ರಿಯಾದಿಗಳ ಕೂಟವಿರುವವರೆಗೆ ಉದ್ದೀಪಿಸುತ್ತಿರುವುದು. ಇಲ್ಲಿ ಮನಸ್ಸೇ ಪಾತ್ರೆ! ಕರ್ಮವೇ ತೈಲವು. ದೇಹವೇ ಬತ್ತಿ! ದೇಹಾತ್ಮಾಭಿಮಾನವೇ ಅಗ್ನಿಸಂಯೋಗವು. ಸಂಸಾರವೇ ದೀಪವೆಂದು ತಿಳಿಯಬೇಕು. ಸತ್ವಾದಿಗುಣಗಳ ಸಂಯೋಗದಿಂದಲೇ ಜನನಮರಣಗಳೇ ಹೊರತು, ಅವು ಆತ್ಮನಿಗೆ ಸ್ವತಸ್ಸಿದ್ಧವಲ್ಲ. ಆ ದೇಹದೊಡನೆ ಆತ್ಮನಿಗೆ ಜನನಮರಣಗಳೂ ಇಲ್ಲ. ಆ ಆತ್ಮವು ವ್ಯಕ್ತವಾದ ಶರೀರಕ್ಕಿಂತಲೂ, ಅವ್ಯಕ್ತವಾದ ಮೂಲಪ್ರಕೃತಿಗಿಂತಲೂ ಭಿನ್ನವಾದುದು. ಅವೆರಡಕ್ಕಿಂತಲೂ ವಿಜಾತೀಯವಾದುದರಿಂದಲೇ ಆತ್ಮವು ಸ್ವಯಂಪ್ರಕಾಶವೆನಿಸಿರುವು

ದು. ಆಕಾಶವು ಬಿಂದು ಘಟಾದಿಗಳಲ್ಲಿ ಸೇರಿದ್ದಾಗಲೂ, ಆ ಉಪಾಧಿಗಳಿಗಿಂತಲೂ ಬೇರೆನಿಸಿರುವಂತೆ, ಆತ್ಮವು ದೇಹದಲ್ಲಿದ್ದರೂ, ಅದಕ್ಕಿಂತಲೂ ಬೇರೆಯಾಗಿ, ಆ ದೇಹಕ್ಕೆ ತಾನೇ ಧಾರಕವಾಗಿಯೂ, ಸ್ವಭಾವದಿಂದ ಅಪರಿಚ್ಛಿನ್ನವಾಗಿಯೂ, ಸ್ವರೂಪದಿಂದ ನಿರ್ವಿಕಾರವಾಗಿಯೂ ಇರುವುದು. ಈವಿಧವಾಗಿ ದೇಹಗತವಾಗಿರುವ ಆತ್ಮವನ್ನು ನಿನ್ನಿಂದಲೇನೀನು ವಿಮರ್ಶಿಸಿ ತಿಳಿದುಕೊಳ್ಳುವನಾಗು! ಶಾಸ್ತ್ರಜನ್ಯಜ್ಞಾನದಿಂದಲೂ, ವಿಮರ್ಶನಾಪೂರ್ವಕವಾದ ಬುದ್ಧಿಯಿಂದಲೂ, ಭಗವಧ್ಯಾನದಿಂದಲೂ ನೀನು ದೃಢಮನಸ್ಸುಳ್ಳವನಾಗಿದ್ದರೆ, ಆಗ ತಕ್ಷಕನು ಬ್ರಾಹ್ಮಣಶಾಪದಿಂದ ಪ್ರೇರಿತನಾಗಿ ಬಂದರೂ ನಿನ್ನನ್ನು ದಹಿಸಲಾರನು. ಆ ಸರ್ವೇಶ್ವರನು ಮೃತ್ಯುವಿಗೂ ಮೃತ್ಯುವೆನಿಸಿರುವನು. ಆದುದರಿಂದ ಮೃತ್ಯುವೂ ಅವನನ್ನು ಸಮೀಪಿಸುವುದಕ್ಕೆ ಭಯಪಡುವುದು. ಆದುದರಿಂದ ನೀನು "ಆ ಪರಬ್ರಹ್ಮನೇ ತಾನು! ತಾನೇ ಆಪರಬ್ರಹ್ಮ" ನೆಂಬ ಮನೋಭಾವನೆಯಿಂದ, ಆ ಪರಮಾತ್ಮನಲ್ಲಿ ನಿನ್ನ ಆತ್ಮವನ್ನು ಏಕೀಕರಿಸಿದಂತೆ (ಎಂದರೆ, ಆ ಪರಮಾತ್ಮನಿಗೆ ಶೇಷಭೂತನೆಂಬುದನ್ನು) ಧ್ಯಾನಿಸುತ್ತಿದ್ದರೆ, ಆ ಭಗವದನುಭವಾನಂದದಲ್ಲಿ ಮಗ್ನನಾದ ನಿನಗೆ, ಈ ಪ್ರಪಂಚವಾಗಲಿ, ಕೊನೆಗೆ ನಿನ್ನ ಶರೀರವಾಗಲಿ ಯಾವುದೂ ತಿಳಿಯದಿರುವುದರಿಂದ, ತಕ್ಷಕನು ನಿನ್ನ ಕಾಲನ್ನು ನಾಲಗೆಗಳಿಂದ ನಕ್ಕುತ್ತ, ತನ್ನ ವಿಷಮುಖದಿಂದ ಕಚ್ಚಿದರೂ, ನಿನಗೆ ಅದರ ಬಾಧೆಯೇನೂ ತೋರದು! ಓ ಪರೀಕ್ಷಿದ್ರಾಜಾ! ಆ ಭಗವಂತನ ಚರಿತ್ರವಿಷಯವಾಗಿ ನೀನು ಕೇಳಿದ ಪ್ರಶ್ನೆಗಳಿಗೆಲ್ಲಾ ನಾನು ಉತ್ತರವನ್ನು ಹೇಳಿದುದಾಯಿತು. ಇನ್ನೂ ಕೇಳಬೇಕಾದ ವಿಷಯವೇನಾದರೂ ಇದ್ದರೆ ಕೇಳಬಹುದು. ಎಂದನು. ಇದು ಐದನೆಯ ಅಧ್ಯಾಯವು.

---

(ಶುಕಮುನಿಯು ಪರೀಕ್ಷಿದ್ರಾಜನನ್ನು ಬಿಟ್ಟುಹೋದುದು. ತಕ್ಷಕನು ಪರೀಕ್ಷಿದ್ರಾಜನನ್ನು ಕಚ್ಚಿದುದು. ಜನಮೇಜಯನ ಸರ್ಪಯಾಗವು. ವೇದವಿಭಾಗ ಪ್ರಚಾರಾದಿಕ್ರಮಗಳು.)

ಸಕಲಭೂತಗಳಲ್ಲಿಯೂ ಸಮದೃಷ್ಟಿಯುಳ್ಳವನಾಗಿಯೂ, ವ್ಯಾಸಪುತ್ರನಾಗಿಯೂ ಇರುವ ಆ ಶುಕಮಹರ್ಷಿಯು, ಪರೀಕ್ಷಿದ್ರಾಜನಿಗೆ ಹೀಗೆ ಭಾಗವತಸಂಹಿತೆಯನ್ನು ಪೂರ್ಣವಾಗಿ ಹೇಳಿ ಮುಗಿಸಿದಮೇಲೆ, ಆ ರಾಜನು ಮುಂದೆ ಬಂದು, ಆ ಮಹರ್ಷಿಯ ಪಾದಗಳನ್ನು ಹಿಡಿದು ನಮಸ್ಕರಿಸಿ, ಕೈಮುಗಿದು ನಿಂತು ವಿಜ್ಞಾಪಿಸುವನು "ಓ ಮಹಾತ್ಮಾ! ಆದ್ಯಂತರಹಿತನಾದ ಆ ಶ್ರೀಹರಿಯ ಗುಣಚರಿತ್ರಗಳನ್ನೂ, ಭಗವತ್ಪ್ರಾಪ್ತಿಗೆ ಉಪಾಯವನ್ನೂ, ನೀನು ನನ್ನಲ್ಲಿ ಕೃಪೆಯಿಟ್ಟು ತಿಳಿಸಿದುದರಿಂದ ನಾನು ಧನ್ಯನಾದೆನು ಅನುಗೃಹೀತನಾದೆನು! ಭಗವತ್ಪರಾಯಣರಾದ ನಿಮ್ಮಂತವರಿಗೆ, ನನ್ನಂತೆ ಸಂಸಾರತಾಪದಲ್ಲಿ ಸಿಕ್ಕಿ ಸಂಕಟಪಡುತ್ತಿರುವ ಪ್ರಾಣಿಗಳಲ್ಲಿ ಅನುಗ್ರಹಬುದ್ಧಿಯು ಹುಟ್ಟುವುದು ಸಹಜವೇಹೊರತು, ಇದೊಂದಾಶ್ಚರ್ಯವೆಂದು ನನಗೆ ತೋರಲಿಲ್ಲ. ಭಗವದ್ಗುಣಾನುವರ್ಣನರೂಪವಾದ ಭಾಗವತಸಂಹಿತೆಯನ್ನೆಲ್ಲಾ ನಾನು ನಿನ್ನಿಂದ ಪೂರ್ಣವಾಗಿ ಕೇಳಿದಂತಾಯಿತು. ಇನ್ನು ನಾನು ಕೃತಾರ್ಥನು' ನಿರ್ಭಯವಾದ ಬ್ರಹ್ಮಾನುಭವವೆಂಬ ಮಹಾನಂದದಲ್ಲಿ ನೀನು ನನ್ನನ್ನು ಮುಳುಗಿಸಿರುವಾಗ, ನನಗೆ ಮೃತ್ಯುಭಯವೆಲ್ಲಿಯದು ? ತಕ್ಷಕನಿಂದ ನನಗೆ ಮೃತ್ಯುವುಂಟಾಗುವುದೆಂಬ ಭಯವು ನನಗೆ ಈಷತ್ತಾದರೂ ಇಲ್ಲವು. ಇನ್ನು ನಾನು ಎಂತಹ ಮೃತ್ಯುಗಳಿಗೂ ಭಯಪಡಲಾರೆನು. ಓ ಬ್ರಾಹ್ಮಣೋತ್ತಮಾ! ಇನ್ನು ನನಗೆ ಅನುಜ್ಞೆಯನ್ನು ಕೊಡು! ನಿನ್ನ ಉಪದೇಶದಂತೆ ನಾನು ನನ್ನ ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ಬೇರೆ ವಿಷಯಗಳಿಗೆ ಹೋಗದಂತೆ ತಡೆದು, ಆ ಭಗವಂತನಲ್ಲಿಯೇ ನೆಲೆಗೊಳಿಸಿ, ದೇಹಾವಸಾನವನ್ನು ನಿರೀಕ್ಷಿಸುತ್ತಿರುವೆನು. ನೀನು ಆತ್ಮಪರಮಾತ್ಮಜ್ಞಾನೋಪದೇಶದಿಂದ ನನ್ನ ಅಜ್ಞಾನವೆಲ್ಲವನ್ನೂ ನೀಗಿಸಿ ಆ ಭಗವತ್ಪ್ರಾಪ್ತಿಗೆ ಉಪಾಯವನ್ನೂ ತೋರಿಸಿರುವೆ. ಇನ್ನು ನನಗೆ ಆಗಬೇಕಾದುದೇನು!"ಎಂದನು. ಹೀಗೆ

ಸೂತಪೌರಾಣಿಕನು, ನೈಮಿಶಾರಣ್ಯವಾಸಿಗಳಾದ ಶೌನಕಾದಿಮಹರ್ಷಿಗಳಿಗೆ ಪರೀಕ್ಷಿಚ್ಛುಕಸಂವಾದರೂಪವಾದ ಭಾಗವತಕಥೆಗಳನ್ನು ಹೇಳಿ ಮುಗಿಸಿದ ಮೇಲೆ, ಅವರನ್ನು ಕುರಿತು “ ಎಲೈ ಮಹರ್ಷಿಗಳೆ ! ಪರೀಕ್ಷಿದ್ರಾಜನು ಹಾಗೆ ವಿಜ್ಞಾಪಿಸಿದೊಡನೆ, ಪೂಜ್ಯನಾದ ಶುಕಮಹರ್ಷಿಯು, ಅವನಿಗೆ ಹಾಗೆಯೇ ಆಗಲೆಂದು ಅನುಜ್ಞೆಯನ್ನು ಕೊಟ್ಟು, ಆ ರಾಜನಿಂದ ಸತ್ಕೃತನಾಗಿ,ಇತರಮಹರ್ಷಿಗಳೊಡನೆ ಆಸ್ಥಳವನ್ನು ಬಿಟ್ಟು ಹೊರಟುಹೋದನು. ಇತ್ತಲಾಗಿ ಪರೀಕ್ಷಿದ್ರಾಜನು ಆಸ್ಲಿಂಬಾಚೆಗೆ ಪರಮಾತ್ಮನಲ್ಲಿ ತನ್ನ ಆತ್ಮವನ್ನು ನೆಲೆಗೊಳಿಸಿದಂತೆ ಧ್ಯಾನಯೋಗವನ್ನು ಹಿಡಿದು, ಆ ಪರಮಾತ್ಮಧ್ಯಾನದಿಂದ ದೇಹೇಂದ್ರಿಯವ್ಯಾಪಾರಗಳೆಲ್ಲವನ್ನೂ ಮರೆತು, ಮರದ ತುಂಡಿನಂತೆ ನಿಶ್ಚೇಷ್ಟನಾಗಿದ್ದನು. ಹೀಗೆ ಪರೀಕ್ಷಿದ್ರಾಜನು ಶುಕಮಹಾಮುನಿಯ ಉಪದೇಶದಿಂದ ದೇಹಾತ್ಮಭ್ರಮವೇ ಮೊದಲಾದ ಸಂಶಯಗಳೆಲ್ಲವನ್ನೂ ನೀಗಿ ವಿಷಯಸಂಗವನ್ನು ತೊರೆದು, ಗಂಗಾನದಿಯ ತೀರದಲ್ಲಿ ಪೂರ್ವಾಗ್ರವಾದ ದರ್ಭಾಸ್ತರಣದಮೇಲೆ, ಉತ್ತರಾಭಿಮುಖವಾಗಿ ಕುಳಿತು, ಸಮಾಧಿಬಲದಿಂದ ಶೀಘ್ರಕಾಲದಲ್ಲಿಯೇ ಬ್ರಹ್ಮಸಾರೂಪ್ಯವನ್ನು ಎಂದರೆ ಮುಕ್ತಾವಸ್ಥೆಯನ್ನು ಹೊಂದಿದನು. ಓ ಶೌನಕಾದಿಗಳೆ ! ಇಷ್ಟರಲ್ಲಿಯೇ ಇತ್ತಲಾಗಿ, ಬ್ರಾಹ್ಮಣಪುತ್ರನಾದ ಶೃಂಗಿಯಿಂದ ಪ್ರೇರಿತನಾದ ತಕ್ಷಕನು, ಈ ಪರೀಕ್ಷಿದ್ರಾಜನನ್ನು ಕಚ್ಚಿ ಕೊಲ್ಲಬೇಕೆಂಬ ಉದ್ದೇಶದಿಂದ ಹೊರಟು ಬರುತ್ತಿರುವಾಗ, ದಾರಿಯಲ್ಲಿ ಕಾಶ್ಯಪನೆಂಬ ಬ್ರಾಹ್ಮಣನೊಬ್ಬನನ್ನು ಸಂಧಿಸಿದನು. ಈ ಬ್ರಾಹ್ಮಣನು ವಿಷವೈದ್ಯವನ್ನು ಚೆನ್ನಾಗಿ ಬಲ್ಲವನು ಪರೀಕ್ಷಿದ್ರಾಜನಿಗೆ ಸರ್ಪಗಂಡವೊದಗಿರುವುದನ್ನು ಕೇಳಿ, ಅವನಿಗೆ ಚಿಕಿತ್ಸೆಮಾಡಿ ವಿಶೇಷವಾದ ಧನವನ್ನು ಸಂಪಾದಿಸಬೇಕೆಂಬ ಆಶೋತ್ತರದಿಂದ ಆ ಬ್ರಾಹ್ಮಣನು ಪರೀಕ್ಷಿದ್ರಾಜನಬಳಿಗೇ ಹೋಗುತಿದ್ದನು ತಕ್ಷಕನು, ಅವನ ವೃತ್ತಾಂತವನ್ನು ವಿಚಾರಿಸಿ ತಿಳಿದುಕೊಂಡು, ಅತನ ಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಮುಂದಿದ್ದ ಒಂದಾನೊಂದು ಹಸಿಯ ಮರವನ್ನು ಕಚ್ಚಿ, ತನ್ನ ವಿಷಾಗ್ನಿಯಿಂದ ಅದನ್ನು ಕೇವಲಭಸ್ಮರಾಶಿಯಂತೆ ಮಾಡಿಬಿಟ್ಟನು. ಒಡನೆಯೇ ಕಾಶ್ಯಪನು, ತನ್ನ ಮಂತ್ರಶಕ್ತಿಯಿಂದ ಆ ಮರ

ವನ್ನು ಚಿಗುರಿಸಿ, ಮೊದಲಿನಂತೆ ಮಾಡಲು, ತಕ್ಷಕನು ಅವನ ಶಕ್ತಿಗೆ ಆಶ್ಚ
ರ್ಯಪಟ್ಟು, ಈತನ ಸಹಾಯವಿದ್ದರೆ ಪರೀಕ್ಷಿತ್ತಿನಮೇಲೆ ತನ್ನ ವಿಷಪ್ರ
ಯೋಗವು ಸಾಗಲಾರದೆಂದು ನಿಶ್ಚಯಿಸಿ, ಆ ಬ್ರಾಹ್ಮಣನು ಕೇಳಿ
ದಷ್ಟುಹಣವನ್ನು ತಾನೇ ಅವನಿಗೆ ಕೊಟ್ಟು, ಅವನನ್ನು ಹಿಂತಿರುಗಿಸಿಬಿಟ್ಟನು.
ಆಮೇಲೆ ಬ್ರಾಹ್ಮಣವೇಷದಿಂದ ತನ್ನ ರೂಪವನ್ನು ಮರೆಸಿಕೊಂಡು
ಹೋಗಿ ಪರೀಕ್ಷಿತ್ತನ್ನು ಕಚ್ಚಿಬಿಟ್ಟನು. ಎಲೈಮಹರ್ಷಿಗಳೇ ! ಅದರೇನು ?
ಈ ತಕ್ಷಕನು ಕಚ್ಚುವುದಕ್ಕೆ ಮೊದಲೇ ಪರೀಕ್ಷಿದ್ರಾಜನು ಸಮಾಧಿಯಿಂದ
ದೇಹತ್ಯಾಗವನ್ನು ಮಾಡಿ ಮುಕ್ತಾವಸ್ಥೆಯಲ್ಲಿದ್ದನು. ಆದುದರಿಂದ ತಕ್ಷ
ಕನು ನಿರ್ಜೀವವಾದ ಶರೀರವನ್ನು ಕಚ್ಚಿದಂತಾಯಿತೇಹೊರತು ಬೇರೆ
ಯಲ್ಲ! ಎಲ್ಲರೂ ನೋಡುತ್ತಿರುವಹಾಗೆಯೇ ಆ ರಾಜರ್ಷಿಯ ದೇಹವು ತಕ್ಷ
ಕನ ವಿಷಾಗ್ನಿಯಿಂದ ಬೆಂದು ಭಸ್ಮೀಭೂತವಾಯಿತು. ಆಗ ಭೂಮ್ಯಾ
ಕಾಶಗಳಲ್ಲಿಯೂ, ನಾನಾದಿಕ್ಕುಗಳಲ್ಲಿಯೂ ದುಃಖದಿಂದ ಹಾಹಾಕಾರವು
ಹೊರಟಿತು. ದೇವತೆಗಳೂ, ದಾನವರೂ, ಮನುಷ್ಯರೂ ಆಶ್ಚರ್ಯಭರಿತರಾಗಿ
ನೋಡುತಿದ್ದರು. ಆಮೇಲೆ ಪರೀಕ್ಷಿದ್ರಾಜನಿಗೆ ಪ್ರಾಪ್ತವಾದ ಯೋಗಸಿದ್ಧಿ
ಯನ್ನು ತಿಳಿದು, ಎಲ್ಲರೂ ಸಂತೋಷದಿಂದ “ಭಲೆ ! ಶಹಬಾಸು” ಎಂದು
ಅವನ ಮಹಿಮೆಯನ್ನು ಕೊಂಡಾಡುತಿದ್ದರು. ಆಕಾಶದಲ್ಲಿ ದೇವದುಂದುಭಿ
ಗಳು ಮೊಳಗಿದುವು. ಗಂಧರ್ವರು ಗಾನಮಾಡಿದರು. ಅಪ್ಸರಸ್ಸುಗಳು
ನರ್ತಿಸುತಿದ್ದರು. ಪುಷ್ಪವೃಷ್ಟಿಯು ಕರೆಯಿತು ! ಆಮೇಲೆ ಇತ್ತಲಾಗಿ
ಪರೀಕ್ಷಿದ್ರಾಜನ ಮಗನಾದ ಜನಮೇಜಯನಿಗೆ, ತನ್ನ ತಂದೆಯು ತಕ್ಷಕ
ದಷ್ಟನಾಗಿ ಮರಣಹೊಂದಿದ ಸಂಗತಿಯು ತಿಳಿದುಬಂದಿತು. ಅದರಿಂದ
ಅವನು ಅತಿಕ್ರುದ್ಧನಾಗಿ, ಸರ್ಪವಂಶವೇ ಲೋಕದಲ್ಲಿಲ್ಲದಂತೆ ಮಾಡಬೇ
ಕೆಂಬ ಹಟದಿಂದ, ಅನೇಕಬ್ರಾಹ್ಮಣರನ್ನು ಸೇರಿಸಿ, ಸರ್ಪಯಾಗವನ್ನಾರಂ
ಭಿಸಿದನು. ಮಂತ್ರಪೂರ್ವಕವಾಗಿ ಆಹ್ವಾನಮಾಡಿದೊಡನೆ, ಆಯಾ ಸರ್ಪಗ
ಳೆಲ್ಲವೂ ಆ ಮಂತ್ರಶಕ್ತಿಯಿಂದ ಆಕರ್ಷಿಸಲ್ಪಟ್ಟು ಬಂದು ಅಗ್ನಿಕುಂಡದಲ್ಲಿ
ಬಿದ್ದು, ದಗ್ಧವಾಗುತಿದ್ದುವು. ಆಗ ತಕ್ಷಕನು ಭಯದಿಂದ ನಡುಗುತ್ತ
ತನ್ನನ್ನು ರಕ್ಷಿಸಬೇಕೆಂದು ದೇವೇಂದ್ರನಲ್ಲಿ ಮರೆಹೊಕ್ಕನು. ಅನೇಕಾವರ್ತಿ

ಕರೆದರೂ ತಕ್ಷಕನುಮಾತ್ರ ಬಾರದಿದ್ದುದನ್ನು ನೋಡಿ ಜನಮೇಜಯನು ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು "ಓ ಮಹರ್ಷಿಗಳೆ! ನಾನು ಮುಖ್ಯವಾಗಿ ಯಾವನನ್ನುದ್ದೇಶಿಸಿ ಈ ಸರ್ಪಯಾಗವನ್ನಾರಂಭಿಸಿದೆನೋ, ಆ ಸರ್ಪಾಧಮನಾದ ತಕ್ಷಕನೊಬ್ಬನುಮಾತ್ರ ಇನ್ನೂ ಇಲ್ಲಿ ಬಾರದಿರಲು ಕಾರಣವೇನು? ಅವನು ಈ ಅಗ್ನಿಕುಂಡದಲ್ಲಿ ಬಿದ್ದು ಭಸ್ಮವಾದಹೊರತು ನನಗೆ ತೃಪ್ತಿಯಿಲ್ಲ" ವೆಂದನು. ಅದಕ್ಕಾ ಋತ್ವಿಕ್ಕುಗಳು "ಓ ರಾಜೇಂದ್ರಾ! ಆ ತಕ್ಷಕನು ಇಂದ್ರನಲ್ಲಿ ಮರೆಹೊಕ್ಕಿರುವುದರಿಂದ, ಇಂದ್ರನು ಅವನನ್ನು ಬಿಟ್ಟುಕೊಡದೆ ತನ್ನಲ್ಲಿಟ್ಟುಕೊಂಡು ರಕ್ಷಿಸುತ್ತಿರುವನು. ಆದುದರಿಂದಲೇ ತಕ್ಷಕನು ಇಲ್ಲಿಗೆ ಬಾರದಿರುವನು" ಎಂದರು. ಅದಕ್ಕೆ ಜನಮೇಜಯನು" ಹಾಗಿದ್ದರೆ ತಕ್ಷಕನು ಇಂದ್ರಸಹಿತನಾಗಿಯೇ ಬಂದು ಈ ಅಗ್ನಿಕುಂಡಲ್ಲಿ ಬೀಳುವಹಾಗೆ ಮಾಡಬಾರದೇಕೆ?" ಎಂದನು, ಆಗ ಋತ್ವಿಕ್ಕುಗಳು ಹಾಗೆಯೇ ಆಗಲೆಂದು ಮಂತ್ರ ಪುನಶ್ಚರಣೆಮಾಡಿ, "ಓ ತಕ್ಷಕಾ! ಇಂದ್ರನೊಡನೆಯೂ, ಅವನ ಅನುಚರರಾದ ಮರುದ್ಗಣಗಳೊಡನೆಯೂ ಕೂಡಿ ಬಂದು ನೀನು ಈ ಅಗ್ನಿಯಲ್ಲಿ ಬೀಳುವನಾಗು" ಎಂದು ಕೂಗಿ "ಸಹೇಂದ್ರಾಯ ತಕ್ಷಕಾಯ" ಎಂಬ ಆಹ್ವಾನಮಂತ್ರದಿಂದ ಹೋಮವನ್ನು ಮಾಡುವುದಕ್ಕೆ ತೊಡಗಿದರು. ಬ್ರಾಹ್ಮಣರ ಬಾಯಿಂದ ಈ ವಾಕ್ಯಗಳು ಹೊರಟಕೂಡಲೆ, ಅತ್ತಲಾಗಿ ತಕ್ಷನೊಡನೆ ಕುಳಿತಿದ್ದ ಇಂದ್ರನ ವಿಮಾನವು ನಿಜಸ್ಥಾನದಿಂದ ಕದಲಿತು. ಇಂದ್ರನಿಗೆ ಭಯದಿಂದ ಮೈಯಲ್ಲಿ ನಡುಕವುಂಟಾಯಿತು. ಸ್ವಲ್ಪಕಾಲದಲ್ಲಿಯೇ ತಕ್ಷಕಸಹಿತನಾಗಿದ್ದ ಇಂದ್ರನ ವಿಮಾನವು ಆಕಾಶದಿಂದ ಕೆಳಕ್ಕೆ ಬೀಳುತ್ತಿರುವುದನ್ನು ನೋಡಿ,ದೇವಗುರುವಾದ ಬೃಹಸ್ಪತಿಯು ತಟ್ಟನೆ ಈ ಯಜ್ಞಶಾಲೆಗೆ ಬಂದು ಜನಮೇಜಯರಾಜನನ್ನು ಕುರಿತು "ಓ ರಾಜೇಂದ್ರಾ! ಈ ತಕ್ಷಕನು ನಿನಗೆ ವಧಾರ್ಹನಲ್ಲ! ಇದಲ್ಲದೆ ಇವನು ಅಮೃತಪಾನವನ್ನು ಮಾಡಿರುವುದರಿಂದ ಇವನಿಗೆ ಜರಾಮರಣಗಳಿಲ್ಲ. ನಿನ್ನ ತಂದೆಯನ್ನು ಕೊಂದನೆಂಬ ಕೋಪದಿಂದಲ್ಲವೇ ಈಗ ನೀನು ಇವನಮೇಲೆ ಹಗೆತೀರಿಸಿಕೊಳ್ಳುವುದಕ್ಕೆ ಯತ್ನಿಸಿರುವೆ, ಆ ಭ್ರಾಂತಿಯನ್ನು ಬಿಟ್ಟುಬಿಡು! ಪ್ರಾಣಿಗಳಿಗೆ ಜನನಮರಣಗಳಾಗಲಿ, ಸ್ವರ್ಗನರಕಾದಿಗತಿಗ

ಳಾಗಲಿ, ಅವರವರ ಕರ್ಮಾನುಸಾರವಾಗಿ ಬಂದೊದಗುವುವು. ಆದುದರಿಂದ ಒಬ್ಬರ ಜನನಮರಣಗಳಿಗಾಗಲಿ, ಸುಖದುಃಖಗಳಿಗಾಗಲಿ ಮತ್ತೊಬ್ಬರನ್ನು ಕಾರಣವೆಂದು ತಿಳಿಯುವುದು ತಪ್ಪು! ಪ್ರಾಣಿಗಳ ಮರಣಕ್ಕೆ, ಸರ್ಪಗಳು, ಕಳ್ಳರು, ಶತ್ರುಗಳು, ಬೆಂಕಿ, ನೀರು, ಹಸಿವು, ದಾಹ, ರೋಗಾದ್ಯುಪ ದ್ರವಗಳು, ಮುಂತಾಗಿ ಎಷ್ಟೋ ಕಾರಣಗಳೇರ್ಪಟ್ಟಿರುವುವು ಆದರೆ ಇವೊಂದೂ ನಿಜವಾದ ಕಾರಣವಲ್ಲ. ಇವೆಲ್ಲವೂ ಅವರವರು ಮಾಡಿದ ಪ್ರಾರಬ್ಧಕರ್ಮಗಳ ಅನುಭವವೇಹೊರತು ಬೇರೆಯಲ್ಲ! ಆದುದರಿಂದ ಓ ರಾಜಾ! ನೀನು ಈಗ ಆರಂಭಿಸಿರುವ ಯಾಗವನ್ನು ಇಷ್ಟಕ್ಕೆ ನಿಲ್ಲಿಸು! ಈಗ ನೀನು ಮಾಡುತ್ತಿರುವುದು ಅಭಿಚಾರಿಕಕೃತ್ಯ(ಶೂನ್ಯ ಅಥವಾ ಮಾಟ) ವೇಹೊರತು ಧರ್ಮಸಾಧಕವಾದ ಯಾಗವಲ್ಲ! ಇದುವರೆಗೇ ನಿನ್ನಿಂದ ನಿರಪ ರಾಧಿಗಳಾದ ಅನೇಕಸರ್ಪಗಳು ದಗ್ಧವಾದುವು.! ಆದುದಾಯಿತು. ಆ ಸರ್ಪಗಳಿಗೂ ತಮ್ಮ ಪ್ರಾರಬ್ಧಕರ್ಮವು ಹಾಗಿದ್ದುದರಿಂದ, ಈ ವಿಧ ವಾಗಿ ಮೃತಿಹೊಂದಬೇಕಾಯಿತು. ಇನ್ನುಮೇಲಾದರೂ ಈ ಕಾರ್ಯವನ್ನು ನಿಲ್ಲಿಸು"ಎಂದನು. ಜನಮೇಜಯನು ಆ ಮಹರ್ಷಿಯ ಮಾತನ್ನು ಗೌರವಿಸಿ, ಅವನನ್ನು ಯಥೋಚಿತವಾಗಿ ಸತ್ಕರಿಸಿ, ತಾನು ನಡೆಸುತ್ತಿದ್ದ ಸರ್ಪಯಾಗ ವನ್ನು ಅಷ್ಟಕ್ಕೇ ನಿಲ್ಲಿಸಿಬಿಟ್ಟನು ಓ ಮಹರ್ಷಿಗಳೆ! ಬ್ರಾಹ್ಮಣಪುತ್ರನ ಕೋಪದಿಂದ ಪರೀಕ್ಷಿತ್ತಿಗೂ, ಜನಮೇಜಯನ ಕೋಪದಿಂದ ಸರ್ಪ ಕುಲಕ್ಕೂ ಮೃತ್ಯುವುಂಟಾದುದಕ್ಕೆ, ಅವರವರ ಕೋಪವೇ ನಿಜವಾದ ಕಾರಣವೆಂದು ತಿಳಿಯಬಾರದು. ಇವೆಲ್ಲಕ್ಕೂ ಮೂಲಕಾರಣವು ಆ ಭಗ ವಂತನ ಮಾಯೆಯೇ! ಒಬ್ಬನನ್ನು ಬಾಧೆಗೆ ಕಾರಣವಾಗಿಯೂ, ಮತ್ತೊಬ್ಬ ನನ್ನು ಆ ಬಾಧೆಗೆ ಗುರಿಯಾಗಿಯೂ ಮಾಡುವುದೂ ಆ ಭಗವಂತನ ಮಾಯೆಯೇ! ವಿಷ್ಣುವಿನ ಆ ಮಹಾಮಾಯೆಯಿಂದಲೇ ಜೀವಾತ್ಮನು ಸತ್ವಾದಿಗುಣಗಳ ವ್ಯಾಪಾರದಿಂದ, ವಿಷಯಗಳಲ್ಲಿ ಮೋಹಗೊಳ್ಳುವನು ಆದರೆ ಪರಮಾತ್ಮನ ಸ್ವರೂಪವನ್ನು ಒಂದಾವರ್ತಿಯಾದರೂ ವಿಮರ್ಶಿಸಿ ತಿಳಿದವರಮೇಲೆ ಆ ಮಾಯೆಯು ತನ್ನ ಕಾರ್ಯವನ್ನು ಸಾಧಿಸಲಾರದು ಹೀಗಿರುವಾಗ ಸಾಕ್ಷಾತ್ಪರಮಪುರುಷನು ಅದಕ್ಕೆ ಬದ್ಧನಾಗಲಾರನೆಂಬು

ದನ್ನು ಹೇಳಬೇಕಾದುದೇನು ? ಆ ಪರಮಾತ್ಮಸ್ವರೂಪವು ಮಾಯಾ ಪ್ರಯುಕ್ತಗಳಾದ ನಾನಾಬಗೆಯ ಕುತರ್ಕಗಳಿಗಾಗಲಿ, ಸಂಕಲ್ಪವಿಕಲ್ಪಾ ಶ್ರಯವಾದ ಮನಸ್ಸಿಗಾಗಲಿ ಗೋಚರಿಸತಕ್ಕುದಲ್ಲ! ಆ ಮಾಯಾಮೋಹ ವನ್ನೂ, ಸಂಕಲ್ಪವಿಕಲ್ಪಾದಿ ವಿಕಾರಗಳನ್ನೂ ನೀಗಿ, ಯೋಗದಿಂದ ಪರಿ ಶುದ್ಧವಾದ ಮನಸ್ಸಿಗೇ ಗೋಚರವಾಗತಕ್ಕುದು. ಮತ್ತು ಆ ಪರಮಾತ್ಮ ನಲ್ಲಿ ಕರ್ಮಸಂಬಂಧವಾಗಲಿ, ಕರ್ಮಮೂಲಕವಾದ ಶರೀರಸಂಬಂಧವಾಗಲಿ ಇರುವುದಿಲ್ಲ ಕರ್ಮಗಳಿಂದಲೂ, ಕರ್ಮಕಲ್ಪಿತಗಳಾದ ಶರೀರಗಳಿಂದಲೂ ಅನುಭವಿಸಬೇಕಾದ ಸುಖದುಃಖಾದಿಫಲಗಳೂ ಅವನಿಗಿಲ್ಲ. ದೇವಮನು ಷ್ಯಾದಿವ್ಯವಹಾರಗಳೂ ಅವನಲ್ಲಿ ವರ್ತಿಸಲಾರವು ಪರಮಾತ್ಮಸ್ವರೂ ಪವು ಈ ವಿಧವಾದುದು. ಹಾಗಿಲ್ಲದೆ ಜೀವನು ಸತ್ವಾದಿಗುಣಗಳಿಗೆ ವಶ್ಯನಾ ಗಿದ್ದರೂ, ಆ ಪರಮಾತ್ಮಸ್ವರೂಪವನ್ನು ಮನನಮಾಡುತ್ತಿರುವುದರಿಂದ, ಬಾಧ್ಯಬಾಧಕರೂಪವಾದ ಗುಣತ್ರಯವ್ಯಾಪಾರಗಳಿಂದೂ ತನ್ನನ್ನು ಹೊ ಡ್ಡದಂತೆ, ಪ್ರಕೃತಿಸಂಬಂಧವನ್ನು ನೀಗಿ, ಹಸಿವು, ಬಾಯಾರಿಕೆ, ಮೊದಲಾದ ಷಡೂರ್ಮಿಗಳನ್ನೂ ತಪ್ಪಿಸಿಕೊಂಡು, ಸಮಾಹಿತಚಿತ್ತನಾಗಿರಬಹುದು. ಸಮಾಧಿನಿಷ್ಠರಾದ ಯೋಗಿಗಳು, ಬ್ರಹ್ಮನಿಗಿಂತ ಬೇರೆಯಾದ ಚೇತನಾ ಚೇತನವಸ್ತುಗಳ ಸ್ವರೂಪವನ್ನು ಪರಿಶೀಲಿಸಿ, ಅದು ಆ ಬ್ರಹ್ಮನಂತಿಲ್ಲ ವೆಂಬುದನ್ನು ತಿಳಿದು, ರಾಗದ್ವೇಷಾದಿದೋಷಗಳನ್ನು ನೀಗಿ, ಅನನ್ಯಾ ಪೇಕ್ಷರಾಗಿ, ಯಾವ ಪರಮಾತ್ಮಸ್ವರೂಪವೊಂದನ್ನೇ ಅನವರತವೂ ಹೃದ ಯದಲ್ಲಿಟ್ಟು ಧ್ಯಾನಿಸುವರೋ, ಅದು ಸರ್ವೋತ್ತಮವಾದ ಆ ವೈಷ್ಣವ ಸ್ವರೂಪವೇ! ಯಾರಿಗೆ ತಮ್ಮ ದೇಹದಲ್ಲಿಯೂ, ಮನೆಮಂದಿಮಕ್ಕಳಲ್ಲಿಯೂ, "ನಾನು, ತನ್ನದೆಂ"ಬ ಅಹಂಕಾರಮಮಕಾರಗಳಿಲ್ಲವೋ, ಅಂತವರೇ ಆ ಶ್ರೀವಿಷ್ಣುವಿನ ಪರಸ್ವರೂಪವನ್ನು ಸಾಕ್ಷಾತ್ಕರಿಸಬಲ್ಲರು. ಆದುದರಿಂದ ಓ ಶೌನಕಾದಿಗಳೆ! ಬ್ರಹ್ಮಪ್ರಾಪ್ತಿಯಲ್ಲಿ ಉದ್ದೇಶವುಳ್ಳವನು, ದೇಹಾಭಿ ಮಾನವನ್ನು ತೊರೆದು, ಮತ್ತೊಬ್ಬರು ತನ್ನನ್ನು ಪರುಷವಾಕ್ಯದಿಂದ ನಿಂದಿಸಿದರೂ ಸಹಿಸಿಕೊಳ್ಳಬೇಕು. ಯಾರನ್ನೂ ಅವಮಾನಪಡಿಸಬಾರದು. ಈ ನಶ್ವರವಾದ ದೇಹವನ್ನು ತನ್ನದೆಂದು ಅಭಿಮಾನಿಸಿ ಮತ್ತೊಬ್ಬರೊಡನೆ

ವೈರವನ್ನೂ ಬೆಳೆಸಬಾರದು! ಓ ಮಹರ್ಷಿಗಳೆ! ಯಾವ ಮಹಾತ್ಮನ ಪಾದಾರವಿಂದಸ್ಮರಣದಿಂದಲೇ ನಾನು ಈ ಆತ್ಮಸಂಹಿತೆಯನ್ನು ಬಲ್ಲವನಾದೆನೋ, ಅಂತಹ ಭಗವಂತನಾದ ವೇದವ್ಯಾಸಮಹರ್ಷಿಗೆ ಬಾರಿಬಾರಿಗೂ ವಂದನವು" ಎಂದನು.

ಆಗ ಶೌನಕಮುನಿಯು ತಿರುಗಿ ಸೂತಪೌರಾಣಿಕರನ್ನು ಕುರಿತು "ಮಹಾತ್ಮಾ! ಸೂತಾ! ವೇದಾಚಾರನಿರತರಾಗಿಯೂ, ಮಹಾನುಭಾವರಾಗಿಯೂ ಇದ್ದ ಪೈಲಮುನಿಯೇ ಮೊದಲಾದ ವ್ಯಾಸಶಿಷ್ಯರು, ಅಖಂಡವಾದ ವೇದವನ್ನು ಬೇರೆಬೇರೆಯಾಗಿ ವಿಭಾಗಿಸಿ ಲೋಕಕ್ಕೆ ಪ್ರಚಾರಗೊಳಿಸಿದುದಾಗಿ ಕೇಳಿರುವೆವು. ಆ ವೇದವಿಭಾಗಕ್ರಮವನ್ನು ನಮಗೆ ವಿವರವಾಗಿ ತಿಳಿಸಬೇಕು" ಎಂದರು. ಅದಕ್ಕಾ ಸೂತನು "ಎಲೈ ಮಹರ್ಷಿಗಳೆ! ಕೇಳಿರಿ! ಮೊದಲು ಚತುರ್ಮುಖನು, ಪರಮಪುರುಷನ ನಾಭಿಕಮಲದಿಂದ ಹುಟ್ಟಿದೊಡನೆ, ಆ ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ ಧ್ಯಾನಿಸುತಿದ್ದಾಗ, ಅವನ ಹೃದಯಾಕಾಶದಿಂದ ಒಂದಾನೊಂದು ಸೂಕ್ಷ್ಮನಾದವು (ಪ್ರಾಣಘೋಷವು) ಹೊರಟಿತು. ಕಿವಿಯನ್ನು ಮುಚ್ಚಿಕೊಂಡು ಗಮನಿಸಿದರೆ ಈ ನಾದವು ಕೇಳಿಬರುವುದು ಈ ನಾದವನ್ನು ಉಪಾಸಿಸುವುದರಿಂದಲೇ, ಯೋಗಿಗಳು ಶರೀರೇಂದ್ರಿಯನಿಷ್ಪಾದ್ಯವಾದ ಕರ್ಮದೋಷವನ್ನು ಕಳೆದು, ಜ್ಞಾನೋದಯವನ್ನು ಪಡೆದು, ಮೋಕ್ಷವನ್ನು ಹೊಂದುವರು ಆಗ ಚತುರ್ಮುಖಶರೀರದಿಂದ ಹೊರಟ ಸಾಧಾರಣವಾದ ಈ ಪ್ರಾಣಘೋಷವೇ, ಅಕಾರ, ಉಕಾರ, ಮಕಾರಗಳೆಂಬ ಮೂರವಯವಗಳಿಂದ ಕೂಡಿದ ಓಂಕಾರವೆಂಬ ಪ್ರಣವರೂಪದಿಂದ ವ್ಯಕ್ತವಾಯಿತು. ಯೋಗಸಿದ್ಧಿಯಿಲ್ಲದವರಿಗೆ ಇದರ ಉತ್ಪತ್ತಿಯನ್ನು ತಿಳಿಯುವುದೂ ಶಕ್ಯವಲ್ಲ. ಇದು ಸ್ವಯಂಪ್ರಕಾಶವುಳ್ಳುದು. ಇದೇ ಪರಬ್ರಹ್ಮವೆನಿಸಿದ ಪರಮಾತ್ಮನಿಗೆ ವಾಚಕವಾಗಿರುವುದು ಯಾವನು ಕಿವಿಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು, ವಿಷಯಾಂತರಜ್ಞಾನವಿಲ್ಲದಿರುವಾಗ, ತನ್ನ ಹೃದಯದಿಂದ ಹೊರಡುವ ಈ ಪ್ರಣವರೂಪವಾದ ಶಬ್ದವನ್ನು ಕೇಳಿ ತಿಳಿಯಬಲ್ಲನೋ ಅಂತವನು ಪರಮಾತ್ಮನೊಬ್ಬನೇ! ಈ ಶಕ್ತಿಯು ಸಾಮಾನ್ಯಜೀವನಿಗೆ ಬರ

ಲಾರದು. ಏಕೆಂದರೆ. ಜೀವನ ಜ್ಞಾನವು ಇಂದ್ರಿಯಾಧೀನವಾದುದು. ಪರಮಾತ್ಮನ ಜ್ಞಾನವೋ ಇಂದ್ರಿಯಾಧೀನವಲ್ಲ! ಈಪ್ರಣವದಿಂದಲೇ ಲೌಕಿಕ ವೈದಿಕ ಶಬ್ದರಾಶಿಗಳೆಲ್ಲವೂ ವ್ಯಕ್ತವಾಗುವುವು. ಇದಕ್ಕೆ ಹೃದಯಾಕಾಶವೇ ಉತ್ಪತ್ತಿಸ್ಥಾನವು.ಇದು ಸ್ವಯಂಪ್ರಕಾಶನಾದ ಪರಬ್ರಹ್ಮನಿಗೆ ವಾಚಕವಾಗಿರುವುದು. ಸಮಸ್ತಮಂತ್ರಗಳಿಗೂ, ವೇದಗಳಿಗೂ, ಉಪನಿಷತ್ತುಗಳಿಗೂ ಇದೇ ಬೀಜವು. ಇದು ಸನಾತನವಾದುದು. (ಇದಕ್ಕೆ ಹೃದಯಾಕಾಶದಲ್ಲಿ ಉತ್ಪತ್ತಿಯೆಂದರೆ ತೋರಿಕೆಯೇಹೊರತು ಹೊಸವಾಗಿ ಹುಟ್ಟುವುದಲ್ಲ.) ಈ ಪ್ರಣವಕ್ಕೆ, ಅಕಾರ, ಉಕಾರ ಮಕಾರಗಳೆಂಬ ಮೂರು ಅವಯವಗಳು ಏರ್ಪಟ್ಟು, ಈ ಮೂರು ವರ್ಣಗಳಿಂದ (ಅನನ್ಯಾರ್ಹಶೇಷತ್ವ, ಅನನ್ಯಶರಣತ್ವ, ಅನನ್ಯಭೋಗ್ಯತ್ವಗಳೆಂಬ) ಮೂರು ಅರ್ಥಗಳು ವ್ಯಕ್ತವಾಗುವುವು. ಮತ್ತು ಭಗವಂತನಿಗೆ, ವ್ಯಾಪ್ಯತ್ವ,ವ್ಯಾಪಕತ್ವ ಮೊದಲಾದ ಗುಣಗಳನ್ನು ಪ್ರತಿಪಾದಿಸುವ ನಾರಾಯಣಾದಿನಾಮಗಳ ಅರ್ಥವೂ ಇದರಿಂದ ಪ್ರಕಾಶಿತವಾಗುವುದು. ಚತುರ್ಮುಖಶರೀರಿಯಾದ ಭಗವಂತನು, ಈ ಪ್ರಣವದಿಂದಲೇ ಹ್ರಸ್ವದೀರ್ಘಾದಿಲಕ್ಷಣಗಳುಳ್ಳ ಅಂತಸ್ಥ, ಊಷ್ಮ, ಸ್ವರ, ಸ್ಪರ್ಶಗಳೆಂಬ ಭೇದಗಳೊಡನೆ ವರ್ಣಸಮುದಾಯವನ್ನು ಸೃಷ್ಟಿಸಿದನು. ಆಮೇಲೆ ಚತುರ್ಮುಖನು ಆ ವರ್ಣಸಮುದಾಯದಿಂದಲೇ ಯಜ್ಞಾದಿಕರ್ಮಗಳನ್ನು ಪ್ರತಿಪಾದಿಸಬೇಕೆಂಬ ಉದ್ದೇಶದಿಂದ, ವ್ಯಾಹೃತಿಮಂತ್ರಗಳೊಡನೆಯೂ, ಪ್ರಣವಮಂತ್ರದೊಡನೆಯೂ, ನಾಲ್ಕುವೇದಗಳನ್ನೂ ನಾಲ್ಕುಮುಖಗಳಿಂದ ಉಚ್ಚರಿಸಿದನು. ಆಮೇಲೆ ಆ ವೇದಗಳನ್ನು ತನ್ನ ಮಕ್ಕಳಾದ ಬ್ರಹ್ಮರ್ಷಿಗಳಿಗೆ ಉಪದೇಶಿಸಿದನು. ಆ ಮರೀಚಿ ಮೊದಲಾದವರು ಕಶ್ಯಪನೇ ಮೊದಲಾದ ತನ್ನ ಮಕ್ಕಳಿಗೆ ಉಪದೇಶಿಸಿದರು. ಹೀಗೆ ವೇದಗಳು ಶಿಷ್ಯಪರಂಪರೆಯಿಂದ ಪ್ರಚಾರಗೊಂಡು ಹರಡುತ್ತಬಂದುವು. ಪ್ರತಿಚತುರ್ಯುಗದಲ್ಲಿಯೂ, ವೇದಗಳ ಪ್ರಚಾರವು ಇದೇರೀತಿಯಾದುದು. ಪ್ರತಿದ್ವಾಪರಯುಗಕ್ಕೆ ಮೊದಲು ಯುಗಸಂಧಿಕಾಲದಲ್ಲಿ, ಯುಗಧರ್ಮದಿಂದ ಜನಗಳ ಆಯುಸ್ಸೂ, ಬಲವೂ, ಬುದ್ಧಿಯೂ, ಕ್ಷೀಣಿಸುತ್ತ ಬರುವುದನ್ನು ನೋಡಿ, ಆ ಅಖಂಡವೇದವನ್ನು ಮಹರ್ಷಿಗಳು ತಮ್ಮ ಹೃದಯಾಂತರ್ಯಾಮಿಯಾದ

ಭಗವಂತನ ಪ್ರೇರಣೆಯಿಂದ ವಿಭಾಗಿಸಿಟ್ಟರು. ಹೀಗೆ ನಡೆದು ಬರುತ್ತಿರುವಾಗ, ವೈವಸ್ವತಮನ್ವಂತರದಲ್ಲಿ, ಇದಕ್ಕೆ ಹಿಂದಿನ ದ್ವಾಪರಯುಗಕ್ಕೆ ಮೊದಲು ಯುಗಸಂಧಿಯಲ್ಲಿ, ಬ್ರಹ್ಮರುದ್ರಾದಿದೇವತೆಗಳು ಧರ್ಮರಕ್ಷಣಾರ್ಥವಾಗಿ ಶ್ರೀವಿಷ್ಣುವನ್ನು ಪ್ರಾರ್ಥಿಸಲು, ಆ ಭಗವಂತನೇ ಪರಾಶರಮುನಿಗೆ ಸತ್ಯವತಿಯಲ್ಲಿ ಕೃಷ್ಣದ್ವೈಪಾಯನನಾಗಿ ತನ್ನ ಅಂಶದಿಂದ ಅವತರಿಸಿದನು. ನಾನಾವಿಧರತ್ನಗಳು ಒಂದೇರಾಶಿಯಾಗಿ ಕಲೆತಿದ್ದಾಗ, ಆ ರಾಶಿಯಲ್ಲಿ ಬೇರೆಬೇರೆ ಜಾತಿಯ ರತ್ನಗಳನ್ನಾರಿಸಿ, ಬೇರೆಬೇರೆ ಸರಗಳನ್ನು ಮಾಡುವಂತೆ, ಆ ವ್ಯಾಸಮುನಿಯು, ಒಂದೇ ರಾಶಿಯಾಗಿದ್ದ ವೇದದಲ್ಲಿ,ಋಕ್ಕು,ಯಜಸ್ಸು,ಸಾಮ,ಅಥರ್ವಣಗಳೆಂಬ ಬೇರೆಬೇರೆ ನಾಲ್ಕು ಸಂಹಿತೆಗಳನ್ನು ಪ್ರತ್ಯೇಕಿಸಿದನು. ಈ ನಾಲ್ಕುಸಂಹಿತೆಗಳನ್ನೂ ಬೇರೆಬೇರೆಯಾಗಿ ತನ್ನ ನಾಲ್ಕುಮಂದಿ ಶಿಷ್ಯರಿಗೆ ಉಪದೇಶಿಸಿದನು. ಇವುಗಳಲ್ಲಿ ಋಕ್ಕುಗಳ ಸಮುದಾಯರೂಪವಾದುದರಿಂದ "ಬಹ್ವೃಚ"ವೆನಿಸಿಕೊಂಡ ಋಗ್ವೇದವನ್ನು ಪೈಲನಿಗೂ,ನಿಗದವೆಂದು ಕರೆಯಲ್ಪಡುವ ಯಜುಸ್ಸಂಹಿತೆಯನ್ನು ವೈಶಂಪಾಯನನಿಗೂ,ಸಾಮವೇದಗಳಕ್ಕಿರುವ ಛಂದೋಗ ಸಂಹಿತೆಯನ್ನು ಜೈಮಿನಿಗೂ, ಅಥರ್ವಾಂಗಿರಸವೆಂಬ ನಾಲ್ಕನೆಯ ಸಂಹಿತೆಯನ್ನು ಸುಮಂತುವೆಂಬವನಿಗೂ ಉಪದೇಶಿಸಿದನು.

## ಋಗ್ವೇದವಿಭಾಗಗಳು.

ಪೈಲನು ತಾನು ಕಲಿತ ಋಕ್ಸಂಹಿತೆಯನ್ನು ಎರಡಾಗಿ ವಿಭಾಗಿಸಿ, ಇಂದ್ರಪ್ರಮಿತಿ, ಬಾಷ್ಕಲರೆಂಬ ತನ್ನ ಇಬ್ಬರು ಶಿಷ್ಯರಿಗೆ ಉಪದೇಶಿಸಿದನು. ಇವರಲ್ಲಿ ಬಾಷ್ಕಲನು,ತಾನು ಕಲಿತ ಸಂಹಿತೆಯನ್ನು ನಾಲ್ಕಾಗಿ ವಿಭಾಗಿಸಿ, ಬೋಧ್ಯ, ಯಾಜ್ಞವಲ್ಕ್ಯ, ಪರಾಶರ, ಅಗ್ನಿಮಿತ್ರರೆಂಬ ತನ್ನ ನಾಲ್ವರು ಶಿಷ್ಯರಿಗೆ ಉಪದೇಶಿಸಿದನು. ಇಂದ್ರಪ್ರಮಿತಿಯೆಂಬವನು ತನಗೆ ಉಪದಿಷ್ಟವಾದ ಸಂಹಿತೆಯನ್ನು ತನ್ನ ಪುತ್ರನಾದ ಮಂಡೂಕೇಯಋಷಿಗೆ ಉಪದೇಶಿಸಿದನು. ಈ ಮಂಡೂಕೇಯನು ಅದನ್ನು ವೇದಮಿತ್ರನೆಂಬ ತನ್ನ ಶಿಷ್ಯನಿಗೆ ಉಪದೇಶಿಸಿದನು. ಆ ವೇದಮಿತ್ರನು ಸೌಭರಿ ಮೊದಲಾದ ತನ್ನ ಶಿಷ್ಯರಿಗೆ ಹೇಳಿದನು. ಮಾಂಡೂಕೇಯನ ಪುತ್ರನಾದ ಶಾಕಲ್ಯನು,ತನ್ನ ತಂ

ದೆಯು ತನಗೆ ಹೇಳಿಕೊಟ್ಟಿದ್ದ ಆ ಸಂಹಿತೆಯನ್ನು ಐದಾಗಿ ವಿಭಾಗಿಸಿ, ವಾತ್ಸ್ಯ,ಮುದ್ಗಲ, ಶಾಲೀಯ, ಗೌಖಲ್ಯ,ಶಿಶಿರರೆಂಬ ತನ್ನ ಐದುಮಂದಿ ಶಿಷ್ಯರಿಗೆ ಹೇಳಿಕೊಟ್ಟನು. ಶಾಕಲ್ಯನ ಶಿಷ್ಯನಾದ ಜಾತುಕರ್ಣನೆಂಬವನು, ತನಗೆ ಉಪದಿಷ್ಟವಾದ ಸಂಹಿತೆಯನ್ನು ನಿರುಕ್ತವೆಂಬ ವೈದಿಕಪದವ್ಯಾಖ್ಯಾನ ಹೊಡನೆ ನಾಲ್ಕಾಗಿ ವಿಭಾಗಿಸಿ, ತನ್ನ ಶಿಷ್ಯರಾದ ಬಾಲಾಕ, ಪೈಂಜ, ವೈತಾಳ, ವಿರಜರೆಂಬ ನಾಲ್ವರಿಗೆ ಉಪದೇಶಿಸಿದನು. ಬಾಷ್ಕಲ ಪುತ್ರನಾದ ಬಾಷ್ಕಲಿಯು, ಹಿಂದೆ ಹೇಳಿದ ಎಲ್ಲಾಶಾಖೆಗಳಿಂದಲೂ ಸಂಗ್ರಹಿಸಿ, ವಾಲಖಿಲ್ಯೆಯೆಂಬ ಶಾಖೆಯೊಂದನ್ನು ರಚಿಸಿ, ಪೈಲಾಯನಿ, ಗಾರ್ಗಿ, ಕಾಸಾರರೆಂಬ ತನ್ನ ಮೂವರು ಶಿಷ್ಯರಿಗೆ ಉಪದೇಶಿಸಿದನು. ಇವೆಲ್ಲವೂ ಬಹ್ವೃಚಸಂಹಿತೆಗಳು. ಇವು, ಹಿಂದೆ ಹೇಳಿದ ಬ್ರಹ್ಮರ್ಷಿಗಳಿಂದ ಪ್ರಚಾರಕ್ಕೆ ಬಂದವು. ಓ ! ಶೌನಕಾದಿಗಳೇ! ಈ ಛಂದೋವಿಭಾಗಗಳನ್ನು ಕೇಳಿದಮಾತ್ರದಿಂದಲೇ ಜನರು ಪಾಪವಿಮುಕ್ತರಾಗುವರು.

## ಯಜುರ್ವೇದ ವಿಭಾಗವು

ಇನ್ನು ತೈತ್ತರೀಯಶಾಖೆಯ ಉತ್ಪತ್ತಿಕ್ರಮವನ್ನು ತಿಳಿಸುವೆನು ಕೇಳು! ವೈಶಂಪಾಯನನಿಗೆ ಚರಕರೆಂದೂ, ಅಧ್ವರ್ಯುಗಳೆಂದೂ, ಎರಡುಬಗೆಯ ಶಿಷ್ಯವರ್ಗಗಳಿದ್ದುವು. ಇವರಲ್ಲಿ ಅಧ್ವರ್ಯುಶಾಖೆಯನ್ನು ಅಧ್ಯಯನಮಾಡುತ್ತಬಂದವರು ಅಧ್ವರ್ಯುಗಳೆನಿಸಿಕೊಂಡರು. ಬ್ರಹ್ಮಹತ್ಯಾಪಾತಕವನ್ನು ನೀಗಿಸತಕ್ಕುದಾಗಿ, ತಮ್ಮ ಗುರುಗಳಿಂದ ಅನುಷ್ಠಿಸಲ್ಪಟ್ಟ ಒಂದಾನೊಂದು ವ್ರತಾಚರಣೆಯನ್ನು ಹಿಡಿದವರು ಚರಕರೆನಿಸಿಕೊಂಡರು. ಇವರಲ್ಲಿ ವೈಶಂಪಾಯನಶಿಷ್ಯನಾದ ಯಾಜ್ಞವಲ್ಕ್ಯನೆಂಬವನು, ಒಮ್ಮೆ ತನ್ನ ಗುರುವನ್ನುನೋಡಿ “ಓ ! ಪೂಜ್ಯಾ! ಸರ್ವಸುಲಭವಾದ ಈ ತಪಸ್ಸಿನಿಂದೇನು ? ಇದಕ್ಕಿಂತಲೂ ದುಷ್ಕರವಾದ ವ್ರತವನ್ನು ನಾನು ಹಿಡಿಯುವೆನು” ಎಂದನು. ಅದಕ್ಕಾ ವೈಶಂಪಾಯನನು ಬ್ರಾಹ್ಮಣರನ್ನು ಅವಮಾನಿಸತಕ್ಕ ಈ ಗರ್ವದ ಮಾತಿಗೆ ಕೋಪಿಸಿಕೊಂಡು “ಓ! ಯಾಜ್ಞವಲ್ಕ್ಯ! ಇನ್ನು ಸಾಕು ಹೋಗು! ಇದುವರೆಗೆ ನೀನು ನನ್ನಿಂದ ಅಧ್ಯಯನಮಾಡಿದ ಶಾಖೆಗಳನ್ನು ಇಲ್ಲಿಯೇ ಬಿಟ್ಟುಹೊರಟುಹೋಗು” ಎಂದನು. ದೇವರಾತನ ಮಗ

ನಾದ ಆ ಯಾಜ್ಞವಲ್ಕ್ಯನು, ಆ ಗುರುಶಾಪದಿಂದ ತಾನು ಗ್ರಹಿಸಿದ
ಯಜುಸ್ಸುಗಳೆಲ್ಲವನ್ನೂ ಅಲ್ಲಿಯೇ ಬಾಯಿಂದಕಕ್ಕಿ ಹೊರಟುಹೋದನು.ಆಗ
ಅಲ್ಲಿದ್ದ ಕೆಲವು ಋಷಿಗಳಿಗೆ ಅವುಗಳನ್ನು ಗ್ರಹಿಸಬೇಕೆಂಬ ಆಸೆ ಹುಟ್ಟಿತು ಆ
ದರೆ,ತಾವು ಬ್ರಾಹ್ಮಣರಾಗಿದ್ದು,ಮತ್ತೊಬ್ಬರ ಬಾಯಿಂದ ಬಿದ್ದುದನ್ನು ಗ್ರ
ಹಿಸುವುದು.ಅನುಚಿತವೆಂದು ತಿಳಿದು,ತಿತ್ತಿರಿಯೆಂಬ ಪಕ್ಷಿರೂಪದಿಂದ ಆ ಯ
ಜುಸ್ಸುಗಳನ್ನು ನುಂಗಿದರು.ಇದರಿಂದಲೇ ಯಜುಶ್ಶಾಖೆಗಳಿಗೆ ತೈತ್ತಿರೀಯಗ
ಳೆಂಬ ಹೆಸರಾಯಿತು ಇತ್ತಲಾಗಿ ಯಾಜ್ಞವಲ್ಕ್ಯನು, ತಾನು ಗುರುಮುಖ
ವಾಗಿ ಬಹಳಶ್ರಮಪಟ್ಟು ಅಧ್ಯಯನಮಾಡಿದ ಛಂದಸ್ಸುಗಳೆಲ್ಲವೂ, ತನಗೆ
ಕೈಸೇರದೆ ಹೋದುದಕ್ಕಾಗಿ ಪರಿತಪಿಸುತ್ತ, ಸೂರ್ಯಮಂಡಲಮಧ್ಯವರ್ತಿ
ಯಾದ ಭಗವಂತನನ್ನು ಹೀಗೆಂದು ಸ್ತುತಿಸುವನು ‘ ಓ ಭಗವಂತಾ’ ಸೂರ್ಯ
ನಾರಾಯಣಾ ! ನಿನಗೆ ನಮಸ್ಕಾರವು. ಚತುರ್ಮುಖಬ್ರಹ್ಮನಿಂದ ಹಿಡಿದು,
ತೃಣಪರ್ಯಂತವಾಗಿರುವ ಜರಾಯುಜ, ಸ್ವೇದಜ, ಉದ್ಭಿಜ್ಜ, ಅಂಡಜಗಳೆಂಬ
ನಾಲ್ಕುವಿಭಾಗವುಳ್ಳ ಎಲ್ಲಾಭೂತಗಳಲ್ಲಿ, ನೀನೊಬ್ಬನೇ ಆತ್ಮಸ್ವರೂಪ
ದಿಂದ ಒಳಗೂ, ಕಾಲರೂಪದಿಂದ ಹೊರಗೂ ವ್ಯಾಪಿಸಿರತಕ್ಕವನು ಹಾಗಿ
ದ್ದರೂ ಆಯಾವಸ್ತುಗಳ ದೋಷಕ್ಕೆ ಈಡಾಗದೆ, ಆಕಾಶದಂತೆ ನಿರ್ಲೇಪ
ನಾಗಿರುವೆ! ಮತ್ತು ಕ್ಷಣ, ಲವ, ನಿಮೇಷ, ಮೊದಲಾದ ಅವಯ
ವಗಳಿಂದ ವಿಸ್ತೃತವಾದ ಸಂವತ್ಸರವಿಭಾಗಗಳನ್ನನುಸರಿಸಿ, ನೆಲದ
ನೀರನ್ನು ಕಿರಣಗಳಿಂದ ಗ್ರಹಿಸಿ, ತಿರುಗಿ ಅದನ್ನು ಹೊರಕ್ಕೆ ಬಿಡುತ್ತ,
ಆ ಮೂಲಕವಾಗಿ ಈ ಲೋಕಯಾತ್ರೆಯನ್ನು ನಿರ್ವಹಿಸತಕ್ಕ ನಿನಗೆ ನಮ
ಸ್ಕಾರವು *ಓ ದೇವೋತ್ತಮಾ! ಸವಿತಾ! ಪ್ರತಿದಿನವೂ ತ್ರಿಸಂಧ್ಯಾಕಾಲಗ

---

* ಇದುವರೆಗೆ ಭಗವಂತನು ಅಖಿಲಾತ್ಮಸ್ವರೂಪದಿಂದ, ಎಲ್ಲಕ್ಕೂ ಅಂತರ್ಯಾ
ಮಿಯಾಗಿ ಪ್ರೇರಿಸತಕ್ಕವನೆಂದು, ಗಾಯತ್ರಿಯ ಪ್ರಥಮಪಾದದಲ್ಲಿರುವ ಸವಿತೃ
ಶಬ್ದದ ಅರ್ಥವು ಸೂಚಿತವಾಯಿತು. ಇದಕ್ಕೆ ಮುಂದಿನವಾಕ್ಯದಲ್ಲಿ ಅಜ್ಞಾನವನ್ನು
ಭರ್ಜಿಸತಕ್ಕವನೆಂದು ಎರಡನೇ ಪಾದದಲ್ಲಿರುವ ಭರ್ಗಶಬ್ದಾರ್ಥವೂ, ಅಲ್ಲಿಂದ ಮುಂ
ದೆ ಸರ್ವಪ್ರಾಣಿಗಳ ಬುದ್ಧಿಪ್ರಚೋದಕನೆಂಬ ತೃತೀಯಪಾದಾರ್ಥವೂ ಹೇಳಲ್ಪ
ಡುವುದು

ಳಲ್ಲಿ, ವೈದಿಕವಿಧಿಯಿಂದ ಉಪಾಸನೆಮಾಡತಕ್ಕವರಿಗೆ, ಸಮಸ್ತದುಃಖಗಳನ್ನೂ, ಪಾಪಕ್ಕೆ ಬೀಜಭೂತವಾದ ಅಜ್ಞಾನವನ್ನೂ ದಹಿಸತಕ್ಕ ತೇಜಸ್ಸಿನಿಂದ ಜ್ವಲಿಸುವ ನಿನ್ನ ಮಂಡಲವನ್ನು ದೃಢಬುದ್ಧಿಯಿಂದ ಧ್ಯಾನಿಸುವೆವು. ಸ್ಥಾವರಜಂಗಮಾತ್ಮಕಗಳಾದ ಸಮಸ್ತಭೂತಸಮೂಹಗಳ ಮನಸ್ಸಿಗೂ, ಇಂದ್ರಿಯಗಳಿಗೂ, ಪ್ರಾಣಗಳಿಗೂ, ಜೀವನಿಗೂ ಆಧಾರಭೂತನಾಗಿ, ಅವೆಲ್ಲಕ್ಕೂ ಅಂತರ್ಯಾಮಿಯಾಗಿ ಪ್ರೇರಿಸತಕ್ಕ ನಿನಗೆ ವಂದನವು. ಓ ದೇವಾ! ನೀನು ಅತಿಭಯಂಕರಸ್ವರೂಪವುಳ್ಳ ಅಂಧಕಾರವೆಂಬ ಅಜಗರದಿಂದ ಹಿಡಿಯಲ್ಪಟ್ಟು, ಪ್ರಜ್ಞೆಯಿಲ್ಲದೆ ಮೃತಪ್ರಾಯವಾದ ಈ ಲೋಕವನ್ನು, ಅಪಾರವಾದ ಕೃಪಾದೃಷ್ಟಿಯಿಂದ ಎಚ್ಚರಗೊಳಿಸಿ, ಅವರಿಗೆ ಪ್ರತಿದಿನವೂ, ತ್ರಿಸಂಧ್ಯಾಕಾಲಗಳಲ್ಲಿ ನಿನ್ನ ಆರಾಧನೆಗೆ ಉಪಯುಕ್ತವಾದ ಚಿತ್ತಸಮಾಧಾನವನ್ನುಂಟುಮಾಡುವೆ! ಮತ್ತು ನೀನು ದೇವಾಧಿಪತಿಯೆನಿಸಿ, ಊರ್ಧ್ವಲೋಕದಲ್ಲಿರುವವನಾದರೂ, ಪ್ರಜಾಧಿಪತಿಯಂತೆ ದುಷ್ಟಜಂತುಗಳಿಗೆ ಭಯವನ್ನು ಹುಟ್ಟಿಸುತ್ತ, ಅಲ್ಲಲ್ಲಿ ದಿಕ್ಪಾಲಕರೆಲ್ಲರೂ ಅಂಜಲಿಬಂಧಪೂರ್ವಕವಾಗಿ ನಿನ್ನನುಪಾಸನೆಮಾಡುತ್ತಿರಲು, ಅವರ ಪೂಜೆಗಳನ್ನು ಕೈಕೊಳ್ಳುತ್ತ, ನಾನಾಕಡೆಯಲ್ಲಿ ಸಂಚರಿಸುತ್ತಿರುವೆ. ಓ ಭಗವಂತಾ! ತ್ರೈಲೋಕ್ಯಗುರುಗಳೆನಿಸಿದ ಬ್ರಹ್ಮಾದಿಗಳಿಂದಲೂ ಅಭಿವಂದಿತವಾದ ನಿನ್ನ ಪಾದಾರವಿಂದವನ್ನು ಭಜಿಸುವೆನು. ಹಿಂದೆ ನಾನು ಅಧಿಕರಿಸಿದ ಯಜುರ್ವೇದವು ಸಾರರಹಿತವಾಗದೆ, ಮೊದಲಿನಂತೆಯೇ ನನಗೆ ಕೈಸೇರುವಂತೆ ಮಾಡಬೇಕು"ಎಂದು ಪ್ರಾರ್ಥಿಸುತ್ತ, ಸೂರ್ಯೋಪಸ್ಥಾನವನ್ನು ಮಾಡಿದನು. ಆದಿತ್ಯರೂಪಿಯಾದ ಭಗವಂತನು, ಈ ಸ್ತೋತ್ರದಿಂದ ಪ್ರಸನ್ನನಾಗಿ, ಅಶ್ವರೂಪದಿಂದ ಬಂದು, ತಿರುಗಿ ಆ ಯಾಜ್ಞವಲ್ಕ್ಯನಿಗೆ ಸಾರವು ಕೆಡದಂತೆಯೇ ಯಜುಸ್ಸುಗಳನ್ನು ಅನುಗ್ರಹಿಸಿಕೊಟ್ಟನು. **ಯಾಜ್ಞವಲ್ಕ್ಯನು ಅಪರಿಮಿತವಾದ ಆ ಯಜುಸ್ಸುಗಳಿಂದ ಹದಿನೈದುಶಾಖೆಗಳನ್ನು ಬೇರ್ಪಡಿಸಿದನು. ಕಾಣ್ವರೆಂದೂ, ಮಾಧ್ಯಂದಿನರೆಂದೂ ಹೆಸರುಗೊಂಡ ಮಹರ್ಷಿಗಳು ಇವನಿಂದ ಆ ಶಾಖೆಗಳನ್ನು ಅಧ್ಯಯನಮಾಡಿದರು.**

### ಸಾಮವೇದ ವಿಭಾಗವು.

ಜೈಮಿನಿಯು ಸಾಮವೇದವನ್ನು ಗ್ರಹಿಸಿದನೆಂದು ಹೇಳಿದನಲ್ಲವೆ! ಆ ಜೈಮಿನಿಗೆ ಸುಮಂತುವೆಂಬ ಪುತ್ರನಿದ್ದನು. ಆ ಸುಮಂತುವಿನ ಮಗನು ಸುತನ್ವನು. ಜೈಮಿನಿಯು ಆ ಸಂಹಿತೆಯನ್ನು ಎರಡಾಗಿ ವಿಭಾಗಿಸಿ, ಆ ತನ್ನ ಪುತ್ರಪೌತ್ರರಿಬ್ಬರಿಗೂ ಉಪದೇಶಿಸಿದನು ಆ ಜೈಮಿನಿಯ ಶಿಷ್ಯರಲ್ಲಿ ಮಹಾಪ್ರಭಾವವುಳ್ಳ ಸುಕರ್ಮನೆಂಬವನು ಆ ಸಾಮವೇದವೆಂಬ ವೃಕ್ಷದಿಂದ ಸಾವಿರಾರು ಶಾಖಾಭೇದಗಳನ್ನು ಕಲ್ಪಿಸಿದನು. ಆ ಸುಕರ್ಮನಿಗೆ ಹಿರಣ್ಯನಾಭನೆಂದೂ, ಪೌಷ್ಯಂಜನೆಂದೂ ಇಬ್ಬರು ಶಿಷ್ಯರಿದ್ದರು. ಅವರಿಬ್ಬರೂ ಆ ಶಾಖೆಗಳನ್ನು ಗ್ರಹಿಸಿದರು. ಮತ್ತು ಆ ಸುಕರ್ಮನಿಗೆ ಬ್ರಹ್ಮಜ್ಞಾನಿಗಳಲ್ಲಿ ಮೇಲೆನಿಸಿಕೊಂಡ ಆವಂತ್ಯನೆಂಬ ಬೇರೊಬ್ಬ ಶಿಷ್ಯನಿದ್ದು, ಅವನೂ ಕೆಲವು ಶಾಖೆಗಳನ್ನು ಗ್ರಹಿಸಿದನು. ಸುಕರ್ಮಶಿಷ್ಯರಾದ ಆ ಮೂವರಿಗೂ ಉದೀಚ್ಯರೆಂಬ ಐನೂರುಮಂದಿ ಶಿಷ್ಯರಿದ್ದರು. ಈ ಉದೀಚ್ಯರನ್ನೇ ಕೆಲವರು ಪ್ರಾಚ್ಯರೆಂದೂ ಹೇಳುವರು ಪೌಷ್ಯಂಜನಿಗೆ ಲೋಕಾಕ್ಷಿ, ಲಾಂಗಲಿ, ಕಲ್ಯ, ಕುಸೀದ, ಕುಕ್ಷಿಯೆಂಬ ಐದುಮಂದಿ ಶಿಷ್ಯರಿದ್ದರು ಇವರಲ್ಲಿ ಒಬ್ಬೊಬ್ಬರೂ ನೂರುಸಂಹಿತೆಗಳನ್ನು ಗ್ರಹಿಸಿದರು. ಹಿರಣ್ಯನಾಭನ ಶಿಷ್ಯನಾದ ಕೃತನೆಂಬವನು, ತಾನು ಗ್ರಹಿಸಿದ ಇಪ್ಪತ್ತೈದು ಸಂಹಿತೆಗಳನ್ನು ತನ್ನ ಶಿಷ್ಯರಿಗೆ ಉಪದೇಶಿಸಿದನು. ಉಳಿದ ಶಾಖೆಗಳನ್ನು ಆವಂತ್ಯನು ತನ್ನ ಶಿಷ್ಯರಿಗೆ ಹೇಳಿಕೊಟ್ಟನು. ಇದು ಆರನೆಯ ಅಧ್ಯಾಯವು.

---

### ಅಥರ್ವವೇದವಿಭಾಗವು

ಓ ಶೌನಕಾದಿಗಳೇ! ಅಥರ್ವಶಾಖೆಯನ್ನು ಅಧ್ಯಯನಮಾಡಿದ ಸುಮಂತುವೆಂಬುವನು ಆ ಸಂಹಿತೆಯನ್ನು ತನ್ನ ಶಿಷ್ಯನಿಗೆ (ಕಬಂಧನೆಂಬವನಿಗೆ) ಹೇಳಿ ಕೊಟ್ಟನು. ಆ ಕಬಂಧನು ಆ ಸಂಹಿತೆಯನ್ನು ಎರಡಾಗಿ ವಿಭಾಗಿಸಿ, ಪಥ್ಯನೆಂದೂ, ವೇದದರ್ಶನೆಂದೂ ಹೆಸರುಗೊಂಡ ತನ್ನ ಇಬ್ಬರು ಶಿಷ್ಯರಿಗೆ ಹೇಳಿದನು. ವೇದದರ್ಶನಿಗೆ ಶೌಲ್ಕಾಯನಿ, ಬ್ರಹ್ಮಬಲಿ, ಮೌದ್ಗಲ, ಪಿಪ್ಪಲಾಯನಿ, ಎಂಬ ನಾಲ್ವರು ಶಿಷ್ಯರಿದ್ದು, ಅವನಿಂದ ಆ ಸಂಹಿತೆ

ಗಳನ್ನು ಗ್ರಹಿಸಿದರು. ಪಥ್ಯನಿಗೆ ಕುಮುದ, ಶುನಕ, ಜಾಜಲಿ ಎಂಬ ಮೂವರು ಶಿಷ್ಯರಿದ್ದರು. ಈ ಮೂವರೂ ತಮ್ಮ ಗುರುವಿನಿಂದ ಬೇರೆಬೇರೆಯಾಗಿ ಅಥರ್ವಸಂಹಿತೆಗಳನ್ನ ಅಧ್ಯಯನಮಾಡಿದರು. ಇವರಲ್ಲಿ ಶುನಕನು, ತಾನು ಗ್ರಹಿಸಿದ ಸಂಹಿತೆಯನ್ನು ಎರಡಾಗಿ ವಿಭಾಗಿಸಿ, ಬಭ್ರು, ಮತ್ತು ಸೈಂಧವಾಯನನೆಂಬ ತನ್ನ ಇಬ್ಬರು ಶಿಷ್ಯರಿಗೆ ಓದಿಸಿದನು. ಇವರಿಬ್ಬರೂ, ತಮ್ಮತಮ್ಮ ಸಂಹಿತೆಗಳನ್ನು ತಮ್ಮತಮ್ಮ ಶಿಷ್ಯರಾದ ಸಾವರ್ಣ್ಯಾದಿಗಳಿಗೆ ಉಪದೇಶಿಸಿದರು. ಇವರಿಂದ ನಕ್ಷತ್ರಕಲ್ಪ, ಶಾಂತಿಕಲ್ಪರೆಂಬವರು ಅದನ್ನು ಗ್ರಹಿಸಿದರು. ಈ ನಕ್ಷತ್ರಕಲ್ಪ, ಶಾಂತಿಕಲ್ಪರೂ, ಕಾಶ್ಯಪರೂ, ಆಂಗಿರಸರೂ ಅಥರ್ವವೇದ ಶಾಖೆಯನ್ನು ವಿಭಾಗಿಸಿ, ಲೋಕದಲ್ಲಿ ಪ್ರವರ್ತಿಸುವಹಾಗೆ ಮಾಡಿದವರು.

## ಪುರಾಣಪ್ರವರ್ತಕರು

ಓ ಮಹರ್ಷಿಗಳೆ! ಇನ್ನು ಪುರಾಣಪ್ರವರ್ತಕರಾರೆಂಬುದನ್ನು ತಿಳಿಸುವೆನು ಕೇಳಿರಿ! ತ್ರೈಯಾರುಣಿ, ಕಶ್ಯಪ, ಸಾವರ್ಣಿ, ಅಕೃತವ್ರಣ, ವೈಶಂಪಾಯನ, ಹಾರೀತರೆಂಬೀ ಆರು ಮಂದಿಯೂ ಪೌರಾಣಿಕರೆಂದು ಪ್ರಸಿದ್ಧಿಗೊಂಡವರು. ಈ ಆರುಮಂದಿಯೂ ವ್ಯಾಸಮುನಿಯ ಶಿಷ್ಯನಾದ, ನನ್ನ ತಂದೆ ರೋಮಹರ್ಷಣನಿಂದ ಒಂದೊಂದು ಸಂಹಿತೆಯನ್ನು * ಗ್ರಹಿಸಿದರು. ಈ ಆರುಮಂದಿಯಲ್ಲಿಯೂ ನಾನು ಶಿಷ್ಯವೃತ್ತಿಯನ್ನು ಹಿಡಿದು ಅವರಿಂದ ಆ ಆರುಸಂಹಿತೆಗಳನ್ನೂ ನಾನೊಬ್ಬನೇ ಗ್ರಹಿಸಿದೆನು. ಇದಲ್ಲದೆ ಕಾಶ್ಯಪನೂ, ನಾನೂ, ಸಾವರ್ಣಿಯೂ, ಪರಶುರಾಮಶಿಷ್ಯನಾದ ಅಕೃತವ್ರಣನೂ, ಈ ನಾವು ನಾಲ್ಕುಮಂದಿಯೂ, ವ್ಯಾಸಪುತ್ರನಾದ ಶುಕಮುನಿಯಿಂದ, ಬೇರೆ ನಾಲ್ಕುಮೂಲಸಂಹಿತೆಗಳನ್ನೂ ಅಧಿಕರಿಸಿದೆವು. ವೇದಶಾಸ್ತ್ರಾನುಸಾರವಾಗಿ, ಮಹರ್ಷಿಗಳಿಂದ ನಿರೂಪಿಸಲ್ಪಟ್ಟ ಈ ಪುರಾಣಗಳ ಲಕ್ಷಣವನ್ನು ತಿಳಿಸುವೆನು. ಸಾವಧಾನಮನಸ್ಕನಾಗಿ ಕೇಳಿರಿ! ಸರ್ಗ, ವಿಸರ್ಗ, ವೃತ್ತಿ, ರಕ್ಷೆ, ಮನ್ವಂತರ, ವಂಶ, ವಂಶಾನುಚರಿತ, ಸಂಸ್ಥೆ, ಹೇತು,

---

* ಇದರಿಂದ ವ್ಯಾಸಮುನಿಯು ಮೊದಲು ಆರುಸಂಹಿತೆಗಳನ್ನೂ ರೋಮಹರ್ಷಣನಿಗೆ ಹೇಳಿದುದಾಗಿ ಗ್ರಾಹ್ಯವು.

ಅಪಾಶ್ರಯವೆಂಬ ಹತ್ತು ಅಂಗಗಳಿಂದ ಕೂಡಿದುದು ಮಹಾಪುರಾಣವೆಂದು ಪುರಾಣಲಕ್ಷಣವನ್ನು ತಿಳಿದ ವಿದ್ವಾಂಸರು ನಿರ್ಣಯಿಸಿರುವರು. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರಗಳು, ವಂಶಾನುಚರಿತವೆಂಬ ಐದೇಲಕ್ಷಣಗಳಿಂದ ಕೂಡಿದ ಕೆಲವು ಪುರಾಣಗಳೂ ಉಂಟು. ಇವು ಅಲ್ಪಪುರಾಣಗಳೆನಿಸುವುವು. .

ಇವುಗಳಲ್ಲಿ, ಮೂಲಪ್ರಕೃತಿಯಲ್ಲಿ ಸತ್ವಾದಿಗುಣಗಳ ಕಲಗುವಿಕೆಯಿಂದ, ಆ ಗುಣತ್ರಯಪರಿಣಾಮರೂಪವಾದ ಮಹತ್ತತ್ವವೂ, ಅದರಿಂದ ಸಾತ್ವಿಕ, ರಾಜಸ, ತಾಮಸಗಳೆಂಬ ಮೂರುಬಗೆಯ ಅಹಂಕಾರವೂ, ಆ ಅಹಂಕಾರಗಳಿಂದ ಆಕಾಶಾದಿಭೂತಗಳೂ, ಶಬ್ದಾದಿತನ್ಮಾತ್ರಗಳೂ, ಇಂದ್ರಿಯಗಳೂ ಉಂಟಾದ ಕ್ರಮವನ್ನು ವಿವರಿಸುವುದೇ ಸರ್ಗವೆನಿಸುವುದು.

ಈ ಮಹದಾದಿತತ್ವಗಳು ಪರಮಪುರುಷನಿಂದ ಪ್ರೇರಿತಗಳಾಗಿ ಸೃಷ್ಟಿಸಾಮರ್ಥ್ಯವನ್ನು ಹೊಂದಿದಮೇಲೆ, ಬೀಜದಿಂದ ಬೀಜವು ಹುಟ್ಟುವಂತೆ ಮೂಲಪ್ರಕೃತಿಯಿಂದ ಮಹದಾದಿಕ್ರಮದಲ್ಲಿ ಹುಟ್ಟುವ ಚರಾಚರಾತ್ಮಕವಾದ, ಮತ್ತು, ಜೀವನಿಗೆ ಕರ್ಮವಾಸನಾಪ್ರಯುಕ್ತವಾದ ಕಾರ್ಯಪ್ರಪಂಚದ ಉತ್ಪತ್ತಿಯೇ ವಿಸರ್ಗವೆನಿಸುವುದು.

ಈ ಚರಾಚರಗಳಲ್ಲಿ, ಅಚರಭೂತಗಳು ಚರಭೂತಗಳಿಗೆ ಜೀವನೋಪಾಯವಾಗಿ ಸರ್ವೇಶ್ವರನಿಂದಲೇ ಕಲ್ಪಿಸಲ್ಪಟ್ಟಿರುವುವು. ಈ ಜೀವನೋಪಾಯವು ಮನುಷ್ಯರಿಗೆ ರಾಗದಿಂದುಂಟಾಗುವುದಾದರೂ, ಶಾಸ್ತ್ರವಿಹಿತಗಳಾಗಿಯೂ ಇರುವುವೆಂಬುದನ್ನು ತಿಳಿಸುವುದೇ ವೃತ್ತಿಯು.

ಭಗವಂತನಾದ ಶ್ರೀಹರಿಯು, ಪ್ರತಿಯುಗದಲ್ಲಿಯೂ, ತಿರ್ಯಕ್ಕುಗಳು, ಮಹರ್ಷಿಗಳು, ದೇವತೆಗಳು ಮೊದಲಾದ ಜಾತಿಗಳಲ್ಲಿ ಅವತಾರವನ್ನೆತ್ತಿ, ಲೋಕರಕ್ಷಣಾರ್ಥವಾಗಿ ನಾನಾಚೇಷ್ಟೆಗಳನ್ನು ನಡೆಸಿ, ವೈದಿಕಧರ್ಮವಿರೋಧಿಗಳಾದ ದುಷ್ಟರನ್ನು ನಿಗ್ರಹಿಸಿದ ಆ ಅವತಾರಚರಿತ್ರಗಳೇ ರಕ್ಷೆಯೆನಿಸುವುದು.

ಬೇರೆಬೇರೆ ಮನುಗಳು, ದೇವತೆಗಳು, ಮನುಪುತ್ರರು, ಇಂದ್ರರು, ಋಷಿಗಳು, ಭಗವಂತನ ಅಂಶಾವತಾರಗಳು, ಇವಾರನ್ನೂ ಹಿಳಕೊಂಡ ಬೇರೆಬೇರೆ ಕಾಲವಿಭಾಗಗಳು ಮನ್ವಂತರವೆನಿಸುವುವು.

ಮನುವಿನಿಂದೀಚೆಗೆ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಪ್ರಸಿದ್ಧಗಳಾದ ರಾಜಕುಲಗಳ ಪರಂಪರೆಯನ್ನು ತಿಳಿಸುವುದೇ ವಂಶವು.

ಆಯಾವಂಶಗಳಿಗೆ ನಿರ್ವಾಹಕರಾದ ರಾಜರ ಚರಿತ್ರೆಗಳನ್ನು ತಿಳಿಸುವುದು ವಂಶಾನುಚರಿತವು.

ಈ ಪ್ರಪಂಚಕ್ಕೆ, ಕಾಲ ಕರ್ಮ ಸ್ವಭಾವಪ್ರಯುಕ್ತಗಳಾಗಿ ಸಂಭವಿಸುವ, ನೈಮಿತ್ತಿಕ, ಪ್ರಾಕೃತಿಕ, ನಿತ್ಯ, ಆತ್ಯಂತಿಕಗಳೆಂಬ ನಾಲ್ಕು ಬಗೆಯ ಪ್ರಳಯಗಳನ್ನು ವಿವರಿಸುವುದೇ ಸಂಸ್ಥೆಯೆನಿಸುವುದು.

ಅಜ್ಞಾನಮೂಲಕವಾಗಿ ಕರ್ಮಗಳನ್ನು ನಡೆಸತಕ್ಕ ಜೀವವೇ, ಈ ಪ್ರಪಂಚಸೃಷ್ಟಿಗೆ ಕಾರಣವು, ಎಂದರೆ, ಜೀವಾತ್ಮರುಗಳಿಗೆ ಕರ್ಮಫಲಗಳನ್ನನುಭವಿಸುವುದಕ್ಕಾಗಿಯೇ ಪ್ರಪಂಚಸೃಷ್ಟಿಯೆಂಬುದನ್ನು ಹೇಳುವುದು ಹೇತುವೆನಿಸುವುದು. ಏಕೆಂದರೆ, ಜೀವಾತ್ಮಗಳು ಸೃಷ್ಟಿಗೆ ಮೊದಲು, ದೇವಾದಿನಾಮರೂಪಗಳಿಲ್ಲದೆ, ಹಿಂದೆ ತಾವು ಅನುಭವಿಸಿ ಮಿಕ್ಕ ಕರ್ಮವಾಸನೆಯಿಂದಮಾತ್ರ ಕೂಡಿರುವುವು. ಹಾಗೆ ಕರ್ಮವಾಸನೆಯಿಂದ ಕೂಡಿದ ಜೀವಗಳೇ ಸೃಷ್ಟಿಗೆ ನಿಮಿತ್ತವಾಗುವುದರಿಂದ, ಜೀವಗಳು ಹೇತುವೆನಿಸುವುವು.)

ಪ್ರಕೃತಿ ಪರಿಣಾಮರೂಪಗಳಾದ ಶರೀರಗಳಲ್ಲಿ ನಡೆಯುವ, ಜಾಗರ, ಸ್ವಪ್ನ, ಸುಷುಪ್ತಿಯೆಂಬ ಮೂರುಬಗೆಯ ಜೀವವ್ಯಾಪಾರಗಳಿಗೆ, ಪರಮಾತ್ಮನು ತಾನೇ ನಿರ್ವಾಹಕನೆನಿಸಿದ್ದರೂ, ಆ ಅವಸ್ಥೆಗಳಿಗೆ ತಾನು ಈಡಾಗದಿರುವನು. ಹೀಗೆ ಜಾಗರಾದ್ಯವಸ್ಥೆಗಳಲ್ಲಿ (ಸಂಬಂಧಾಸಂಬಂಧವೆಂಬ) ಅನ್ವಯವ್ಯತಿರೇಕಗಳೆರಡಕ್ಕೂ ಆಶ್ರಯನಾದ ಯಾವ ಪರಬ್ರಹ್ಮವುಂಟೋ, ಅದೇ ಅಪಾಶ್ರಯವೆನಿಸುವುದು. ಬೇರೆಬೇರೆ ನಾಮರೂಪಗಳುಳ್ಳ ಘಟಪಟಾದಿದ್ರವ್ಯಗಳಿಗೆ, ಉತ್ಪತ್ತಿ ಮೊದಲುಗೊಂಡು ವಿನಾಶಪರ್ಯಂತವಾಗಿ, ಆಯಾ ಅವಸ್ಥಾಭೇದಗಳು ಕಾಣುವುವಲ್ಲವೆ? ಹಾಗಿದ್ದರೂ ದ್ರವ್ಯಕ್ಕೆ ಈ ಉತ್ಪತ್ತಿವಿನಾಶಾದ್ಯವಸ್ಥಾಭೇದಗಳು, ವಿಶಿಷ್ಟದಶೆಯಲ್ಲಿಯೇ ಹೊರತು, ವಿಶೇಷ್ಯಮಾತ್ರವಾದ ಮೂಲದ್ರವ್ಯರೂಪದಲ್ಲಿ ಆ ವಿಕಾರಗಳಿಲ್ಲ. ಹಾಗೆಯೇ ಬ್ರಹ್ಮವೂಕೂಡ, ಚಿದಚಿದ್ವಿಶಿಷ್ಟವಾದ ಕಾರ್ಯಾವಸ್ಥೆಯಲ್ಲಿ ಆಯಾವಿಕಾರಗಳೊಡನೆ ಸಂಬಂಧವನ್ನೂ, ನಿಜಸ್ವರೂಪದಲ್ಲಿ ಅವುಗಳಿಂದ

ವ್ಯತಿರೇಕವನ್ನೂ ಹೊಂದಿರುವುದು. ಪುರುಷನ ಚಿತ್ತವು ತಾನಾಗಿಯಾಗಲಿ, ಯೋಗಾಭ್ಯಾಸಬಲದಿಂದಾಗಲಿ, ಯಾವಾಗ ಜಾಗರಾದ್ಯವಸ್ಥೆಗಳಿಗೆ ನೆಲೆಯಾಗದೆ ವಿಷಯಗಳಿಂದ ವಿಮುಖವಾಗುವುದೋ, ಆಗ ಆತ್ಮಸ್ವರೂಪಜ್ಞಾನವುಂಟಾಗಿ, ಅದರಿಂದ ಅವನಿಗೆ ಸಂಸಾರರೂಪವಾದ ಪಾಶವೂ ಬಿಟ್ಟುಹೋಗುವುದು. ಓ ಮಹರ್ಷಿಗಳೆ! ಮೇಲೆ ಹೇಳಿದಂತೆ ಹತ್ತು ಲಕ್ಷಣಗಳಿಂದ ಕೂಡಿದ ಮಹಾಪುರಾಣಗಳ, ಮತ್ತು ಐದುಲಕ್ಷಣಗಳುಳ್ಳ ಅಲ್ಪಪುರಾಣಗಳ ಸಂಖ್ಯೆಯನ್ನು, ಪುರಾಣವಿದರು ಹದಿನೆಂಟೆಂದು ನಿರ್ಣಯಿಸಿರುವರು. ಇವುಗಳಿಗೆ ಕ್ರಮವಾಗಿ, ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಲೈಂಗ, ಗಾರುಡ, ನಾರದೀಯ, ಭಾಗವತ, ಆಗ್ನೇಯ, ಸ್ಕಾಂದ, ಭವಿಷ್ಯ, ಬ್ರಹ್ಮಕೈವರ್ತ, ಮಾರ್ಕಂಡೇಯ, ವಾಮನ, ವಾರಾಹ, ಮಾತ್ಸ್ಯ, ಕೌರ್ಮ್ಯ, ಬ್ರಹ್ಮಾಂಡಗಳೆಂದು ಹೆಸರು. ಓ ಬ್ರಾಹ್ಮಣೋತ್ತಮರೆ ! ಹೀಗೆ ಬಾದರಾಯಣಮಹರ್ಷಿಯ ಶಿಷ್ಯಪ್ರಶಿಷ್ಯರಿಂದ ಪ್ರಚಾರಗೊಳಿಸಲ್ಪಟ್ಟ ಪುರಾಣಸಂಹಿತೆಗಳನ್ನು ನಿಮಗೆ ತಿಳಿಸಿದುದಾಯಿತು. ಇದು ಕೇಳತಕ್ಕವರಿಗೆ ಬ್ರಹ್ಮತೇಜಸ್ಸನ್ನು ವೃದ್ಧಿಗೊಳಿಸುವುದು." ಎಂದನು. ಇದು ಏಳನೆಯ ಅಧ್ಯಾಯವು.

---

ಮಾರ್ಕಂಡೇಯ ಚರಿತ್ರವು.
ಮಾರ್ಕಂಡೇಯನ ತಪಸ್ಸು. ನರನಾರಾಯಣರು
ಪ್ರತ್ಯಕ್ಷನಾದುದು.

ಶೌನಕಮುನಿಯು ತಿರುಗಿ ಪ್ರಶ್ನಮಾಡುವನು "ಓ ಸೂತಾ! ಸಾಧೂ! ನೀನು ಚಿರಕಾಲದವರೆಗೆ ಜೀವಿಸು ! ನೀನು ವಾಗ್ಮಿಗಳಲ್ಲಿ ಮೇಲೆನಿಸಿದವನು. ಸಂಸಾರಸಮುದ್ರದಲ್ಲಿ ಭ್ರಮಿಸುತ್ತಿರುವ ಚೇತನರನ್ನು ಕರೆಯೋರಿಸತಕ್ಕವನು. ಆದುದರಿಂದ ನಮಗೆ ಇನ್ನೂ ಕೆಲವು ವಿಷಯಗಳನ್ನು ತಿಳಿಸಬೇಕು. ಏನೆಂದರೆ, ಮೃಕಂಡುಪುತ್ರನಾದ ಮಾರ್ಕಂಡೇಯಮುನಿಯನ್ನು ಜನಗಳು ಚಿರಾಯುವೆಂದು ಹೇಳುವರು. ಮತ್ತು ಆತನು ಕಲ್ಪಾಂತದಲ್ಲಿಯೂ ಜೀವಿಸಿದ್ದು, ಆಗ ಜಗತ್ತೆಲ್ಲವನ್ನೂ ತನ್ನಲ್ಲಿ ಲಯಹೊಂದಿಸಿದ ಪರಮಪುರುಷನನ್ನೂ ಪ್ರತ್ಯಕ್ಷವಾಗಿ ನೋಡಿದುದಾಗಿ ಕೇಳಿಬಲ್ಲೆನು.

ಆ ಮಾರ್ಕಂಡೇಯನು ಈ ಕಲ್ಪದಲ್ಲಿಯೇ ತನ್ನ ಕುಲದಲ್ಲಿ ಹುಟ್ಟಿದವನೆಂದೂ ಕೇಳಿರುವೆನು. ಅವನು ಹುಟ್ಟಿದಮೇಲೆ ಪ್ರಳಯವೇನೂ ನಡೆದಹಾಗಿಲ್ಲ! ಹೀಗೆ ಈ ಕಲ್ಪದಲ್ಲಿಯೇ ಹುಟ್ಟಿದವನು, ಇನ್ನೂ ನಡೆಯದಿರುವ ಪ್ರಳಯವನ್ನು ನೋಡಿದನೆಂಬುದು ಹೇಗೆ? ಜಗತ್ತೆಲ್ಲವೂ ಏಕಾರ್ಣವವಾಗಿದ್ದಾಗ, ಆತನು ತಾನೊಬ್ಬನೇ ಆ ಪ್ರಳಯಜಲದಲ್ಲಿದ್ದು, ಆಗ ಸಣ್ಣಮಗುವಾಗಿ ವಟಪತ್ರದಲ್ಲಿ ಮಲಗಿದ್ದ ಪರಮಪುರುಷನನ್ನು ಕಂಡನಂತೆ? ಈ ವಿಚಾರದಲ್ಲಿ ನಮಗೆ ದೊಡ್ಡಸಂದೇಹವುಂಟಾಗಿರುವುದರಿಂದ, ಅದರ ನಿಜಸ್ಥಿತಿಯನ್ನು ಕೇಳಿ ತಿಳಿಯಬೇಕೆಂದು ನಮಗೆ ಬಹಳ ಕುತೂಹಲವುಂಟು. ಓ ಮಹಾಯೋಗೀ! ಪುರಾಣವಿದರಲ್ಲಿ ಮೇಲೆನಿಸಿಕೊಂಡ ನೀನು, ಈ ನಮ್ಮ ಸಂದೇಹವನ್ನು ನೀಗಿಸಬೇಕು" ಎಂದನು

ಅದಕ್ಕಾ ಸೂತನು "ಓ ಮಹರ್ಷೀ! ಕೇಳು! ಈಗ ನೀನು ಕೇಳುವ ಪ್ರಶ್ನವು ಲೋಕಪಾವನವಾದುದು. ಏಕೆಂದರೆ, ಕಲಿದೋಷವನ್ನು ನೀಗಿಸತಕ್ಕ ಶ್ರೀಮನ್ನಾರಾಯಣನ ಚರಿತ್ರವೇ ಇದರಲ್ಲಿ ನಿರೂಪಿಸಲ್ಪಡುವುದು. ಆ ಚರಿತ್ರವನ್ನು ತಿಳಿಸುವೆನು ಕೇಳು. "ಮಾರ್ಕಂಡೇಯನು, ತನ್ನ ತಂದೆಯಿಂದ ಬ್ರಾಹ್ಮಣವರ್ಣಕ್ಕೆ ಉಚಿತವಾದ ಸಂಸ್ಕಾರಗಳೆಲ್ಲವನ್ನೂ ಕ್ರಮವಾಗಿ ಹೊಂದಿ, ಉಪನಯನವಾದಮೇಲೆ ಶಾಸ್ತ್ರೋಕ್ತವಾಗಿ ವೇದಗಳನ್ನಭ್ಯಸಿಸಿ, ತನ್ನ ವರ್ಣಾಶ್ರಮಧರ್ಮಗಳನ್ನೂ, ವೇದಾಧ್ಯಯನವನ್ನೂ ಮಾಡುತ್ತಿದ್ದನು. ನೈಷ್ಠಿಕಬ್ರಹ್ಮಚಾರಿಯೆನಿಸಿಕೊಂಡು, ಶಾಂತನಾಗಿ, ಆಶ್ರಮೋಚಿತವಾದ ಜಟಾವಲ್ಕಲಗಳನ್ನೂ, ದಂಡಕಮಂಡಲುಗಳನ್ನೂ, ಮೌಂಜೀಯಜ್ಞೋಪವೀತಗಳನ್ನೂ, ಕೃಷ್ಣಾಜಿನವನ್ನೂ, ಅಕ್ಷಮಣಿಯ ಜಪಸರವನ್ನೂ, ದರ್ಭೆಯ ಪವಿತ್ರಗಳನ್ನೂ ಧರಿಸಿ, ತ್ರಿಸಂಧ್ಯಾಕಾಲಗಳಲ್ಲಿಯೂ ಸೂರ್ಯನಲ್ಲಿಯೂ, ಗುರುಗಳಲ್ಲಿಯೂ ಬ್ರಾಹ್ಮಣರಲ್ಲಿಯೂ, ತನ್ನ ಹೃದಯದಲ್ಲಿಯೂ 'ಆ ಶ್ರೀಹರಿಯನ್ನು ಆರಾಧಿಸುತಿದ್ದನು. ಹಗಲುರಾತ್ರಿಗಳೆರಡರಲ್ಲಿಯೂ,ಅನ್ನವನ್ನು ಭಿಕ್ಷೆಮಾಡಿತಂದು,ಅದನ್ನು ಗುರುವಿಗೆ ಸಮರ್ಪಿಸಿ, ಅವನು ಭುಜಿಸಿ ಮಿಕ್ಕುದನ್ನು, ಅವನು ಅನುಜ್ಞೆಯನ್ನು ಕೊಟ್ಟರೆ ತಾನು ಭುಜಿಸುವನು. ಅವನು ಅನುಮತಿಸದಿದ್ದರೆ ಉಪವಾಸದಲ್ಲಿಯೇ ಇದ್ದು ಬಿಡುವನು.

ಹೀಗೆ ಆ ಮಾರ್ಕಂಡೇಯನು, ತಪಸ್ಸು, ಅಧ್ಯಯನ, ಮುಂತಾದ ಬ್ರಹ್ಮಚರ್ಯ ವ್ರತದಲ್ಲಿ ನಿರತನಾಗಿ, ಲಕ್ಷೋಪಲಕ್ಷವರುಷಗಳವರೆಗೆ ಶ್ರೀವಿಷ್ಣುವನ್ನಾರಾಧಿಸುತ್ತಿದ್ದು, ಎಂತವರಿಗೂ, ದುರ್ಜಯವಾದ ಮೃತ್ಯುವನ್ನು ಜಯಿಸಿದನು. ಮತ್ತು ಯೋಗಬಲದಿಂದ ರಾಗಾದಿದೋಷಗಳನ್ನು ನೀಗಿ, ಆ ಭಗವಂತನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿದ್ದನು. ಈ ವಿಧವಾದ ಯೋಗಾಭ್ಯಾಸದಲ್ಲಿಯೇ ಅವನಿಗೆ ಆರು ಮನ್ವಂತರಗಳ ಕಾಲವು ಕಳೆಯಿತು. ಏಳನೆಯದಾದ ಈ ವೈವಸ್ವತಮನ್ವಂತರದಲ್ಲಿ, ಇವನ ದೃಢತಪಸ್ಸನ್ನು ನೋಡಿ ಇಂದ್ರನಿಗೆ ಮನಸ್ಸಿನಲ್ಲಿ ಭಯವು ಹುಟ್ಟಿತು. ತನ್ನ ಪದವಿಯನ್ನು ಕಿತ್ತುಕೊಳ್ಳುವುದಕ್ಕಾಗಿಯೇ ಆ ಯೋಗಿಯು, ಅಂತಹ ದೃಢತಪಸ್ಸನ್ನು ಸಾಧಿಸುತ್ತಿರಬೇಕೆಂದು ಶಂಕಿಸಿ, ಇಂದ್ರನು ಆತನ ತಪೋವಿಘ್ನಕ್ಕಾಗಿ ಗಂಧರ್ವರನ್ನೂ, ಅಪ್ಸರಸ್ತ್ರೀಯರನ್ನೂ, ಮನ್ಮಥನನ್ನೂ, ವಸಂತನನ್ನೂ, ಮಲಯಾನಿಲವನ್ನೂ, ಕಾಮ ಮದ ಲೋಭಗಳನ್ನೂ, ಆ ಋಷಿಯಿದ್ದಲ್ಲಿಗೆ ಕಳುಹಿಸಿದನು. ಇವರೆಲ್ಲರೂ, ಹಿಮವತ್ಪರ್ವತದ ಉತ್ತರಪಾರ್ಶ್ವದಲ್ಲಿರುವ ಈ ಮಾರ್ಕಂಡೇಯಾಶ್ರಮಕ್ಕೆ ಬಂದು ಸೇರಿದರು ಓ! ಮಹರ್ಷಿಗಳೇ! ಅಲ್ಲಿ ಪುಷ್ಪಭದ್ರೆಯೆಂಬ ಒಂದಾನೊಂದು ನದಿಯು ಪ್ರವಹಿಸುತ್ತಿರುವುದು. ಆ ನದೀತೀರದಲ್ಲಿ ಚಿತ್ರೆಯೆಂಬ ಒಂದಾನೊಂದು ದೊಡ್ಡ ಶಿಲೆಯಿರುವುದು. ಆ ಸ್ಥಳದಲ್ಲಿಯೇ ಮಾರ್ಕಂಡೇಯನು ತಪೋನಿರತನಾಗಿದ್ದನು. ಈ ಆಶ್ರಮಪ್ರದೇಶವು ಬಹಳ ಪವಿತ್ರವಾದುದು. ಪುಣ್ಯಕರಗಳಾದ ಗಿಡಬಳ್ಳಿಗಳಿಂದ ರಮ್ಯವಾಗಿರುವುದು. ಅನೇಕಬ್ರಾಹ್ಮಣೋತ್ತಮರಿಂದಲೂ, ಪುಣ್ಯಕರವಾಗಿಯೂ, ಶುದ್ಧವಾಗಿಯೂ ಇರುವ ಕೊಳಗಳಿಂದಲೂ ಶೋಭಿಸುತ್ತಿರುವುದು. ಮಧುಪಾನದಿಂದ ಮದಿಸಿದ ಭ್ರಮರಗಳೂ, ಕೋಗಿಲೆಗಳೂ, ಕಿವಿಗಿಂಪಾಗಿ ಕೂಗುತ್ತಿರುವುವು. ನವಿಲುಗಳು ನರ್ತಿಸುತ್ತಿರುವುವು. ಪಕ್ಷಿಗಳು ಅತಿಮನೋಹರವಾದ ಕಿಲಕಿಲಧ್ವನಿಯಿಂದ ಕೂಗುತ್ತಿರುವುವು. ಹೀಗೆ ಸಹಜವಾಗಿಯೇ ಮನಸ್ಸನ್ನು ಕಲಗಿಸತಕ್ಕ ಆ ಆಶ್ರಮದಲ್ಲಿ, ಮೊದಲು ಮಲಯಾನಿಲವು ಪ್ರವೇಶಿಸಿ, ಹಿಮಕಣಗಳಿಂದಲೂ, ಪುಷ್ಪಗಂಧದಿಂದಲೂ, ಮಿಶ್ರವಾಗಿ ಕಾಮೋದ್ದೀಪನವನ್ನುಂಟುಮಾಡುವಂತೆ ಬೀಸತೊಡಗಿತು.

ಆಮೇಲೆ ವಸಂತನು, ಚಂದ್ರೋದಯದಿಂದ ಕೂಡಿದ ಸಾಯಂಕಾಲದಲ್ಲಿ, ಅನೇಕಶಾಖೋಪಶಾಖೆಗಳಿಂದ ಕೂಡಿದ ಒಂದೊಂದುಗಿಡುಬಳ್ಳಿಗಳಲ್ಲಿಯೂ, ಅಂದವಾದ ಚಿಗುರಿನ ಗೊಂಚಲುಗಳನ್ನು ಹೊರಡಿಸಿ, ತನ್ನ ಶಕ್ತಿಯನ್ನು ತೋರಿಸಲಾರಂಭಿಸಿದನು. ಆಗಲೇ ಮನ್ಮಥನೂಕೂಡ, ಪುಷ್ಪಮಯವಾದ ಧನುರ್ಬಾಣಗಳನ್ನು ಕೈಯಲ್ಲಿ ಹಿಡಿದು, ತನ್ನ ಪರಿವಾರಗಳಾದ ಅಪ್ಸರಸ್ತ್ರೀಯರ ಮತ್ತು ಗಂಧರ್ವರ ಗಾನವಾದ್ಯಗಳೊಡನೆ, ಹೊರಟುಬಂದು ಆ ಋಷಿಯಮುಂದೆ ಗೋಚರಿಸಿದನು. ಈ ಕಾಲಕ್ಕೆ ಸರಿಯಾಗಿ ಮಾರ್ಕಂಡೇಯನು ತನ್ನ ಹೋಮಕಾರ್ಯವನ್ನು ಮುಗಿಸಿಕೊಂಡು, ಶರೀರವತ್ತಾದ ಅಗ್ನಿಯಂತೆ ದುಸ್ಸಹವಾದ ತೇಜಸ್ಸಿನಿಂದ ಜ್ವಲಿಸುತ್ತ, ಕಣ್ಣುಮುಚ್ಚಿಕೊಂಡು ಧ್ಯಾನದಲ್ಲಿ ಕುಳಿತಿದ್ದನು ಇಂದ್ರನ ಪರಿವಾರದವರೆಲ್ಲರೂ ಅವನನ್ನು ಆಶ್ಚರ್ಯದಿಂದ ನೋಡಿದರು. ಆಮೇಲೆ ಅವನಮುಂದೆ ಅಪ್ಸರಸಿಯರು ನರ್ತನವನ್ನಾರಂಭಿಸಿದರು. ಗಾಯಕರು ಗಾನಮಾಡುತಿದ್ದರು. ವಾದ್ಯಗಾರರು ಮೃದಂಗ, ವೀಣೆ, ಪಣವ, ಮೊದಲಾದ ವಾದ್ಯಗಳನ್ನು ನುಡಿಸಿದರು. ಇದೇಸಮಯದಲ್ಲಿ ಮನ್ಮಥನು ಐದಲಗಿನ ತನ್ನ ಬಾಣವನ್ನು ಪುಷ್ಪಧನುಸ್ಸಿನಲ್ಲಿ ಸಂಧಾನಮಾಡಿ, ಆ ಋಷಿಯಕಡೆಗೆ ಗುರಿಯಿಟ್ಟು ಸಿದ್ಧವಾಗಿ ನಿಂತನು. ವಸಂತನೂ, ಇಂದ್ರನಿಂದ ಪ್ರೇರಿತಗಳಾದ ಕಾಮ, ಮದ, ಲೋಭಗಳೂ, ಆ ಋಷಿಯ ಮನಸ್ಸನ್ನು ನಾನಾವಿಧವಾಗಿ ಕಲಗಿಸುವುದಕ್ಕೆ ಪ್ರಯತ್ನಿಸಿದರು. ಪುಂಜಿಕಸ್ಥಲಿಯೆಂಬ ಅಪ್ಸರಸಿಯು ಆ ಋಷಿಯಮುಂದೆ ನಿಂತು, ಸ್ತನಗಳನ್ನು ಕುಲುಕಿಸುತ್ತ, ಚಂಡಾಡತೊಡಗಿದಳು. ಈ ಚಂಡಾಟದಲ್ಲಿ ಸ್ತನಭಾರದಿಂದ ಅವಳ ಸಣ್ಣನಡುವು ಬಳುಕುತಿತ್ತು. ಅವಳ ತುರುಬಿನಿಂದ ಹೂಗಳು ಉದುರುತಿದ್ದುವು. ಆ ವೇಶ್ಯೆಯು ತನ್ನ ಚಂಡು ಪುಟಹಾರಿದಕಡೆಗೆ ಚಾತುರ್ಯದಿಂದ ದೃಷ್ಟಿಯನ್ನು ತಿರುಗಿಸುತ್ತ ಸುತ್ತಿಸುತ್ತಿ ಆಚಂಡನ್ನು ಹೊಡೆಯುತ್ತಿರುವಾಗ, ಮಲಯಮಾರುತವು ಅವಳು ಉಟ್ಟಿದ್ದ ದುಕೂಲವನ್ನು ಹಾರಿಸಿಬಿಟ್ಟನು. ಇದೇಸಮಯದಲ್ಲಿ ಮನ್ಮಥನು ತನ್ನ ಪುಷ್ಪಬಾಣವನ್ನೂ ಪ್ರಯೋಗಿಸಿದನು. ಅದರೇನು ? ದರಿದ್ರನ ಪ್ರಯತ್ನದಂತೆ, ಆ ಋಷಿಯಲ್ಲಿ ಮನ್ಮಥನ ಪ್ರಯ

ತ್ರಗಳೆಲ್ಲವೂ ವಿಫಲವಾದುವು. ಕೊನೆಗೆ ಮನ್ಮಥಾದಿಗಳೆಲ್ಲರೂ ವಿಫಲ ಪ್ರಯತ್ನರಾಗಿ, ಆ ಋಷಿಯ ತೇಜಸ್ಸಿನಮುಂದೆ ನಿಲ್ಲಲಾರದೆ, ಹಾವನ್ನು ಕೆಣಕಿದ ಬಾಲಕರಂತೆ ಭಯಪಟ್ಟು ಓಡಿಹೋದರು. ಓ! ಬ್ರಾಹ್ಮಣೋ ತ್ತಮರೆ! ಆ ಮಾರ್ಕಂಡೇಯನ ದೃಢಮನಸ್ಸನ್ನು ನೋಡಿದಿರಾ. ಇಂದ್ರನ ಅನುಚರರು ಎಷ್ಟೆಷ್ಟು ವಿಧದಿಂದ ಭಂಗಪಡಿಸಿದರೂ, ಆ ಮಹ ರ್ಷಿಯು ಮನಸ್ಸು ಕಲಗದೆ, ದೃಢಭಾವದಿಂದಿದ್ದನು. ಮಹಾತ್ಮರಲ್ಲಿ ಇದೊಂದು ವಿಶೇಷವಲ್ಲ! ಅತ್ತಲಾಗಿ ದೇವೇಂದ್ರನೂಕೂಡ, ತನ್ನಿಂದ ಕಳುಹಿ ಸಲ್ಪಟ್ಟ ಮನ್ಮಥ ವಸಂತಾದಿಗಳೆಲ್ಲರೂ, ಆ ಮಾರ್ಕಂಡೇಯನ ತೇಜಸ್ಸಿ ನಿಂದ ತಿರಸ್ಕೃತರಾಗಿ ಬಂದುದನ್ನು ಕೇಳಿ, ಆ ಮಹರ್ಷಿಯ ಪ್ರಭಾವಕ್ಕಾಗಿ ಬಹಳ ಆಶ್ಚರ್ಯಪಟ್ಟನು. ಆಮೇಲೆ ಇತ್ತಲಾಗಿ ಮಾರ್ಕಂಡೇಯನು, ಸಮಾಧಿನಿಷ್ಠನಾಗಿ ಕುಳಿತಿರ್‍ವಾಗ, ಅವನನ್ನು ಅನುಗ್ರಹಿಸುವುದಕ್ಕಾಗಿ ನರನಾರಾಯಣರಿಬ್ಬರೂ ಅಲ್ಲಿಗೆ ಬಂದರು. ಇವರಲ್ಲಿ ಒಬ್ಬನ (ನಾರಾಯ ಣನ) ಮೈಬಣ್ಣವು ಕಪ್ಪು! ಮತ್ತೊಬ್ಬನ (ನರನ) ದೇಹಕಾಂತಿಯು ಬಿಳುಪು! ಇಬ್ಬರೂ ಕಮಲದಂತೆ ಕಣ್ಣುಗಳುಳ್ಳವರು! ಇಬ್ಬರೂ ನಾರುಮಡಿಯ ನ್ನುಟ್ಟು, ಕೃಷ್ಣಾಜಿನವನ್ನು ಹೊದೆದಿರುವರು. ಇಬ್ಬರ ಬೆರಲುಗಳಲ್ಲಿಯೂ ಪವಿತ್ರಗಳು! ಕಂಠದಲ್ಲಿ ಯಜ್ಞೋಪವೀತಗಳು! ಇಬ್ಬರ ಕೈಯಲ್ಲಿಯೂ ತ್ರಿದಂಡಕಮಂಡಲಗಳು! ಪದ್ಮಾಕ್ಷಮಾಲಿಕೆ! ಇಬ್ಬರ ಕೈಯಲ್ಲಿಯೂ, ಮುಖಕ್ಕೆ ಮುತ್ತುವ ಕ್ರಿಮಿಗಳನ್ನೋಡಿಸುವುದಕ್ಕಾಗಿ ಕೈ ವಸ್ತ್ರಗಳು. ಇಬ್ಬರ ಕೈಯಲ್ಲಿಯೂ ದರ್ಭೆಯ ಮುಷ್ಟಿಗಳು. ಇಬ್ಬರೂ ತಪಸ್ಸೇ ಮೂರ್ತಿಭವಿಸಿದಂತೆ ತೋರುತ್ತಿರುವರು. ಇಬ್ಬರಿಗೂ ಮಿಂಚಿನಂತೆ ಹೊಳೆ ಯುವ ದೇಹಕಾಂತಿ! ದೇವತೆಗಳು ಗೌರವಿಸತಕ್ಕ ಗಂಭೀರವಾದ, ಮತ್ತು ಮಹೋನ್ನತವಾದ ಆಕೃತಿ! ಹೀಗೆ ಭಗವಂತನ ಅಂಶಭೂತರಾದ ನರನಾರಾ ಯಣರೆಂಬ ಋಷಿಗಳಿಬ್ಬರೂ ಬಂದುದನ್ನು ಕಂಡೊಡನೆ, ಮಾರ್ಕಂಡೇಯನು ಥಟ್ಟನೆ ಇದಿರೆದ್ದು, ಅವರಿಗೆ ಸಾಷ್ಟಾಂಗವಾಗಿ ಪ್ರಣಾಮಮಾಡಿದನು. ಆಗ ಮಾರ್ಕಂಡೇಯನಿಗೆ ಅವರ ದರ್ಶನದಿಂದುಂಟಾದ ಆನಂದದಿಂದ ದೇಹವೂ, ಇಂದ್ರಿಯಗಳೂ, ಮನಸ್ಸೂ ಪರವಶವಾದುವು. ಮೈಯಲ್ಲಿ

ರೋಮಾಂಚವು ಹುಟ್ಟಿತು. ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿಕೊಂಡುದರಿಂದ, ಅವರನ್ನು ಚೆನ್ನಾಗಿ ನೋಡುವುದಕ್ಕೂ ಅಶಕ್ಯವಾಯಿತು. ಆಮೇಲೆ ಆ ಮಹರ್ಷಿಯು, ಮೆಲ್ಲಗೆ ಮೇಲೆದ್ದು, ನಮ್ರತೆಯಿಂದ ಕೈಜೋಡಿಸಿನಿಂತು, ಅವರನ್ನು ತನ್ನ ಕೈಗಳಿಂದ ಅಪ್ಪಿಕೊಳ್ಳುವಂತೆ ಆತುರದಿಂದ ಮುಂದೆ ಬಂದು,ಗದ್ಗದಸ್ವರದೊಡನೆ "ನಮೋ ನಮಃ" ಎಂಬೀ ನಾಲ್ಕಕ್ಷರಗಳನ್ನುಮಾತ್ರ ಹೇಳಿದನು. ಆಮೇಲೆ ಅವರಿಗೆ ಆಸನವನ್ನು ಕೊಟ್ಟು, ಪಾದಗಳನ್ನು ತೊಳೆದು, ಪುಷ್ಪ, ಧೂಪ, ಗಂಧಾನುಲೇಪನಗಳಿಂದ ಪೂಜಿಸಿದನು. ಅವರಿಬ್ಬರೂ, ಆಸನದಲ್ಲಿ ಕುಳಿತು ಪ್ರಸನ್ನದೃಷ್ಟಿಯಿಂದ ತನ್ನನ್ನು ನೋಡುತ್ತಿರುವಾಗ, ತಿರುಗಿ ಆ ಮಾರ್ಕಂಡೇಯನು ಅವರ ಪಾದಗಳಿಗೆ ನಮಸ್ಕರಿಸಿ ಹೀಗೆಂದು ಹೇಳುವನು. "ಹೇ! ವಿಭೂ! ನಾರಾಯಣಾ! ನಿನ್ನ ಮಹಿಮೆಯನ್ನು ಹೇಗೆಂದು ವರ್ಣಿಸಲಿ! ಹೇಗೆಂದು ಸ್ತುತಿಸಲಿ! ನನಗಾಗಲಿ, ಇತರ ಪ್ರಾಣಿಗಳಿಗಾಗಲಿ, ಕೊನೆಗೆ ಬ್ರಹ್ಮರುದ್ರರಿಗಾಗಲಿ, ನಡೆಯತಕ್ಕ ಪ್ರಾಣವ್ಯಾಪಾರವೆಲ್ಲವೂ ನಿನ್ನ ಪ್ರೇರಣೆಯಿಂದಲೇಹೊರತು ಬೇರೆಯಲ್ಲ! ನಿನ್ನಿಂದ ಪ್ರೇರಿತವಾದ ಆ ಪ್ರಾಣಗಳನ್ನನುಸರಿಸಿಯೇ ಸಮಸ್ತ ಪ್ರಾಣಿಗಳ ಮನಸ್ಸೂ, ವಾಕ್ಕೂ, ಇಂದ್ರಿಯಗಳೂ, ತಮ್ಮ ತಮ್ಮ ಕಾರ್ಯಗಳನ್ನು ನಡೆಸುವುವು. "ಹಾಗೆ ನಿನ್ನ ಪ್ರೇರಣೆಯಿಂದಲೇ ಸಮಸ್ತ ಜಂತುಗಳೂ, ಆಯಾಕಾರ್ಯಗಳನ್ನು ನಡೆಸುವುವಾದರೆ, ನಿನ್ನಂತೆಯೇ ಎಲ್ಲರೂ ಏಕೆ ನನ್ನನ್ನು ಉಪಾಸಿಸಬಾರದು" ಎಂದರೆ, ನಿನ್ನನ್ನು ಒಂದಾವರ್ತಿಯಾದರೂ ಭಜಿಸಿ, ಸ್ವಲ್ಪವಾದರೂ !ಅನುಕೂಲ್ಯವುಳ್ಳವನಿಗೆಮಾತ್ರವೇ ನೀನು ಆ ವಿಧವಾದ ಭಾವವನ್ನು ಸ್ಥಿರಪಡಿಸುವೆ! ಓ ಭಗವಂತಾ! ಈಗ ನೀನು ಕೈಕೊಂಡಿರತಕ್ಕ ಈ ದಿವ್ಯಮೂರ್ತಿಗಳೆರಡೂ, ಮೃತ್ಯುವನ್ನು ಜಯಿಸಿ, ಸಂಸಾರತಾಪವನ್ನಡಗಿಸಿ, ಮೂರುಲೋಕಗಳಿಗೂ ಕ್ಷೇಮವನ್ನುಂಟುಮಾಡುವುದಕ್ಕಾಗಿಯೇಹೊರತು ಬೇರೆಯಲ್ಲ. ಹೀಗೆಯೇ ನೀನು ಕೈಕೊಂಡಿರತಕ್ಕ ಬೇರೆ ಅವತಾರಗಳೆಲ್ಲವೂ ಲೋಕರಕ್ಷಣಕ್ಕಾಗಿಯೇ! ಈ ರಕ್ಷಣವ್ಯಾಪಾರವು ಹೇಗೋ ಹಾಗೆಯೇ ಸೃಷ್ಟಿಸಂಹಾರಕಾರ್ಯಗಳೂ ನಿನ್ನ ವ್ಯಾಪಾರಗಳೇ! ಜೇಡರ ಹುಳುವು ತನ್ನ ಶರೀರದಿಂದ ನೂಲೆಳೆಗ

ಳನ್ನು ಹೊರಡಿಸಿ, ಅವುಗಳನ್ನು ತನ್ನಲ್ಲಿಯೇ ಅಡಗಿಸಿಟ್ಟುಕೊಳ್ಳುವಂತೆ ನೀನೇ ಈ ಜಗತ್ತನ್ನು ಸೃಷ್ಟಿಸಿ, ನೀನೇ ಅದನ್ನು ಉಪಸಂಹರಿಸಿಕೊಳ್ಳುವೆ. ಹೀಗೆ ಎಲ್ಲಾ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಿರ್ವಹಿಸತಕ್ಕವನಾಗಿ, ಸರ್ವಾಧಾರನಾಗಿ, ಸರ್ವನಿಯಾಮಕನಾದ ನಿನ್ನ ಪಾದಮೂಲವನ್ನಾಶ್ರಯಿಸುವುದರಿಂದ, ಗುಣ, ಕರ್ಮ, ಕಾಲಸಂಬಂಧವಾದ ದೋಷಗಳಾವುವೂ ಅಂಟಲಾರವು. ವೇದವಿದರಾದ ಮಹರ್ಷಿಗಳೆಲ್ಲರೂ ಯಾವುದನ್ನು ಅನವರತವೂ ಧ್ಯಾನಿಸುತ್ತಲೂ, ಸ್ತುತಿಸುತ್ತಲೂ, ಪೂಜಿಸುತ್ತಲೂ ಇರುವರೋ, ಆ ನಿನ್ನ ಪಾದವನ್ನೇ ನಾನು ಮರೆಹೊಕ್ಕಿರುವೆನು ಓ ನಿರತಿಶಯ ಪುರುಷಾರ್ಥಸ್ವರೂಪನಾದ ಸರ್ವೇಶ್ವರಾ! ನಿನ್ನ ಪಾದಾಶ್ರಯುವಿದ್ದವರಿಗೆ ಯಾವವಿಧವಾದ ಭಯವೂ ಇರುವುದಿಲ್ಲ. ನಿನ್ನ ಪಾದಾಶ್ರಯಕ್ಕಿಂತಲೂ, ಜನರಿಗೆ ಉತ್ತಮವಾದ ಬೇರೆ ಶ್ರೇಯಸ್ಸಾಧನವೂ ಇಲ್ಲ! ಸಾಕ್ಷಾಚ್ಚತುರ್ಮುಖಬ್ರಹ್ಮನ ಪದವಿಯೂಕೂಡ ಎರಡು ಪರಾರ್ಧಕಾಲದವರೆಗೆ ಮಾತ್ರವೇ ನಿಲ್ಲತಕ್ಕುದೇಹೊರತು ಸ್ಥಿರವಲ್ಲ ಆದುದರಿಂದ ಕಾಲರೂಪನಾದ ನಿನಗೆ ಆ ಬ್ರಹ್ಮನೂ ಭಯಪಡುತ್ತಿರುವನು. ಹೀಗಿರುವಾಗ ಅವನಿಂದ ಸೃಷ್ಟಿಸಲ್ಪಟ್ಟ ಇತರಭೂತಗಳು ಕಾಲಕ್ಕಾಗಿ ಭಯಪಡುವುದರಲ್ಲಿ ಆಶ್ಚರ್ಯವೇನಿದೆ? ಹೀಗೆ ಸತ್ಯಸಂಕಲ್ಪನಾಗಿಯೂ, ಪರಮಾತ್ಮನಾಗಿಯೂ, ಗುರುವಾಗಿಯೂ, ಪರಾತ್ಪರನಾಗಿಯೂ ಇರುವ ನಿನ್ನ ಪಾದಮೂಲವೇ ಭಕ್ತರಿಗೆ ಆತ್ಮಹಿತವನ್ನುಂಟುಮಾಡತಕ್ಕುದಾದುದರಿಂದ, ನಾನು, ಅನೇಕ ದೋಷಗಳಿಗೆ ನೆಲೆಯಾಗಿಯೂ, ನಿಷ್ಫಲವಾಗಿಯೂ ಇರುವ ಈ ದೇಹಾದಿಗಳಲ್ಲಿ ಮಮತೆಯನ್ನು ತೊರೆದು, ನಿನ್ನ ಪಾದವನ್ನೇ ಭಜಿಸುವೆನು. ನಿನ್ನ ಪಾದಸ್ಮರಣಮಾತ್ರವೇ ಸಮಸ್ತಪುರುಷಾರ್ಥಗಳನ್ನೂ ಕೈಗೂಡಿಸುವುದು. ಓ ಸರ್ವೇಶ್ವರಾ! ನೀನೇ ಲೀಲಾರ್ಥವಾಗಿ ರಜಸ್ಸತ್ವತಮೋಗುಣಗಳನ್ನು ಮುಂದಿಟ್ಟುಕೊಂಡು, ಬ್ರಹ್ಮರುದ್ರಾದಿದೇಹಗಳನ್ನು ಪರಿಗ್ರಹಿಸಿ, ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸತಕ್ಕವನಾಗಿದ್ದರೂ, ಅವುಗಳಲ್ಲಿ ಸತ್ವಮಯವಾದ ನಿನ್ನ ಮೂರ್ತಿಯೇ ಉಪಾಸನಾಯೋಗ್ಯವಾದುದೇ ಹೊರತು, ಬ್ರಹ್ಮರುದ್ರಾದಿರೂಪಗಳಲ್ಲ! ಏಕೆಂದರೆ, ಆ ಸತ್ವಮೂರ್ತಿಯೇ

ಭಜಿಸತಕ್ಕವರಿಗೆ, ಶೋಕ, ಮೋಹ, ಭಯಾದಿಗಳನ್ನು ನೀಗಿಸಿ, ಮನಶ್ಶಾಂತಿ ಯನ್ನುಂಟುಮಾಡತಕ್ಕುದು. ಆದುದರಿಂದ ಶ್ರೇಯಸ್ಸನ್ನು ಕೋ ರತಕ್ಕ ವಿವೇಕಿಗಳು, ಸತ್ವಮಯವಾದ ಆ ನಿನ್ನ ವೈಷ್ಣವಸ್ವರೂಪವನ್ನೇ ತಮಗೆ ಪ್ರಿಯವೆಂದು ಭಾವಿಸಿ, ಅದನ್ನೇ ಭಜಿಸುವರು. ಪಾಂಚರಾತ್ರಸಿ ದ್ಧಾಂತಗಳನ್ನು ಬಲ್ಲವರೂ ಆ ಶುದ್ಧಸತ್ವಮೂರ್ತಿಯೇ ಉಪಾಸ್ಯವೆಂದು ನಿರ್ಣಯಿಸಿರುವರು.ಆ ಮೂರ್ತಿಯೇ ಸಂಸಾರಭಯವನ್ನು ನೀಗಿಸತಕ್ಕುದು. ದುಃಖಭಯಾದಿಗಳಿಂದ ಮಿಶ್ರವಲ್ಲದ ನಿರತಿಶಯಾನಂದರೂಪವಾದ ಆತ್ಮ ಸುಖವೂ ಅದರಿಂದಲೇ ಉಂಟಾಗುವುದು. ಇತರ! ದೇವತೆಗಳನ್ನು ಭಜಿಸುವು ದರಿಂದುಂಟಾಗುವ ಸುಖವಾದರೋ, ಅಂತದಲ್ಲ, ಅವು ಭಯಶೋಕಗಳಿಂದ ಮಿಶ್ರವಾಗಿಯೇ ಇರುವುದು. ಆದುದರಿಂದ ಓ ದೇವಾ ! ಚತುರ್ವಿಧಪುರು ಷಾರ್ಥಪ್ರದನಾಗಿಯೂ, ಸರ್ವಾಂತರಾತ್ಮನಾಗಿಯೂ, ವಿಶ್ವಾತ್ಮಕನಾಗಿ ಯೂ, ವಿಶ್ವಗುರುವಾಗಿಯೂ, ಪರದೇವತೆಯಾಗಿಯೂ, ನರನಾರಾಯಣರೆಂ ಬ ಋಷಿರೂಪದಿಂದ ಅವತರಿಸಿದವನಾಗಿಯೂ, ಆಶ್ರಿತರ ದೋಷವನ್ನು ನೀಗಿಸತಕ್ಕವನಾಗಿಯೂ, ಸಮಸ್ತವಾಕ್ಯಗಳಿಗೂ ನಿಯಾಮಕನಾಗಿಯೂ ವೇದಾಚಾರ್ಯನಾಗಿಯೂ ಇರುವ ನಿನಗೆ ನಮಸ್ಕಾರವು. ಓ ದೇವಾ ! ನಿನ್ನ ಮಾಯೆಯಿಂದಲೇ ಮೋಹಿತರಾಗಿ, ಶಬ್ದಾದಿವಿಷಯಗಳಲ್ಲಿ ನಿರತರಾದ ದೇಹಾತ್ಮಾಭಿಮಾನಿಗಳು, ತಮ್ಮ ಪ್ರಾಣೇಂದ್ರಿಯಹೃದಯಗಳಲ್ಲಿಯೇ ನೀನು ನೆಲೆಗೊಂಡಿದ್ದರೂ ನಿನ್ನನ್ನು ತಿಳಿದುಕೊಳ್ಳಲಾರರು. ಲೋಕಗುರು ವಾದ ನೀನು, ಮೊಟ್ಟಮೊದಲು ಉಪದೇಶಿಸಿದ ವೇದಗಳಲ್ಲಿ ವಿಶ್ವಾಸವುಳ್ಳ ವರೇ, ಆ ವೇದಾಂತವಿಹಿತವಾದ ಉಪಾಸನಾಬಲದಿಂದ ಮನಸ್ಸನ್ನು ಶು ದ್ಧಪಡಿಸಿಕೊಂಡು,ಶುದ್ಧವಾದ ಆ ಮನಸ್ಸಿನಿಂದ ನಿನ್ನನ್ನು ಸಾಕ್ಷಾತ್ಕರಿಸಬ ಲ್ಲರು. ನಿನ್ನನ್ನು ಸಾಕ್ಷಾತ್ಕರಿಸುವುದಕ್ಕೆ ಉಪಾಯಭೂತವಾದುದೂ ಆ ವೇ ದವೇ!ಪರಮಾತ್ಮನಾದ ನಿನ್ನ ರಹಸ್ಯವನ್ನು ಪ್ರಕಾಶಗೊಳಿಸತಕ್ಕುದೂ ಆ ವೇದವೇ! ಮತ್ತು ಹಿರಣ್ಯಗರ್ಭ ಕಪಿಲಾದಿಗಳು, ಯೋಗಸಾಂಖ್ಯ ತಂತ್ರಗ ಳಿಂದ ನಿನ್ನ ಸ್ವರೂಪವನ್ನು ವಿಮರ್ಶಿಸಿ ತಿಳಿಯುವುದಕ್ಕಾಗಿ, ಎಷ್ಟೋ ವಿಧ ದಿಂದ ಪ್ರಯತ್ನಿಸಿದರೂ,ಅದರ ನಿಷ್ಕರ್ಷವನ್ನು ತಿಳಿಯದೆ ಕಳವಳಿಸುವರು.

ಹೀಗೆ ಅಪ್ರಮೇಯಸ್ವರೂಪಸ್ವಭಾವವುಳ್ಳವನಾಗಿ, ಎಂತಹ ವಾದಗಳಿಂದ ಲೂ ನಿರ್ಣಯಿಸಲಾರದವನಾಗಿ, ಅಪರಿಚ್ಛೇದ್ಯಜ್ಞಾನಸ್ವರೂಪನಾದ ಮಹಾಪುರುಷನಿಗೆ ನಮಸ್ಕಾರವು"ಎಂದನು. ಇದು ಎಂಟನೆಯ ಅಧ್ಯಾಯವು.

---

## ಮಾರ್ಕಂಡೇಯನಿಗೆ ಶ್ರೀಹರಿಯು ತನ್ನ ಮಾಯಾ ಪ್ರಭಾವವನ್ನು ತೋರಿಸಿದುದು.

ಮಾರ್ಕಂಡೇಯನು ಹೀಗೆ ಸ್ತುತಿಸಲು, ನರಸಖನಾದ ನಾರಾಯಣನು, ಅವನನ್ನು ಪ್ರಸನ್ನದೃಷ್ಟಿಯಿಂದ ನೋಡಿ "ಓ ಋಷಿತಿಲಕಾ! ಎಡೆಬಿಡದ ಚಿತ್ತಸಮಾಧಿಯಿಂದಲೂ, ನನ್ನಲ್ಲಿ ಭಕ್ತಿಯಿಂದಲೂ, ತಪಸ್ಸು, ವೇದಾಧ್ಯಯನ, ಇಂದ್ರಿಯನಿಗ್ರಹ, ಮೊದಲಾದ ನಿಯಮಗಳಿಂದಲೂ ನೀನು ಸಿದ್ಧನೆನಿಸಿದೆ! ಬ್ರಹ್ಮರ್ಷಿಗಳಲ್ಲಿ ನೀನೇ ಮೇಲೆನಿಸಿಕೊಂಡಿರುವೆ! ನಿನ್ನ ನೈಷ್ಠಿಕಬ್ರಹ್ಮಚರ್ಯೆಗೆ ನಾವು ಬಹಳ ಸಂತುಷ್ಟರಾದೆವು. ನಿನಗೆ ಶುಭವಾಗಲಿ! ನಾವು ನಿನಗೆ ವರಪ್ರದನಾಗಿ ಬಂದಿರುವೆನು! ಬೇಕಾದ ವರವನ್ನು ಕೇಳು" ಎಂದನು.

ಅದಕ್ಕಾ ಋಷಿಯು "ಓ ದೇವದೇವೇಶಾ! ಆಶ್ರಿತದುಃಖನಿವಾರಕಾ! ಅಚ್ಯುತಾ! ನಿನಗೆ ಜಯವಾಗಲಿ! ಈಗ ನೀನು ನನಗೆ ದರ್ಶನವನ್ನು ಕೊಟ್ಟೆಯಲ್ಲವೆ? ಇದೇ ನನಗೆ ಸಾಕು! ಇದೇ ನನಗೆ ದೊಡ್ಡವರವು. ಬ್ರಹ್ಮಾದಿಗಳೂಕೂಡ ಯೋಗಪರಿಶುದ್ಧವಾದ ಮನಸ್ಸಿನಿಂದ ನಿನ್ನ ಪಾದಾರವಿಂದಗಳ ದರ್ಶನವನ್ನು ಅಭಿಲಷಿಸುತಿದ್ದರೂ, ಪ್ರತ್ಯಕ್ಷವಾಗಿ ನೋಡಲಾರದಿರುವರು! ಅಂತಹ ನಿನ್ನ ದರ್ಶನವು ನನ್ನ ಕಣ್ಣುಗಳಿಗೆ ಪ್ರತ್ಯಕ್ಷವಾಗಿ ಲಭಿಸಿದಮೇಲೆ, ನಾನು ಇದಕ್ಕಿಂತಲೂ ಹೆಚ್ಚಾಗಿ ಬಯಸತಕ್ಕ ವರವೇನಿದೆ? ಓ ಪುಂಡರೀಕಾಕ್ಷಾ! ಪುಣ್ಯಶ್ಲೋಕಶಿಖಾಮಣೀ! ನಿನ್ನ ದರ್ಶನವೊಂದೇ ನನಗೆ ಉತ್ತಮೋತ್ತಮವಾದ ಲಾಭವೆನಿಸಿದ್ದರೂ, ನಿನ್ನ ಮಾಯಾಪ್ರಭಾವವನ್ನೂ ನಾನು ಒಮ್ಮೆ ಪ್ರತ್ಯಕ್ಷವಾಗಿ ನೋಡಬೇಕೆಂದು ಬಯಸುವೆನು. ಬ್ರಹ್ಮನಿಂದ ಹಿಡಿದು ಕೀಟಪರ್ಯಂತವಾಗಿ ಸಮಸ್ತಲೋಕವೂ ಯಾವ ಮಾಯೆಗೆ ಮರುಳಾಗಿ, ಸಚ್ಛಬ್ದವಾಚ್ಯವಾದ ತಮ್ಮ ಸ್ವರೂಪವನ್ನು

ಮರೆತು, ತಮ್ಮಲ್ಲಿ ದೇವಮನುಷ್ಯಾದಿಭೇದಗಳನ್ನಾರೋಪಿಸಿಕೊಳ್ಳುವು ದೋ,ಅಂತಹ ನಿನ್ನ ಮಾಯೆಯನ್ನು ನನಗೆ ತೋರಿಸಬೇಕು" ಎಂದನು.ಹೀಗೆ ಮಾರ್ಕಂಡೇಯಮುನಿಯು ಆ ಭಗವಂತನನ್ನು ವಿಶೇಷವಾಗಿ ಪೂಜಿಸಿ ಪ್ರಾರ್ಥಿಸಲು, ನಾರಾಯಣನು ಮಂದಹಾಸದೊಡನೆ, ಆ ಮುನಿಗೆ "ಹಾಗೆ ಯೇ ಆಗಲಿ"ಎಂದು ಅನುಗ್ರಹಿಸಿ,ಬದರಿಕಾಶ್ರಮಕ್ಕೆ ಹಿಂತಿರುಗಿ ಹೊರಟು ಹೋದನು ಇತ್ತಲಾಗಿ ಮಾರ್ಕಂಡೇಯನು, ಆ ಭಗವನ್ಮಾಯೆಯನ್ನು ನೋಡಬೇಕೆಂಬ ಕುತೂಹಲದಿಂದ, ಆ ವಿಚಾರವನ್ನೇ ಮನಸ್ಸಿನಲ್ಲಿ ಚಿಂತಿ ಸುತ್ತ, ತನ್ನ ಆಶ್ರಮದಲ್ಲಿಯೇ ಇರುತಿದ್ದನು. ಪೃಥಿವಿ, ಅಪ್ಪು, ವಾಯು, ಆಕಾಶ, ಸೂರ್ಯಚಂದ್ರರು, ಗೋವುಗಳು, ಬ್ರಾಹ್ಮಣರು, ಮುಂತಾದುವು ಗಳಲ್ಲಿಯೂ, ತನ್ನ ಹೃದಯದಲ್ಲಿಯೂ, ಆ ಹರಿಯನ್ನು ಧ್ಯಾನಿಸಿ, ಮಾನ ಸೋಪಚಾರಗಳಿಂದ ಪೂಜಿಸುತಿದ್ದನು. ಹೀಗಿರುವಾಗ ಒಮ್ಮೊಮ್ಮೆ ಆತನು ಭಕ್ತಿರಸಪ್ರವಾಹದಲ್ಲಿ ಮುಳುಗಿ ಮೈಮರೆತು, ತಾನು ನಡೆಸತಕ್ಕ ಪೂಜೆ ಯನ್ನೇ ಮರೆತುಹೋಗುತಿದ್ದನು. ಹೀಗೆಯೇ ಆತನು, ಒಮ್ಮೆ ಪುಷ್ಪಭ ದ್ರಾನದೀತೀರದಲ್ಲಿ ಧ್ಯಾನಪರವಶನಾಗಿ ಕುಳಿತಿದ್ದಾಗ, ಸಂಧ್ಯಾಸಮಯ ದಲ್ಲಿ, ಪ್ರಚಂಡವಾದ ಶಬ್ದದೊಡನೆ ದೊಡ್ಡ ಬಿರುಗಾಳಿಯೊಂದು ಹೊರ ಟಿತು. ಅದರಹಿಂದೆ ಅತಿಭಯಂಕರಗಳಾದ ಸಿಡಿಲುಮಿಂಚುಗಳೊಡನೆ ಮೇಘಪರಂಪರೆಗಳು ಆಕಾಶವನ್ನು ಮುಚ್ಚಿದುವು. ಉತ್ತರಕ್ಷಣದಲ್ಲಿಯೇ ದೊಡ್ಡ ಮಳೆಯು ಸುರಿಯತೊಡಗಿ, ತೇರಚ್ಚಿನಂತೆ ಮಹತ್ತಾದ ವರ್ಷಧಾ ರೆಯು ಬೀಳುತಿತ್ತು. ಅದರಿಂದಾಚೆಗೆ ಸಮುದ್ರಗಳೆಲ್ಲವೂ ಬಿರುಗಾಳಿಯ ಬಡಿತದಿಂದ ಉಲ್ಲೋಲಕಲ್ಲೋಲಗಳಾಗಿ, ಪರ್ವತಗಳಂತಿರುವ ಅಲೆಗಳನ್ನು ಕೆದರುತ್ತ,ಭಯಂಕರಗಳಾದ ಸುಳಿಗಳಿಂದಲೂ, ಗಂಭೀರಘೋಷದಿಂದಲೂ, ಕ್ರೂರನಕ್ರಗಳಿಂದಲೂ ಕೂಡಿ, ನಾಲ್ಕುಕಡೆಯಿಂದಲೂ ಉಕ್ಕಿಬಂದು, ಚತುಸ್ಸಮುದ್ರಗಳೂ ಒಂದಾಗಿ ಕಲೆತು, ಭೂಮಿಯನ್ನು ಕೀಲಾಡಿಸು ತಿತ್ತು. ಹೀಗೆ ಆಕಾಶವನ್ನು ಮುಟ್ಟುವಂತಿರುವ ಜಲವೂ, ತೀ ಕ್ಷ್ಣವಾದ ಸೂರ್ಯಕಿರಣಗಳೂ, ಮಿಂಚುಗಳೂ ಒಂದಾಗಿ ಸೇರಿ, ದೇವ ತಿರ್ಯಙ್ಮನುಷ್ಯಸ್ಥಾವರಗಳೆಂಬ ನಾಲ್ಕುಬಗೆಯ ಜಗತ್ತೆಲ್ಲವನ್ನೂ ಕವಿ

ಸುತ್ತ ಬಂದುವು. ಆ ಮಹರ್ಷಿಯೂ ಅವುಗಳಲ್ಲಿ ಸಿಕ್ಕಿಬಿದ್ದು, ಹಿಂದು ಮುಂದುತೋರದೆ, ಭಯದಿಂದ ತತ್ತಳಿಸುತಿದ್ದನು. ಆ ಮಹರ್ಷಿಯು ನೋಡುತ್ತಿರುವಾಗಲೇ ಪ್ರಚಂಡವಾಯುಪ್ರೇರಿತಗಳಾದ ಸಮುದ್ರತರಂಗಗಳಿಂದಲೂ, ಮಹಾವೃಷ್ಟಿಯಿಂದಲೂ, ಭೂಮಂಡಲವೆಲ್ಲವೂ ಸಮಸ್ತಪರ್ವತದ್ವೀಪಗಳೊಡನೆ ಮುಳುಗಿಹೋಯಿತು. ಕ್ರಮಕ್ರಮವಾಗಿ ಭೂಮ್ಯಂತರಿಕ್ಷಗಳೂ, ದೇವಲೋಕ ನಕ್ಷತ್ರಮಂಡಲಗಳೂ, ದಿಕ್ಕುಗಳೂ ಸೇರಿ, ತ್ರೈಲೋಕ್ಯವೂ ನೀರಿನಲ್ಲಿ ಮುಳುಗಿಹೋಗಿದ್ದಿತು. ಮಾರ್ಕಂಡೇಯನೊಬ್ಬನುಮಾತ್ರ ಆ ಜಲಮಧ್ಯದಲ್ಲಿ, ಕೆದರಿದ ಜಡೆಗಳೊಡನೆ, ಮಂಕನಂತೆಯೂ, ಕುರುಡನಂತೆಯೂ,ಏನೊಂದೂ ತೋರದೆ ಕಳವಳಿಸುತಿದ್ದನು. ಕ್ರಮಕ್ರಮವಾಗಿ ಅವನಿಗೆ ಹಸಿವುಬಾಯಾರಿಕೆಗಳು ಹೆಚ್ಚುತ್ತಬಂದುವು. ಮೊಸಳೆಗಳೂ, ತಿಮಿಂಗಿಲಗಳೂ, ಅವನ ದೇಹವನ್ನು ಕಿತ್ತು ತಿನ್ನುವುದಕ್ಕೆ ತೊಡಗಿದುವು. ಬಿರುಗಾಳಿಯೂ, ಸಮುದ್ರದ ಅಲೆಗಳೂ ಅವನನ್ನು ನಾನಾಕಡೆಯಿಂದ ಅಪ್ಪಳಿಸುತಿದ್ದುವು. ಗಾಢಾಂಧಕಾರವು ಕವಿದುಕೊಂಡಿತು. ಹೀಗೆ ನಾನಾವಿಧವಾದ ಉಪದ್ರವಗಳಿಂದ ಶಕ್ತಿಗುಂದಿದ್ದ ಆ ಮಹರ್ಷಿಗೆ, ಭೂಮ್ಯಾಕಾಶಗಳಾಗಲಿ, ದಿಕ್ಕುಗಳಾಗಲಿ ಯಾವುದೂ ತೋರದಂತಾಯಿತು. ಆಗ ಆತನ ಅವಸ್ಥೆಯನ್ನು ಕೇಳಬೇಕೆ? ಒಂದುಕಡೆಯಲ್ಲಿ ಪ್ರವಾಹದ ಸುಳಿಗಳು ಅವನನ್ನು ಒಳಕ್ಕೆಳೆಯುವುವು. ಮತ್ತೊಂದು ಕಡೆಯಲ್ಲಿ ಅಲೆಗಳು ಮೇಲೆಬಿದ್ದು ಅಪ್ಪಳಿಸುವುವು. ಮತ್ತೊಂದುಕಡೆಯಲ್ಲಿ ಜಲಚರಗಳು ತಮ್ಮೊಳಗೆ ಜಗಳವಾಡುತ್ತ ಬಂದು, ಆ ಕೋಪದಿಂದ ಇವನಮೇಲೆ ಬಿದ್ದು ಕಿತ್ತು ತಿನ್ನುವುವು ಈ ಉಪದ್ರವಗಳಲ್ಲಿ ಅವನಿಗೆ ಏನೂ ತೋರದಂತಾಗಿ, ಮೋಹವೊಂದು ಕಡೆ, ಭಯವೊಂದುಕಡೆ, ದುಃಖವೊಂದುಕಡೆ, ಸಂಕಟವೊಂದುಕಡೆ, ಶೀತೋಷ್ಣಾದಿ ಪ್ರಾಬಲ್ಯದಿಂದ ದೇಹದಲ್ಲಿ ತಲೆದೋರಿದ ವ್ಯಾಧಿಯೊಂದುಕಡೆ, ಹೀಗೆ ನಾನಾಬಗೆಯ ಉಪದ್ರವಗಳಿಗೆ ಸಿಕ್ಕಿ ಮೃತ್ಯುಗ್ರಸ್ತನಾದಂತೆ ತತ್ತಳಿಸುತಿದ್ದನು. ಆಗ ಆ ಮಹರ್ಷಿಯು, ವಿಷ್ಣುಮಾಯೆಯಿಂದ ಮರೆಸಲ್ಪಟ್ಟ ಆತ್ಮಸ್ವರೂಪವುಳ್ಳವನಾಗಿ, ಲಕ್ಷೋಪಲಕ್ಷವರ್ಷಗಳವರೆಗೆ ಹಾಗೆಯೇ ಮಹಾಸಮುದ್ರಮಧ್ಯದಲ್ಲಿ ಸಿಕ್ಕಿ ಭ್ರಮಿ

ಸುತ್ತಿದ್ದನು. ಹೀಗೆ ಸಮುದ್ರದಲ್ಲಿ ತೇಲಿ ಬರುತ್ತಿರುವಾಗ ಆ ಮಹರ್ಷಿಗೆ ಒಂದಾನೊಂದು ಕಡೆಯಲ್ಲಿ ಸಣ್ಣದ್ವೀಪದಂತೆ ತಿಟ್ಟಾದ ನೆಲವುಸಿಕ್ಕಿತು. ಅದರಲ್ಲಿ ಪುಷ್ಪಫಲಸಮೃದ್ಧವಾದ ಆಲದ ಸಸಿಯೊಂದು ಕಾಣಿಸಿತು. ಈಶಾನ್ಯದಿಕ್ಕಿಗೆ ಅಭಿಮುಖವಾಗಿ ನೀಡಿದ ಅದರ ಒಂದಾನೊಂದು ಕೊಂಬೆಯಲ್ಲಿ, ದೊನ್ನೆಯಂತೆ ಸುರುಟಿಕೊಂಡ ಒಂದಾನೊಂದು ಎಲೆಯಮೇಲೆ ಸಣ್ಣಮಗುವೊಂದು ಮಲಗಿದ್ದುದನ್ನು ಕಂಡನು ಆ ಮಗುವು ತನ್ನ ದೇಹ ಕಾಂತಿಯಿಂದ ಆಗಿನ ಗಾಢಾಂಧಕಾರವೆಲ್ಲವನ್ನೂ ಕಬಳಿಸುವಂತೆ ಪ್ರಕಾಶಿಸುತಿದ್ದಿತು. ಅದಕ್ಕೆ ಮರಕತದಂತೆ ಶ್ಯಾಮಲವಾದ ಮೈ ! ಕಮಲದಂತೆ ಮನೋಹರವಾದ ಮುಖದ ಸೊಗಸು ! ಶಂಖದಂತೆ ಕೊರಲು ! ವಿಶಾಲವಾದ ಎದೆ! ಎಸಳಾದ ಮೂಗು! ಅಂದವಾದ ಹುಬ್ಬುಗಳು! ಉಸಿರಾಟದಿಂದ ಅಲುಗಾಡುತ್ತಿರುವ ಮುಂಗುರುಳುಗಳ ಸೊಗಸು ! ಬಲಮುರಿಶಂಖದಂತೆ ಸುಳಿಯಿಂದ ಕೂಡಿದ ಕಿವಿಗಳಮೇಲೆ, ದಾಳಿಂಬಿಯ ಹೂವಿನಂತಿರುವ ಕರ್ಣಾವತಂಸಗಳು ! ಹವಳದಂತಿರುವ ತುಟಿಗಳ ಕಾಂತಿಯಿಂದ, ಸ್ವಲ್ಪ ಕೆಂಪೇರಿದ ಮುಗುಳ್ನಗೆ ! ಕಮಲಪುಟದಂತೆ ಕೆಂಪಾದ ಕಡೆಗಣ್ಣುಗಳಲ್ಲಿ, ಮಂದಹಾಸಮನೋಹರವಾದ ದೃಷ್ಟಿ ! ಶ್ವಾಸೋಚ್ಛ್ವಾಸಗಳಿಂದ ಆಗಾಗ ಕದಲುತ್ತಿರುವ ತ್ರಿವಳಿಗಳಿಂದಲೂ, ಆಳವಾದ ನಾಭಿಯಿಂದಲೂ, ಶೋಭಿತವಾಗಿ, ಅಂಗೈಯಷ್ಟು ಅಗಲವಾದ ಉದರಪ್ರದೇಶದ ಸೊಗಸು! ಇಂತಹ ದಿವ್ಯಸೌಂದರ್ಯದಿಂದೊಪ್ಪುತಿದ್ದ ಆ ಶಿಶುವು, ಎಸಳಾದ ಬೆರಳುಗಳುಳ್ಳ ತನ್ನ ಎರಡುಕೈಗಳಿಂದಲೂ ಕಮಲದಂತಿರುವ ತನ್ನ ಕಾಲನ್ನು ಹಿಡಿದೆತ್ತಿ,ಅದರ ಹೆಬ್ಬೆರಳನ್ನು ಬಾಯಲ್ಲಿಟ್ಟು ಚಪ್ಪರಿಸುತಿದ್ದಿತು. ಆ ಮಹಾಸಮುದ್ರಮಧ್ಯದಲ್ಲಿ ಆಲದೆಲೆಯಮೇಲೆ ಸಂತೋಷದಿಂದ ನಲಿದಾಡುತಿದ್ದ ಆ ಶಿಶುವನ್ನು ಕಂಡಾಗ, ಆ ಮಹರ್ಷಿಗುಂಟಾದ ಆಶ್ಚರ್ಯವನ್ನು ಕೇಳಬೇಕೆ? ಅದನ್ನು ಕಂಡು ಪರಮಾಶ್ಚರ್ಯಭರಿತನಾಗಿದ್ದನು. ಆ ಮಗುವನ್ನು ನೋಡಿದುದರಿಂದುಂಟಾದ ಸಂತೋಷದಿಂದ, ಅವನ ಶ್ರಮವೆಲ್ಲವೂ ಕ್ಷಣಮಾತ್ರದಲ್ಲಿ ಪರಿಹೃತವಾಯಿತು. ಅವನ ಹೃದಯಕಮಲವೂ, ನೇತ್ರಾಬ್ಜಗಳೂ ತಟ್ಟನೆ ವಿಕಾಸಹೊಂದಿದುವು. ಮೈಯಲ್ಲಿ ರೋಮಾಂಚವುಂಟಾಯಿತು. ಅಂತಹ

ಮಹಾಪ್ರಳಯಜಲದಲ್ಲಿ, ಆ ಸಣ್ಣಮಗುವೊಂದು ನಲಿದಾಡುತ್ತಿರುವುದನ್ನು ಕಂಡಾಗ, ಆ ಮಹರ್ಷಿಗೆ ಮಹತ್ತಾದ ಭಯಾಶ್ಚರ್ಯಗಳುಂಟಾಗಿ, ಕೈಕಾಲುಗಳೇ ಆಡದಂತಿದ್ದರೂ, ಆ ಮಗುವನ್ನು ನೋಡಬೇಕೆಂಬ ಕುತೂಹಲದಿಂದ ಮೆಲ್ಲಗೆ ಮುಂದೆ ಹೋದನು. ಈ ಮುನಿಯು ಸಮೀಪಕ್ಕೆ ಬಂದೊಡನೆ, ಆ ಶಿಶುವಿನ ಉಸಿರಿನ ಗಾಳಿಯಿಂದ ಆಕರ್ಷಿಸಲ್ಪಟ್ಟು, ಸೊಳ್ಳೆಯಂತೆ ಅದರ ದೇಹದೊಳಗೆ ಸೇರಿದನು. ಆ ಶಿಶುವಿನ ಗರ್ಭವನ್ನು ಪ್ರವೇಶಿಸಿದಮೇಲೆ ಅಲ್ಲಿ ಮೊದಲಿನಂತೆ ಮತ್ತೊಂದು ಶಿಶುವು ಕಾಣಿಸಿತು ಮತ್ತು ತಾನು ಮೊದಲು ನೋಡಿದ್ದ ಸಮಸ್ತವಿಶ್ವವೂ ಆ ಶಿಶುವಿನ ಶರೀರದೊಳಗೆ ಕಾಣಿಸಿತು. ಭೂಮ್ಯಾಕಾಶಗಳು ಅಂತರಿಕ್ಷದಲ್ಲಿ, ನಕ್ಷತ್ರಸಮೂಹಗಳು, ಪರ್ವತಗಳು, ಸಮುದ್ರಗಳು, ದ್ವೀಪಗಳು, ವರ್ಷ (ಭೂಖಂಡ) ಗಳು, ದಿಕ್ಕುಗಳು, ದೇವಾಸುರವರ್ಗಗಳು, ನದಿಗಳು, ದೇಶಗಳು, ವನಗಳು, ಪಟ್ಟಣಗಳು, ಗ್ರಾಮಗಳು, ಗಣಿಗಳು, ವ್ಯವಸಾಯಗಾರರು ವಾಸಮಾಡತಕ್ಕ ಗ್ರಾಮಗಳು, ಗೊಲ್ಲರ ಹಳ್ಳಿಗಳು, ಋಷ್ಯಾಶ್ರಮಗಳು, ಬ್ರಾಹ್ಮಣಾದಿಚತುರ್ವರ್ಣಗಳು, ಅವರ ಬೇರೆಬೇರೆ ವೃತ್ತಿಗಳು, ಆಕಾಶಾದಿ ಮಹಾಭೂತಗಳು ಆ ಪಾಂಚಭೌತಿಗಳಾದ ಶರೀರಗಳು, ಯುಗಭೇದಗಳುಳ್ಳ ಕಾಲವಿಭಾಗಗಳು, ಮತ್ತು ವ್ಯವಹಾರನಿಮಿತ್ತಗಳಾದ ಬೇರೆ ಯಾವಯಾವ ವಸ್ತುಗಳುಂಟೋ ಅವೆಲ್ಲವೂ ಅಲ್ಲಿ ಕಾಣಿಸಿದುವು. ಅಜ್ಞಾನಿಗಳಿಗೆ ನಿತ್ಯವೆಂದು ತೋರುವ ಸಮಸ್ತಜಗತ್ತೂ ಅಲ್ಲಿ ಕಾಣಿಸಿತು. ಮತ್ತು ಆ ಗರ್ಭದಲ್ಲಿಯೇ ಮಾರ್ಕಂಡೇಯನು,ಮೊದಲು ತಾನಿದ್ದ ಅದೇ ಹಿಮಾಲಯಪರ್ವತವನ್ನೂ,ಅದೇ ಪುಷ್ಪವಹಾನದಿಯನ್ನೂ, ಅಲ್ಲಿ ತನ್ನ ಆಶ್ರಮವನ್ನೂ, ಅಲ್ಲಿ ತನ್ನೊಡನಿದ್ದ ಋಷಿಗಳನ್ನೂ ಕಂಡನು. ಹೀಗೆ ಆ ಶಿಶುವಿನ ಗರ್ಭದಲ್ಲಿ ಸಮಸ್ತವಿಶ್ವವನ್ನೂ ನೋಡಿದಮೇಲೆ, ಆ ಶಿಶುವು ಉಸಿರನ್ನು ಹೊರಕ್ಕೆ ಬಿಟ್ಟಾಗ, ಆ ಗಾಳಿಯೊಡನೆ ಹೊರಕ್ಕೆಬಂದು,ತಿರುಗಿ ಮೊದಲಿನಂತೆ ಆ ಪ್ರಳಯಸಮುದ್ರದಲ್ಲಿ ಬಿದ್ದನು.ಮೊದಲಿನಂತೆ ಆ ಜಲಮಧ್ಯದ ತಿಟ್ಟಿನಲ್ಲಿ ಬೆಳೆದಿದ್ದ ಆಲದ ಮರವನ್ನೂ, ಅದರ ಪತ್ರದಲ್ಲಿ ಮಲಗಿದ್ದ ಶಿಶುವನ್ನೂ,ಆ ಶಿಶುವು ಪ್ರೇಮಪೂರ್ವಕವಾದ ಮಂದಹಾಸದೊಡನೆ, ಪ್ರಸನ್ನದೃಷ್ಟಿಯಿಂದ ತನ್ನ ಕಡೆಗೆ

ನೋಡುತ್ತಿರುವುದನ್ನೂ ಕಂಡನು. ಹೀಗೆ ನೋಡಿದಮೇಲೆ ಆ ಶಿಶುವನ್ನು ತೋಳುಗಳಿಂದ ಅಪ್ಪಿಕೊಳ್ಳುವುದಕ್ಕಾಗಿ ಮುಂದೆ ಹೋಗುವಷ್ಟರಲ್ಲಿ, ವಿಚಿತ್ರಶಕ್ತಿಯುಳ್ಳ ಭಗವಂತನು, ಆ ತನ್ನ ಶಿಶುರೂಪವನ್ನು ಮರೆಸಿಕೊಂಡುಬಿಟ್ಟನು. ಆ ಶಿಶುವನ್ನು ಆಲಿಂಗಿಸಿಕೊಳ್ಳಬೇಕೆಂದು ಅತಿಕುತೂಹಲದಿಂದಿದ್ದ ಆ ಋಷಿಯ ಉದ್ದೇಶವು, ದರಿದ್ರನ ಮನೋರಥದಂತೆ ನಿಷ್ಫಲವಾಯಿತು. ಆ ಶಿಶುವು ಕಣ್ಮರೆಯಾದೊಡನೆ, ಪ್ರಳಯಜಲವೂ ಅದೃಶ್ಯವಾಯಿತು. ಆ ವಟವೃಕ್ಷವೂ ಅಗೋಚರವಾಯಿತು! ಆ ಋಷಿಯು ಹಿಂದಿನಂತೆ, ತನ್ನ ಆಶ್ರಮದಲ್ಲಿ ತಾನು ಸಮಾಧಿನಿಷ್ಠನಾಗಿ ಕುಳಿತಿರುವುದನ್ನೂ ನೋಡಿದನು. ಇದು ಒಂಬತ್ತನೆಯ ಅಧ್ಯಾಯವು.

---

## ಮಾರ್ಕಂಡೇಯನಿಗೆ ಪಾರ್ವತೀಪರಮೇಶ್ವರರು ಪ್ರತ್ಯಕ್ಷವಾದುದು.

ಓ ಮಹರ್ಷಿಗಳೆ ! ಹೀಗೆ ಮಾರ್ಕಂಡೇಯನು, ಭಗವಂತನು ತನಗೆ ತೋರಿಸಿದ ಮಾಯಾಪ್ರಭಾವವನ್ನು ನೋಡಿ ವಿಸ್ಮಿತನಾಗಿ,*ಭಗವತ್ಕಲ್ಪಿತವಾದ ಇಂತಹ ಮಾಯೆಯನ್ನು ದಾಟಬೇಕಾದರೆ, ಅವನಲ್ಲದೆ ಬೇರೆ ಗತಿಯಿಲ್ಲವೆಂದೂ ನಿರ್ಧರಿಸಿ, ಅವನನ್ನೇ ಮರೆಹೊಕ್ಕು ಹೀಗೆಂದು ಪ್ರಾರ್ಥಿಸುವನು. "ಓ ಶ್ರೀಹರೀ ! ಆಶ್ರಿತರಿಗೆ ಸಂಸಾರಭಯವನ್ನು ನೀಗಿಸತಕ್ಕ ನಿನ್ನ ಪಾದಮೂಲವನ್ನೇ ನಾನು ಮರೆಹೊಕ್ಕಿರುವೆನು. ಯಾವ ನಿನ್ನ ಮಾಯೆಯಿಂದುಂಟಾದ ಅಜ್ಞಾನದಲ್ಲಿ ಸಿಕ್ಕಿ ವಿದ್ವಾಂಸರೂ ಮೋಹಗೊಳ್ಳುವರೋ, ಅಂತಹ ಮಾಯೆಯಿಂದ ನೀನು ನನ್ನನ್ನುದ್ಧರಿಸಬೇಕು." ಎಂದನು. ಹೀಗೆ ಮಾರ್ಕಂಡೇಯನು ನಿಶ್ಚಲಮನಸ್ಸಿನಿಂದ ಭಗವಂತನಲ್ಲಿ ಮರೆಹೊಕ್ಕು ಪ್ರಾರ್ಥಿಸುತ್ತಿರುವ ಸಮಯಕ್ಕೆ ಸರಿಯಾಗಿ, ರುದ್ರನು ಪಾರ್ವತೀಸಮೇತನಾಗಿ, ತನ್ನ

---

* ಅಲ್ಪದೇಶದಲ್ಲಿ ವಿಶಾಲವಾದ ದೇಶವೂ, ಅಲ್ಪಕಾಲದಲ್ಲಿ ಮಹಾಕಾಲವೂ ಅಂತರ್ಗತವಾಗಿರುವಂತೆ ಮಾಡುವುದೂ, ತನಗಿಂತಲೂ ವ್ಯತಿರಿಕ್ತಗಳಾದ ಪದಾರ್ಥಸಮೂಹಗಳನ್ನೂ, ಕಾಲಾವಸಾನವನ್ನುಂಟುಮಾಡುವ ಜಲಾದಿಗಳನ್ನೂ ಸೃಜಿಸುವುದೂ ಆ ಈಶ್ವರನ ಸರ್ವಶಕ್ತತ್ವದಿಂದಾದುದೇ!

ವಾಹನವಾದ ವೃಷಭವನ್ನೇರಿ, ಪ್ರಮಥಗಣಗಳೊಡನೆ ಆಕಾಶದಲ್ಲಿ ಬರು ತಿದ್ದನು. ಆಗ ಪಾರ್ವತೀದೇವಿಯು ಸಮಾಧಿನಿಷ್ಠನಾಗಿದ್ದ ಈ ಬ್ರಾಹ್ಮಣ ನನ್ನು ಕಂಡು, ತನ್ನ ಪತಿಯನ್ನು ಕುರಿತು ಹೀಗೆಂದು ಹೇಳುವಳು“ಓ ನಾಥಾ! ಇದೋ! ಈ ಮಹರ್ಷಿಯನ್ನು ನೋಡಿದೆಯಾ? ಬಿರುಗಾಳಿಯು ನಿಂತಮೇಲೆ ನಿಶ್ಚಲವಾದ ಮಹಾಸಮುದ್ರದಂತೆ, ಈ ಮುನಿಯು. ನಿಶ್ಚಲವಾದ ದೇಹೇಂ ದ್ರಿಯಗಳೂ ಮನಸ್ಸೂ ಉಳ್ಳವನಾಗಿ ಸಮಾಧಿಯಲ್ಲಿರುವನು ನೋಡು! ನಾವು ಮುಂದೆ ಹೋಗಿ ಇವನನ್ನು ನೋಡಿ ಬರುವೆವು ಬಾ! ನೀನು ಸಿದ್ಧಿ ಪ್ರದನಲ್ಲವೆ! ಇವನ ತಪಸ್ಸಿಗೆ ಫಲವನ್ನು ಅನುಗ್ರಹಿಸು!” ಎಂದಳು. ಅದಕ್ಕಾರುದ್ರನು. “ದೇವಿ! ಈ ಮಹರ್ಷಿಯು ನಮ್ಮಿಂದ ಯಾವ ಕೋರಿಕೆ ಯನ್ನೂ ಬಯಸುವುದಾಗಿಲ್ಲ! ಅಷ್ಟೇಕೆ! ಈಗ ಅವನು ಮೋಕ್ಷವನ್ನೂ ಅಪೇಕ್ಷಿಸಲಾರನು. ಏಕೆಂದರೆ, ಈತನು ಪರಮಪುರುಷನಾದ ಶ್ರೀಮನ್ನಾರಾ ಯಣನಲ್ಲಿ ಅನನ್ಯಪ್ರಯೋಜನವಾದ ಭಕ್ತಿಯನ್ನು ಹಿಡಿದಿರುವನು. ಇಂತ ವರು ಬೇರೆಯಾರಿಂದಲೂ ಏನನ್ನೂ ಕೋರುವದಾಗಿಲ್ಲ! ಹಾಗಿದ್ದರೂ ನಾವು ಮುಂದೆ ಹೋಗಿ ಆ ಮಹಾತ್ಮನನ್ನು ಮಾತಾಡಿಸಿಬರುವೆವು. ಇಂತಹ ಸಾಧುಗಳ ಸಮಾಗಮವು ನಮಗೂ ಪರಮಲಾಭವು” ಎಂದನು ಹೀಗೆಂದು ಹೇಳಿ, ಸತ್ಪುರುಷರೆಲ್ಲರಿಗೂ ಉತ್ತಮಗತಿಯಾಗಿಯೂ, ಸರ್ವವಿದ್ಯೆಗಳಿಗೂ ಅಧಿಪತಿಯಾಗಿಯೂ, ಸಮಸ್ತದೇಹಿಗಳಿಗೂ ಪ್ರಭುವಾಗಿಯೂ ಇರುವ ರುದ್ರನು, ಆ ಮಹರ್ಷಿಯಬಳಿಗೆ ಬಂದನು. ಸಕಲಜೀವೇಶ್ವರರಾಗಿ, ವಿಶ್ವಾ ತ್ಮಕರೆನಿಸಿದ ಉಮಾಮಹೇಶ್ವರರಿಬ್ಬರೂ ತನ್ನಮುಂದೆ ನಿಂತಿದ್ದರೂ, ಇತರಪ್ರಪಂಚವನ್ನಾಗಲಿ ಕೊನೆಗೆ ತನ್ನನ್ನೇ ಆಗಲಿ ತಿಳಿಯದಹಾಗೆ ಅಂತಃಕರಣವನ್ನು ನಿರೋಧಿಸಿ ಸಮಾಧಿನಿಷ್ಠೆಯಿಂದಿದ್ದ ಆಮುನಿಗೆ ತಿಳಿ ಯದೆಹೋಯಿತು. ಆಗ ರುದ್ರನು ವಾಯುವು ರಂಧ್ರಗಳಲ್ಲಿ ಪ್ರವೇಶಿಸು ವಂತೆ ಯೋಗಮಾಯೆಯಿಂದ ಅವನ ಹೃದಯರಂಧ್ರದಲ್ಲಿ ತಾನಾಗಿಯೇ ಪ್ರವೇಶಿಸಿದನು. ಆಗ ಆ ಮಹರ್ಷಿಯ ಮನಸ್ಸಿನೊಳಗೆ ಮಿಂಚು ಹೊಡೆ ದಂತಾಗಿ, ಅವನು ಕಣ್ಣುಮುಚ್ಚಿದ್ದಹಾಗೆಯೇ ಹಿಂದಾನೊಂದು ದಿವ್ಯರೂ ಪವು ತೋರಿತು. ಆ ದಿವ್ಯಾಕೃತಿಗೆ ಮಿಂಚಿನಂತೆ ಹೊಂಬಣ್ಣವಾದ ಜಡೆ!

ಮೂರು ಕಣ್ಣುಗಳು! ಹತ್ತು ತೋಳುಗಳು! ಉನ್ನತವಾದ ಮೈ! ಆಗಲೇ ಉದಿಸುತ್ತಿರುವ ಸೂರ್ಯನಂತೆ ತೇಜಸ್ಸು! ಬೆನ್ನಮೇಲೆ ಹುಲಿದೊಗಲು! ದಶಭುಜಗಳಲ್ಲಿಯೂ ಶೂಲ, ಧನುಸ್ಸು, ಬಾಣ, ಕತ್ತಿ, ಗುರಾಣಿ, ಅಕ್ಷಮಾಲೆ, ಡಮರು, ಕಪಾಲ, ಗಂಡುಗೊಡಲಿ, ಮುಂತಾದ ಉಪಕರಣಗಳು! ಇಂತಹ ದಿವ್ಯರೂಪದಿಂದೊಪ್ಪುವ ಪರಮಶಿವನನ್ನು ಕಂಡು ಆ ಮಹರ್ಷಿಯು ತನ್ನ ಮನಸ್ಸಿನಲ್ಲಿ “ಇದೇನು? ಎಲ್ಲಿಂದ ಬಂದಿತು” ಎಂದು ವಿಸ್ಮಿತನಾಗಿ, ತನ್ನ ಸಮಾಧಿಯನ್ನು ನಿಲ್ಲಿಸಿ ಕಣ್ಣುತೆರೆದು ನೋಡಿದಾಗ, ತನ್ನ ಮುಂದೆ ಪಾರ್ವತೀಸಮೇತನಾದ ರುದ್ರನು ಪ್ರಮಥಗಣಗಳೊಡನೆ ನಿಂತಿದ್ದುದನ್ನು ಕಂಡನು. ತ್ರೈಲೋಕ್ಯಗುರುವಾದ ಆ ರುದ್ರನನ್ನು ಕಂಡೊಡನೆ, ತಲೆಬಗ್ಗಿ ನಮಸ್ಕರಿಸಿ, ಆ ಪಾರ್ವತೀಪರಮೇಶ್ವರರಿಗೂ, ಪ್ರಮಥಗಣಗಳಿಗೂ, ಸ್ವಾಗತಪೂರ್ವಕವಾಗಿ, ಆಸನ, ಅರ್ಘ್ಯ, ಪಾದ್ಯ, ಆಚಮನೀಯ, ಗಂಧ, ಪುಷ್ಪ, ಧೂಪ, ದೀಪಾದಿ ಸಮಸ್ತೋಪಚಾರಗಳನ್ನೂ ಸಮರ್ಪಿಸಿ ಯಥಾವಿಧಿಯಾಗಿ ಪೂಜಿಸಿದನು. ಆಮೇಲೆ ಆ ರುದ್ರನಮುಂದೆ ಕೈಮುಗಿದು ನಿಂತು ಹೀಗೆಂದು ವಿಜ್ಞಾಪಿಸುವನು “ಓ ವಿಭೂ! ಈಶ್ವರಾ! ಆತ್ಮಾನಂದದಿಂದಲೇ ಪೂರ್ಣಕಾಮನಾದ ನಿನ್ನನ್ನು ನಾನು ಯಾವವಿಧದಿಂದ ಸಂತೋಷಪಡಿಸಬಲ್ಲೆನು? ಈ ಸಮಸ್ತಜಗತ್ತೂ ನಿನ್ನಿಂದಲೇ ಸಂತೋಷವನ್ನು ಪಡೆಯಬೇಕಾಗಿರುವಾಗ, ಅಂತಹ ನಿನಗೆ ನಾನು ಯಾವವಿಧದಿಂದ ಸಂತೋಷಗೊಳಿಸಲಿ! ಆದುದರಿಂದ ಈ ನನ್ನ ಅಂಜಲಿಯೊಂದರಿಂದಲೇ ನೀನು ಸಂತೋಷಪಡಬೇಕು. ಸಮಸ್ತಲೋಕಕ್ಕೂ ಮಂಗಳಕರನಾಗಿ, ಹಸಿವು, ಬಾಯಾರಿಕೆ, ಮೊದಲಾದ ಷಡೂರ್ಮಿಗಳನ್ನು ಜಯಿಸಿ ಶಾಂತನಾಗಿ, ಆಶ್ರಿತರಿಗೆ ಉತ್ತಮ ಸುಖಪ್ರದನಾಗಿ, ಶುದ್ಧಸತ್ವಮೂರ್ತಿಯಾದ ಮಹಾವಿಷ್ಣುಸ್ವರೂಪದಿಂದಲೂ, ರಜಸ್ತಮೋಗುಣಪ್ರಧಾನರಾದ ಬ್ರಹ್ಮರುದ್ರರೂಪದಿಂದಲೂ ತೋರತಕ್ಕವನಾಗಿರುವ ನಿನಗೆ ನಮಸ್ಕಾರವು” ಎಂದನು, ಈ ಸ್ತುತಿವಾಕ್ಯಗಳಿಗೆ ರುದ್ರನು ಸಂತೋಷಗೊಂಡು, ಪ್ರಸನ್ನನಾಗಿ, ಮಂದಹಾಸದೊಡನೆ ಆ ಮಹರ್ಷಿಯನ್ನು ಕುರಿತು ಹೀಗೆಂದು ಹೇಳುವನು “ಓ ಮಹರ್ಷೀ! ನಾವು ಮೂವರೂ (ತ್ರಿಮೂರ್ತಿ

ಗಳೂ) ವರಪ್ರದರಾದ ದೇವತೆಗಳಲ್ಲಿ ಮೇಲೆನಿಸಿರುವೆವು. ನಮ್ಮ ದರ್ಶನವು ವಿಫಲವಾಗತಕ್ಕುದಲ್ಲ. ಈ ನಮ್ಮ ದರ್ಶನದಿಂದ ಮನುಷ್ಯನು ಮುಕ್ತಿಯನ್ನೂ ಪಡೆಯಬಹುದು. ನಿನಗೆ ಬೇಕಾದ ವರವನ್ನು ಕೇಳು! ಕೊಡುವೆನು. ಓ! ಬ್ರಾಹ್ಮಣೋತ್ತಮಾ! ನಿನ್ನಂತೆ ಸಾಧುಗಳಾಗಿಯೂ, ಶಾಂತರಾಗಿಯೂ, ವಿಷಯಾಸಕ್ತಿರಹಿತರಾಗಿಯೂ, ಭೂತದಯೆಯುಳ್ಳವರಾಗಿಯೂ, ಭಗವಂತನಾದ ಶ್ರೀಹರಿಗೆ ಏಕಾಂತಭಕ್ತರಾಗಿಯೂ, ತ್ರಿಮೂರ್ತಿಗಳಾದ ನಮ್ಮಲ್ಲಿ ತಾರತಮ್ಯಬುದ್ಧಿಯನ್ನಿಡದೆ ಆ ಭಗವಂತನ ವಿಭೂತಿಯೆಂದೇ ಭಾವಿಸಿ ಭಜಿಸತಕ್ಕವರಾಗಿಯೂ, ಸಮಸ್ತಲೋಕವನ್ನೂ ಆ ಭಗವದ್ರೂಪದಿಂದಲೇ ಭಾವಿಸಿ ಸಮದೃಷ್ಟಿಯುಳ್ಳವರಾಗಿಯೂ ಇರುವ ಬ್ರಾಹ್ಮಣರನ್ನು, ಲೋಕಪಾಲರೊಡಗೂಡಿದ ಸಮಸ್ತಲೋಕವೂ ಪೂಜಿಸುವುವು. ಅವರಿವರೆಂಬುದೇಕೆ? ತ್ರಿಮೂರ್ತಿಗಳಾದ ನಾವೂಕೂಡ ಅಂತಹ ಬ್ರಾಹ್ಮಣರಿಗೆ ವಂದಿಸಿ, ಅರ್ಚಿಸಿ ಉಪಾಸಿಸುವೆವು. ಏಕೆಂದರೆ, ಆ ಬ್ರಾಹ್ಮಣರು ತಮ್ಮನ್ನಾಗಲಿ, ಇತರಭೂತಗಳನ್ನಾಗಲಿ, ಆ ಅಚ್ಯುತನಿಗಿಂತಲೂ ಬೇರೆಯಾಗಿ ಭಾವಿಸರು. ಸಮಸ್ತಪ್ರಪಂಚವೂ ಆ ಶ್ರೀಹರಿಗೆ ಶರೀರಭೂತವಾಗಿ, ಅವನಿಗೆ ಪರತಂತ್ರವಾಗಿಯೇ ಇರುವುದನ್ನು ತಿಳಿದು ಎಲ್ಲವನ್ನೂ ಆ ವಿಷ್ಣುಸ್ವರೂಪದಿಂದಲೇ ಭಾವಿಸುವರು. ಆದುದರಿಂದ ಇಂತಹ ಮಹಾತ್ಮರನ್ನು ನಾವೂ ಕೂಡ ಎಷ್ಟೋ ಗೌರವಿಸಿ ಪೂಜಿಸುವೆವು. ಜಲಮಯವಾದ ತೀರ್ಥಗಳೂ, ಕಲ್ಲು ಮಣ್ಣಿನ ದೇವತಾಪ್ರತಿಮೆಗಳೂ, ಸ್ನಾನಪಾನಾದಿಗಳಿಂದಲೂ, ಷೋಡಶೋಪಚಾರಪೂಜೆಗಳಿಂದಲೂ ಜನರನ್ನು ಪವಿತ್ರೀಕರಿಸಬಲ್ಲುವೇಹೊರತು, ದರ್ಶನಮಾತ್ರದಿಂದ ಪಾವನಮಾಡಲಾರವು. ನಿಮ್ಮಂತಹ ಸಾಧುಗಳ ದರ್ಶನಮಾತ್ರವೇ ಮನುಷ್ಯರನ್ನು ಪಾವನಮಾಡುವುವು. ಓ! ಮಹರ್ಷೀ! ವೇದಮಯಗಳಾದ ನಮ್ಮರೂಪವನ್ನು ಸಮಾಧಿಯಿಂದಲೂ, ತಪಸ್ಸಿನಿಂದಲೂ, ಸಂಯಮದಿಂದಲೂ, ಯಾರು ಹೃದಯದಲ್ಲಿ ಧರಿಸಿರುವರೋ ಅಂತಹ ಬ್ರಾಹ್ಮಣರಿಗೆ ನಾವೂ ನಮಸ್ಕರಿಸುವೆವು. ಅಂತಹ ಮಹಾತ್ಮರನ್ನು ಕಣ್ಣಿಂದ ನೋಡಿದರೂ, ಅವರ ಚರಿತ್ರೆಯನ್ನು ಕಿವಿಯಿಂದ ಕೇಳಿದರೂ, ಮಹಾಪಾತಕಿಗಳಾದ ಶೂದ್ರಾದಿಗಳೂಕೂಡ ಶುದ್ಧಿಹೊಂದುವರು. ಹೀಗಿ

ರುವಾಗ ನಿಮ್ಮಂತವರೊಡನೆ ಪ್ರತ್ಯಕ್ಷ ಸಂಭಾಷಣವು ಲಭಿಸಿದಮೇಲೆ ಹೇಳಬೇಕಾದುದೇನು? "ಎಂದನು ಹೀಗೆ ರುದ್ರನು ಸಜ್ಜನಸೇವೆಯೆಂಬ ಧರ್ಮರಹಸ್ಯವನ್ನು ಕುರಿತು ಹೇಳಿದ ಆ ವಾಕ್ಯವು, ಮಾರ್ಕಂಡೇಯನಿಗೆ ಕರ್ಣಾಮೃತಪ್ರಾಯವಾಯಿತು. ಎಷ್ಟೆಷ್ಟು ಕೇಳುತಿದ್ದರೂ ತೃಪ್ತಿಯಿಲ್ಲ ದಂತಿದ್ದನು. ಆ ಮಹರ್ಷಿಯು ಇದಕ್ಕೆ ಹಿಂದೆ ತಾನು ಪ್ರತ್ಯಕ್ಷವಾಗಿ ನೋಡಿ ಬಂದ ಭಗವಂತನ ಆಶ್ಚರ್ಯಶಕ್ತಿಗೆ ಮೋಹಿತನಾಗಿ ಏನೊಂದೂ ತೋರದೆ ಚಿಂತೆಯಿಂದ ಬಳಲಿ ಕೃಶನಾಗಿದ್ದನು. ರುದ್ರನ ವಾಕ್ಯಾಮೃತ ಗಳು ಕಿವಿಗೆ ಬಿದ್ದೊಡನೆ, ಅವನ ಆಯಾಸವೆಲ್ಲವೂ ಪರಿಹೃತವಾಯಿತು. ಶಾಂತಚಿತ್ತನಾಗಿ ತನ್ನಲ್ಲಿತಾನು ಹೀಗೆಂದು ಯೋಚಿಸುವನು. "ಆಹಾ! ಏನಿದು? ಇವರು ಲೋಕೇಶ್ವರರೆನಿಸಿಕೊಂಡಿದ್ದರೂ, ತಮಗಿಂತಲೂ ನಿಕೃಷ್ಟವಾಗಿ, ತಮ್ಮ ನಿಯಮಕ್ಕೊಳಪಟ್ಟ ಭೂತಗಳಿಗೆ ಹೀಗೆ ನಮಸ್ಕ ರಿಸುತ್ತಿರುವರಲ್ಲಾ! ಭಗವಂತನ ಚಾರಿತ್ರೆಯು ನಮ್ಮಂತಹ ಶರೀರಿಗಳಿಗೆ ಹೀಗೆಂದು ತಿಳಿಯಲು ಎಷ್ಟುಮಾತ್ರವೂ ಸಾಧ್ಯವಲ್ಲ! ತಮ್ಮ ನಿಯಮಕ್ಕೊಳ ಪಟ್ಟವರಿಗೆ ತಾವು ಸೇವಕರಂತೆ ನಮಸ್ಕರಿಸುವರು. ತಮ್ಮನ್ನು ಸ್ತುತಿಸ ಬೇಕಾದ ಭಕ್ತರನ್ನು ತಾವು ಸ್ತುತಿಸುವರು. ಇವೆಲ್ಲವೂ ಅವರ ಲೀಲಾಕಾರ್ಯ ಗಳು. ಆದರೆ, ಇದೇನೂ ಅವರಲ್ಲಿ ಒಂದು ವಿಶೇಷವಿಲ್ಲ! ಲೋಕಕ್ಕೆ ಧರ್ಮ ಮಾರ್ಗವನ್ನು ತಿಳಿಸುವುದಕ್ಕಾಗಿ, ಒಂದೊಂದು ಸಮಯದಲ್ಲಿ ತಾವಾಗಿ ಅ ದನ್ನು ನಡೆಸುವರು. ಮತ್ತೊಮ್ಮೆ ಅನುಮೋದಿಸುವರು. ಇತರರು ಮಾಡಿದ ಧರ್ಮಕಾರ್ಯಗಳನ್ನು ಶ್ಲಾಘಿಸುವರು. ಹೀಗೆ ಮಾಡಿದಮಾತ್ರಕ್ಕೆ ಅವರ ಪ್ರ ಭಾವಕ್ಕೇನೂ ಕೊರತೆಯಿಲ್ಲ. ಹೇಗೆಂದರೆ, ಪ್ರಸಿದ್ಧನಾದ ಐಂದ್ರಜಾಲಿಕ ನೊಬ್ಬನು, ಕಣ್ಣುಕಟ್ಟುಮಾಯೆಗಳಿಂದ ಜನರನ್ನು ಮರುಳುಮಾಡಿದರೆ, ಅದರಿಂದ ಅವನ ಸಾಮರ್ಥ್ಯವು ಚೆನ್ನಾಗಿ ಹೊರಪಡುವುದೇಹೊರತು,ಅದು ಅವನಿಗೆ ಮೋಸಗಾರನೆಂಬ ಅಪಪ್ರಥೆಯನ್ನು ತರಲಾರದಷ್ಟೆ? ಹಾಗೆಯೇ ಭಗವಂತನ ಈ ಮಾಯಾವ್ಯಾಪಾರಗಳಿಂದ ಅವನ ಆಶ್ಚರ್ಯಶಕ್ತಿಯು ಲೋ ಕಕ್ಕೆ ತೋರ್ಪಡುವುದೇಹೊರತು ಬೇರೆಯಲ್ಲ! ಆ ಭಗವಂತನು ತನ್ನ ಸಂಕಲ್ಪ ಮಾತ್ರದಿಂದಲೇ ಈ ಜಗತ್ತನ್ನು ಸೃಷ್ಟಿಸಿ, ತಾನೂ ಅವುಗಳಲ್ಲಿ ಅಂಶ

ರ್ಯಾಮಿಯಾಗಿ ನೆಲೆಗೊಂಡು, ಆಯಾ ಜೀವನಲ್ಲಿ ಸತ್ವಾದಿಗುಣಗಳಿಗನುಸಾರ ವಾಗಿ ನಡೆಯತಕ್ಕ ಕಾರ್ಯಗಳಿಗೆ, ತಾನೇ ಕರ್ತನಂತೆ ತೋರುವುದೊಂದೇ ಹೊರತು, ಆ ಕರ್ತೃತ್ವಕ್ಕೆ ತಾನು ಭಾಗಿಯಾಗಲಾರನು. ಕನಸನ್ನು ಕಾಣು ವವನು, ಆ ಕನಸಿನಲ್ಲಿ ಕಾಣುವ ವ್ಯಾಪಾರಗಳನ್ನು ತಾನು ನಡೆಸದಿದ್ದರೂ, ಅವುಗಳನ್ನು ತಾನೇ ನಡೆಸುವಂತೆ ತಿಳಿಯುವನಲ್ಲವೆ ? ಪರಮಾತ್ಮನ ವಿಷಯ ದಲ್ಲಿ ಕರ್ತೃತ್ವಭ್ರಾಂತಿಯೂ ಈವಿಧವಾದುದೇ! ಹೀಗೆ ಮಹಾತ್ಮನಾಗಿಯೂ, ಸತ್ವರಜಸ್ತಮೋಗುಣಗಳಿಗೆ ನಿಯಾಮಕನಾಗಿಯೂ, ಕೇವಲನಾಗಿಯೂ, ಅದ್ವಿತೀಯನಾಗಿಯೂ, ಲೋಕಗುರುವಾಗಿಯೂ, ಬ್ರಹ್ಮಮೂರ್ತಿಯಾ ಗಿಯೂ ಇರುವ ಭಗವಂತನಿಗೆ ನಮಸ್ಕಾರವು. ಓ ಮಹಾತ್ಮಾ ! ಮನು ಷ್ಯನು ತನ್ನ ಕರ್ಮಗಳಿಂದ ಮುಕ್ತನಾಗಿ, ಸ್ಥಿರವಾಗಿಯೂ, ಕೊನೆಯಿ ದಾಗಿಯೂ ಇರುವ ಉತ್ತಮಪುರುಷಾರ್ಥವನ್ನು (ಮೋಕ್ಷವನ್ನು) ಹೊರತು, ವರಪ್ರದನಾದ ನಿನ್ನಿಂದ ಬೇರೆ ಯಾವ ವರವನ್ನು ಪ್ರಾರ್ಥಿಸಬಹುದು ? ಬೇರೆ ಯಾವುದೂ ಇಲ್ಲ! ಹಾಗಿದ್ದರೂ ನಾನು ನಿನ್ನಲ್ಲಿ ಇದೊಂದುವರವನ್ನು ಕೇಳಿಕೊಳ್ಳುವೆನು. ಭಗವಂತನಾದ ಶ್ರೀಹರಿಯಲ್ಲಿಯೂ, ಹರಿಭಕ್ತರಲ್ಲಿಯೂ, ನಿನ್ನಲ್ಲಿಯೂ, ನನಗೆ ಅವಿಚ್ಛಿನ್ನವಾದ ಭಕ್ತಿಯಿರಲಿ !" ಎಂದನು. ಹೀಗೆ ಮಾರ್ಕಂಡೇಯನು ವಿಷ್ಣುವಿನ ಮಹತ್ವವನ್ನು ಕೊಂಡಾಡಿ, ಅವನಲ್ಲಿ ನಿರಂತರವಾದ ಭಕ್ತಿಯನ್ನು ಪ್ರಾರ್ಥಿಸಿದಾಗ, ರುದ್ರನು, ಪಾರ್ವತೀ ದೇವಿಯ ಅನುಮತಿಪೂರ್ವಕವಾಗಿ, ಆ ಋಷಿಯನ್ನು ಕುರಿತು ಹೀಗೆಂದು ಹೇಳುವನು "ಓ ಮಹರ್ಷೀ ! ನೀನು ಕೋರಿದಂತೆ ನಿನಗೆ ಆ ವಿಷ್ಣುವಿನಲ್ಲಿ ನಿರಂತರವಾಗಿ ಭಕ್ತಿಯುಂಟಾಗಲಿ ! ಕಲ್ಪಾಂತದವರೆಗೂ ನಿನ್ನ ಯಶಸ್ಸು ಲೋಕಪಾವನವಾಗಿ ಹರಡಲಿ ! ನಿನಗೆ ಜರಾಮರಣಗಳಿಲ್ಲದಿರಲಿ! ಮತ್ತು ನಿನಗೆ ಭೂತಭವಿಷ್ಯದ್ವರ್ತಮಾನಗಳೆಂಬ ತ್ರಿಕಾಲಗಳಲ್ಲಿರುವ ವಸ್ತುಗಳನ್ನು ಕುರಿತಜ್ಞಾನವೂ, ಆತ್ಮ ಪರಮಾತ್ಮಸ್ವರೂಪ ವಿವೇಚನಾರೂಪವಾದ ವಿಜ್ಞಾನವೂ, ವೈರಾಗ್ಯವೂ ದೃಢವಾಗಿರಲಿ ! ಮತ್ತು ಬ್ರಹ್ಮವರ್ಚಸ್ಸುಳ್ಳ ವರೆಲ್ಲರಿಗೂ ನೀನು ಪುರಾಣಾಚಾರ್ಯನಾಗಿರು !" ಎಂದನು. ಓ ಶೌನಕ ಮಹರ್ಷೀ! ರುದ್ರನು ಹೀಗೆಂದು ಆ ಮಾರ್ಕಂಡೇಯನಿಗೆ ವರಗಳನ್ನು

ಕೊಟ್ಟು, ಅಲ್ಲಿಂದ ಹಿಂತಿರುಗಿ, ಆ ಮಹರ್ಷಿಯು ಹಿಂದೆ ಭಗವನ್ಮಾಯೆ ಯನ್ನು ಪ್ರತ್ಯಕ್ಷವಾಗಿ ಕಂಡ ಕಥೆಯನ್ನೆಲ್ಲಾ ಪಾರ್ವತೀದೇವಿಗೆ ವಿವರಿಸಿ ಹೇಳುತ್ತ, ತನ್ನ ಸ್ಥಾನಕ್ಕೆ ಬಂದು ಸೇರಿದನು. ಇತ್ತಲಾಗಿ ಭಾರ್ಗವೋತ್ತಮನಾದ ಮಾರ್ಕಂಡೇಯನೂಕೂಡ,ಯೋಗಪ್ರಭಾವವನ್ನೂ,ಭಗವಂತನಾದ ಹರಿಯಲ್ಲಿ ಅನನ್ಯಪ್ರಯೋಜನವಾದ ಭಕ್ತಿಯನ್ನೂ ಸಾಧಿಸಿ, ಈಗಲೂ ಭೂಮಿಯಲ್ಲಿ ಸಂಚರಿಸುತ್ತಿರುವನೆಂಬುದಕ್ಕೆ ಸಂದೇಹವಿಲ್ಲ! ಹೀಗೆ ಮಾರ್ಕಂಡೇಯನು ಪ್ರತ್ಯಕ್ಷವಾಗಿ ಅನುಭವಿಸಿದ ಭಗವನ್ಮಾಯಾಪ್ರಭಾವವನ್ನು ನಿಮಗೆ ತಿಳಿಸಿದೆನು. ಸಂಸಾರವು ಅನಾದಿಯೆಂಬುದನ್ನು ತಿಳಿಯದ ಕೆಲವರು, ಜೀವನಿಗೆ ಸಂಸಾರವೆಂಬುದು, ಮಾರ್ಕಂಡೇಯನಿಗೆ ಲಭಿಸಿದ ಮಾಯಾ ಪ್ರಭಾವದರ್ಶನದಂತೆ, ಯಾವಾಗಲೋ ಒಮ್ಮೆಮಾತ್ರ ಪ್ರಾಪ್ತವಾಗುವುದೆಂದು ಹೇಳುವರು. ಸಂಸಾರವೆಂಬುದು ಅನಾದಿಯಾಗಿ ಚಕ್ರದಂತೆ ಮರಳಿಮರಳಿ ಬರುವುದೇಹೊರತು ಕಾದಾಚಿತ್ಕವಲ್ಲ! ಭಗವಚ್ಚರಿತ್ರಗರ್ಭಿತವಾದ ಈ ಮಾರ್ಕಂಡೇಯಚರಿತ್ರವನ್ನು ಯಾರು ಮತ್ತೊಬ್ಬರಿಗೆ ಹೇಳುವರೋ, ಯಾರು ಇತರರಿಂದ ಕೇಳುವರೋ ಅವರಿಬ್ಬರೂ ಕರ್ಮನಿಮಿತ್ತವಾದ ಸಂಸಾರದಲ್ಲಿ ಸಿಕ್ಕಲಾರರು! ಇದು ಹತ್ತನೆಯ ಅಧ್ಯಾಯವು.

---

## ಮಹಾಪುರುಷವರ್ಣನವು. ದ್ವಾದಶಾದಿತ್ಯವ್ಯೂಹಾದಿಗಳು.

ತಿರುಗಿ ಶೌನಕಮುನಿಯು ಸೂತಪೌರಾಣಿಕನನ್ನು ಪ್ರಶ್ನೆಮಾಡುವನು. “ಓ ಭಾಗವತೋತ್ತಮಾ! ನೀನು ಅನೇಕವಿಷಯಗಳನ್ನು ತಿಳಿದವನು. ಪುರಾಣಪಾಂಚರಾತ್ರಾದಿಸಿದ್ಧಾಂತಗಳ ತತ್ವವೆಲ್ಲವನ್ನೂ ನಿಶ್ಚಯವಾಗಿ ಬಲ್ಲವನು. ಆದುದರಿಂದ, ನಿನ್ನಲ್ಲಿ ಇದೊಂದು ವಿಚಾರವನ್ನು ಕೇಳಿ ತಿಳಿಯಬೇಕೆಂದಿರುವೆವು. ಭಗವದಾರಾಧನತಂತ್ರದಲ್ಲಿ ನಿಷ್ಠೆಯುಳ್ಳವರು, ಕೇವಲ ಶುದ್ಧಸತ್ವಮಯವಾದ ವಿಗ್ರಹವುಳ್ಳ ಶ್ರಿಯಃಪತಿಯನ್ನು, ಅರ್ಚಾದಿಗಳಿಂದ ಪೂಜಿಸುವಾಗ, ಆ ಭಗವಂತನ ಕೈ, ಕಾಲು ಮೊದಲಾದ ಅಂಗಗಳನ್ನೂ, ಹೃದಯವೇ ಮೊದಲಾದ ಉಪಾಂಗಗಳನ್ನೂ, ಸುದರ್ಶನಾದ್ಯಾಯುಧಗಳನ್ನೂ, ವನಮಾಲಾದಿಭೂಷಣಗಳನ್ನೂ, ಯಾವಯಾವ ರೂಪವೊಂ

ಮನಸ್ಸಿನಲ್ಲಿ ಧ್ಯಾನಿಸುವರು ? ಅವುಗಳನ್ನು ಯಾವಯಾವ ತತ್ವಾಭಿಮಾನಿ ದೇವತೆಗಳನ್ನಾಗಿ ಕಲ್ಪಿಸುವರು ? ಈ ವಿಚಾರವನ್ನು ನಮಗೆ ತಿಳಿಸಬೇಕು. ಮತ್ತು ಭಗವದಾರಾಧನೆಗೆ ಅವಶ್ಯಕಗಳಾದ ಇತರವಿಚಾರಗಳನ್ನೂ ಹೇಳ ಬೇಕು. ಇವುಗಳನ್ನು ತಿಳಿಯಬೇಕೆಂಬ ಕುತೂಹಲವು ನಮಗೆ ಬಹಳವಾಗಿ ರುವುದು. ಆ ಭಗವಂತನ ಅಂಗಾದಿಗಳನ್ನು ಆಯಾತತ್ವಗಳ ರೂಪ ದಿಂದ ಭಾವಿಸಿ ಆರಾಧಿಸತಕ್ಕವರು, ಜರಾಮರಣಗಳನ್ನು ಜಯಿಸಿ,ಮುಕ್ತಿ ಯನ್ನು ಹೊಂದುವರಲ್ಲವೆ ?" ಎಂದನು. ಅದಕ್ಕಾ ಸೂತಪೌರಾಣಿಕನು "ಓ ಮಹರ್ಷೀ ! ಕೇಳು ! ನಾನು ಮೊದಲು ಗುರುಗಳಿಗೆ ನಮಸ್ಕರಿಸಿ, ಆ ಭಗ ವಂತನ ಅಂಗಾದಿಗಳಿಗೆ ಅಭಿಮಾನಿದೇವತೆಗಳೆನಿಸಿದ ಆಯಾವಿಭೂತಿಗಳೆಲ್ಲ ವನ್ನೂ ವಿವರಿಸುವೆನು. ಬ್ರಹ್ಮ ನಾರದರೇ ಮೊದಲಾದ ಆಚಾರ್ಯಪರಂ ಪರೆಯಿಂದಲೂ, ಆಗಮಪ್ರಮಾಣದಿಂದಲೂ, ಪಾಂಚರಾತ್ರವಾಕ್ಯಗ ಳಿಂದಲೂ, ಆ ಭಗವದ್ವಿಭೂತಿಗಳು ಮುಂದೆ ಹೇಳುವಂತೆ ನಿರ್ಣಯಿಸಲ್ಪ ಟ್ಟಿರುವುವು. ಪ್ರಕೃತಿ, ಮಹತ್ತು, ಅಹಂಕಾರ, ಪಂಚಭೂತಗಳು, ಕಾಲ, ಎಂಬೀ ಒಂಬತ್ತುತತ್ವಗಳಿಂದಲೂ, ಇವುಗಳ ವಿಕಾರವೆನಿಸಿಕೊಂಡ, ಏಕಾ ದಶೇಂದ್ರಿಯಗಳಿಂದಲೂ, ಪಂಚತನ್ಮಾತ್ರಗಳಿಂದಲೂ ನಿರ್ಮಿತವಾಗಿ, ಜೀವರಾಶಿಗಳೊಡಗೂಡಿದ, ತ್ರೈಲೋಕ್ಯವನ್ನೂ ತನ್ನಲ್ಲಿ ಒಳಕೊಂಡಿರುವ ಬ್ರಹ್ಮಾಂಡವೇ ವಿರಾಟ್ಟೆನಿಸುವುದು. ಸಜೀವವಾದ * ಈ ಬ್ರಹ್ಮಾಂಡವೇ ಪರಮಪುರುಷನ ರೂಪವೆಂದು ತಿಳಿ ! ಹೇಗೆಂದರೆ,ತಲಾತಲವೇ ಮೊದಲಾದ ಕೆಳಗಿನ ಏಳುಲೋಕಗಳೊಡಗೂಡಿದ ಭೂಮಿಯೇ ಆ ವಿರಾಟ್ಪುರುಷನ ಪಾದಗಳು ! ಮೇಲಿನ ದ್ಯುಲೋಕವೇ ಅವನ ಶಿರಸ್ಸು ! ಆಕಾಶವು ನಾಭಿ ! ಸೂರ್ಯನೇ ಕಣ್ಣುಗಳು! ವಾಯುವೇ ಮೂಗು! ದಿಕ್ಕುಗಳೇ ಕಿವಿಗಳು. ಪ್ರಜಾ ಧಿಪತಿಯೇ ಅವನ ಪುರುಷಲಿಂಗವು! ಮೃತ್ಯುವೇ ಅಪಾನವು! (ಗುದವು) ಲೋಕಪಾಲರೇ ತೋಳುಗಳು. ಚಂದ್ರನೇ ಮನಸ್ಸು!ಯಮನೇ ಹುಬ್ಬುಗಳು

---

* ಇಲ್ಲಿ ಭಗವಂತನ ದಿವ್ಯವಿಗ್ರಹವೇ ಬ್ರಹ್ಮಾಂಡಕ್ಕೆ ಅಭಿಮಾನಿದೇವತೆಯೆಂ ದರ್ಥವು. ಹೀಗೆಯೇ ಮುಂದೆಯೂ, ಭಗವಂತನ ಆಯಾ ಅವಯವಗಳೂ, ಆಭರ ಣಾಯುಧಾದಿಗಳೂ, ಬ್ರಹ್ಮಾಂಡಾವಯವಗಳಿಗೆ ಅಧಿದೇವತೆಗಳೆಂದು ತಿಳಿಯಬೇಕು.

ಲಜ್ಜೆಯು ಮೇಲಿನ ತುಟಿ! ಲೋಭವು ಕೆಳಗಿನ ತುಟಿ! ಚಂದ್ರಿಕೆಯೇ ಅವನ ದಂತಗಳು! ಭ್ರಮವೇ ಅವನ ಮಂದಹಾಸವು! ವೃಕ್ಷಗಳೇ ಅವನ ಮೈಯಲ್ಲಿರುವ ರೋಮಗಳು! ಮೇಘಗಳೇ ಅವನ'ತಲೆಕೂದಲುಗಳು. ವ್ಯಷ್ಟಿಪುರುಷನು - ಯಾವವಿಧವಾದ ಅವಯವಸಂಸ್ಥಾನಗಳಿಂದ, ಎಷ್ಟುಪ್ರಮಾಣವುಳ್ಳವನಾಗಿರುವನೋ, ಹಾಗೆಯೇ ಆ ಮಹಾಪುರುಷನೂಕೂಡ, ಆಯಾಲೋಕಾಭಿಮಾನಿದೇವತಾತ್ಮಕಗಳಾದ ಪಾದಾದ್ಯವಯವಗಳ ಸಂಸ್ಥಾನಗಳಿಂದ, ಅದಕ್ಕೆ ತಕ್ಕ ಪ್ರಮಾಣವುಳ್ಳವನಾಗಿರುವನು. ಮತ್ತು ಆತನು ಕೌಸ್ತುಭರತ್ನವೆಂಬ ನೆವದಿಂದ ತನ್ನ ಆತ್ಮಜ್ಯೋತಿಯನ್ನು ಎಂದರೆ, ತನಗೆ ವಿಶೇಷಣಭೂತವಾಗಿ, ಜ್ಞಾನಾಕಾರವಾಗಿರುವ ಚಿದಾತ್ಮಸ್ವರೂಪವನ್ನು ಧರಿಸಿರುವನು. ಇದರಿಂದ ಆ ಕೌಸ್ತುಭವೇ ಜೀವವರ್ಗಗಳಿಗೆ ಅಭಿಮಾನಿದೇವತೆಯೆನಿಸಿರುವುದು. ರತ್ನಪ್ರಭೆಯಂತೆ ಜೀವನ ಧರ್ಮಭೂತಜ್ಞಾನವು ಎಲ್ಲೆಲ್ಲಿಯೂ ವ್ಯಾಪಿಸಬಲ್ಲುದಾಗಿ ವಿಭುವೆನಿಸಿರುವುದು. ಭಗವಂತನು ಆ ಪ್ರಭೆಯನ್ನು ತನ್ನ ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯ ರೂಪದಿಂದ ಧರಿಸಿರುವನು. ಆತನು ಸತ್ವಾದಿಗುಣಮಯವಾದ ಪ್ರಕೃತಿಯನ್ನೇ ವನಮಾಲೆಯನ್ನಾಗಿ ಧರಿಸಿರುವನು. ಗಾಯತ್ರಿ ಮೊದಲಾದ ಛಂದಸ್ಸುಗಳೇ ಅವನ ವಸ್ತ್ರಗಳು. ವರ್ಣತ್ರಯಾತ್ಮಕವಾದ ಪ್ರಣವವೇ ಅವನು ಧರಿಸಿರುವ ಮೂರೆಳೆಯ ಬ್ರಹ್ಮಸೂತ್ರವು. ಸಾಂಖ್ಯಯೋಗಗಳೂ, ವೇದಗಳೂ ಇವೆರಡೂ ಅವನ ಮಕರಕುಂಡಲಗಳು. ಸಮಸ್ತಲೋಕಗಳಿಗೂ ಉತ್ತಮವೆನಿಸಿದ, ಮತ್ತು ಸಮಸ್ತಚೇತನರಿಗೂ ಅಭಯಪ್ರದವಾದ ಬ್ರಹ್ಮಲೋಕವೇ ಅತನ ಕಿರೀಟವು. ಅವನು ಶಯನಿಸಿರತಕ್ಕ ಶೇಷಶಯನವೇ ಮೂಲಪ್ರಕೃತಿ! ಧರ್ಮಜ್ಞಾನಾದಿಗಳಿಂದ ಕೂಡಿದ ಶುದ್ಧಸತ್ವವು ಅವನಿಗೆ ಆಸನವಾದ ಪದ್ಮವೆನಿಸಿರುವುದು. ಓಜಸ್ಸು, (ಇಂದ್ರಿಯಶಕ್ತಿ) ಸಹಸ್ಸು, (ಮನಶ್ಶಕ್ತಿ), ಬಲ, (ದೇಹಬಲ) ಎಂಬಿವುಗಳಿಂದ ಕೂಡಿದ ಮುಖ್ಯಪ್ರಾಣತತ್ವವೇ ಅವನ ಗದೆ! ಜಲತತ್ವವೇ ಅವನ ಪಾಂಚಜನ್ಯವೆಂಬ ಶಂಖವು! ತೇಜಸ್ತತ್ವವೇ ಸುದರ್ಶನವೆಂಬ ಚಕ್ರಾಯುಧವು! ಆಕಾಶದಂತೆ ನೀಲವರ್ಣವುಳ್ಳ ಆ ಪರಮಪುರುಷನಿಗೆ ನಭಸ್ತತ್ವವೇ ನಂದಕವೆಂಬ ಖಡ್ಗವು! ತಪಸ್ಸೇ ಅವನ ಗುರಾಣಿ! ಕಾಲವೇ

ಶಾರ್ಙ್ಗವೆಂಬ ಅವನ ಧನುಸ್ಸು! ಕರ್ಮಗಳೇ ಅವನ ಬತ್ತಳಿಕೆ! ಇಂದ್ರಿಯಗಳೇ ಬಾಣಗಳು! (ಅಥವಾ ರಥಾಶ್ವಗಳು). ಮನಸ್ಸು ಅಥವಾ ದೇಹಾತ್ಮಾಭಿಮಾನವು ಇವನ ರಥವು! ಅರ್ಚಾವತಾರಗಳಲ್ಲಿ ಆವಾಹಿತವಾದ ಅವನ ಅಂಶವೇ ತನ್ಮಾತ್ರಗಳು! ಇಂದ್ರಿಯವ್ಯಾಪಾರಗಳೇ ಆತನ ಕ್ರಿಯೆಗಳು! ಅವನ ಆಸನದಲ್ಲಿರುವ ಪದ್ಮಾಕಾರವಾದ ಮಂಡಲವೇ ಯಜ್ಞಭೂಮಿ! ಯಜಮಾನನಿಗೆ ನಡೆಸತಕ್ಕ ಯಜ್ಞದೀಕ್ಷಾಸಂಸ್ಕಾರವೇ ಸರ್ವಪಾಪನಿವಾರಕವೆನಿಸಿದ ಆತನ ಪರಿಚರ್ಯೆಗಳು. ಭಗವಚ್ಛಬ್ದದ ಅವಯವಾರ್ಥವೆನಿಸಿಕೊಂಡ ಜ್ಞಾನಾದಿಷಾಡ್ಗುಣ್ಯವೇ ಅವನು ಲೀಲಾರ್ಥವಾಗಿ ಹಿಡಿದಿರುವ ಕಮಲವು. ಧರ್ಮ, ಮತ್ತು ಯಶಸ್ಸು, ಇವೆರಡೂ ಕ್ರಮವಾಗಿ ಅವನ ಚಾಮರ ಮತ್ತು ಬೀಸಣಿಗೆಗಳು! ನಿರ್ಭಯವಾದ ವೈಕುಂಠವೇ ಅವನ ಛತ್ರವು. ಋಗ್ಯಜುಸ್ಸಾಮಾತ್ಮಕವಾದ ವೇದವೇ ಆ ಪರಮಪುರುಷನ ವಾಹನವಾದ ಗರುಡನು. ಶ್ರೀದೇವಿಯೇ ಅವನನ್ನು ಎಡೆಬಿಡದೆ ಅನುಸರಿಸಿರತಕ್ಕ ಶಕ್ತಿ. ಮತ್ತು ಆ ಶ್ರೀದೇವಿಯೇ ಪರಮಾತ್ಮನಿಗೆ ಧರ್ಮಭೂತವಾದ ಪ್ರಭೆ! ಸೇನಾಪತಿಯಾದ ವಿಷ್ವಕ್ಸೇನನು ಆ ಪರಮಾತ್ಮನ ಮೂರ್ತಿವಿಶೇಷವೆನಿಸುವನು. ನಂದಸುನಂದರೇ ಮೊದಲಾದ ಎಂಟುಮಂದಿ ದ್ವಾರಪಾಲಕರೂ ಆತನ ಅಣಿಮಾದ್ಯಷ್ಟಗುಣಗಳು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ಈ ನಾಲ್ಕುಮೂರ್ತಿಗಳೂ ಸಾಕ್ಷಾತ್ತಾಗಿ ಆ ಪರಮಪುರುಷನ ಸ್ವರೂಪವೆಂದೇ ಹೇಳಲ್ಪಡುವುವು. ಮತ್ತು ಮೇಲೆ ಹೇಳಿದ ಚತುರ್ಮೂರ್ತಿಗಳಿಂದಲೇ ಭಗವಂತನು, ಜಾಗರ, ಸ್ವಪ್ನ, ಸುಷುಪ್ತಿ, ಮುಕ್ತಿಯೆಂಬ ಅವಸ್ಥಾಭೇದಗಳಲ್ಲಿ, ಕ್ರಮವಾಗಿ, ವಿಶ್ವ, ತೈಜಸ, ಪ್ರಾಜ್ಞ, ತುರೀಯಗಳೆಂದು ವ್ಯವಹರಿಸಲ್ಪಡುವ ಜೀವನ ಆಯಾ ಅವಸ್ಥೆಗಳಿಗೆ ಅಭಿಮಾನಿದೇವತೆಯೆನಿಸಿರುವನು. ಮತ್ತು ಅಂಗಗಳಿಂದಲೂ, ಉಪಾಂಗಗಳಿಂದಲೂ, ಆಯುಧಗಳಿಂದಲೂ, ಭೂಷಣಗಳಿಂದಲೂ ಕೂಡಿ, ಮೇಲೆ ಹೇಳಿದಂತೆ ವಾಸುದೇವಾದಿಚತುರ್ಮೂರ್ತಿಗಳನ್ನು ಧರಿಸಿರುವ ಆ ಪರಮಪುರುಷನೇ, ಆ ನಾಲ್ಕುಮೂರ್ತಿಗಳಿಂದ ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷಗಳೆಂಬ ನಾಲ್ಕು ವ್ಯಾಪಾರಗಳನ್ನೂ ನಿರ್ವಹಿಸುತ್ತಿರುವನು. ಓ ಬ್ರಾಹ್ಮಣೋತ್ತಮಾ ! ಶೌ

ನಕಾ! ಆ ಶ್ರೀಹರಿಯೇ, ಬ್ರಹ್ಮರುದ್ರಾದಿಸಂಜ್ಞೆಗಳನ್ನು ಹೊಂದಿ, ತನ್ನ ಮಾಯೆಯಿಂದ ಸೃಷ್ಟಿಸಂಹಾರಗಳನ್ನು ನಡೆಸತಕ್ಕವನು. ಸ್ವರೂಪಸ್ವಭಾವಗಳಲ್ಲಿ ನಿರತಿಶಯವಾದ ಮೇಲ್ಮೆಯನ್ನು ಪಡೆದಿರುವುದರಿಂದ ಬ್ರಹ್ಮನೆನಿಸುವನು. ಆತನೇ ಸರ್ವಕಾರಣಭೂತನು. ಆತನೇ ಸರ್ವಸಾಕ್ಷಿ! ತನ್ನ ಮಹಿಮೆಯಿಂದ ಎಲ್ಲೆಲ್ಲಿಯೂ ಪೂರ್ಣನಾಗಿರುವನು? ಅವಾಪ್ತಸಮಸ್ತಕಾಮನು! ಜ್ಞಾನಸಂಕೋಚವಿಲ್ಲದವನು! ಹೀಗೆ ಸರ್ವವ್ಯಾಪಿಯಾಗಿ, ಸರ್ವಲೋಕಪ್ರಸಿದ್ಧನಾಗಿದ್ದರೂ, ಶಾಸ್ತ್ರಗಳು ಅವನನ್ನು ಗೂಢನೆಂದೇ ಹೇಳುತ್ತಿರುವುವು. ಆದರೆ, ಅವನು ತನ್ನನ್ನು ಉಪಾಸಿಸತಕ್ಕವರ ಯೋಗಪರಿಶುದ್ಧವಾದ ಮನಸ್ಸಿಗೆ ಸುಲಭವಾಗಿ ಗೋಚರಿಸುವನು." ಎಂದು ಹೇಳಿ ಸೂತಪೌರಾಣಿಕನು, ಆ ಪರಮಾತ್ಮಧ್ಯಾನದಿಂದ ಆನಂದಪರವಶನಾಗಿ ಹೀಗೆಂದು ಸ್ತುತಿಸುವನು. * "ಓ ಶ್ರೀಕೃಷ್ಣಾ! ಅರ್ಜುನಸಖಾ! ಯದುಪುಂಗವಾ! ಲೋಕಕಂಟಕರಾದ ದುಷ್ಟಕ್ಷತ್ರಿಯರ ವಂಶಕ್ಕೆ ದಾವಾಗ್ನಿಪ್ರಾಯನಾದವನೇ! ಅಪಾರವೀರ್ಯವುಳ್ಳವನೇ! ಗೋವಿಂದಾ! ಗೋಬ್ರಾಹ್ಮಣದೇವತೆಗಳ ದುಃಖವನ್ನು ನಿವಾರಿಸವುದಕ್ಕಾಗಿ ಅವತರಿಸಿದವನೇ! ಪುಣ್ಯಶ್ಲೋಕಾ! ಶ್ರವಣಮಂಗಳಾ! ನಿನ್ನ ಭೃತ್ಯರಾದ ನಮ್ಮನ್ನು ರಕ್ಷಿಸು" ಎಂದು ಪ್ರಾರ್ಥಿಸಿ, ತಿರುಗಿ ಶೌನಕಾದಿಗಳನ್ನು ಕುರಿತು "ಓ ಬ್ರಾಹ್ಮಣೋತ್ತಮರೆ! ಯಾವನು ಪ್ರಾತಃಕಾಲದಲ್ಲಿ ನಿದ್ರೆಯಿಂದೆದ್ದೊಡನೆ, ಆ ಭಗವಂತನಲ್ಲಿಯೇ ನಟ್ಟಮನಸ್ಸುಳ್ಳವನಾಗಿ, ಇಂದ್ರಿಯಗಳನ್ನಡಗಿಸಿ ಮಹಾಪುರುಷಲಕ್ಷಣವನ್ನು ನಿರೂಪಿಸುವ ಈ ಪ್ರಕರಣವನ್ನು ಭಕ್ತಿಯಿಂದ ಜಪಿಸುವನೋ, ಅವನು ತನ್ನ ಹೃದಯಗುಹೆಯಲ್ಲಿರುವ ಆ ಪರಬ್ರಹ್ಮಸ್ವರೂಪವನ್ನು ಯಥಾಸ್ಥಿತವಾಗಿ ಕಂಡುಕೊಳ್ಳುವನು" ಎಂದನು.

ತಿರುಗಿ ಶೌನಕನು ಪ್ರಶ್ನೆಮಾಡುವನು. "ಓ ಮಹಾತ್ಮಾ! ಸೂತಾ! ಸೂರ್ಯಾನುವರ್ತಿಗಳಾದ ಏಳುಗಣಗಳು, ಒಂದೊಂದು ತಿಂಗಳಿಗೂ ಬೇರೆ ಬೇರೆ ಹೆಸರಿನಿಂದ, ಬೇರೆಬೇರೆ ವ್ಯಾಪಾರಗಳನ್ನು ನಡೆಸುತ್ತ, ಸೂರ್ಯಾತ್ಮಕ

* ಇಲ್ಲಿ ಹೇಳಿರುವ ವಿಶೇಷಣಗಳಿಂದ ಕ್ರಮವಾಗಿ, ಭಗವಂತನಲ್ಲಿರುವ ಸರ್ವಾನಂದಕರತ್ವ, ಸೌಶೀಲ್ಯ, ಸೌಲಭ್ಯಾದಿಗುಣಗಳು ವ್ಯಕ್ತವಾಗುವುವು.

ನಾದ ಆ ಭಗವಂತನನ್ನು ಆರಾಧಿಸುವುವೆಂದು, * (ಹಿಂದೆ ಐದನೆಯ ಸ್ಕಂಧದಲ್ಲಿ) ಶುಕಮುನಿಯು ಪರೀಕ್ಷಿದ್ರಾಜನಿಗೆ ಹೇಳಿದುದಾಗಿ ನೀನು ಹೇಳಿದ್ದೆಯಲ್ಲವೆ? ಆಯಾ ಗಣಗಳ ಹೆಸರುಗಳನ್ನೂ, ಆಯಾತಿಂಗಳಲ್ಲಿ ಆ ಗಣಗಳು ತಮಗೆ ಪತಿಯಾದ ಸೂರ್ಯನ ನಿಯಮಕ್ಕೊಳಪಟ್ಟು ನಡೆಸುವ ಬೇರೆಬೇರೆ ಕಾರ್ಯಗಳನ್ನೂ, ನಾವು ವಿವರವಾಗಿ ಕೇಳಿ ತಿಳಿಯಬೇಕೆಂದಿರುವೆವು. ಕೃಪೆಯಿಟ್ಟು ತಿಳಿಸಬೇಕು" ಎಂದನು. ಅದಕ್ಕಾ ಸೂತನು "ಓ ಬ್ರಾಹ್ಮಣೋತ್ತಮಾ! ಕೇಳು! ಸಮಸ್ತಪ್ರಾಣಿಗಳಿಗೂ ಆತ್ಮಭೂತನಾದ ವಿಷ್ಣುವು, ಲೋಕಯಾತ್ರೆಯನ್ನು ನಿರ್ವಹಿಸುವುದಕ್ಕಾಗಿ ತನ್ನ ಮಾಯೆಯಿಂದ ಸೂರ್ಯಶರೀರವನ್ನು ನಿರ್ಮಿಸಿದನು. ಆದರಿಂದಲೇ ಸೂರ್ಯನು ಕ್ಷಣಮಾತ್ರವೂ ವಿರಾಮವಿಲ್ಲದೆ ಲೋಕಗಳನ್ನು ಸುತ್ತುತ್ತಿರುವನು. ಆದರೆ, ಸಮಸ್ತಜಗತ್ತಿಗೂ ಆದಿಕರ್ತನಾಗಿಯೂ, ಅದ್ವಿತೀಯನಾಗಿಯೂ, ಇರುವ ಆ ಶ್ರೀಹರಿಯು, ತಾನೇ ಸೂರ್ಯಶರೀರಕನಾಗಿ ಆ ಕಾರ್ಯಗಳನ್ನು ನಡೆಸುತ್ತಿರುವನೆಂದು ತಿಳಿ! ಸಮಸ್ತವೈದಿಕಕ್ರಿಯೆಗಳಿಗೂ ಆತನೇ ಮೂಲವು. ಯಜ್ಞಮೂರ್ತಿಯಾದ ಆ ವಿಷ್ಣುವೊಬ್ಬನೇ ಯಜ್ಞಗಳಿಗೆ ವಿಹಿತಗಳಾದ ಕಾಲ, ದೇಶ, ಕ್ರಿಯೆ, ಕರ್ತ್ರ, ಕರಣ, ಕಾರ್ಯ, ಆಗಮ, ದ್ರವ್ಯ, ಫಲವೆಂಬ ಒಂಬತ್ತು ವಿಧಗಳಿಂದ ಕರೆಯಲ್ಪಡುವಂತೆ, ಸೂರ್ಯಶರೀರಕನಾದ ಆ ಪರಮಪುರುಷನು ಒಬ್ಬನೇ ಆಗಿದ್ದರೂ, ಪರಾಶರಾದಿಮಹರ್ಷಿಗಳು, ಅವನನ್ನು ಹನ್ನೆರಡು ನಾಮಗಳಿಂದ ಬೇರೆಬೇರೆಯಾಗಿ ಕರೆಯುವರು. ಆ ಭಗವಂತನು ಚೈತ್ರಾದಿಮಾಸಗಳಲ್ಲಿ, ಒಂದೊಂದು ತಿಂಗಳಿಗೆ ಒಂದೊಂದು ಗಣದಂತೆ ಬೇರೆ ಬೇರೆ ಹನ್ನೆರಡುಗಣಗಳೊಡಗೂಡಿ, ಕಾಲವಿಚ್ಛಿತ್ತಿಯನ್ನು ತೋರಿಸತಕ್ಕ ಸೂರ್ಯರೂಪದಿಂದ, ಲೋಕಯಾತ್ರೆಯನ್ನು ನಿರ್ವಹಿಸುವುದಕ್ಕಾಗಿ ಸಂಚರಿಸುತ್ತಿರುವನು. ಈ ಒಂದೊಂದುತಿಂಗಳಲ್ಲಿಯೂ ಸೂರ್ಯನಾಮಗಳು, ಅಪ್ಸರಸಿ

---

* "ತಥಾನ್ಯೇಚ ಋಷಯೋ ಗಂಧರ್ವಾ ಅಪ್ಸರಸೋ ನಾಗಾ ಗ್ರಾಮಣ್ಯೋ ಯಾತುಧಾನಾ ದೇವಾ ಇತ್ಯೇಕೈಕಶೋ ಗಣಾಸ್ಸಪ್ತ ಚತುರ್ದಶ ಮಾಸಿ ಭಗವಂತಂ ಸೂರ್ಯಮಾತ್ಮಾನಂ ನಾನಾನಾಮಾನಂ ಪೃಥಙ್ನಾಮಾನಃ ಪೃಥಕ್ಕರ್ಮಭಿರ್ದ್ವಂದ್ವಶ ಉಪಾಸತೇ" ಎಂದು ಅಲ್ಲಿನ ವಾಕ್ಯವು.

ಯರು, ರಾಕ್ಷಸರು, ನಾಗರು, ಯಕ್ಷರು, ಋಷಿಗಳು, ಗಂಧರ್ವರೆಂಬವರು ಬೇರೆಬೇರೆ ಯಾಗಿದ್ದು, ಬೇರೆಬೇರೆ ಗಣವೆನಿಸುವುದು.

ಮೊದಲನೆಯದಾದ ಚೈತ್ರಮಾಸದಲ್ಲಿ ಧಾತೃವೆಂಬ ಸೂರ್ಯನನ್ನು ಕೃತಸ್ಥಲಿಯೆಂಬ ಅಪ್ಸರಸಿಯೂ, ಹೇತಿಯೆಂಬ ರಾಕ್ಷಸನೂ, ವಾಸುಕಿಯೆಂಬ ನಾಗನೂ, ರಥಕೃತ್ತೆಂಬ ಯಕ್ಷನೂ, ಪುಲಸ್ತ್ಯಋಷಿಯೂ, ತುಂಬುರುವೆಂಬ ಗಂಧರ್ವನೂ ತಮ್ಮತಮ್ಮ ಕಾರ್ಯಗಳಿಂದ ಸೇವಿಸುವರು. ಎರಡನೆಯದಾದ ವೈಶಾಖಮಾಸದಲ್ಲಿ, ಅರ್ಯಮ ಸೂರ್ಯ;ನೆಂಬನನ್ನು ಪುಲಹಋಷಿ, ರಥೌಜಸ್ಸೆಂಬ ಯಕ್ಷನು, ಪ್ರಹೇತಿಯೆಂಬ ರಾಕ್ಷಸನು ; ಪೂಜಿಕಸ್ಥಲಿಯೆಂಬ ಅಪ್ಸರಸಿ; ನಾರದನೆಂಬ ಗಂಧರ್ವನು ಕಚ್ಛನೀರನೆಂಬ ನಾಗನು ; ಈ ಆರುಮಂದಿಯೂ ಸೇವಿಸುವರು. ಜ್ಯೇಷ್ಠಮಾಸದಲ್ಲಿ ಮಿತ್ರನೆಂಬ ಸೂರ್ಯನನ್ನು, ಅತ್ರಿಋಷಿಯು ಪೌರುಷೇಯನೆಂಬ ರಾಕ್ಷಸನು ತಕ್ಷಕನೆಂಬ ನಾಗನು, ಮೇನಕೆಯೆಂಬ ಅಪ್ಸರಸಿ, ಹಾಹಾ ಎಂಬ ಗಂಧರ್ವನು, ರಥಸ್ವನನೆಂಬ ಯಕ್ಷನು, ಇವರಾರುಮಂದಿಯೂ ಸೇವಿಸುವರು. ಆಷಾಢಮಾಸದಲ್ಲಿ ವರುಣನೆಂಬ ಸೂರ್ಯನನ್ನು, ವಸಿಷ್ಠಋಷಿಯೂ, ರಂಭೆಯೆಂಬ ಅಪ್ಸರಸಿಯೂ, ಸಹಜನ್ಯನೆಂಬ ಯಕ್ಷನೂ, ಹೂಹೂಗಂಧರ್ವನೂ, ಶುಕನೆಂಬ ನಾಗನೂ, ಚಿತ್ರಸ್ವನನೆಂಬ ರಾಕ್ಷಸನೂ ಸೇವಿಸುವರು. ಶ್ರಾವಣಮಾಸದಲ್ಲಿ ಇಂದ್ರನೆಂಬ ಸೂರ್ಯನನ್ನು. ವಿಶ್ವಾವಸುವೆಂಬ ಗಂಧರ್ವನೂ,ಶ್ರೋತನೆಂಬ ಯಕ್ಷನೂ, ಏಲಾಪುತ್ರನೆಂಬ ನಾಗನೂ, ಅಂಗಿರಸ್ಸೆಂಬ ಋಷಿಯೂ, ಪ್ರಮ್ಲೋಚಸ್ಸೆಂಬ ಅಪ್ಸರಸಿಯೂ, ಚರ್ಯನೆಂಬ ರಾಕ್ಷಸನೂ, ಇವರಾರುಮಂದಿಯೂ ಸೇವಿಸುವರು. ಭಾದ್ರಪದಮಾಸದಲ್ಲಿ ವಿವಸ್ವಂತನೆಂಬ ಸೂರ್ಯನನ್ನು, ಉಗ್ರಸೇನನೆಂಬ ಗಂಧರ್ವನೂ,ವ್ಯಾಘ್ರನೆಂಬ ರಾಕ್ಷಸನೂ, ಆಸಾರಣನೆಂಬ ಯಕ್ಷನೂ,ಭೃಗುಋಷಿಯೂ,ಅನುಮ್ಲೋಚೆಯೆಂಬ ಅಪ್ಸರಸಿಯೂ ಶಂಖಪಾಲನೆಂಬನಾಗನೂ, ಇವರಾರುಮಂದಿಯೂ ಸೇವಿಸುವರು. ಮಾಘಮಾಸದಲ್ಲಿ,ಪೂಷನೆಂಬ ಸೂರ್ಯನನ್ನು,ಧನಂಜಯನೆಂಬ ನಾಗನು, ವಾತನೆಂಬ ರಾಕ್ಷಸನು, ಸುಷೇಣನೆಂಬ ಗಂಧರ್ವನು, ಸುರುಚಿಯೆಂಬ ಯಕ್ಷನು, ಘೃ

ತಾಚಿಯೆಂಬ ಅಪ್ಸರಸಿ,ಗೌತಮಋಷಿ, ಇವರಾರುಮಂದಿಯೂ ಸೇವಿಸುವರು. ಫಾಲ್ಗುನಮಾಸದಲ್ಲಿ ಪರ್ಜನ್ಯನೆಂಬ ಸೂರ್ಯನನ್ನು. ಋತುವರ್ಚಸ್ಸೆಂಬ ರಾಕ್ಷಸನು, ಭರದ್ವಾಜಋಷಿ, ಸೇನಜಿತ್ತೆಂಬ ಅಪ್ಸರಸಿ, ವಿಶ್ವನೆಂಬ ಗಂಧರ್ವನು, ಐರಾವತವೆಂಬ ನಾಗವು, ಇವರಾರುಮಂದಿಯೂ ಸೇವಿಸುವರು. ಮಾರ್ಗಶೀರ್ಷಮಾಸದಲ್ಲಿ ಅಂಶುಮಂತನೆಂಬ ಸೂರ್ಯನನ್ನು, ಕಶ್ಯಪಋಷಿ, ತಾರ್ಕ್ಷ್ಯನೆಂಬ ಯಕ್ಷನು. ಋತುಸೇನನೆಂಬ ಗಂಧರ್ವನು, ಊರ್ವಶಿಯೆಂಬ ಅಪ್ಸರಸಿ, ವಿದ್ಯುಚ್ಛತ್ರುವೆಂಬ ರಾಕ್ಷಸನು, ಮಹಾಶಂಖನೆಂಬ ನಾಗನು, ಇವರಾರುಮಂದಿಯೂ ಸೇವಿಸುವರು. ಪುಷ್ಯಮಾಸದಲ್ಲಿ ಭಗನೆಂಬ ಸೂರ್ಯನನ್ನು, ಸ್ಫೂರ್ಜನೆಂಬ ರಾಕ್ಷಸನು, ಅರಿಷ್ಟನೇಮಿಯೆಂಬ ಗಂಧರ್ವನು, ಊರ್ಣನೆಂಬ ಯಕ್ಷನು, ಆಯುವೆಂಬ ಋಷಿ, ಕರ್ಕೋಟಕನೆಂಬ ನಾಗನು, ಪೂರ್ವಚಿತ್ತಿಯೆಂಬ ಅಪ್ಸರಸಿ, ಈ ಆರುಮಂದಿಯೂ ಸೇವಿಸುವರು. ಆಶ್ವಯುಜಮಾಸದಲ್ಲಿ ತ್ವಷ್ಟನೆಂಬ ಸೂರ್ಯನನ್ನು, ಜಮದಗ್ನಿ ಋಷಿ,ಕಂಬಳಾಶ್ವನೆಂಬ ನಾಗನು, ತಿಲೋತ್ತಮೆಯೆಂಬ ಅಪ್ಸರಸಿ, ಬ್ರಹ್ಮೋಪೇತನೆಂಬ ರಾಕ್ಷಸನು. ಋತಜಿತ್ತೆಂಬ ಯಕ್ಷನು, ಧೃತರಾಷ್ಟ್ರನೆಂಬ ಗಂಧರ್ವನು. ಇವರಾರುಮಂದಿಯೂ ಸೇವಿಸುವರು. ಕಾರ್ತಿಕಮಾಸದಲ್ಲಿ ವಿಷ್ಣುವೆಂಬ ಸೂರ್ಯನನ್ನು,ಅಶ್ವತರನೆಂಬ ನಾಗನು, ರಂಭೆಯೆಂಬ ಅಪ್ಸರಸಿ, ಸೂರ್ಯವರ್ಚಸ್ಸೆಂಬ ಗಂಧರ್ವನು, ಸತ್ಯಜಿತ್ತೆಂಬ ಯಕ್ಷನು, ವಿಶ್ವಾಮಿತ್ರಋಷಿ, ಮಖಾಪೇತನೆಂಬ ರಾಕ್ಷಸನು, ಇವರಾರುಮಂದಿಯೂ ಸೇವಿಸುವರು. ಓ ಬ್ರಾಹ್ಮಣೋತ್ತಮಾ! ಇವರೆಲ್ಲರೂ ಆದಿತ್ಯರೂಪಿಯಾದ ಭಗವಂತನ ವಿಭೂತಿಗಳು. ಇವರನ್ನು ಪ್ರತಿದಿನವೂ ಸ್ಮರಿಸತಕ್ಕ ಮನುಷ್ಯರು ಸರ್ವಪಾಪಗಳಿಂದ ವಿಮುಕ್ತರಾಗುವರು ಹಿಂದೆ ಹೇಳಿದಂತೆ ಹನ್ನೆರಡುತಿಂಗಳಲ್ಲಿ, ಬೇರೆಬೇರೆ ನಾಮಭೇದಗಳಿಂದ ವ್ಯವಹರಿಸಲ್ಪಡುವ ಸೂರ್ಯನು. ದೇವನು, ಆರುಮಂದಿ ಪರಿವಾರಗಳಿಂದ ಸೇವಿತನಾಗಿ, ಲೋಕಗಳನ್ನು ಸಂಚರಿಸುತ್ತ, ಜೀವರಾಶಿಗಳಿಗೆ ಇಹಪರಗಳಲ್ಲಿ ಕ್ಷೇಮಕರವಾದ ಸದ್ಬುದ್ಧಿಯನ್ನು ಕೊಡುವನು. ಋಷಿಗಳು ಆದಿತ್ಯದೇವನನ್ನು ಋಗ್ಯಜುಸ್ಸಾಮಗಳೆಂಬ ಮೂರುಬಗೆಯ ವೇದಮಂತ್ರಗಳಿಂದಲೂ, ಸೂರ್ಯಸ್ವರೂಪವನ್ನು

ಪ್ರಕಾಶಗೊಳಿಸತಕ್ಕ ವಾಕ್ಯಗಳಿಂದಲೂ ಸ್ತುತಿಸುತ್ತಬರುವರು. ಗಂಧರ್ವರು ಅವನ ಗುಣಗಳನ್ನು ಮಧುರಗಾನದಿಂದ ಹಾಡುವರು. ಅಪ್ಸರಸಿಯರು ಅವನ ಮುಂದೆ ನರ್ತಿಸುತ್ತಬರುವರು. ನಾಗರು ಅವನ ರಥವನ್ನು ದೃಢವಾಗಿ ಬಿಗಿದುಕಟ್ಟುವರು. ಯಕ್ಷರು ರಥವನ್ನು ಮುಂದೆ ಎಳೆಯುವರು. ಬಲಾಢ್ಯರಾದ ರಾಕ್ಷಸರು ಆ ರಥದ ಹಿಂದೆಯೂ, ಉಭಯಪಾರ್ಶ್ವಗಳಲ್ಲಿಯೂ ಇದ್ದು ತಳ್ಳುವರು. ಇದಲ್ಲದೆ ವಾಲಖಿಲ್ಯರೆಂಬ ಅರುವತ್ತುಸಾವಿರಮಂದಿ ಬ್ರಹ್ಮರ್ಷಿಗಳು, ಆ ಆದಿತ್ಯನ ಮುಂದೆ ಅವನಿಗಿದಿರಾಗಿ ನಿಂತು, ನಾನಾವಿಧಗಳಾದ ಸ್ತುತಿಗಳಿಂದ ಆ ವಿಭುವನ್ನು ಸ್ತುತಿಸುತ್ತ ಹೋಗುವರು. ಹೀಗೆ ಭಗವಂತನಾದ ಶ್ರೀಹರಿಯು, ಪ್ರತಿಕಲ್ಪದಲ್ಲಿಯೂ ಚಿದಚಿಚ್ಛರೀರಕನಾದ ತನ್ನನ್ನು, ಹನ್ನೆರಡು ಗಣಗಳ ವ್ಯೂಹರೂಪವಾಗಿ ವಿಭಾಗಿಸಿಕೊಂಡು, ಸಮಸ್ತಲೋಕಗಳನ್ನೂ ತಮ್ಮ ತಮ್ಮ ಕರ್ಮಗಳಲ್ಲಿ ಪ್ರವರ್ತಿಸುವಹಾಗೆ ಮಾಡುವನು" ಎಂದನು. ಇದು ಹನ್ನೊಂದನೆಯ ಅಧ್ಯಾಯವು.

---

### ಈ ಭಾಗವತಪುರಾಣದೊಳಗಿನ ವಿಷಯಾನುಕ್ರಮಣಿಕೆ,ಮತ್ತು ಗ್ರಂಥಮಾಹಾತ್ಮ್ಯಾದಿಗಳು.

ಓ ಶೌನಕಾದಿಗಳೆ ! ಧರ್ಮಸ್ವರೂಪನಾದ ಶ್ರೀಕೃಷ್ಣನಿಗೂ, ಧರ್ಮಪ್ರವರ್ತಕರಾದ ವೇದವ್ಯಾಸಮಹರ್ಷಿಗೂ, ಚತುರ್ಮುಖಬ್ರಹ್ಮನಿಗೂ, ನಾರದ ಶುಕಾದಿ ಬ್ರಾಹ್ಮಣರಿಗೂ ನಮಸ್ಕರಿಸಿ, ಅವರ ಉಪದೇಶಪರಂಪರೆಯಿಂದ ಪ್ರಾಪ್ತವಾದ ಅನೇಕ ಧರ್ಮಗಳಲ್ಲಿ, ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟ ಮುಖ್ಯಧರ್ಮಗಳನ್ನು ಮಾತ್ರ ಸಂಗ್ರಹಿಸಿ ಹೇಳುವೆನು ಕೇಳಿರಿ! ನೀವು ನನ್ನನ್ನು ಪ್ರಶ್ನೆಮಾಡಿದುದರಿಂದ, ಮನುಷ್ಯರಿಗೆ ಜನ್ಮಸಾಫಲ್ಯವನ್ನುಂಟುಮಾಡತಕ್ಕ ಅದ್ಭುತವಾದ ಈ ವಿಷ್ಣುಚರಿತ್ರವನ್ನು ನಿಮಗೆ ಹೇಳಿದೆನು. ಮುಖ್ಯವಾಗಿ ಈ ಗ್ರಂಥದಲ್ಲಿ, ಸರ್ವಪಾಪನಿವಾರಕನಾಗಿಯೂ, ಸರ್ವೇಂದ್ರಿಯಗಳಿಗೂ ಅಧಿಪತಿಯಾಗಿಯೂ,ಭಕ್ತಪಾಲಕನಾಗಿಯೂ ಇರುವ ಸಾಕ್ಷಾನ್ನಾರಾಯಣನೇ ಕೀರ್ತಿಸಲ್ಪಡುವನು. ಸಮಸ್ತವೇದಾಂತಗಳ ರಹಸ್ಯವೂ,ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಕಾರಣವೂ ಎನಿಸಿದ ಪರಬ್ರಹ್ಮವೇ ಆ

ತನಾಗಿರುವನು. ಅವನ ಚರಿತ್ರವೇ ಈ ಗ್ರಂಥದಲ್ಲಿ ಮುಖ್ಯಪ್ರತಿಪಾದ್ಯವಾ
ದ ವಿಷಯವು. ಇದಲ್ಲದೆ ಇದರಲ್ಲಿ ಸಾಧೂತ್ತಮರಾದ ನೀವು ಭಾಗವತಪುರಾಣ
ವನ್ನು ಹೇಳಬೇಕೆಂದು ನನ್ನನ್ನು ಪ್ರಶ್ನೆಮಾಡಿದ ಉಪಾಖ್ಯಾನದಿಂದ ಹಿಡಿ
ದು, ಅನೇಕವಿಷಯಗಳು ನಿರೂಪಿಸಲ್ಪಟ್ಟಿವೆ. ಪ್ರಥಮಸ್ಕಂಧದಲ್ಲಿ ಆತ್ಮಪ
ರಮಾತ್ಮವಿವೇಚನೆಗಳೆಂಬ ಜ್ಞಾನ ವಿಜ್ಞಾನಗಳೂ, ಭಕ್ತಿಯೋಗವೂ, ಅದ
ಕ್ಕೆ ಅಂಗಭೂತವಾದ ವೈರಾಗ್ಯವೂ,ಪರೀಕ್ಷಿತ್ತಿನ ಮತ್ತು ನಾರದನ ವೃತ್ತಾಂ
ತಗಳೂ, ರಾಜರ್ಷಿಯಾದ ಪರೀಕ್ಷಿತ್ತು ಬ್ರಾಹ್ಮಣಶಾಪದಿಂದ ಪ್ರಾಯೋಪ
ವೇಶವನ್ನು ಹಿಡಿದುದೂ,ವರ್ಣಿಸಲ್ಪಟ್ಟಿವೆ. ದ್ವಿತೀಯಸ್ಕಂಧದಲ್ಲಿ ಶುಕನಿಗೂ
ಪರೀಕ್ಷಿತ್ತಿಗೂ ನಡೆದ ಸಂವಾದಗಳೂ, ಪರೀಕ್ಷಿತ್ತು ಯೋಗಧಾರಣೆಯಿಂದ
ತನ್ನ ಪ್ರಾಣವನ್ನು ನೀಗಿದುದೂ, ಬ್ರಹ್ಮ ನಾರದ ಸಂವಾದವೂ, ಅವತಾರ
ಗಳ ವರ್ಣನವೂ, ಸೃಷ್ಟಿಗೆ ಮೊದಲು ಪ್ರಾಕೃತವೆನಿಸಿದ ಮಹದಾದಿತತ್ವಗ
ಳ ಉತ್ಪತ್ತಿಯೂ ವರ್ಣಿತವಾಗಿವೆ. ಆಮೇಲೆ ತೃತೀಯಸ್ಕಂಧದಲ್ಲಿ,ವಿದುರೋ
ದ್ಧವಸಂವಾದಗಳೂ, ಮತ್ತು ವಿದುರಮೈತ್ರೇಯ ಸಂವಾದಗಳೂ,
ಈ ಭಾಗವತಪುರಾಣಸಂಹಿತೆಯ ವಿಷಯವಾದ ಪ್ರಶ್ನವೂ, ಭಗವಂತನು
ಪ್ರಳಯಕಾಲದಲ್ಲಿರುವ ರೀತಿಯೂ, ಪ್ರಕೃತಿಗುಣಗಳ ಕ್ಷೋಭರೂಪವಾದ
ಪ್ರಾಕೃತಪ್ರಳಯವೂ, ಆಮೇಲೆ ಪ್ರಕೃತಿವಿಕಾರಗಳೆನಿಸಿಕೊಂಡ ಮಹತ್ತು,
ಅಹಂಕಾರ, ಪಂಚಮಹಾಭೂತಗಳೆಂಬ ಏಳುತತ್ವಗಳ ಸೃಷ್ಟಿಕ್ರಮವೂ,
ಅವುಗಳಿಂದ ಬ್ರಹ್ಮಾಂಡೋತ್ಪತ್ತಿಯೂ, ಆ ಬ್ರಹ್ಮಾಂಡದಿಂದ ಚತು
ರ್ಮುಖೋತ್ಪತ್ತಿಯೂ,ಪರಮಾಣು ಮೊದಲಾಗಿ ಸಂವತ್ಸರದವರೆಗೆ ಸ್ಥೂಲ
ಸೂಕ್ಷ್ಮವಿಭಾಗವುಳ್ಳ ಕಾಲದ ಗತಿಯೂ, ವ್ಯಷ್ಟಿಭೂತಗಳ ಉತ್ಪತ್ತಿಯೂ,
ವರಾಹಮೂರ್ತಿಯು ಸಮುದ್ರದಿಂದ ಭೂಮಿಯನ್ನುದ್ಧರಿಸಿದುದೂ, ಹಿರ
ಣ್ಯಾಕ್ಷವಧವೂ, ದೇವತಿರ್ಯಗಧೋಲೋಕಗಳ ಸೃಷ್ಟಿಯೂ, ಸ್ತ್ರೀಪುರುಷ
ರೂಪಗಳ ಅರ್ಧಾರ್ಧಭಾಗಗಳಿಂದ ಕೂಡಿದ ವಿಶಿಷ್ಟಸೃಷ್ಟಿಯೂ, ಅದ
ರಿಂದ ಸ್ವಾಯಂಭುವಮನುವಿನ, ಮತ್ತು ಆತನಿಗೆ ಪತ್ನಿಯೆನಿಸಿ ಸ್ತ್ರೀಸೃಷ್ಟಿ
ಯಲ್ಲಿ ಮೊದಲನೆಯವಳೆನಿಸಿಕೊಂಡ ಶತರೂಪೆಯೆಂಬವಳಜನನವೂ ಆಮೇ
ಲೆ ಕರ್ದಮಪ್ರಜಾಪತಿಗೆ ಅವನ ಧರ್ಮಪತ್ನಿಯಾದ ದೇವಹೂತಿಯಲ್ಲಿ

ನವಕನ್ಯಕೆಯರು ಹುಟ್ಟಿದುದೂ, ಕಪಿಲರೂಪಿಯಾದ ಭಗವಂತನ ಅವತಾರವೂ, ದೇವಹೂತಿಗೂ ಅವಳ ಗರ್ಭದಲ್ಲಿ ಜನಿಸಿದ ಕಪಿಲನಿಗೂ ನಡೆದ ಸಂವಾದವೂ ವರ್ಣಿಸಲ್ಪಟ್ಟಿವೆ. ಆಮೇಲೆ ನಾಲ್ಕನೆಯ ಸ್ಕಂಧದಲ್ಲಿ ನವಬ್ರಹ್ಮರ ಉತ್ಪತ್ತಿಯೂ, ದಕ್ಷಯಾಗಧ್ವಂಸವೂ, ಧ್ರುವಚರಿತ್ರವೂ, ಪೃಥುಪ್ರಾಚೀನಬರ್ಹಿಷರೆಂಬ ರಾಜರ ವೃತ್ತಾಂತವೂ, ನಾರದನ ಸಂವಾದವೂ ವರ್ಣಿಸಲ್ಪಟ್ಟಿವೆ. ಆಮೇಲೆ ಪಂಚಮಸ್ಕಂಧದಲ್ಲಿ ಪ್ರಿಯವ್ರತನ ವೃತ್ತಾಂತವೂ, ನಾಭಿಯ ಚರಿತ್ರವೂ, ಋಷಭಪುತ್ರನಾದ ಭರತನ ವೃತ್ತಾಂತವೂ, ಭೂಲೋಕದಲ್ಲಿರುವ ದ್ವೀಪ, ಸಮುದ್ರ, ಪರ್ವತ, ನದೀ, ನದಾದಿಗಳ ವರ್ಣನವೂ, ಭಾರತಾದಿವರ್ಷಗಳ ವಿವರಣವೂ, ಜ್ಯೋತಿಶ್ಚಕ್ರದ ಸನ್ನಿವೇಶವೂ, ಪಾತಾಳನರಕಗಳ ಸ್ಥಿತಿಯೂ ವಿವರಿಸಲ್ಪಟ್ಟಿವೆ. ಆಮೇಲೆ ಆರನೆಯ ಸ್ಕಂಧದಲ್ಲಿ, ದಕ್ಷನ ಜನ್ಮವೃತ್ತಾಂತವೂ, ದಕ್ಷಕನ್ಯೆಯರ ವೃತ್ತಾಂತವೂ, ಆ ದಕ್ಷಕನ್ಯೆಯರಿಂದ ದೇವ, ದಾನವ, ಮನುಷ್ಯ, ಮೃಗಪಕ್ಷಿಸರ್ಪಾದಿಜಾತಿಗಳು ಜನಿಸಿದುದೂ, ವೃತ್ರಾಸುರನ ಜನನಮರಣವೃತ್ತಾಂತಗಳೂ ವರ್ಣಿತವಾಗಿವೆ. ಆಮೇಲೆ ಏಳನೆಯಸ್ಕಂಧದಲ್ಲಿ ದಿತಿಪುತ್ರರಿಬ್ಬರ ವೃತ್ತಾಂತವೂ, ಹಿರಣ್ಯಕಶಿಪುವಿನ ಕಥೆಯೂ, ಮಹಾತ್ಮನಾದ ಪ್ರಹ್ಲಾದನ ಚರಿತ್ರವೂ ವರ್ಣಿತವಾಗಿವೆ. ಆಮೇಲೆ ಎಂಟನೆಯಸ್ಕಂಧದಲ್ಲಿ, ಮನ್ವಂತರವಿಭಾಗಗಳೂ, ಗಜೇಂದ್ರಮೋಕ್ಷವೃತ್ತಾಂತವೂ, ಆಯಾಮನ್ವಂತರಗಳಲ್ಲಿ ವಿಷ್ಣುವು ಕೈಕೊಂಡ ಹಯಗ್ರೀವಾದ್ಯವತಾರಭೇದಗಳೂ, ಮತ್ಸ್ಯ, ಕೂರ್ಮ, ನಾರಸಿಹ್ಮ, ವಾಮನಾವತಾರಚರಿತ್ರಗಳೂ, ದೇವತೆಗಳಿಗೆ ಅಮೃತಲಾಭಕ್ಕಾಗಿ ನಡೆದ ಕ್ಷೀರಸಮುದ್ರಮಥನವೃತ್ತಾಂತವೂ, ಅದರಿಂದಾಚೆಗೆ ನಡೆದ ದೇವಾಸುರಯುದ್ಧವೂ ವರ್ಣಿಸಲ್ಪಟ್ಟಿವೆ. ಆಮೇಲೆ ಒಂಬತ್ತನೆಯ ಸ್ಕಂಧದಲ್ಲಿ, ರಾಜವಂಶಾನುಕೀರ್ತನವೂ, ಇಕ್ಷ್ವಾಕುವಿನ ಜನನವೂ, ಈ ಇಕ್ಷ್ವಾಕುವಂಶದಲ್ಲಿ ಮಹಾತ್ಮನಾದ ಸುದ್ಯುಮ್ನನು ಜನಿಸಿದುದೂ, ಇಲೋಪಾಖ್ಯಾನವೂ, ತಾರೋಪಾಖ್ಯಾನವೂ, ಸೂರ್ಯವಂಶಾನುಕಥನವೂ, ಈ ಸೂರ್ಯವಂಶದಲ್ಲಿ ಹುಟ್ಟಿದ ಶಶಾದನೇ ಮೊದಲಾದ ರಾಜರ ವೃತ್ತಾಂತವೂ, ಸುಕನ್ಯಾಚರಿತ್ರವೂ, ಶರ್ಯಾತಿಯ ಕಥೆಯೂ, ಕಕುತ್ಸ್ಥನ, ಖಟ್ವಾಂಗ,

ಮಾಂಧಾತೃ, ಸೌಭರಿ, ಸಗರರ ಚರಿತ್ರಗಳೂ, ಪರಮಪಾವನವಾದ ಶ್ರೀ ರಘುರಾಮನ ವೃತ್ತಾಂತವೂ, ನಿಮಿಯು ದೇಹತ್ಯಾಗಮಾಡಿದುದೂ, ಜನಕಕುಲದವರ ಜನ್ಮವೃತ್ತಾಂತವೂ, ಭಾರ್ಗವೋತ್ತಮನಾದ ಪರಶು ರಾಮನು ಭೂಮಿಯಲ್ಲಿ ಕ್ಷತ್ರಿಯಕುಲವನ್ನು ನಾಶಮಾಡಿದ ವೃತ್ತಾಂತವೂ, ಚಂದ್ರವಂಶದಲ್ಲಿ ಐಲನ ಚರಿತ್ರವೂ, ನಹುಷಪುತ್ರನಾದ ಯಯಾತಿಯ ಚರಿತ್ರವೂ, ದುಷ್ಯಂತಪುತ್ರನಾದ ಭರತನ ವೃತ್ತಾಂತವೂ, ಶಂತನುವಿನ ಮತ್ತು ಅವನ ಪುತ್ರನ ಚರಿತ್ರಗಳೂ, ಯಯಾತಿಗೆ ಜ್ಯೇಷ್ಠಪುತ್ರ ನಾದ ಯದುವಿನ ಚರಿತ್ರವೂ, ಆ ಯದುವಂಶಾನುಕ್ರಮವೂ ವರ್ಣಿತ ವಾಗಿವೆ. ಆಮೇಲೆ ದಶಮಸ್ಕಂಧದಲ್ಲಿ, ಲೋಕೇಶ್ವರನಾದ ಭಗವಂತನು ಯಾದವಕುಲದಲ್ಲಿ, ವಸುದೇವನ ಗೃಹದಲ್ಲಿ, ಕೃಷ್ಣರೂಪದಿಂದ ಅವತರಿಸಿ ದುದೂ, ಆಮೇಲೆ ಅವನು ನಂದಗೋಕುಲದಲ್ಲಿ ಬೆಳೆಯುತಿದ್ದುದೂ, ಈ ಶ್ರೀಕೃಷ್ಣನು ಬಾಲ್ಯದಿಂದಲೂ ನಡೆಸಿದ ಅದ್ಭುತಚರಿತ್ರಗಳೂ ವಿವರ ವಾಗಿ ಕೀರ್ತಿಸಲ್ಪಟ್ಟಿವೆ. ಮೊದಲು ಆ ಶ್ರೀಕೃಷ್ಣನು ಏಳುದಿನದ ಕೂಸಾ ಗಿರುವಾಗಲೇ ಸ್ತನ್ಯಪಾನಮಾಡುವ ನೆವದಿಂದ ಪೂತನೆಯ ಪ್ರಾಣಗಳನ್ನು ಹೀರಿದುದು, ಶಕಟಾಸುರನನ್ನು ಕಾಲಿಂದೊದೆದು ಮುರಿದುದು, ತೃಣಾ ವರ್ತನನ್ನು ತಿಕ್ಕಿಕೊಂದುದು, ಹೀಗೆಯೇ ಬಕಾಸುರ, ವತ್ಸಾಸುರ, ಅಘಾ ಸುರರನ್ನು ಕೊಂದುದು, ಬ್ರಹ್ಮನಿಗೆ ತನ್ನ ಮಾಯೆಯನ್ನು ತೋರಿಸಿದುದು, ಧೇನುಕಪ್ರಲಂಬಾಸುರರನ್ನು ಕೊಂದುದು, ಕಾಡುಗಿಚ್ಚಿನಿಂದ ಗೋಪಾಲಕ ರನ್ನು ರಕ್ಷಿಸಿದುದು, ಕಾಳಿಯಮರ್ದನ, ಹಾವಿನ ಬಾಯಿಗೆ ಸಿಕ್ಕಿಬಿದ್ದ ನಂದನನ್ನು ಬಿಡಿಸಿದುದು, ಗೋಪಕನ್ಯೆಯರ ವ್ರತಚರ್ಯೆ, ಯಜ್ಞಪತ್ನಿಯ ರನ್ನು ಅನುಗ್ರಹಿಸಿದುದು, ಅವರ ಪತಿಗಳಾದ ಬ್ರಾಹ್ಮಣರು ತನ್ನಲ್ಲಿ ಮಾಡಿದ ಅಪರಾಧಕ್ಕಾಗಿ ಪರಿತಪಿಸಿದುದು, ಇಂದ್ರನ ಹೆಮ್ಮೆಯನ್ನು ಮುರಿಯುವುದಕ್ಕಾಗಿ ಗೋವರ್ಧನವನ್ನೆತ್ತಿದುದು, ದೇವತೆಗಳು ಇಂದ್ರ ನೊಡನೆ ಬಂದು ಆ ಕೃಷ್ಣನನ್ನು ಪೂಜಿಸಿ, ಅವನಿಗೆ ಪಟ್ಟಾಭಿಷೇಕವನ್ನು ನಡೆಸಿದುದು, ಕೃಷ್ಣನು ಶರತ್ಕಾಲದ ರಾತ್ರಿಗಳಲ್ಲಿ ಗೋಪಿಯರೊಡನೆ ವಿಹರಿಸಿದುದು, ಶಂಖಚೂಡವಧೆ, ಅರಿಷ್ಟಸಂಹಾರ, ಕೇಶಿನಿಧನ,

ಕಂಸಾಜ್ಞೆಯಿಂದ ಅಕ್ರೂರನು ಬಂದು ಕರೆಯಲು, ರಾಮಕೃಷ್ಣ ರಿಬ್ಬರೂ ಮಥುರೆಗೆ ಪ್ರಯಾಣಮಾಡಿದುದು, ಗೋಪಿಯರ ವಿಲಾಪ, ಮಥುರಾದರ್ಶನ, ಅಲ್ಲಿ ಗಜ, ಮುಷ್ಟಿಕ, ಚಾಣೂರ, ಕಂಸಾದಿಗಳ ವಧೆ, ಗುರುವಾದ ಸಾಂದೀಪನಿಯ ಮೃತಪುತ್ರನನ್ನು ಬದುಕಿಸಿದುದು, ಕೃಷ್ಣನು ಮಥುರೆಯಲ್ಲಿ ಉದ್ಧವ ಬಲರಾಮರೊಡನೆ ವಾಸಮಾಡುತ್ತ ಯದುಗಳಿಗೆ ಪ್ರಿಯವನ್ನುಂಟುಮಾಡಿದುದು, ಜರಾಸಂಧನ ಸೇನೆಯನ್ನು ಜಯಿಸಿ ದುದು, ಕಾಲಯವನನನ್ನು ಕೊಂದುದು, ಕುಶಸ್ಥಲಿಯನ್ನು ಪ್ರವೇ ಶಿಸಿದುದು, ದೇವಲೋಕದಿಂದ ಪಾರಿಜಾತವನ್ನೂ, ಸುಧರ್ಮಾಸಭೆಯನ್ನೂ ಸಾಗಿಸಿತಂದುದು, ಶತ್ರುಗಳನ್ನು ಜಯಿಸಿ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿಕೊಂಡು ಹೋದುದು, ಬಾಣಾಸುರಯುದ್ಧ, ಕೃಷ್ಣನು ಬಾಣಾಸುರನ ಭುಜಗಳನ್ನು ಕತ್ತರಿಸಿದುದು, ಪ್ರಾಗ್ಜ್ಯೋತಿಷಪುರದಲ್ಲಿ ನರಕಾಸುರನನ್ನು ಕೊಂದು, ಅವನು ಸೆರೆಯಲ್ಲಿಟ್ಟಿದ್ದ ರಾಜಕನ್ಯೆಯರನ್ನು ಕರೆತಂದುದು, ಶಿಶುಪಾಲ, ದಂತವಕ್ತ್ರ, ಪೌಂಡ್ರಕ, ಸಾಲ್ವ, ಶಂಬರ, ದ್ವಿವಿದ, ಪೀಠ, ಮುರಾಸುರ, ಪಂಚಜನರೇ ಮೊದಲಾದವರ ಮಹತ್ವ, ಅವರನ್ನು ಶ್ರೀಕೃಷ್ಣನು ವಧಿಸಿದುದು, ಕಾಶೀಪಟ್ಟಣವನ್ನು ದಹಿಸಿದು ದು, ಪಾಂಡವರನ್ನು ನೆವವಾಗಿಟ್ಟುಕೊಂಡು ಕುರುಕ್ಷೇತ್ರಯುದ್ಧದಲ್ಲಿ ಭೂ ಭಾರವನ್ನು ಕಡಿಮೆಮಾಡಿದುದು,ಇವೆಲ್ಲವೂ ವರ್ಣಿಸಲ್ಪಟ್ಟಿವೆ. ಅಲ್ಲಿಂದಾಚೆಗೆ ಹನ್ನೊಂದನೆಯ ಸ್ಕಂಧದಲ್ಲಿ, ಕೃಷ್ಣನು ಬ್ರಾಹ್ಮಣಶಾಪವನ್ನೇ ನೆವವಾಗಿ ಮಾಡಿಕೊಂಡು, ತನ್ನ ಕುಲವನ್ನು (ಯಾದವಕುಲದವರನ್ನು) ಸಂಹರಿಸಿ ದುದೂ, ಉದ್ಧವನೊಡನೆ ನಡೆಸಿದ ಅದ್ಭುತಸಂವಾದಗಳೂ, ಈ ಮೂಲಕ ವಾಗಿ ವರ್ಣಾಶ್ರಮಧರ್ಮಗಳನ್ನು ನಿರ್ಣಯಿಸತಕ್ಕ ಆತ್ಮವಿದ್ಯೆಯೆಲ್ಲವನ್ನೂ ನಿರೂಪಿಸಿದುದೂ, ಆಮೇಲೆ ತನ್ನ ಯೋಗಪ್ರಭಾವದಿಂದ ಮನುಷ್ಯ ಲೋಕವನ್ನು ಬಿಟ್ಟು ತನ್ನ ನಿಜಸ್ಥಾನಕ್ಕೆ ತೆರಳಿದುದೂ ವರ್ಣಿಸಲ್ಪಟ್ಟಿವೆ. ಆಮೇಲೆ ಹನ್ನೆರಡನೆಯ ಸ್ಕಂಧದಲ್ಲಿ ಯುಗಭೇದಗಳೂ, ಅವುಗಳ ಲಕ್ಷಣ ಗಳೂ, ಆಯಾಯುಗಗಳಲ್ಲಿ ನಡೆಯತಕ್ಕ ವೃತ್ತಿಗಳೂ, ಕಲಿಯುಗದಲ್ಲಿ ಮನುಷ್ಯರಿಗುಂಟಾಗತಕ್ಕ ನಾನಾಬಗೆಯ ಉಪದ್ರವಗಳೂ, ಪ್ರಾಕೃತಿಕ,

ನಿತ್ಯ, ನೈಮಿತ್ತಿಕ, ಆತ್ಯಂತಿಕಗಳೆಂಬ ನಾಲ್ಕುಬಗೆಯ ಪ್ರಳಯಗಳ ಕ್ರಮವೂ, ಪ್ರಾಕೃತಿಕ, ನಿತ್ಯ, ನೈಮಿತ್ತಿಕಗಳೆಂಬ ಮೂರುಬಗೆಯ ಉತ್ಪತ್ತಿ ಕ್ರಮವೂ, ಪರೀಕ್ಷಿತ್ತಿನ ದೇಹತ್ಯಾಗವೂ, ವೇದಶಾಖೆಗಳ ವಿಭಾಗಗಳೂ, ಮಾರ್ಕಂಡೇಯಚರಿತ್ರವೂ, ಮಹಾಪುರುಷನ ಅಂಗೋಪಾಂಗವಿನ್ಯಾಸ ಗಳೂ, ಸೂರ್ಯನ ಗಣವಿಭಾಗಗಳೂ ವರ್ಣಿಸಲ್ಪಟ್ಟವೆ. ಓ ಶೌನಕಾದಿಗಳಿರಾ! ನೀವು ನನ್ನಲ್ಲಿ ಯಾವಯಾವ ವಿಷಯಗಳನ್ನು ಕುರಿತು ಪ್ರಶ್ನೆಮಾಡಿದಿರೋ, ಅವೆಲ್ಲವನ್ನೂ ತಿಳಿಸಿರುವೆನು. ಮುಖ್ಯವಾಗಿ ಈ ಪುರಾಣದಲ್ಲಿ ಆ ಶ್ರೀಹರಿಯು ಲೀಲಾರ್ಥವಾಗಿ ಕೈಕೊಂಡ ಅವತಾರಚರಿತ್ರೆಗಳೆಲ್ಲವೂ ಸಂಪೂರ್ಣವಾಗಿ ಕೀರ್ತಿಸಲ್ಪಟ್ಟಿವೆ. ಮನುಷ್ಯನು ಅಕಸ್ಮಾತ್ತಾಗಿ ಕೆಳಗೆ ಬೀಳುವಾಗಾಗಲಿ, ಎಡವಿದಾಗಾಗಲಿ, ದುಃಖಿತನಾಗಿರುವಾಗಾಗಲಿ, ಮೈಮರೆತಿದ್ದಾಗಲಾಗಲಿ, ಬಾಯಿ ತಪ್ಪಿಯಾದರೂ ಒಮ್ಮೆ “ಹರಯೇ ನಮಃ”ಎಂದು ಗಟ್ಟಿಯಾಗಿ ಕೂ ಗಿದಪಕ್ಷದಲ್ಲಿ,ಅವನ ಸಮಸ್ತಪಾಪಗಳೂ ಬಿಟ್ಟುಹೋಗುವುವು. ಆ ಭಗ ವಂತನ ನಾಮಗಳನ್ನು ಬಾಯಿಂದುಚ್ಚರಿಸಿದರೂ, ಅಥವಾ ಬೇರೆಯವರು ಉಚ್ಚರಿಸುವಾಗ ಅದನ್ನು ಕಿವಿಯಿಂದ ಕೇಳಿದರೂ,ಸೂರ್ಯನು ಅಂಧಕಾರವ ನ್ನೂ, ಬಿರುಗಾಳಿಯು ಮೇಘವನ್ನೂ ಚದರಿಸುವಂತೆ, ಭಗವಂತನು ಆತನ ಹೃದಯದಲ್ಲಿ ಪ್ರವೇಶಿಸಿ,ಅವನ ವ್ಯಸನಗಳೆಲ್ಲವನ್ನೂ ನೀಗಿಸುವನು. ಆ ಭಗ ವಂತನ ಗುಣಗಳನ್ನು ಬಿಟ್ಟು ಬೇರೆ ಅಸತ್ಕಥೆಗಳನ್ನು ನುಡಿಯುವ ವಾಕ್ಯಗ ಳೆಲ್ಲವೂ ಕೇವಲ ವ್ಯರ್ಥವಾದಗಳು. ಆ ಶ್ರೀಹರಿಯ ಗುಣಗಳನ್ನೊಳಕೊಂಡ ಮಾತುಗಳೇ ಸತ್ಯವು! ಅದೇ ಮಂಗಳವು! ಅದೇ ಪುಣ್ಯಕರವಾದುದು! ಆ ಭಗ ವತ್ಕೀರ್ತನಗರ್ಭಿತವಾದ ವಚನವೇ ರಮ್ಯವಾದುದು! ಅದೇ ಮನಸ್ಸಿಗೆ ಮೇಲೆಮೇಲೆ ರುಚಿಕರವಾದುದು! ಅದೇ ಮೇಲೆಮೇಲೆ ಆನಂದಕರ ವಾದುದು! ಅದೇ ಮನುಷ್ಯರಿಗೆ ದುಃಖಸಮುದ್ರವನ್ನು ಶೋಷಿಸತಕ್ಕುದು! ಲೋಕಪಾವನವಾದ ಆ ಭಗವಂತನ ಕೀರ್ತಿಯನ್ನು ಕೊಂಡಾಡದ ಕಾವ್ಯವು, ಎಷ್ಟೇ ಚಿತ್ರಪದಗಳಿಂದ ಕೂಡಿದ್ದರೂ, ಅದು ಕಾಗೆಗಳು ಮುಳುಗತಕ್ಕ ಕೊಚ್ಚೆಯ ನೀರಿನಂತೆ ಎಣಿಸಲ್ಪಡುವುದೇಹೊರತು, ಹಂಸಗಳಿಂದ ಸೇವಿತ ವಾದ ಉತ್ತಮತೀರ್ಥದಂತೆ ಎಣಿಸಲ್ಪಡಲಾರದು. ಏಕೆಂದರೆ, ಕಾಗೆಗಳಂ

ತಿರುವ ಕಾಮುಕರು ಅದನ್ನಭಿನಂದಿಸುವರೇಹೊರತು, ಹಂಸಗಳಂತಿರುವ ಜ್ಞಾನಿಗಳು ಅದನ್ನು ಮುಟ್ಟಲಾರರು. ಭಗವದ್ವಿಷಯವಾದ ಕಥೆಗಳನ್ನು ಪ್ರತಿಪಾದಿಸತಕ್ಕ ಕಥೆಗಳೇ ನಿರ್ಮಲಮನಸ್ಕರಾದ ಸಾಧುಗಳಿಗೆ ಅಭಿನಂದ್ಯ ವೆನಿಸುವುವು. ಯಾವ ಕಾವ್ಯವು, ಭಗವಂತನ ನಾಮಗಳನ್ನು ವಿಷಯೀಕ ರಿಸುವುದೋ, ಅದರಲ್ಲಿ ಪ್ರತಿಶ್ಲೋಕವೂ ಅಬದ್ಧವಾಗಿದ್ದರೂ, ಆ ವಚನ ಪ್ರಯೋಗವೇ ಸರ್ವಾದರಣೀಯವೆನಿಸುವುದು. ಈ ಕಾರಣದಿಂದಲೇ ಸಾಧುಗಳು, ಎಂತವರ ಬಾಯಿಂದ ಹೊರಟರೂ ಆ ಭಗವನ್ನಾಮಗಳನ್ನು ಅತ್ಯಾದರದಿಂದ ಕಿವಿಗೊಟ್ಟು ಕೇಳುವರು. ತಮ್ಮಿಂದ ಕೇಳತಕ್ಕವರಿಗೆ ತಾವೂ ಬೇಸರವಿಲ್ಲದೆ ಹೇಳುವರು. ತಮ್ಮಿಂದ ಕೇಳುವವರಾಗಲಿ, ತಮಗೆ ಹೇಳುವವರಾಗಲಿ ಸಿಕ್ಕದಿದ್ದಾಗ, ತಮಗೆ ತಾವೇ ವಿವಿಕ್ತವಾಗಿ ಕುಳಿತು, ಅವು ಗಳನ್ನು ಹಾಡುತ್ತಿರುವರು. ಕರ್ಮಬಂಧವನ್ನು ನೀಗಿಸಿ, ಪ್ರಕೃತಿಸಂಬಂಧ ವನ್ನು ಬಿಡಿಸತಕ್ಕ ಶುದ್ಧವಾದ ಜ್ಞಾನಯೋಗವಾದರೂಕೂಡ, ಆ ಭಗವ ದ್ಧ್ಯಾನರಹಿತವಾಗಿದ್ದಾಗ ಚೆನ್ನಾಗಿ ಶೋಭಿಸಲಾರದು. ಏಕೆಂದರೆ, ಅಂತಹ ಜ್ಞಾನವು ಸ್ಥಿರವಾಗಿ ನಿಲ್ಲದೆ ಚ್ಯುತಿಹೊಂದುವ ಸಂಭವವುಂಟು. ಹೀಗೆ ಜ್ಞಾನಯೋಗವೇ ಶೋಭಿಸಲಾರದೆಂದಮೇಲೆ, ಈಶ್ವರನನ್ನು ವಿಷ ಯೀಕರಿಸದುದಾಗಿಯೂ, ಸದಾ ಪತನಶಂಕೆಯಿಂದ ಭಯಾಸ್ಪದವಾ ಗಿಯೂ ಇರುವ ಕರ್ಮಯೋಗವು ಪ್ರಕಾಶಿಸಲಾರದೆಂಬುದನ್ನು ಹೇಳಬೇ ಕಾದುದೇನು? ಅಷ್ಟೇಕೆ? ಫಲಾಭಿಸಂಧಿಯಿಲ್ಲದ ಸರ್ವೋತ್ತಮವೆನಿಸಿದ ಕರ್ಮಯೋಗವೂಕೂಡ, ಆ ಭಗವದ್ಗುಣಕೀರ್ತನದಂತೆ ಶೋಭಿಸಲಾರದು. ವರ್ಣಾಶ್ರಮಧರ್ಮಗಳು, ತಪಸ್ಸು, ಶಾಸ್ತ್ರಾಧ್ಯಯನ, ಮುಂತಾದುವುಗ ಳೆಲ್ಲವೂ ಕೀರ್ತಿಯನ್ನೂ, ಯಶಸ್ಸನ್ನೂ ಕೂಡಿಸತಕ್ಕವುಗಳಾಗಿದ್ದರೂ, ಆ ಕೀರ್ತಿಸಂಪತ್ತುಗಳೂ ನಿತ್ಯವಲ್ಲ! ಕೆಲವುಕಾಲವಿದ್ದು ಕ್ಷೀಣಿಸತಕ್ಕವು. ಇದಲ್ಲದೆ ತಪೋನಿಷ್ಠೆ ಮೊದಲಾದುವುಗಳು, ಕೇವಲದೇಹಶ್ರಮಕಾರಣ ಗಳೇ ಹೊರತು, ಶ್ರಮಕ್ಕೆ ತಕ್ಕಂತೆ ಫಲವನ್ನು ಕೈಗೂಡಿಸಲಾರವು. ಆ ಭಗ ವಂತನ ಗುಣಾನುವಾದಶ್ರವಣಾದಿಗಳಿಂದ ಆತನ ಪಾದಪದ್ಮಗಳನ್ನು ಮರೆಯದೆ ಮನಸ್ಸಿನಲ್ಲಿಟ್ಟು ನಡೆಸಿದಾಗಲೇ, ಆ ವರ್ಣಾಶ್ರಮಾದಿ ನಿಷ್ಠೆ

ಗಳೂ ಸಫಲವೆನಿಸುವುವು. ದುಃಖಹೇತುಗಳಾದ ದುರಿತಗಳೆಲ್ಲವನ್ನೂ ನೀಗಿಸ ತಕ್ಕುದೂ ಆ ಶ್ರೀಕೃಷ್ಣನ ಪಾದಾರವಿಂದಧ್ಯಾನವೇ! ರಜಸ್ತಮೋ ಗುಣಗಳನ್ನಡಗಿಸಿ ಸತ್ವಶುದ್ಧಿಯನ್ನುಂಟುಮಾಡುವುದೂ ಆ ಕೃಷ್ಣಸ್ಮರ ಣೆಯೇ! ಪರಮಾತ್ಮನಲ್ಲಿ ಭಕ್ತಿಯನ್ನೂ, ಜ್ಞಾನವೈರಾಗ್ಯಗಳನ್ನೂ ಉಂಟುಮಾಡತಕ್ಕುದೂ ಅದೇ! ಆದುದರಿಂದ ಓ ಬ್ರಾಹ್ಮಣೋತ್ತಮರೆ! ನೀವೆಲ್ಲರೂ ಪರಮಭಾಗ್ಯಶಾಲಿಗಳು! ಏಕೆಂದರೆ; ನೀವು ಇತರವಿಷಯ ವಾದ ಚಿಂತೆಯನ್ನು ಬಿಟ್ಟು, ನಿರಂತರವೂ ಆ ಭಗವಂತನನ್ನೇ ಧ್ಯಾನಿ ಸುತ್ತಿರುವಿರಿ! ಸರ್ವಾಂತರಾತ್ಮನಾಗಿಯೂ, ಸ್ವಯಂಪ್ರಕಾಶನಾಗಿಯೂ, ತನಗೆ ಆರಾಧ್ಯವಾದ ಬೇರೆ ದೈವವಿಲ್ಲದೆ, ತಾನೇ ಸಮಸ್ತದೇವತೆಗಳಿಗೂ ದೇವನಾಗಿಯೂ, ಸರ್ವನಿಯಾಮಕನಾಗಿಯೂ ಇರುವ ಶ್ರೀಮನ್ನಾರಾ ಯಣನು ನಿಮ್ಮ ಹೃದಯದಲ್ಲಿ ನಿತ್ಯನಿವಾಸಮಾಡುತ್ತಿರುವನು. ನೀವೇ ಮಹಾಧನ್ಯರು. ಇಷ್ಟೇ ಅಲ್ಲದೆ, ನಿಮ್ಮಿಂದ ನಾನೂ ಈಗ ಧನ್ಯನಾದೆನು. ಏಕೆಂದರೆ, ಪರೀಕ್ಷಿದ್ರಾಜನು ಪ್ರಾಯೋಪವೇಶದಲ್ಲಿದ್ದು, ಮಹಾತ್ಮರಾದ ಅನೇಕಮಹರ್ಷಿಗಳ ಸಭೆಯಲ್ಲಿ ಶುಕಮಹಾಮುನಿಯ ಮುಖದಿಂದ ಕೇಳಿದ ಆತ್ಮತತ್ವಪ್ರಕಾಶಕವಾದ ಭಾಗವತಪುರಾಣವನ್ನು, ತಿರುಗಿ ನನ್ನ ಸ್ಮರಣೆಕ್ಕೆ ತಂದು, ನನ್ನ ಬಾಯಿಂದ ಹೊರಡುವಹಾಗೆ ಮಾಡಿದಿರಲ್ಲವೆ? ಇದರಿಂದ ನಾನೂ ಕೃತಾರ್ಥನಾದೆನು. ಸಮಸ್ತ ಲೋಕಗಳಿಂದಲೂ ಕೀರ್ತಿಸಲ್ಪಡತಕ್ಕ ಅದ್ಭುತಚರಿತ್ರೆಯುಳ್ಳ ಭಗವಂತನಾದ ಆ ವಾಸು ದೇವನ ಮಹಿಮೆಯು ಸರ್ವವಿಧವಾದ ಅಶುಭಗಳನ್ನೂ ನೀಗಿಸತಕ್ಕುದು, ಅಂತಹ ಚರಿತ್ರೆಯನ್ನೊಳಕೊಂಡ ಪುರಾಣರತ್ನವನ್ನು ನಿಮಗೆ ನಾನು ಪೂರ್ಣವಾಗಿ ವಿವರಿಸಿದುದಾಯಿತು. ಲೋಕದಲ್ಲಿ ಯಾವನು, ಈ ಪುರಾಣ ದಲ್ಲಿರುವ ವಿಷಯವನ್ನು, ಪ್ರತಿದಿನವೂ ಒಂದು ಯಾಮಮಾತ್ರವಾಗಲಿ, ಕೊನೆಗೆ ಕ್ಷಣಮಾತ್ರವಾಗಲಿ ಸಾವಧಾನವಾಗಿ ಕೇಳುವನೋ, ಅಥವಾ ಮತ್ತೊಬ್ಬರಿಗೆ ಹೇಳುವನೋ, ಅವನು ಅನೇಕಜನ್ಮಾರ್ಜಿತಗಳಾದ ಸಮಸ್ತ ಪಾಪಗಳಿಂದಲೂ ಮುಕ್ತನಾಗಿ, ಶುದ್ಧಿಯನ್ನು ಹೊಂದುವನು. ಈ ಪುರಾಣ ವನ್ನು ಏಕಾದಶೀದ್ವಾದಶೀ ದಿನಗಳಲ್ಲಿ ಕೇಳುವರು ದೀರ್ಘಾಯುಷ್ಮಂತ

ರಾಗುವವು. ಇದನ್ನು ಸಾವಧಾನಚಿತ್ತದಿಂದ ಪಠಿಸುವವರು ಮಹಾಪಾತ
ಕಗಳಿಂದ ಮುಕ್ತರಾಗುವರು. ಪುಷ್ಕರಕ್ಷೇತ್ರದಲ್ಲಿಯೂ, ಮಥುರೆಯಲ್ಲಿ
ಯೂ, ದ್ವಾರಕೆಯಲ್ಲಿಯೂ ಈ ಪುರಾಣಸಂಹಿತೆಯನ್ನು ಉಪವಾಸನಿಯಮ
ದಿಂದ ಪಠಿಸುವವರು,ಸಮಸ್ತವಿಧವಾದ ಭಯದಿಂದಲೂ ಮುಕ್ತರಾಗುವರು.
ಈ ಪುರಾಣದ ಶ್ರವಣಪಠನಾದಿಗಳಿಂದ, ಇದರಲ್ಲಿ ಕೀರ್ತಿಸಲ್ಪಟ್ಟಿರುವ ಎ
ಲ್ಲಾ ದೇವತೆಗಳೂ, ಮಹರ್ಷಿಗಳೂ, ಸಿದ್ಧರೂ, ಯೋಗಿಗಳೂ, ಪಿತೃಗಳೂ,
ಮಹಾತ್ಮರಾದ ರಾಜರೂ, ಪ್ರಸನ್ನರಾಗಿ, ಅವರವರ ಕೋರಿಕೆಗಳನ್ನು ಕೈ
ಗೂಡಿಸುವರು. ಋಗ್ಯಜುಸ್ಸಾಮವೇದಗಳನ್ನು ಅಧ್ಯಯನಮಾಡುವುದರಿಂದ
ಯಾವಯಾವ ಫಲಗಳುಂಟೋ, ಜೇನು, ಹಾಲು, ತುಪ್ಪ, ಇವುಗಳ ಪ್ರವಾ
ಹದೊಡನೆ ಅನ್ನದಾನವನ್ನು ಮಾಡುವುದರಿಂದ ಯಾವ ಯಾವ ಫಲಗ
ಳುಂಟೋ, ಅವೆಲ್ಲವೂ ಈ ಪುರಾಣದಪಠದಿಂದ ಸಿದ್ಧಿಸುವುವು. ಈ ಪುರಾ
ಣವನ್ನೋದಿದ ಬ್ರಾಹ್ಮಣನು, ಭಗವಂತನಿಗೆ ನಿವಾಸಭೂತವಾದ ಸಾಕ್ಷಾ
ತ್ಪರಮಪದವನ್ನು ಅನಾಯಾಸವಾಗಿ ಹೊಂದಬಲ್ಲನು. ಇದನ್ನು ಪಠಿಸು
ವುದರಿಂದ ಬ್ರಾಹ್ಮಣರು ಜ್ಞಾನಿಗಳಾಗುವರು. ಕ್ಷತ್ರಿಯರು ಸಮುದ್ರಾಂ
ತವಾದ ಭೂಮಿಗೆ ಒಡೆಯರಾಗುವರು. ವೈಶ್ಯರು ನಿಧಿಗಳಿಗೆ ಅಧಿಪತಿಗ
ಳೆನಿಸುವರು. ಶೂದ್ರರು ಪಾಪವಿಮುಕ್ತರಾಗಿ ಶುದ್ಧಿಯನ್ನು ಹೊಂದುವರು.
ಕಲಿದೋಷವನ್ನು ನೀಗಿಸತಕ್ಕವನಾಗಿಯೂ, ಅಖಿಲೇಶ್ವರನಾಗಿಯೂ ಇ
ರುವ ಶ್ರೀಹರಿಯ ಪ್ರಸಂಗವು, ಬೇರೆ ರಾಜಸತಾಮಸಾದಿಪುರಾಣಗಳಲ್ಲಿ
ಅಷ್ಟಾಗಿ ಬರಲಾರದು. ಈ ಪುರಾಣದಲ್ಲಿಯಾದರೋ ಸರ್ವಾತ್ಮಕನಾದ
ಆ ಭಗವಂತನ ಗುಣಗಳೇ ಪ್ರತಿವಾಕ್ಯಗಳಲ್ಲಿಯೂ, ಪ್ರತಿಪದಗಳಲ್ಲಿಯೂ,
ಪ್ರತಿಪಾದಿಸಲ್ಪಡುವುವು. ಓ ಬ್ರಾಹ್ಮಣೋತ್ತಮರೆ ! ಜನ್ಮರಹಿತನಾಗಿ
ಯೂ, ಅನಂತನಾಗಿಯೂ, ಪರಮಾತ್ಮತತ್ವವೆನಿಸಿಕೊಂಡವನಾಗಿಯೂ,
ಪ್ರಪಂಚದ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣಗಳೆನಿಸಿದ ರಜಸ್ಸು ಮೊದಲಾ
ದ ಶಕ್ತಿತ್ರಯದಿಂದ ಕೂಡಿದವನಾಗಿಯೂ, ಲೋಕೇಶ್ವರರೆನಿಸಿದ ಬ್ರಹ್ಮ
ರುದ್ರಾದಿಗಳಿಂದಲೂ ಸ್ತುತಿಸಲ್ಪಡತಕ್ಕವನಾಗಿಯೂ ಇರುವ ಆ ಅಚ್ಯು
ತನನ್ನು ನಾನು ಭಕ್ತಿಯಿಂದ ವಂದಿಸುವೆನು. ಮೇಲೆಮೇಲೆ ವಿಕಾರಹೊಂ

ದುತ್ತಿರುವ, ಕಾಲ, ಪ್ರಕೃತಿ, ಮಹತ್ತು, ಅಹಂಕಾರ, ಪಂಚಭೂತಗಳೆಂಬ ತನ್ನ ಒಂಬತ್ತುಬಗೆಯ ಶಕ್ತಿಗಳಿಂದ, ಚರಾಚರಾತ್ಮಕವಾದ ಸಮಸ್ತಪ್ರಪಂಚವನ್ನೂ ತನ್ನಲ್ಲಿಯೇ ಕಲ್ಪಿಸಿಕೊಂಡು, ಅವೆಲ್ಲಕ್ಕೂ ತಾನೇ ಆಧಾರಭೂತನಾಗಿ, ಕೇವಲಜ್ಞಾನರೂಪವಾದ ತೇಜಸ್ಸೇ ಸ್ವರೂಪವಾಗಿ ಉಳ್ಳ ದೇವಶ್ರೇಷ್ಠನಾದ ಆ ಭಗವಂತನನ್ನು ವಂದಿಸುವೆನು. ಬ್ರಹ್ಮೇಂದ್ರ ವರುಣರುದ್ರರೇ ಮೊದಲಾಗಿ ಸಮಸ್ತದೇವತೆಗಳೂ, ದಿವ್ಯವಾಕ್ಯಗಳಿಂದ ಯಾವನನ್ನು ಸ್ತುತಿಸುತ್ತಿರುವರೋ, ಸಾಮಗಾನಮಾಡತಕ್ಕವರು ಷಡಂಗಗಳೊಡನೆಯೂ, ಪದಕ್ರಮಗಳೊಡನೆಯೂ, ಉಪನಿಷತ್ತುಗಳೊಡನೆಯೂ ಕೂಡಿದ ವೇದವಾಕ್ಯಗಳಿಂದ ಯಾವನನ್ನು ಗಾನಮಾಡುವರೋ, ಯೋಗಿಗಳು ಯೋಗಪರಿಶುದ್ಧವಾದ ಮನಸ್ಸಿನಲ್ಲಿ ಯಾವನನ್ನು ದೃಢಧ್ಯಾನದಿಂದ ಭಾವಿಸಿ,ಹೃದಯದಲ್ಲಿ ಸಾಕ್ಷಾತ್ಕರಿಸುವರೋ,ದೇವಾಸುರರೂ, ಯಾವನ ಗುಣಗಳನ್ನು ಇಷ್ಟೆಂದು ಗಣಿಸಲಾರರೋ, ಅಂತಹ ದೇವದೇವನಾದ ಶ್ರೀಹರಿಗೆ ನಮಸ್ಕಾರವು. ಮಹತ್ತಾದ ಮಂದರಪರ್ವತವು ಬೆನ್ನಮೇಲೆ ಗರಗರನೆ ಸುತ್ತುತ್ತಿರುವಾಗಲೂ, ಯಾವನಿಗೆ ಹೆಕ್ಕತ್ತಿನ ನವೆಯನ್ನಾರಿಸುತ್ತ, ಸುಖನಿದ್ರೆಯನ್ನುಂಟುಮಾಡುವಂತಾಯಿತೋ, ಯಾವನ ಉಸಿರಾಟದಿಂದ ಆಗ ಉಲ್ಲೋಲಕಲ್ಲೋಲವಾದ ಸಮುದ್ರವು, ಈಗಲೂ ಆ ಸಂಸ್ಕಾರವನ್ನು ಬಿಡದಂತೆ ಅಲೆಗಳೆಂಬ ನೆವದಿಂದ ಹಿಂದುಮುಂದಕ್ಕೆ ತೂಗಾಡುತ್ತ ನೆಮ್ಮದಿಯಿಲ್ಲದಿರುವುದೋ, ಅಂತಹ ಕೂರ್ಮರೂಪಿಯಾದ ಭಗವಂತನ ಶ್ವಾಸಾನಿಲವು ನಿಮ್ಮನ್ನು ರಕ್ಷಿಸಲಿ” ಎಂದು ನಮಸ್ಕರಿಸಿ, ಸೂತಪೌರಾಣಿಕನು ತಿರುಗಿ ಆ ಶೌನಕಾದಿಗಳನ್ನು ಕುರಿತು. “ಓ ಮಹರ್ಷಿಗಳೆ! ಇನ್ನು ಅಷ್ಟಾದಶಪುರಾಣಗಳ ಬೇರೆಬೇರೆ ಗ್ರಂಥಸಂಖ್ಯೆಯನ್ನೂ, ಅವೆಲ್ಲವುಗಳ ಒಟ್ಟುಸಂಖ್ಯೆಯನ್ನೂ, ಈ ಭಾಗವತಪುರಾಣದಲ್ಲಿ ಪ್ರಧಾನವಾದ ವಾಚ್ಯಾರ್ಥವೇನೆಂಬುದನ್ನೂ, ಅದರ ಪ್ರಯೋಜನವನ್ನೂ, ಈ ಪುರಾಣದ ದಾನಪಠನಾದಿಗಳ ಮಹಿಮೆಯನ್ನೂ ತಿಳಿಸುವೆನು ಕೇಳಿರಿ! ಬ್ರಾಹ್ಮಪುರಾಣವು ಹತ್ತುಸಾವಿರ ಗ್ರಂಥಗಳುಳ್ಳದು. ಪಾದ್ಮವು ಐವತ್ತೈದು ಸಾವಿರ ಗ್ರಂಥಗಳುಳ್ಳದು. ವೈಷ್ಣವವು ಇಪ್ಪತ್ತುಮೂರು ಸಾವಿರಗ್ರಂಥಗಳ

ನ್ನೊಳಕೊಂಡಿರುವುದು. ಶೈವವು ಇಪ್ಪತ್ತುನಾಲ್ಕುಸಾವಿರಗ್ರಂಥಗಳುಳ್ಳದು. ಶ್ರೀಭಾಗವತವು ಹದಿನೆಂಟುಸಾವಿರಗ್ರಂಥಗಳುಳ್ಳದು. ನಾರದಪುರಾಣವು ಇಪ್ಪತ್ತೈದುಸಾವಿರ ಗ್ರಂಥಗಳನ್ನೊಳಕೊಂಡಿರುವುದು. ಹೀಗೆಯೇ, ಮಾರ್ಕಂಡೇಯದಲ್ಲಿ ಒಂಬತ್ತುಸಾವಿರಗ್ರಂಥಗಳೂ, ಆಗ್ನೇಯದಲ್ಲಿ ಹದಿನೈದು ಸಾವಿರದ ನಾನೂರು ಗ್ರಂಥಗಳೂ, ಭವಿಷ್ಯದಲ್ಲಿ ಹದಿನಾಲ್ಕುಸಾವಿರದ ಐನೂರು ಗಂಥಗಳೂ, ಬ್ರಹ್ಮಕೈವರ್ತದಲ್ಲಿ ಹದಿನೆಂಟುಸಾವಿರ ಗ್ರಂಥಗಳೂ ಲೈಂಗದಲ್ಲಿ ಹನ್ನೊಂದುಸಾವಿರ ಗ್ರಂಥಗಳೂ, ವಾರಾಹದಲ್ಲಿ ಇಪ್ಪತ್ತುನಾಲ್ಕುಸಾವಿರ ಗ್ರಂಥಗಳೂ, ಸ್ಕಾಂದಪುರಾಣದಲ್ಲಿ ಎಂಭತ್ತೊಂದುಸಾವಿರದ ಒಂದು ನೂರು ಗ್ರಂಥಗಳೂ, ವಾಮನದಲ್ಲಿ ಹತ್ತುಸಾವಿರ ಗ್ರಂಥಗಳೂ, ಕೂರ್ಮದಲ್ಲಿ ಹದಿನೇಳುಸಾವಿರ ಗ್ರಂಥಗಳೂ, ಮಾತ್ಸ್ಯದಲ್ಲಿ ಹದಿನಾಲ್ಕು ಸಾವಿರ ಗ್ರಂಥಗಳೂ, ಗಾರುಡದಲ್ಲಿ ಹತ್ತೊಂಬತ್ತುಸಾವಿರ ಗ್ರಂಥಗಳೂ, ಬ್ರಹ್ಮಾಂಡದಲ್ಲಿ ಹನ್ನೆರಡುಸಾವಿರ ಗ್ರಂಥಗಳೂ ಇವೆ. ಹೀಗೆ ಈ ಎಲ್ಲಾ ಪುರಾಣಗಳ ಗ್ರಂಥಸಂಖ್ಯೆಯು ಒಟ್ಟು ನಾಲ್ಕುಲಕ್ಷವೆಂದು ನಿರ್ಣಯಿಸಲ್ಪಟ್ಟಿದೆ. ಇವುಗಳಲ್ಲಿ ಈ ಶ್ರೀಭಾಗವತವು ಹದಿನೆಂಟುಸಾವಿರ ಗ್ರಂಥಗಳನ್ನೊಳಕೊಂಡಿರುವುದು. ಪೂರ್ವದಲ್ಲಿ ಭಗವಂತನು, ತನ್ನ ನಾಭಿಕಮಲದಲ್ಲಿದ್ದ ಬ್ರಹ್ಮನು ಸಂಸಾರಭೀತನಾಗಿದ್ದಾಗ, ಅವನಲ್ಲಿ ಕಾರುಣ್ಯದಿಂದ ಈ ಪುರಾಣವನ್ನುಪದೇಶಿಸಿದನು. ಈ ಪುರಾಣದಲ್ಲಿ ನಡುನಡುವೆ ಬೇರೆಬೇರೆ ಎಷ್ಟೋ ಉಪಾಖ್ಯಾನಗಳು ಕಲೆತಿದ್ದರೂ, ಅವೆಲ್ಲವೂ ಭಗವತ್ಕಥಾಮೃತ ಗರ್ಭಿತಗಳಾಗಿಯೇ ಇದ್ದು, ಸತ್ಪುರುಷರನ್ನು ಆನಂದಗೊಳಿಸುವುವು. ಸಮಸ್ತವೇದಾಂತಗಳಿಗೂ ಸಾರಭೂತವಾದ ಆ ಬ್ರಹ್ಮಸ್ವರೂಪವೇ ಇದರಲ್ಲಿ ಮುಖ್ಯಪ್ರತಿಪಾದ್ಯವಾದ ವಿಷಯವು. ಎಂದರೆ, ಅದೇ ಇದರ ಮುಖ್ಯವಾಚ್ಯಾರ್ಥವು. ಬ್ರಹ್ಮವೆಂಬ ಆ ವಸ್ತುವು ಅದ್ವಿತೀಯವಾದುದು. ಕೈವಲ್ಯವೂ (ಮೋಕ್ಷವು) ಅದರ ಕೈವಶವಾಗಿರುವುದು. ಆ ಕೈವಲ್ಯವೇ ಈ ಗ್ರಂಥದ ಪಠನಪ್ರಯೋಜನವು. ಯಾವನು ಪರಮಾತ್ಮಾನುಭವದಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಬೇರೊಂದನ್ನೂ ತಿಳಿಯದೆ, ಆ ಭಗವಂತನ ಮನೋಹರವಾದ ಲೀಲೆಗಳಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವನಾಗಿ, ಆ ಭಗವಂತನ

ಸ್ವರೂಪ, ಗುಣ, ವಿಭೂತಿ ಮೊದಲಾದವುಗಳನ್ನು ನಿರೂಪಿಸತಕ್ಕದಾಗಿಯೂ, ಎಲ್ಲಾ ತತ್ವಾರ್ಥಗಳಿಗೂ ದೀಪದಂತೆ ಪ್ರಕಾಶಮಾನವಾಗಿಯೂ ಇರುವ ಈ ಪುರಾಣರತ್ನವನ್ನು ಕೃಪೆಯಿಂದ ವಿರಚಿಸಿದನೋ, ಅಂತಹ ಸರ್ವಪಾಪನಿವಾರಕನಾದ ವ್ಯಾಸಪುತ್ರನಾದ ಶುಕಮುನಿಯನ್ನು ವಂದಿಸುವೆನು" ಎಂದನು. ಇದು'ಹನ್ನೆರಡನೆಯ ಅಧ್ಯಾಯವು.

ಇದು ದ್ವಾದಶಸ್ಕಂಧವು.

ಶ್ರೀಭಾಗವತವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ.

ಭದ್ರಂ ಶುಭಂ ಮಂಗಳಂ.





ಶ್ರೀಃ.

ಮ॥ವಿ॥ ಕ್ಷಿತಿ ಸಸ್ಯಾಳಿಸಮೃದ್ಧಮಕ್ಕೆ ! ಸುಜನರ್ ಸಮ್ಮೋದದಿಂದಿರ್ಕೆ ! ಭೂ
ಪತಿಗಳ್ ನ್ಯಾಯರತರ್ಕಳಕ್ಕೆ ! ಧರೆಯೊಳ್ ಧರ್ಮಂ ನೆಗಳ್ದಿರ್ಕೆ! ಮೋಹ್
ಮತಿಯೊಳ್ ಮಚ್ಚರವಿಲ್ಲದೋದುಗೆ ! ಬುಧರ್ ಸತ್ಕಾವ್ಯಮಂ ಮತ್ತಮೀ
ಕೃತಿ'ಸರ್ವೋನ್ನತಮಕ್ಕೆ ! ಕೃಷ್ಣಕೃಪೆಯಿಂ ಚಂದ್ರಾರ್ಕರಿರ್ಪನ್ನೆಗಂ ॥

ಶ್ರೀಮದ್ದೇವಶಿಖಾಮಣೀ ತಿರುಮಲಾಚಾರ್ಯಂ ನೆಗಳ್ದಂ ಗುಣೋ ।
ದ್ದಾಮಂ ಕೋಮಲಕಾವ್ಯಬಂಧಚತುರಂ, ಯದ್ವದ್ರಿನಾಥಾಶ್ರಯಂ ।
ಆ ಮಾಚಾರ್ಯನ ಸೂನು. ತದ್ವರಕೃಪಾ ಸಂಪ್ರಾಪ್ತವಿದ್ಯಂ ಬುಧ ।
ಸ್ತೋಮಂ ಮೆಚ್ಚುವವೊಲ್, ನೆಗಳ್ದನಳಸಿಂಗ್ರಾಚಾರ್ಯನೀಗ್ರಂಥಮಂ ॥

ಶಾ॥ ಕರ್ಣಾಟ ದ್ರವಿಡಾಂಧ್ರ ಮಂಡಲದೊಳಿರ್ಪಾಬಾಲಗೋಪಾಲರುಂ
ಪೂರ್ಣಾವೋದದಿನೋದಿ ಕೃಷ್ಣಕಥೆಯಂ ಸಮ್ಮೋದಮಂ ತಾಳ್ವನಂ।
ಕರ್ಣಾನಂದದಮಾದ ತಚ್ಚರಿತಮಂ ಸ್ವಾಸ್ತಿಕ್ಯದಿಂ ಲೋಕವಿ ।
ಸ್ತೀರ್ಣಂಗೈದಸಮಾನಕೀರ್ತಿವಡೆದಂ ಶ್ರೀರಂಗನಾಥಾಹ್ವಯಂ ॥

ಕಂ ॥ ನರಕಾಸುರ ವೈರಿಯ ವರ
ಚರಿತ್ರಗರ್ಭಿತಪುರಾಣಮಿದು ಪೂರ್ಣತೆಯಿಂ
ಮೆರೆದುದು! ಸಿದ್ಧಾರ್ಥಿ ಸಂವ
ತ್ಸರ ನರಕಚತುರ್ದಶೀ ಮಹೋತ್ಸವದಿನದೊಳ್ ॥

ಮಂಗಳಂ.